ಶ್ರೀರಾಮಕೃಷ್ಣ

# ಉಪದೇಶಾಮೃತ



ಶ್ರೀರಾಮಕೃಷ್ಣಾಶ್ರಮ

ಮೈಸೂರು

ಪ್ರಥಮ ಮುದ್ರಣ ೧೯೫೦

ದ್ವಿತೀಯ ಮುದ್ರಣ ೧೯೫೭



ಪ್ರಕಾಶಕರು :

**ಸ್ವಾಮಿ ಶಾಂಭವಾನಂದ**

**ಅಧ್ಯಕ್ಷ**

ಶ್ರೀ ರಾಮಕೃಷ್ಣಾಶ್ರಮ, ಮೈಸೂರು

ಮುದ್ರಕರು :

ಡಿ. ರಾಜರತ್ನಂ, ಶ್ರೀ ಪಂಚಾಚಾರ್ಯ ಎಲೆಕ್ಟ್ರಿಕ್ ಪ್ರೆಸ್, ಮೈಸೂರು.

# ಮುನ್ನುಡಿ

ಇಪ್ಪತ್ತುಕೋಟಿ ಭಾರತೀಯರ ಎರಡು ಸಾವಿರ ವರುಷಗಳ ಬಾಳುವೆಯನ್ನು ತಮ್ಮ ಒಂದು ಜೀವನದಲ್ಲಿ ಬಾಳಿದ ಮಹಾಪುರುಷರು ಶ್ರೀ ರಾಮಕೃಷ್ಣರು. ಸನಾತನ ಹಿಂದೂಧರ್ಮದ ಪೂರ್ಣ ಪ್ರತಿನಿಧಿ ಇವರು. ಯಾವುದೋ ಒಂದು ಅಂಶವನ್ನು ಹಿಡಿದು ಇದು ಮಾತ್ರ ಸತ್ಯ ಉಳಿದುದೆಲ್ಲ ಮಿಥ್ಯವೆಂದು ಹಳಿದವರಲ್ಲ. ಸತ್ಯದೇಗುಲಕ್ಕೆ ಪಥಗಳನಂತ ಎಂದು ಸಾರಿದರು. ದ್ವೈತಿಯಾಗಿರಲಿ ವಿಶಿಷ್ಟಾದ್ವೈತಿಯಾಗಿರಲಿ ಅದ್ವೈತಿಯಾಗಿರಲಿ ಎಲ್ಲರೂ ಒಂದೇ ಸತ್ಯವನ್ನು ಭಿನ್ನಭಿನ್ನ ದೃಷ್ಟಿಕೋಣದಿಂದ ನೋಡುತ್ತಿರುವವರು ಅಷ್ಟೆ. ಯಾರೂ ಮತ್ತೊಬ್ಬರನ್ನು ಹಳಿಯಬೇಕಾಗಿಲ್ಲ, ತಾವು ಯಾವುದನ್ನು ಸತ್ಯವೆಂದು ಭಾವಿಸಿರುವರೊ ಅದನ್ನು ಅನುಷ್ಠಾನಕ್ಕೆ ತರುತ್ತ ಹೋಗಲಿ, ಆಗ ಪೂರ್ಣ ಸತ್ಯದ ಅರಿವಾಗುವುದು. ನನ್ನದು ಮಾತ್ರ ಸತ್ಯ ನಿನ್ನದು ಸತ್ಯವಲ್ಲ ಎಂಬುದು, ಧರ್ಮಭೂಮಿಕೆಯಲ್ಲಿರಲಿ, ತತ್ತ್ವಭೂಮಿಕೆಯಲ್ಲಿರಲಿ ಎಲ್ಲಾ ಅಜ್ಞಾನಜನ್ಯ. ಬಹುಮುಖ್ಯವಾದ ಸತ್ಯವನ್ನು ಬಹುದೃಷ್ಟಿಕೋಣದಿಂದ ಅಳೆದವರು ಇವರು. ಕಲ್ಲು ಮಣ್ಣು ಲೋಹಗಳ ಬಾಹ್ಯ ಪೂಜೆಯಿಂದ ಹಿಡಿದು ಸೋಹಂ ಎಂಬ ಮಹಾಪೂಜೆಯವರೆಗೆ ಎಲ್ಲವನ್ನೂ ಸಹಾನುಭೂತಿಯಿಂದ ನೋಡುತ್ತಿದ್ದರು. ಭಕ್ತರಲ್ಲಿ ಭಕ್ತರಿರುವರು. ಭಗವಂತನ ಹೆಸರನ್ನು ಕೇಳಿದರೆ ಸಾಕು, ಅದು ಕಾಳಿಯಾಗಬಹುದು, ರಾಮನಾಗಬಹುದು, ಕೃಷ್ಣನಾಗಬಹುದು, ತಕ್ಷಣ ಕಂಬನಿದುಂಬಿ ಭಾವಪರವಶರಾಗುವರು. ಜ್ಞಾನಿಗಳಲ್ಲಿ ಜ್ಞಾನಿಗಳಿವರು. ಭಗವಂತನೊಬ್ಬನೇ ಸತ್ಯ, ಉಳಿದುದೆಲ್ಲ ಮಿಥ್ಯ, ಎಂಬುದನ್ನು ಪ್ರತ್ಯಕ್ಷ ಅನುಭವಿಸಿದವರು ಇವರು. ಈ ಪ್ರಪಂಚ ಆ ಒಬ್ಬ ಭಗವಂತನ ಆವಿರ್ಭಾವನೆ. ಅವನು ಹಲವು ರೂಪಗಳನ್ನು ಧರಿಸಿ ಕಾಣುತ್ತಿರುವನು. ಪಾಪಿಯಂತೆ ಇರುವವನು ಅವನೆ, ಪುಣ್ಯಾತ್ಮನಂತೆ ಇರುವವನು ಅವನೆ, ಕುರೂಪವೂ ಅವನೆ, ಸೌಂದರ್ಯದ ನೆಲೆಬೀಡೂ ಅವನೆ, ಅವನೆ ಎಲ್ಲರಲ್ಲೂ ಇರುವನು; ಎಲ್ಲವನ್ನೂ ಮೀರಿಯೂ ಇರುವನು ಎಂದು ನೋಡುತ್ತಿದ್ದರು. ಇಂತಹ ಹಲವು ರೂಪಗಳನ್ನು ಧರಿಸಿದ ವಿರಾಟ್ ಭಗವಂತನ ಸೇವೆಯೆ ನಮ್ಮನ್ನು

ಶಿವನೆಡೆಗೆ ಒಯ್ಯುವುದೆಂದು ಇಡೀ ಕರ್ಮಯೋಗದ ಸಾರವನ್ನೇ ಬೋಧಿಸಿದ ಮಹಾ ಕರ್ಮಯೋಗಿಗಳಿವರು.

ಕ್ರಿ. ಶ. ೧೮೩೬ ರಲ್ಲಿ ಕಾಮಾರಪುಕುರವೆಂಬ ಗ್ರಾಮದಲ್ಲಿ ಖುದಿರಾಮುಚಟ್ಟೋಪಾಧ್ಯಾಯ ಮತ್ತು ಚಂದ್ರಮಣಿ ಎಂಬ ಪವಿತ್ರ ದಂಪತಿಗಳಿಗೆ ಹುಟ್ಟಿದ ಕೊನೆಯ ಗಂಡುಮಗುವೆ ಶ್ರೀ ರಾಮಕೃಷ್ಣ. ತಂದೆತಾಯಿಗಳ ಅಕ್ಕರೆಯಲ್ಲಿ ಬೆಳೆದು ಇಡೀ ಹಳ್ಳಿಯ ವಿಶ್ವಾಸ ಸಂಪಾದಿಸಿದರು. ಬಾಲ್ಯದಿಂದಲೂ ಪೂಜೆ ಧ್ಯಾನ ಮುಂತಾದುವುಗಳ ಮೇಲೆ ಅಭಿರುಚಿ. ದೇವದೇವಿಯರ ವಿಗ್ರಹವನ್ನು ಮಾಡಿ ಪೂಜಿಸುತ್ತಿದ್ದರು. ಹಳ್ಳಿಯಲ್ಲಿ ಬಯಲಾಟಗಳನ್ನು ನೋಡಿ ಅವರಂತೆ ಹಾಡುವುದು, ಅಭಿನಯಿಸುವುದು ಇವನ್ನು ಕಲಿತುಕೊಳ್ಳುವರು. ತಮ್ಮ ಓರಗೆಯ ಹುಡುಗರೊಡನೆ ಶಾಲೆಗೆ ಹೋದರು. ಅಲ್ಲಿ ಬರೆಯುವುದು ಓದುವುದನ್ನು ಕಲಿತರೂ ಲೆಕ್ಕ ಅಷ್ಟು ಸುಲಭವಾಗಿ ತಲೆಗೆ ಹತ್ತುತ್ತಿರಲಿಲ್ಲ. ಶಾಲೆಗೆ ಹೋಗುವುದಕ್ಕಿಂತ ಹುಡುಗರೊಡನೆ ಊರಿನ ತೋಪಿನಲ್ಲಿ ದೇವದೇವಿಯರ ಪಾತ್ರಮಾಡಿ ಆಟವಾಡುವುದರ ಮೇಲೆ ಅಭಿರುಚಿ. ಶ್ರೀ ರಾಮಕೃಷ್ಣರು ತಮ್ಮ ಏಳನೆ ವಯಸ್ಸಿನಲ್ಲಿ ತಂದೆಯನ್ನು ಕಳೆದುಕೊಂಡರು. ಅಣ್ಣನೆ ಇವರನ್ನು ನೋಡಿಕೊಳ್ಳುತ್ತಿದ್ದ. ಇವರಿಗೆ ಆಗಲೆ ಯಜ್ಞೋಪವೀತಧಾರಣೆಗೆ ಅಣ್ಣ ಅಣಿ ಮಾಡಿದ. ಒಂದುದಿನ ಬಾಲ್ಯದಿಂದಲೂ ಶ್ರೀ ರಾಮಕೃಷ್ಣರನ್ನು ಆಡಿಸುತ್ತಿದ್ದ ಧನಿ ಎಂಬ ಅಕ್ಕಸಾಲಿಗರ ಹೆಂಗಸು ಶ್ರೀರಾಮಕೃಷ್ಣರನ್ನು ಮುಂಜಿಯ ದಿನ ಪ್ರಥಮ ಭಿಕ್ಷವನ್ನು ತನ್ನಿಂದ ಸ್ವೀಕರಿಸಬೇಕೆಂದು ಕೇಳಿಕೊಂಡಳು. ಶ್ರೀ ರಾಮಕೃಷ್ಣರು ಅವಳ ಪ್ರೀತಿವಿಶ್ವಾಸಕ್ಕೆ ಮನಸೋತು ಒಪ್ಪಿದರು. ಆ ಸಮಯದಲ್ಲಿ ಧನಿಯಿಂದ ಪ್ರಥಮಭಿಕ್ಷೆ ಸ್ವೀಕರಿಸುವೆ ಎಂದು ಹೇಳಿದಾಗ ಎಲ್ಲರೂ ಅಸಮಾಧಾನಪಟ್ಟರು. ಬ್ರಾಹ್ಮಣಕುಟುಂಬದವರನ್ನು ಬಿಟ್ಟು ಅಕ್ಕಸಾಲಿಗ ಹೆಂಗಸಿನಿಂದ ಪ್ರಥಮಭಿಕ್ಷೆ ಸ್ವೀಕರಿಸುವುದೆಂದರೇನು? ಇದು ಪೂರ್ವಾಚಾರಕ್ಕೆ ವಿರೋಧ ಎಂದರು. ಆದರೆ ಶ್ರೀ ರಾಮಕೃಷ್ಣರು ಒಪ್ಪಲಿಲ್ಲ. "ನಾನು ಆಕೆಗೆ ಮಾತುಕೊಟ್ಟಿರುವೆನು. ಅದನ್ನು ನಡೆಸಿಕೊಡಲು ಆಗದೆ ಇದ್ದರೆ ನಾನು ಉಪನಯನಕ್ಕೇ ಯೋಗ್ಯನಲ್ಲ. ನನಗೆ ಅದು ಬೇಡವೆ ಬೇಡ" ಎಂದರು. ಎಲ್ಲರೂ ಇದಕ್ಕೆ ಸೋಲಬೇಕಾಯಿತು. ಶ್ರೀ ರಾಮಕೃಷ್ಣರು ಮೊದಲಿನಿಂದಲೂ ಆಶಿಸುತ್ತಿದ್ದುದು ಬಾಹ್ಯ ಆಚಾರವನ್ನಲ್ಲ, ಆಂತರಿಕ

ಪ್ರೀತಿಯನ್ನು. ಧನಿ ಭಕ್ತಿ ಪ್ರಥಮಭಿಕ್ಷೆಯನ್ನು ಶ್ರೀ ರಾಮಕೃಷ್ಣರಿಗೆ ಇತ್ತು ಧನ್ಯಳಾದಳು.

ಕೆಲವು ಕಾಲದ ಮೇಲೆ ಸಂಸಾರ ನಡೆಸುವುದು ಕಷ್ಟವಾಗಿ ರಾಮಕುಮಾರ ಎಂಬ ಇವರ ಹಿರಿಯ ಅಣ್ಣ ಕಲ್ಕತ್ತೆಯಲ್ಲಿ ಒಂದು ಸಂಸ್ಕೃತ ಶಾಲೆ ಇಡಲು ಹೋದ. ಅಲ್ಲಿಗೆ ಹೋದ ಕೆಲವು ದಿನಗಳ ಮೇಲೆ ಶ್ರೀರಾಮಕೃಷ್ಣರನ್ನು ತನ್ನ ಬಳಿ ಇರಲು ಕರೆಸಿಕೊಂಡ. ತನ್ನ ಹತ್ತಿರ ಇದ್ದರೆ ಓದುಬರಹ ಕಲಿತು ಪ್ರಪಂಚದಲ್ಲಿ ಯಾವುದಾದ ರೊಂದು ವೃತ್ತಿಯನ್ನು ಅನುಸರಿಸಿ ತನ್ನ ಕಾಲಮೇಲೆ ಕಾಲಾನಂತರ ನಿಂತುಕೊಳ್ಳುವಂತೆ ಮಾಡಬೇಕೆಂದು ಆಶಿಸಿದ್ದನು. ಆದರೆ ಶ್ರೀ ರಾಮಕೃಷ್ಣರ ಮನಸ್ಸು ಪ್ರಪಂಚದ ವಿದ್ಯೆಯ ಕಡೆ ಹೋಗಲಿಲ್ಲ. ಅಣ್ಣ ಒಂದು ದಿನ “ ನೀನು ಹೀಗೆ ಓದದೆ ಇದ್ದರೆ ನಿನ್ನ ಭವಿಷ್ಯದ ಗತಿ ಏನು? ” ಎಂದ. ಶ್ರೀ ರಾಮಕೃಷ್ಣರು “ ಹೊಟ್ಟೆಗೆ ಬಟ್ಟೆಗೆ ಕೊಡುವ ಓದು ನನಗೆ ಬೇಕಾಗಿಲ್ಲ. ಯಾವುದರಿಂದ ಭಗವಂತ ಲಭಿಸುವನೊ ಅದುಬೇಕು ” ಎಂದರು. ಅಣ್ಣ ಉತ್ತರಕೊಡಲಾರದೆ ಹೋದ. ಅವನು ಕೆಲವು ಜನರ ಮನೆಗಳಲ್ಲಿ ಪೂಜೆಮಾಡುತ್ತಿದ್ದ. ತಮ್ಮನಿಗೆ ಆ ಮನೆಯ ದೇವರ ಪೂಜೆಯನ್ನಾದರೂ ಮಾಡು ಎಂದು ಹೇಳಿದ. ಶ್ರೀರಾಮಕೃಷ್ಣರು ಸಂತೋಷದಿಂದ ಒಪ್ಪಿಕೊಂಡರು. ತಮ್ಮ ಭಾವಕ್ಕೆ ತಕ್ಕ ಕೆಲಸ ಸಿಕ್ಕಿತು. ಮನೆಗೆ ಹೋಗಿ ಭಕ್ತಿಯಿಂದ ಪೂಜೆಮಾಡುವರು. ಅನಂತರ ದೇವರ ಕೀರ್ತನೆಗಳನ್ನು ಹಾಡುವರು. ಮನೆಯವರಿಗೂ ಇವರ ಮೇಲೆ ಪ್ರೀತಿ ಹುಟ್ಟಿತು. ಹೊಸ ಪೂಜಾರಿಯ ಪೂಜಾವಿಧಾನ ವನ್ನು ನೋಡಿ ಸಂತೋಷಗೊಂಡರು.

ಇದೇ ಸಮಯದಲ್ಲಿ ರಾಣಿ ರಾಸ್ಮಣಿ ಎಂಬ ಶ್ರೀಮಂತ ಬೆಸ್ತರ ಹೆಂಗಸು ಗಂಗಾನದೀ ತೀರದಲ್ಲಿ ದಕ್ಷಿಣೇಶ್ವರ ಎಂಬ ಕಡೆ ದೊಡ್ಡ ದೊಂದು ಕಾಳಿಕಾದೇವಾಲಯವನ್ನು ಕಟ್ಟಿ ಪೂಜಾರಿಗಾಗಿ ಕಾಯು ತ್ತಿದ್ದಳು. ಬೆಸ್ತರ ಹೆಂಗಸು ಕಟ್ಟಿದ ದೇವಸ್ಥಾನವೆಂದು ಬ್ರಾಹ್ಮಣ ಪೂಜಾರಿಗಳಾರೂ ಬರಲಿಲ್ಲ. ಆಗ ಶ್ರೀ ರಾಮಕೃಷ್ಣರ ಅಣ್ಣ ರಾಮ ಕುಮಾರ ಆಕೆಗೆ ಒಂದು ಉಪಾಯವನ್ನು ಹೇಳಿಕೊಟ್ಟ. ದೇವಸ್ಥಾನ ವನ್ನು ಆಕೆ ತನ್ನ ಕುಲಗುರುಗಳಿಗೆ ದಾನಮಾಡಿದಂತೆ ಮಾಡಿಬಿಟ್ಟರೆ ಆಗ ಬ್ರಾಹ್ಮಣಪೂಜಾರಿ ಬರುವುದಕ್ಕೆ ಅಭ್ಯಂತರವಿಲ್ಲ ಎಂದನು. ಆಕೆ ಹಾಗೆಯೆ ಮಾಡಿದಳು. ಆದರೆ ಪೂಜಾರಿ ಯಾರೂ ಬರಲಿಲ್ಲ. ಉಪಾಯ

ಸೂಚಿಸಿದವನೆ ಪೂಜಾರಿಯಾಗಿ ಬರಬೇಕಾಯಿತು. ಅವರ ಹಿಂದೆ ತಮ್ಮ ರಾಮಕೃಷ್ಣರೂ ಬಂದರು. ಅಣ್ಣನ ತರುವಾಯ ಶ್ರೀರಾಮಕೃಷ್ಣರೇ ಕಾಳಿಕಾದೇವಾಲಯದಲ್ಲಿ ಪೂಜಾರಿಯಾಗಿ ನಿಂತರು.

ಶ್ರೀ ರಾಮಕೃಷ್ಣರು ಪೂಜೆಗೆ ಗರ್ಭಗುಡಿಯನ್ನು ಹೊಕ್ಕ ದಿನದಿಂದಲೇ ತಮ್ಮೆದುರಿಗಿರುವ ವಿಗ್ರಹವನ್ನು ಕೇವಲ ಶಿಲ್ಪಿಗಳ ಕಲ್ಪನೆಯೆ ಅಥವಾ ಚೈತನ್ಯಮೂರ್ತಿಯೆ ಎಂದು ಪರೀಕ್ಷಿಸಲು ಯತ್ನಿಸಿದರು. ಹಗಲುಹೊತ್ತು ಪೂಜಾದಿಗಳನ್ನು ಮಾಡುವರು. ರಾತ್ರಿಹೊತ್ತು ಹತ್ತಿರವಿರುವ ದಟ್ಟವಾದ ಕಾನನದಲ್ಲಿ ಧ್ಯಾನದಲ್ಲಿ ಕಳೆಯುತ್ತಿದ್ದರು. ಸಂಜೆಹೊತ್ತು ಮುಳುಗುತ್ತಿರುವ ಸೂರ್ಯನನ್ನು ನೋಡಿ "ಅಯ್ಯೋ ನನ್ನ ಜೀವನದಲ್ಲಿ ಆಗಲೆ ಒಂದು ದಿನ ವ್ಯರ್ಥವಾಯಿತು. ಇನ್ನೂ ಜಗನ್ಮಾತೆ ಬರಲಿಲ್ಲ ತಾಯಿ, ಕೃಪೆದೋರು" ಎಂದು ನೆಲದ ಮೇಲೆ ಕಂಬನಿದುಂಬಿ ಬಿದ್ದು ಹೊರಳಾಡುತ್ತಿದ್ದರು. ಕಣ್ಣಿಗೆ ಕಾಣದ ದೇವರು ತನಗೆ ಬೇಕೆಂದು ಹಾಗೆ ಅತ್ತವರು ಬಹಳ ಅಪರೂಪ ಪ್ರಪಂಚದಲ್ಲಿ. ಶ್ರೀ ರಾಮಕೃಷ್ಣರೇ ಅನಂತರ ಹೇಳುತ್ತಿದ್ದರು, "ಪ್ರಪಂಚದಲ್ಲಿ ಮನುಷ್ಯರು ಕೊಡಗಟ್ಲೆ ಕಣ್ಣೀರು ಸುರಿಸುವರು ಹೊನ್ನಿಗೆ ಹೆಣ್ಣಿಗೆ. ಆದರೆ ದೇವರಿಗಾಗಿ ಯಾರು ಒಂದು ಹನಿಯನ್ನಾದರೂ ಸುರಿಸುವರು" ಎಂದು. ಬೇಕಾದಷ್ಟು ಪ್ರಾರ್ಥನೆ ಮಾಡಿದರು, ಅತ್ತರು, ಧ್ಯಾನಮಾಡಿದರು. ಆದರೂ ಜಗನ್ಮಾತೆ ಬರಲಿಲ್ಲ. ಒಂದುದಿನ ಗರ್ಭಗುಡಿಯಲ್ಲಿದ್ದಾಗ ಜಗನ್ಮಾತೆಯನ್ನು ನೋಡದ ಬಾಳು ಇದ್ದು ಪ್ರಯೋಜನವೇನು ಎಂದು ಪ್ರಾಣಿಗಳನ್ನು ಬಲಿಕೊಡುವುದಕ್ಕಾಗಿ ತೂಗಿಹಾಕಿದ್ದ ಖಡ್ಗವನ್ನು ನೋಡಿ ಅದರಿಂದ ದೇವಿಯಡಿಯಲ್ಲಿ ತಮ್ಮ ಶಿರವನ್ನು ಈಡಾಡುವುದರಲ್ಲಿದ್ದರು. ಆಗ ತಕ್ಷಣ ಜಗನ್ಮಾತೆ ಪ್ರತ್ಯಕ್ಷಳಾದಳು. ಆನಂದದಲ್ಲಿ ತುಂಬಿ ತುಳುಕಾಡುತ್ತಿತ್ತು ಇವರ ಮನಸ್ಸು. ಆದರೆ ಆ ಆನಂದದಿಂದಲೇ ತೃಪ್ತರಾಗಲಿಲ್ಲ. ದೇವರನ್ನು ಯಾವುದೊ ಒಂದು ಮೂಲೆಯಲ್ಲಿ ನಿಂತು ನೋಡಿ ಕೃತಕೃತ್ಯನಾದೆ ಎಂದು ಭಾವಿಸುವವರಲ್ಲ ಇವರು. ಎಷ್ಟು ಪಥಗಳಿವೆಯೊ ಅಷ್ಟು ಪಥಗಳಲ್ಲಿಯೂ ನಡೆದು ಒಂದೇ ಗುರಿಯೆಡೆಗೆ ಬಂದರು. ಭಗವಂತನನ್ನು ಸ್ವಾಮಿಯಂತೆ ಕಂಡರು. ಅವನನ್ನು ಮಗುವಿನಂತೆ ಕಂಡರು, ಸಖನಂತೆ ಕಂಡರು, ಪ್ರಿಯತಮನಂತೆ ಕಂಡರು. ನಾಮರೂಪಗಳನ್ನು ಮೀರಿದ ಅದ್ವೈತ

ಸಾಧನೆಯನ್ನೂ ಮಾಡಿದರು. ಮುಹಮ್ಮದೀಯ ಕ್ರೈಸ್ತರಂತೆಯೂ ದೇವರನ್ನು ಕಂಡರು.

ಶ್ರೀ ರಾಮಕೃಷ್ಣರ ದೈವೋನ್ಮಾದವನ್ನು ನೋಡಿ ಜನ ಇವರನ್ನು ಹುಚ್ಚರೆಂದು ಭಾವಿಸಿದರು. ಇವರ ತಾಯಿ ತಲ್ಲಣ ಗೊಂಡಳು. ತನ್ನ ಹಳ್ಳಿಗೆ ಮಗನನ್ನು ಕರೆದುಕೊಂಡು ಬಂದು ಔಷಧಿ ಕೊಡಿಸಿದಳು. ಯಂತ್ರ ಕಟ್ಟಿಸಿದಳು. ಮಂತ್ರ ಹಾಕಿಸಿದಳು. ದೇಹ ಉತ್ತಮಗೊಂಡರೂ ದೈವೋನ್ಮಾದ ತಗ್ಗಲಿಲ್ಲ. ಇವರ ಹುಚ್ಚನ್ನು ಬಿಡಿಸಲು ಇವರಿಗೊಂದು ಮದುವೆ ಮಾಡಿದರು. ಆದರೆ ಇವರ ಕೈಹಿಡಿದ ಆ ಪುಣ್ಯವಂತೆ ಇವರ ದೇವರ ಹುಚ್ಚನ್ನು ಬಿಡಿಸುವ ಬದಲು ಅವರಿಗೇ ಆ ದೈವೋನ್ಮಾದ ತಾಕಿತು. ಅವರ ಧರ್ಮ ಜೀವನಕ್ಕೆ ಅಡ್ಡಿ ಬರುವ ಬದಲು ಅವರಿಗೆ ಸಹಾಯಕಳಾಗಿ ನಿಂತಳು. ಕೈಹಿಡಿದ ಸತಿಯಾಗಿದ್ದರೂ ಪ್ರಥಮ ಶಿಷ್ಯೆಯಂತಾದಳು. ಪರಮ ಹಂಸರ ವಾಣಿ ತಮ್ಮ ಶಿಷ್ಯರೆಂಬ ಹಲವು ಕಾಲುವೆಗಳ ಮೂಲಕ ಭವಜೀವಿಗಳಿಗೆ ತಾಕಿದೆ. ಅದರ ಪ್ರಥಮ ಕಾಲುವೆಯೆ ಅವರ ಧರ್ಮಪತ್ನಿ ಶಾರದಾದೇವಿ.

ಹಲವು ಸಾಧನೆಗಳನ್ನು ಮಾಡಿದನಂತರ ಸಾಕ್ಷಾತ್ಕಾರಾಮೃತ ಇವರ ಹೃದಯದಲ್ಲಿ ತುಂಬಿ ತುಳುಕಾಡುತ್ತಿತ್ತು. ಬಂದ ಶಿಷ್ಯರಿಗೆ ಇದನ್ನು ಧಾರೆಯೆರೆದು ತರಬೇತು ಮಾಡಿ, ಉದಾರವಾದ ವಿಶ್ವಧರ್ಮದ ಸಂದೇಶವನ್ನು ಅವರ ಮೂಲಕ ತಮ್ಮ ಕಾಲಾನಂತರ ಬಿತ್ತಿದರು. ಇವರು ಯಾವ ಧರ್ಮವನ್ನೂ ಹಳಿಯುತ್ತಿರಲಿಲ್ಲ. ಯಾವ ಸಾಧನೆ ಯನ್ನೂ ನಿಕೃಷ್ಟದೃಷ್ಟಿಯಿಂದ ನೋಡುತ್ತಿರಲಿಲ್ಲ. ಯಾವ ತತ್ತ್ವ ವನ್ನೂ ಒಂದು ಸರಿ ಮತ್ತೊಂದು ತಪ್ಪು ಎಂದು ಹೇಳುತ್ತಿರಲಿಲ್ಲ. ಹಿಂದೂಗಳಿಗೆ ಉತ್ತಮ ಹಿಂದೂಗಳಾಗಿ ಎನ್ನುತ್ತಿದ್ದರು. ಮುಹಮ್ಮ ದೀಯರಿಗೆ ಉತ್ತಮ ಮುಹಮ್ಮದೀಯರಾಗಿ ಎನ್ನುತ್ತಿದ್ದರು. ಕ್ರೈಸ್ತರಿಗೆ ಉತ್ತಮ ಕ್ರೈಸ್ತರಾಗಿ ಎನ್ನುತ್ತಿದ್ದರು. ಅವರ ಬೋಧನೆ ಎಲ್ಲಾ ಧರ್ಮಗಳಿಗೂ ಸಾಮಾನ್ಯವಾಗಿ ಅನ್ವಯಿಸುವಂತಹ ಬೋಧನೆ. ಯಾರೂ ತಮ್ಮ ಧರ್ಮವನ್ನು ಬಿಟ್ಟು ಅನ್ಯಧರ್ಮಕ್ಕೆ ಬರಬೇಕಾಗಿರ ಲಿಲ್ಲ. ಹುಟ್ಟಿದ ಧರ್ಮದಲ್ಲೇ ಮುಂದುವರಿಯುತ್ತ ಹೋದರೆ ಎಲ್ಲ ಧರ್ಮಗಳೂ ಭಗವಂತನನ್ನು ನುತಿಸುತ್ತಿರುವ ಹಲವು ಗೀತೆಗಳೆಂಬುದು ಕ್ರಮೇಣ ಅವರಿಗೇ ಅರಿವಾಗುವುದು ಶ್ರೀ ರಾಮಕೃಷ್ಣರ ಜೀವನ

ವೇದವೇದಾಂತಗಳಿಗೆ ಬರೆದಿರುವ ಸಚೇತನಭಾಷ್ಯ ಎಂದು ಸ್ವಾಮಿ ವಿವೇಕಾನಂದರು ಸಾರಿರುವರು. ಶ್ರೀ ರಾಮಕೃಷ್ಣರು ಗ್ರಂಥಬರೆಯುವ ಗೋಜಿಗೆ ಹೋಗಲಿಲ್ಲ. ಬಹಿರಂಗ ಉಪನ್ಯಾಸದ ಹವ್ಯಾಸವೇ ಇರಲಿಲ್ಲ ಅವರಿಗೆ. ಭಗವಂತನ ಸಾಕ್ಷಾತ್ಕಾರವೆಂಬ ತೈಲದಿಂದ ಪ್ರಜ್ವಲಿಸುತ್ತಿದ್ದ ದೀವಿಗೆಯಂತೆ ಇದೆ ಅವರ ಬಾಳು. ಬಂದ ಕೆಲವು ಭಕ್ತರಿಗೆ ಸರಳ ಮಾತಿನಲ್ಲಿ ಉಪದೇಶಮಾಡಿದರು. ಆ ಸರಳಮಾತು ವೇದ ಉಪನಿಷತ್ತಿಗೆ ಸರಿಸಮನಾಗಿವೆ. ಸಾಕ್ಷಾತ್ಕಾರದ ಅಗ್ನಿಕುಂಡದಿಂದ ಹಾರಿಬಂದ ಕಿಡಿಯಂತೆ ಇದೆ. ತಾಕಿದೆದೆಗೆ ಕಾವು ತಕ್ಷಣ ಅರಿವಾಗುವುದು. ಇರುವನಕ ಬೋಧಿಸಿ ೧೮೮೬ ರಲ್ಲಿ ನಿರ್ಯಾಣಹೊಂದಿದರು.

"ಶ್ರೀ ರಾಮಕೃಷ್ಣ ಉಪದೇಶಾಮೃತ" ದಲ್ಲಿ ಪರಮಹಂಸರ ಉಪದೇಶ ಸಾರವನ್ನೆಲ್ಲ ಸಂಪೂರ್ಣ ಮೊದಲ ಬಾರಿ ಕನ್ನಡಿಗರಿಗೆ ಈ ಗ್ರಂಥದಲ್ಲಿ ನಿವೇದಿಸಿರುವೆವು. ಬಂಗಾಳಿಯಲ್ಲಿ ಮಾಸ್ಟರ್ ಮಹಾಶಯ, ಸ್ವಾಮಿ ಶಾರದಾನಂದ ಮುಂತಾದ ಪ್ರತ್ಯಕ್ಷ ಶಿಷ್ಯವರ್ಗದವರು ಬರೆದಿಟ್ಟ, ಹೇಳಿದ ನುಡಿಯನ್ನು ಇಲ್ಲಿ ಸಂಗ್ರಹಿಸಿದೆ. ಅವರ ಪವಿತ್ರ ವದನದಿಂದ ಹೇಗೆ ಬಂದವೋ ಹಾಗೆಯೆ ಇಲ್ಲಿ ಇವೆ. ಭಾಷಾ ವ್ಯತ್ಯಾಸವಷ್ಟೆ.

ಶ್ರೀ ರಾಮಕೃಷ್ಣ ಪರಮಹಂಸರ ದೃಷ್ಟಿ ಪೂರ್ಣ ದೃಷ್ಟಿ. ಎಲ್ಲ ತತ್ತ್ವ, ಭಾವ, ಯೋಗ ಮಹಾನದಿಗಳು ಪರಮಹಂಸರ ಸಾಕ್ಷಾತ್ಕಾರ ಮಹಾಸಾಗರದಲ್ಲಿ ಸಂಗಮವಾಗಿವೆ. ಯಾವುದನ್ನೂ ಹಳಿಯದೆ, ಹಲವು ಧರ್ಮ, ಸಾಧನೆ, ತತ್ತ್ವಗಳನ್ನು ಅವರವರ ದೃಷ್ಟಿಯಿಂದ ನೋಡುತ್ತ ಭಗವಂತನೆಡೆಗೆ ಇರುವ ಸೋಪಾನ ಪಂಕ್ತಿಗಳಿವು ಎಂದು ಸಾರಿದವರು ಅವರು.

ಅವರ ಭಾಷೆ ಸರಳಭಾಷೆ. ಪಂಡಿತಪಾಮರರಿಬ್ಬರಿಗೂ ಅರ್ಥವಾಗುವ ಭಾಷೆ. ದೈನಂದಿನ ಜೀವನದಿಂದ ಆಯ್ದ ಉದಾಹರಣೆ, ಉಪಮಾನಗಳ ಮೂಲಕ ಅತಿ ಗಹನ ಆಧ್ಯಾತ್ಮಿಕ ತತ್ತ್ವಗಳನ್ನು ವಿವರಿಸುವರು. ಹೃದಯದಿಂದ ಬಂದ ಭಾಷೆ ಮತ್ತೊಂದು ಹೃದಯಕ್ಕೆ ನೇರವಾಗಿ ತೂರುವುದು.

ಸಾಧಕನ ಬಾಳಿನಲ್ಲಿ ಮಧ್ಯೆ ಮಧ್ಯೆ ಕವಿಯುವ ಸಂಶಯ, ನಿರಾಶಾ ಮೋಡಗಳನ್ನು ಚೆದುರಿಸಿ, ಸೋತ ಜೀವಿಗೆ ನವಶಕ್ತಿ ಇತ್ತು,

ಭರವಸೆಯ ಧ್ರುವತಾರೆ, ಸದಾ ನಮ್ಮ ಬಾಳಿದುರಿಗೆ ಪ್ರಕಾಶಿಸುವಂತೆ ಮಾಡುವುದು ಅವರ ವಾಣಿ.

ಈ ಉಪದೇಶಾಮೃತ ಪರಮಹಂಸರ ಬಾಯಿನಿಂದಲೇ ಹೊರ ಬಂದ ಪದಗಳಿಂದ ಕಟ್ಟಿರುವ ದೇಗುಲ. ಸಚೇತನ ಮೂರ್ತಿ ಇರುವ ಸಚಲ ದೇವಮಂದಿರ. ಈ ಗ್ರಂಥದ ಪ್ರತಿಯೊಂದು ಪುಟದಲ್ಲೂ ಅವರ ಸಂದೇಶ ಮತ್ತು ವ್ಯಕ್ತಿತ್ವ ಪ್ರಕಾಶಿಸುತ್ತಿದೆ. ಅವರ ವಾಣಿ ಜೀವಿಗಳೆದೆಗೆ ತಾಕಿ ಭಗವಂತನೆಡೆಗೆ ಚಲಿಸುವಂತೆ ಪ್ರಚೋದಿಸಲಿ ಎಂಬುದೆ ಪ್ರಕಾಶಕರ ಪ್ರಾರ್ಥನೆ.

ಪ್ರಕಾಶಕರು.

# ವಿಷಯಾನುಕ್ರಮಣಿಕೆ

## ಭಾಗ ೧

## ಮಾನವ ಮತ್ತು ಪ್ರಪಂಚ



## ಭಾಗ ೨

## ಮಾನವನ ಪುರೋಗಮನ



## ಭಾಗ ೩

## ಮಾನವ ಮತ್ತು ದೇವರು

# ಮೊದಲನೆ ಭಾಗ

## ಅಧ್ಯಾಯ ೧

## ಮಾನವ ಮತ್ತು ಪ್ರಪಂಚ

### ಮಾನವನ ಗುರಿ

೧. ರಾತ್ರಿ ಗಗನದಲ್ಲಿ ಹಲವು ನಕ್ಷತ್ರಗಳು ಕಾಣುತ್ತವೆ. ಆದರೆ ಸೂರ್ಯೋದಯವಾದ ಮೇಲೆ ಕಾಣುವುದಿಲ್ಲ. ಆದಕಾರಣ ಹಗಲು ಆಕಾಶದಲ್ಲಿ ನಕ್ಷತ್ರಗಳು ಇಲ್ಲವೆನ್ನುವುದಕ್ಕೆ ಆಗುತ್ತದೆಯೆ? ಅದ ರಂತೆಯೆ ಎಲೈ ಮಾನವನೆ ಅಜ್ಞಾನದಲ್ಲಿ ನೀನು ಇರುವ ತನಕ ದೇವರು ನಿನಗೆ ಕಾಣದೆ ಇದ್ದರೂ ದೇವರು ಇಲ್ಲವೆಂದು ನೀನು ಹೇಳದಿರು.

೨. ಪಡೆಯುವುದಕ್ಕೆ ಅಸಾಧ್ಯವಾದ ಮಾನವ ಜನ್ಮವನ್ನು ಪಡೆದು ಈ ಜನ್ಮದಲ್ಲೇ ದೇವರನ್ನು ನೋಡಲು ಪ್ರಯತ್ನಿಸದವನ ಬಾಳು ವ್ಯರ್ಥ.

೩. ಮನುಷ್ಯನಿಗೆ ಅವನ ಆಲೋಚನೆ ಮತ್ತು ಸಂಕಲ್ಪಗಳಿಗೆ ತಕ್ಕಂತೆ ಕರ್ಮಫಲ ಸಿಕ್ಕುತ್ತದೆ. ಭಗವಂತನು ನಮಗೆ ಬೇಕಾದುದೆಲ್ಲ ವನ್ನೂ ಕೊಡುವ ಸ್ವರ್ಗದಲ್ಲಿರುವ ಕಲ್ಪತರುವಿನಂತೆ. ಪ್ರತಿಯೊಬ್ಬನೂ ಅವನು ಇಚ್ಛಿಸುವುದನ್ನು ದೇವರಿಂದ ಪಡೆಯುವನು. ಒಬ್ಬ ದರಿದ್ರನ ಮಗ ವಿದ್ಯಾವಂತನಾಗಿ ಬಹಳ ಕಷ್ಟದಿಂದ ಹೈಕೋರ್ಟಿನಲ್ಲಿ ಜಡ್ಜಿ ಯಾದಮೇಲೆ "ಈಗ ನಾನು ಸುಖವಾಗಿರುವೆನು. ಉನ್ನತಿಯ ಪರಮ ಶಿಖರವನ್ನು ಮುಟ್ಟಿರುವೆನು. ಈಗ ಎಲ್ಲಾ ಸರಿಯಾಗಿದೆ" ಎಂದು ಆಲೋಚಿಸಬಹುದು. ಅದಕ್ಕೆ ದೇವರು "ನೀನು ಹಾಗೆಯೇ ಇರು" ಎನ್ನುತ್ತಾನೆ. ಆದರೆ ಅವನೇ ನಿವೃತ್ತಿಯನ್ನು ಪಡೆದು ತನ್ನ ಹಿಂದಿನ ಜೀವನವನ್ನು ಪರೀಕ್ಷಿಸಿದರೆ ತನ್ನ ಜೀವನವನ್ನು ವ್ಯರ್ಥಗೊಳಿಸಿ ಕೊಂಡನೆಂಬುದು ಗೊತ್ತಾಗಿ "ಅಯ್ಯೊ ಈ ಜನ್ಮದಲ್ಲಿ ಯಾವ ಒಳ್ಳೆಯ ಕೆಲಸವನ್ನು ಮಾಡಿದೆ" ಎಂದು ಪಶ್ಚಾತ್ತಾಪ ಪಡುವಾಗ ದೇವರು "ಅಯ್ಯೋ ನೀನು ಏನು ಮಾಡಿದೆ?" ಎನ್ನುವನು.

೪. ಮನುಷ್ಯ ಈ ಜಗತ್ತಿನಲ್ಲಿ ಎರಡು ಸ್ವಭಾವದೊಂದಿಗೆ ಹುಟ್ಟುತ್ತಾನೆ. ಮೋಕ್ಷಮಾರ್ಗವನ್ನು ಅನುಸರಿಸುವ ಸ್ವಭಾವ, ಅವಿದ್ಯಾ ಸಂಸಾರದಲ್ಲಿರಬೇಕು, ಬಂಧನದಲ್ಲಿ ಬೀಳಬೇಕು, ಎನ್ನುವ ಸ್ವಭಾವ. ಅವನು ಹುಟ್ಟುವಾಗ ಈ ಎರಡು ಸ್ವಭಾವಗಳೂ ತಕ್ಕಡಿಯ ಎರಡು ಕಡೆಗಳಂತೆ ಒಂದೇ ಸಮನಾಗಿರುವುದು. ಪ್ರಪಂಚ ತನಗೆ ಸೇರಿದ ಭೋಗ ಮತ್ತು ಸಂತೋಷಗಳನ್ನು ಒಂದು ತಟ್ಟೆಯಲ್ಲಿ ಇಡುವುದು. ಆತ್ಮಶಕ್ತಿ ತನಗೆ ಸಂಬಂಧಪಟ್ಟ ಸುಖಸಂತೋಷಗಳನ್ನು ಇನ್ನೊಂದು ತಟ್ಟೆಯಲ್ಲಿ ಇಡುವುದು. ಮನುಷ್ಯನು ಪ್ರಪಂಚವನ್ನು ಇಚ್ಛಿಸಿದರೆ ಅವಿದ್ಯೆ ತೂಕವಾಗಿ ಪ್ರಪಂಚದ ಕಡೆ ವಾಲುವುದು. ಅವನು ಆತ್ಮನಿಗೆ ಸಂಬಂಧಿಸಿರುವುದನ್ನು ಇಚ್ಛಿಸಿದರೆ ವಿದ್ಯೆ ಭಾರವಾಗಿ ದೇವರ ಕಡೆ ವಾಲುವುದು.

೫. ಒಂದನ್ನು ತಿಳಿಯಿರಿ, ಎಲ್ಲವೂ ನಿಮಗೆ ತಿಳಿಯುವುದು. ಒಂದಾದ ಮೇಲೆ ಇಡುವ ಸೊನ್ನೆಗಳಿಗೆ ನೂರು, ಸಾವಿರಗಳ, ಬೆಲೆ ಬರುತ್ತದೆ. ಆದರೆ ಒಂದನ್ನು ಅಳಿಸಿದರೆ ಸೊನ್ನೆಗೆ ಯಾವ ಬೆಲೆಯೂ ಇಲ್ಲ. ಒಂದರಿಂದ ಉಳಿದವಕ್ಕೆ ಬೆಲೆ. ಮೊದಲು ಒಂದು ನಂತರ ಹಲವು. ಮೊದಲು ದೇವರು, ನಂತರ ಜೀವ ಮತ್ತು ಜಗತ್ತು.

೬. ಮೊದಲು ದೇವರನ್ನು ಪಡೆಯಿರಿ. ನಂತರ ದ್ರವ್ಯವನ್ನು ಪಡೆಯಿರಿ. ಆದರೆ ಇದನ್ನು ತಲಕೆಳಕು ಮಾಡಬೇಡಿ. ಆಧ್ಯಾತ್ಮಿಕತೆಯಲ್ಲಿ ಮುಂದುವರಿದ ಮೇಲೆ ನೀನು ಸಂಸಾರಿಯಾದರೆ ನಿನ್ನ ಶಾಂತಿಗೆ ಭಂಗವಿಲ್ಲ

೭. ಸಾಮಾಜಿಕ ಸುಧಾರಣೆಯ ವಿಚಾರವಾಗಿ ಮಾತನಾಡುವಿರೇನು? ಒಳ್ಳೆಯದು, ದೇವರನ್ನು ಕಂಡಾದ ಮೇಲೆ ನೀವು ಇದನ್ನು ಮಾಡಬಹುದು. ಹಿಂದಿನ ಕಾಲದ ಋಷಿಗಳು ದೇವರನ್ನು ಪಡೆಯುವುದಕ್ಕಾಗಿ ಪ್ರಪಂಚವನ್ನು ತೊರೆದರು ಎಂಬುದನ್ನು ಜ್ಞಾಪಕದಲ್ಲಿಡಿ. ನಮಗೆ ಆವಶ್ಯಕವಾಗಿರುವುದು ಇದೊಂದೆ. ಇವುಗಳೆಲ್ಲವನ್ನೂ ನೀವು ಆಶಿಸಿದರೆ ಇವೆಲ್ಲವೂ ನಿಮಗೆ ಬಂದೇ ಬರುತ್ತವೆ. ಮೊದಲು ದೇವರನ್ನು ನೋಡಿ; ನಂತರ, ಉಪನ್ಯಾಸ ಸಮಾಜ ಸುಧಾರಣೆ ಇವುಗಳ ವಿಚಾರ ಮಾತನಾಡಿ.

೮. ಒಂದೂರಿಗೆ ಹೊಸದಾಗಿ ಬಂದವನು ರಾತ್ರಿ ವಿಶ್ರಮಿಸಿಕೊಳ್ಳುವುದಕ್ಕೆ ಒಂದು ಅನುಕೂಲವಾದ ಕೊಠಡಿಯನ್ನು ಪಡೆಯ

ಬೇಕು. ಅಲ್ಲಿ ತನ್ನ ಸಾಮಾನುಗಳನ್ನೆಲ್ಲಾ ಇಟ್ಟಮೇಲೆ ಊರನ್ನು ನೋಡುವುದಕ್ಕೆ ಆತಂಕವಿಲ್ಲದೆ ಹೋಗಬಹುದು. ಇಲ್ಲದೆ ಇದ್ದರೆ ರಾತ್ರಿ ಕತ್ತಲೆಯಲ್ಲಿ ಮಲಗಿಕೊಳ್ಳಲು ಒಂದು ಮನೆಗಾಗಿ ತುಂಬಾ ಕಷ್ಟಪಡ ಬೇಕಾಗುವುದು. ಇದರಂತೆಯೇ ದೇವರ ಸಮೀಪದಲ್ಲಿ ನಮ್ಮ ನಿತ್ಯವಾದ ಸ್ಥಾನವನ್ನು ಭದ್ರಪಡಿಸಿಕೊಂಡಮೇಲೆ, ಪ್ರತಿದಿನ ತನ್ನ ಕೆಲಸವನ್ನು ಮಾಡುತ್ತ ಧೈರ್ಯವಾಗಿ ತಿರುಗಾಡಬಹುದು. ಇಲ್ಲದೇ ಇದ್ದರೆ ಭಯಾನಕವಾದ ಕಾರಿರುಳಿನಂತಿರುವ ಸಾವು ಸಮೀಪಿಸಿದಾಗ ತುಂಬಾ ಕಷ್ಟಪಡಬೇಕಾಗುವುದು, ದುಃಖವನ್ನು ಅನುಭವಿಸಬೇಕಾಗುವುದು.

೯. ದೊಡ್ಡ ಕಣಜಗಳ ಬಾಗಿಲ ಹತ್ತಿರ ಇಲಿಗಳನ್ನು ಹಿಡಿಯು ವುದಕ್ಕಾಗಿ ಪುರಿಯನ್ನು ಒಳಗೆ ಹಾಕಿದ ಬಲೆಗಳಿರುತ್ತವೆ. ಇಲಿಗಳು ಪುರಿಯ ವಾಸನೆಗೆ ಮರುಳಾಗಿ ಕಣಜದ ಒಳಗಿರುವ ಇನ್ನೂ ಹೆಚ್ಚಿನ ದವಸವನ್ನು ಮರೆತು ಬಲೆಗೆ ಬೀಳುತ್ತವೆ. ಅವುಗಳೆಲ್ಲ ಅಲ್ಲಿ ಸಿಕ್ಕಿಕೊಂಡು ಸಾಯುತ್ತವೆ. ಇದರಂತೆಯೇ ಜೀವನ ಪಾಡುಕೂಡ. ಪ್ರಪಂಚದ ಲಕ್ಷಾಂತರ ಸುಖಗಳು ಘನೀಭೂತವಾಗಿ ಏಕವಾದಂತಿರುವ ಸಚ್ಚಿದಾ ನಂದದ ಎದುರಿಗೆ ಜೀವ ನಿಂತಿರುವನು. ಅಂತಹ ಪರಮ ಸುಖಕ್ಕೆ ಪ್ರಯತ್ನಪಡುವ ಬದಲು ಕೆಲಸಕ್ಕೆ ಬಾರದ ಇಂದ್ರಿಯಭೋಗಗಳಿಗೆ ಮರುಳಾಗಿ ಮಹಾಘೋರವಾದ ಮಾಯೆಯ ಬಲೆಗೆಬಿದ್ದು ಅಲ್ಲಿ ಸಾಯುತ್ತಾನೆ.

೧೦. ಒಬ್ಬಪಂಡಿತ : " ಆತ್ಮವಿದ್ಯಾವಾದಿಗಳು(ಥಿಯಾಸಫಿಸ್ಟ್) ಮಹಾತ್ಮರುಗಳು ಇರುವರು ಎನ್ನುತ್ತಾರೆ. ದೇವಲೋಕ ಚಂದ್ರಲೋಕ ಸೂರ್ಯಲೋಕ ಎಂಬ ಲೋಕಗಳಿವೆ. ಮನುಷ್ಯನು ಸೂಕ್ಷ್ಮರೂಪದಲ್ಲಿ ಇಂತಹ ಲೋಕಗಳಿಗೆ ಹೋಗಬಹುದು—ಎನ್ನುತ್ತಾರೆ. ಅವರು ಇನ್ನೂ ಇಂತಹ ಎಷ್ಟೋ ವಿಷಯಗಳನ್ನು ಹೇಳುತ್ತಾರೆ. ಮಹಾಶಯರೆ ಇವುಗಳ ವಿಚಾರವಾಗಿ ನಿಮ್ಮ ಅಭಿಪ್ರಾಯವೇನು ? "

ಪರಮಹಂಸರು : " ಪರಮಾತ್ಮನ ಮೇಲೆ ಇರುವ ಭಕ್ತಿಯೊಂದೇ ಪವಿತ್ರವಾದುದು. ಅವರಿಗೆ ಭಕ್ತಿಯ ಮೇಲೆ ಆಸೆ ಇದೆಯೇನು ? ಇದ್ದರೆ ಅದು ಒಳ್ಳೆಯದು. ಅವರು ಪರಮಾತ್ಮನ ಸಾಕ್ಷಾತ್ಕಾರವನ್ನು ತಮ್ಮ ಜೀವನದ ಚರಮಗುರಿಯಾಗಿ ಇಟ್ಟುಕೊಂಡರೆ ಒಳ್ಳೆಯದು. ಆದರೆ ಇದನ್ನು ನೆನಪಿನಲ್ಲಿಡಿ. ಚಂದ್ರಲೋಕ, ಸೂರ್ಯಲೋಕ ದೇವ ಲೋಕ ಮುಂತಾದವುಗಳಿಂದ ಮನಸ್ಸನ್ನು ತುಂಬಿಕೊಂಡಿರುವವರು

ದೇವರನ್ನು ನಿಜವಾಗಿ ಹುಡುಕುವುದಿಲ್ಲ. ಅವನ ಪಾದಪದ್ಮಗಳಲ್ಲಿ ಭಕ್ತಿ ಬರಬೇಕಾದರೆ ಸಾಧನೆಮಾಡಬೇಕು. ಹೃತ್ಪೂರ್ವಕ ಒಬ್ಬನು ದೇವರಿಗಾಗಿ ಅಳಬೇಕು. ಬೇರೆ ಬೇರೆ ವಿಷಯಗಳಿಂದ ಮನಸ್ಸನ್ನು ತೆಗೆದು ಆತನ ಮೇಲೆ ಮಾತ್ರ ಏಕಾಗ್ರಗೊಳಿಸಬೇಕು. ಅವನು ವೇದಗಳಲ್ಲಿ ಇಲ್ಲ, ವೇದಾಂತದಲ್ಲಿ ಇಲ್ಲ, ಅಥವಾ ಮತ್ತಾವ ಧರ್ಮಗ್ರಂಥ ಗಳಲ್ಲಿಯೂ ಇಲ್ಲ. ಅವನಿಗಾಗಿ ಒಬ್ಬನು ಹಂಬಲಿಸುವತನಕ ಏನನ್ನೂ ಅವನು ಹೊಂದಲಾರನು. ಹೃತ್ಪೂರ್ವಕವಾದ ಭಕ್ತಿಯಿಂದ ಒಬ್ಬನು ಅವನನ್ನು ಪ್ರಾರ್ಥಿಸಬೇಕು, ಸಾಧನೆಮಾಡಬೇಕು ಸುಲಭವಾಗಿ ದೇವರನ್ನು ಕಾಣಲು ಆಗುವುದಿಲ್ಲ. ಸಾಧನೆ ಅತ್ಯಾವಶ್ಯಕ."

೧೧. ಎಲ್ಲರೂ ದೇವರನ್ನು ನೋಡಬಲ್ಲರೆ? ಯಾರೂ ದಿನವೆಲ್ಲ ಉಪವಾಸ ಮಾಡಬೇಕಾಗಿಲ್ಲ. ಕೆಲವರಿಗೆ ಬೆಳಗ್ಗೆ ಒಂಬತ್ತು ಗಂಟೆಗೆ ಊಟ ಸಿಕ್ಕುತ್ತದೆ. ಮತ್ತೆ ಕೆಲವರಿಗೆ ಮಧ್ಯಾಹ್ನದಲ್ಲಿ, ಮತ್ತೆ ಕೆಲವರಿಗೆ ಎರಡುಗಂಟೆ ಹೊತ್ತಿಗೆ, ಉಳಿದವರಿಗೆ ಸಂಜೆಯ ಸೂರ್ಯಾಸ್ತಮಯಕ್ಕೆ ಊಟ ಸಿಕ್ಕುತ್ತದೆ. ಇದರಂತೆಯೇ ಎಂದಾದರೊಂದು ದಿನ ಈ ಜೀವನದಲ್ಲಿಯೋ ಅಥವಾ ಯಾವುದಾದರೂ ಮುಂದಿನ ಜೀವನ ದಲ್ಲಿಯೋ ಎಲ್ಲರೂ ದೇವರನ್ನು ಕಂಡೇ ಕಾಣುತ್ತಾರೆ.

೧೨. ಮನೆಯ ಅಂಗಳದಲ್ಲಿ ಸಣ್ಣ ಮಕ್ಕಳು ಆಟದಸಾಮಾನಿ ನೊಂದಿಗೆ ನಿರ್ಭಯವಾಗಿ ಯಾವ ಅಡ್ಡಿಆತಂಕಗಳಿಲ್ಲದೆ ಆಡುತ್ತ ಇರುತ್ತವೆ. ಆದರೆ ತಾಯಿ ಅವರ ಬಳಿಗೆ ಬಂದತಕ್ಷಣವೇ ಅವು ಆಟದಸಾಮಾನನ್ನು ಬಿಸುಟು "ಅಮ್ಮ, ಅಮ್ಮ" ಎಂದು ಅಳುತ್ತಾ ಅವಳ ಬಳಿಗೆ ಹೋಗುವುವು. ಎಲೈ ಮಾನವನೇ! ನೀನುಕೂಡ ಪ್ರಪಂಚದಲ್ಲಿ ದ್ರವ್ಯ ಕೀರ್ತಿ ಗೌರವಗಳೆಂಬ ಆಟದ ಸಾಮಾನಿಗೆ ಮರುಳಾಗಿ ಯಾವ ಅಂಜಿಕೆ ಆತಂಕಗಳಿಲ್ಲದೆ ಆಟದಲ್ಲಿ ನಿರತ ನಾಗಿರುವೆ. ಆದರೆ ನೀನು ಒಮ್ಮೆ ಜಗನ್ಮಾಯಿಯನ್ನು ನೋಡಿದರೆ ಇವುಗಳ ಮೇಲೆ ನಿನಗೆ ಆಸೆಯೇ ಇರುವುದಿಲ್ಲ. ಆಟದ ಸಾಮಾನನ್ನು ಆಚೆಗೆ ಎಸೆದು ನೀನು ಅವಳ ಬಳಿಗೆ ಓಡುವೆ,

೧೩. ಆಳವಾದ ಕಡಲಿನಲ್ಲಿ ಮುತ್ತುಗಳಿವೆ. ಆದರೆ ಅಪಾಯ ವನ್ನು ಎದುರಿಸಬೇಕಾಗಿದೆ. ನೀನು ಅವುಗಳನ್ನು ಹೊಂದಬೇಕಾದರೆ ಒಂದು ಸಲ ಮುಳುಗುವುದರಿಂದ ನಿನಗೆ ಅದು ಸಿಕ್ಕದೆ ಇದ್ದರೆ ಸಮುದ್ರ ದಲ್ಲಿ ಮುತ್ತೇ ಇಲ್ಲ ಎಂದು ನಿರ್ಧಾರಕ್ಕೆ ಬರಬೇಡ. ಪುನಃ ಪುನಃ

ಮುಳುಗು. ಕೊನೆಗೆ ನಿನಗೆ ಪ್ರತಿಫಲ ಸಿಕ್ಕುವುದರಲ್ಲಿ ಸಂದೇಹವಿಲ್ಲ. ಇದರಂತೆಯೇ ದೇವರನ್ನು ಹುಡುಕುವುದರಲ್ಲಿ ಕೂಡ ನಿಮ್ಮ ಮೊದಲನೆ ಪ್ರಯತ್ನ ನಿಷ್ಪ್ರಯೋಜನವಾದರೆ ಎದೆಗೆಡಬೇಡಿ. ಪ್ರಯತ್ನವನ್ನು ಬಿಡಬೇಡಿ. ಕೊನೆಗೆ ನೀವು ಅವನನ್ನು ಹೊಂದಿಯೇ ಹೊಂದುವಿರಿ. ಸಚ್ಚಿದಾನಂದದ ಮೇಲೆ ಧ್ಯಾನಮಾಡಿ. ನಿಮಗೆ ಆನಂದ ಸಿಕ್ಕೇ ಸಿಕ್ಕುವುದು. ಆನಂದ ನಿಜವಾಗಿಯೂ ನಿತ್ಯವಾದದ್ದು. ಆದರೆ ಅಜ್ಞಾನದಿಂದ ಆವೃತವಾಗಿ ಮರೆಯಾಗಿದೆ. ಇಂದ್ರಿಯವಿಷಯಗಳ ಮೇಲೆ ನಿನ್ನ ಆಸಕ್ತಿ ತಗ್ಗಿದಷ್ಟೂ ದೇವರ ಮೇಲೆ ನಿನ್ನ ಆಸಕ್ತಿ ಅಷ್ಟೂ ಹೆಚ್ಚುವುದು.

೧೪. ಸುಮ್ಮನೆ ಐಶ್ವರ್ಯವಿದ್ದರೆ ಒಬ್ಬನು ಶ್ರೀಮಂತನಾಗುವುದಿಲ್ಲ. ಶ್ರೀಮಂತನ ಮನೆಯ ಗುರುತೇನೆಂದರೆ ಅವನ ಪ್ರತಿಯೊಂದು ಕೋಣೆಯಲ್ಲಿಯೂ ದೀಪ ಉರಿಯುತ್ತಿರುವುದು. ಬಡವರಿಗೆ ಎಣ್ಣೆಯಿಲ್ಲ. ಅದಕ್ಕೇ ಅವರು ಹೆಚ್ಚು ದೀಪಗಳನ್ನು ಉರಿಸುವುದಿಲ್ಲ.

೧೫. ಈ ದೇಹವೆಂಬ ಗುಡಿಯನ್ನು ಕತ್ತಲೆಯಲ್ಲಿ ಇಡಬಾರದು. ಜ್ಞಾನದೀವಿಗೆಯನ್ನು ಅಲ್ಲಿ ಹಚ್ಚಬೇಕು. ನಿಮ್ಮ ಕೋಣೆಯಲ್ಲಿ ಜ್ಞಾನಜ್ಯೋತಿಯನ್ನು ಹಚ್ಚಿ ಅಲ್ಲಿ ಜಗನ್ಮಾಯಿಯ ಸ್ವರೂಪವನ್ನು ದರ್ಶನ ಮಾಡಿ. ಪ್ರತಿಯೊಬ್ಬರೂ ಜ್ಞಾನವನ್ನು ಪಡೆಯಬಹುದು. ಇಲ್ಲಿ ಜೀವಾತ್ಮನಿರುವನು, ಮತ್ತು ಪರಮಾತ್ಮನೂ ಇರುವನು. ಪ್ರತಿಯೊಂದು ಜೀವಾತ್ಮನಿಗೂ ಕೂಡ ಪರಮಾತ್ಮನೊಂದಿಗೆ ಸಂಬಂಧವಿರುವುದು. ಪ್ರತಿಯೊಂದು ಮನೆಗೂ ಗ್ಯಾಸ್ ಸಂಬಂಧವಿದೆ. ಅದನ್ನು ಗ್ಯಾಸ್ ಕಂಪೆನಿಯಿಂದ ಪಡೆಯಬಹುದು, ಅದಕ್ಕೆ ಸರಿಯಾದ ಅಧಿಕಾರಿಗಳಿಗೆ ಅರ್ಜಿ ಹಾಕಿದರೆ ಅದನ್ನು ಒದಗಿಸುವರು. ಆಗ ನಿಮ್ಮ ಕೋಣೆಗೆ ಗ್ಯಾಸ್‌ಲೈಟ್ ಬರುವುದು.

## ಮಾನವನ ಸಹಜಸ್ವರೂಪ

೧೬. ಒಂದರಮುಂದೆ ಸೊನ್ನೆಯನ್ನು ಸೇರಿಸುತ್ತಾ ಹೋದರೆ ಅದನ್ನು ಎಷ್ಟು ಬೇಕಾದರೂ ಬೆಲೆಯುಳ್ಳದ್ದನ್ನಾಗಿ ಮಾಡಬಹುದು. ಆದರೆ ಆ ಒಂದನ್ನು ಮರೆತರೆ ಬರಿಯ ಸೊನ್ನೆಯಿಂದ ಪ್ರಯೋಜನವಿಲ್ಲ. ಇದರಂತೆಯೇ ಜೀವನು ಎಲ್ಲಿಯವರೆಗೆ ದೇವನೊಂದಿಗೆ ಸೇರಿಕೊಂಡಿರುವುದಿಲ್ಲವೊ ಅಲ್ಲಿಯವರೆಗೆ ಅವನಿಗೆ ಬೆಲೆಯಿಲ್ಲ. ಪ್ರಪಂಚದಲ್ಲಿರುವ ಸಕಲ ವಸ್ತುಗಳಿಗೂ ಬೆಲೆ ಬರುವುದು ದೇವರಿಂದ. ಎಲ್ಲಿಯವರೆವಿಗೂ ಜೀವನು

ಪ್ರಪಂಚದ ಹಿಂದೆ ಇರುವ, ಬೆಲೆಯನ್ನು ಕೊಡುವ ಅಂಕಿಯಾದ ದೇವ ನೊಂದಿಗೆ ಇದ್ದು, ಎಲ್ಲಾ ಕೆಲಸಗಳನ್ನೂ ಅವನಿಗೋಸುಗವಾಗಿ ಮಾಡುವನೊ, ಅಲ್ಲಿಯವರೆವಿಗೆ ಅವನಿಗೆ ಹೆಚ್ಚು ಹೆಚ್ಚು ಸಂಪತ್ತುಗಳು ಬರುವುವು. ಆದಲ್ಲದೆ ದೇವರನ್ನು ಮರೆತು ತನ್ನ ಸ್ವಂತ ಕೀರ್ತಿಗೋಸುಗ ವಾಗಿ ಎಷ್ಟು ಕೆಲಸವನ್ನು ಮಾಡಿದರೂ ಅದರಿಂದ ಪ್ರಯೋಜನವಿಲ್ಲ.

೧೭. ಎಣ್ಣೆ ಇಲ್ಲದೆ ದೀಪ ಹೇಗೆ ಉರಿಯುವುದಿಲ್ಲವೊ ಹಾಗೆಯೇ ದೇವರಿಲ್ಲದೆ ಜೀವ ಬದುಕಿರಲಾರದು.

೧೮. ಕಬ್ಬಿಣಕ್ಕೆ ಸೂಜಿಗಲ್ಲು ಹೇಗೋ ಹಾಗೆಯೇ ದೇವರೂ ಕೂಡ ಜೀವನಿಗೆ. ಆದರೆ ಅವನು ಮನುಷ್ಯನನ್ನು ಏತಕ್ಕೆ ಆಕರ್ಷಿಸುವು ದಿಲ್ಲ? ಮಣ್ಣಿನಿಂದ ತುಕ್ಕುಹಿಡಿದುಹೋದ ಕಬ್ಬಿಣ ಹೇಗೆ ಶಿಲೆಯಿಂದ ಆಕರ್ಷಿತವಾಗಲಾರದೊ ಹಾಗೆಯೇ ಮಾಯಾ ಕೆಸರಿನಿಂದ ಆವೃತನಾದ ಜೀವನು ದೇವನ ಆಕರ್ಷಣವನ್ನು ತಿಳಿಯಲಾರ. ಆದರೆ ನೀರಿನಿಂದ ಮಣ್ಣನ್ನು ತೊಳೆದಮೇಲೆ ಕಬ್ಬಿಣ ಸರಾಗವಾಗಿ ಚಲಿಸಬಲ್ಲುದು. ಇದರಂತೆಯೆ ಪ್ರಾರ್ಥನೆ ಮತ್ತು ಪಶ್ಚಾತ್ತಾಪಗಳ ಕಂಬನಿಯಿಂದ ಪ್ರಪಂಚಕ್ಕೆ ಅಂಟಿಕೊಳ್ಳುವಂತೆ ಮಾಡಿದ ಮಾಯೆಯ ಕೆಸರನ್ನು ಜೀವನು ತೊಳೆದಮೇಲೆ ದೇವರ ಆಕರ್ಷಣೆಗೆ ಒಳಗಾಗುತ್ತಾನೆ.

೧೯. ಜೀವಾತ್ಮ ಪರಮಾತ್ಮರ ಐಕ್ಯ ಪ್ರತಿಯೊಂದು ಗಂಟೆಗೂ ಗಡಿಯಾರದಲ್ಲಿ ಸಂಧಿಸುವ ನಿಮಿಷ ಮತ್ತು ಗಂಟೆಯ ಕೈಗಳಂತೆ. ಅವು ಗಳಿಗೆ ಪರಸ್ಪರ ಸಂಬಂಧವಿದೆ. ಒಂದು ಇನ್ನೊಂದರ ಮೇಲೆ ನಿಂತಿದೆ. ಅವು ಸಾಧಾರಣವಾಗಿ ಬೇರೆಯಾಗಿದ್ದರೂ ಅನುಕೂಲವಾದ ಅವಕಾಶ ಒದಗಿದಾಗಲೆಲ್ಲ ಒಂದುಗೂಡುವುವು-

೨೦. ಬಂಧನದಲ್ಲಿರುವ ಜೀವವೇ ಮನುಷ್ಯ. ಆದರೆ ಮಾಯೆ ಯಿಂದ ಪಾರಾದಮೇಲೆ ಅದೇ ಬ್ರಹ್ಮ.

೨೧. ಜೀವಾತ್ಮರಿಗೂ ಪರಮಾತ್ಮರಿಗೂ ಇರುವ ಸಂಬಂಧ ವೆಂತಹುದು? ಹರಿಯುತ್ತಿರುವ ನೀರಿಗೆ ಎದುರಾಗಿ ಒಂದು ಹಲಗೆ ಯನ್ನು ಇಟ್ಟರೆ ನೀರು ಇಬ್ಭಾಗವಾದಂತೆ ತೋರುವುದು. ಇದರಂತೆಯೆ ಮಾಯೆಯ ಪ್ರಭಾವದಿಂದ ಏಕವು ಜೀವಾತ್ಮ ಪರಮಾತ್ಮರೆಂದು ಭಾಗ ವಾದಂತೆ ತೋರುವುದು.

೨೨. ನೀರು ಮತ್ತು ಅದರ ಮೇಲಿರುವ ನೀರುಗುಳ್ಳೆ, ಎರಡೂ ಒಂದೇ. ನೀರಗುಳ್ಳೆ ನೀರಿನಿಂದ ಏಳುವುದು, ಅದರ ಮೇಲೆ ತೇಲು

ವುದು, ಕೊನೆಗೆ ಅದರಲ್ಲಿ ಐಕ್ಯವಾಗುವುದು. ಇದರಂತೆಯೇ ಜೀವಾತ್ಮ ಪರಮಾತ್ಮರೂ ಕೂಡ ಒಂದೇ. ಇವರಿಗೆ ವ್ಯತ್ಯಾಸವಿರುವುದು ತರ ತಮದಲ್ಲಿ ಮಾತ್ರ. ಒಂದು ಮಿತ ಉಳ್ಳದ್ದು, ಅದಕ್ಕೆ ಮೇರೆ ಇದೆ. ಇನ್ನೊಂದು ಅನಂತವಾದುದು. ಒಂದು ಅನ್ಯಾಶ್ರಯ ಜೀವಿ, ಮತ್ತೊಂದು ಸ್ವತಂತ್ರ.

೨೩. ಅಹಂಕಾರವೆಂಬ ಭಾವನೆ ಗಂಗಾನದಿಯ ನೀರನ್ನು ಒಂದು ಪಾತ್ರೆಗೆ ಹಾಕಿ ಅದನ್ನು ನನ್ನ ಗಂಗೆ ಎಂದು ಹೇಳುವಂತೆ.

೨೪. ಪಾದರಸ ಇರುವ ಪಾತ್ರೆಗೆ ಒಂದು ಚೂರು ಸೀಸವನ್ನು ಹಾಕಿದರೆ ಅದು ಅದರಲ್ಲಿ ಕರಗಿಹೋಗುವಂತೆ ಜೀವಾತ್ಮ ಬ್ರಹ್ಮಸಾಗ ರಕ್ಕೆ ಬಿದ್ದರೆ ತನ್ನ ಪ್ರತ್ಯೇಕತೆಯನ್ನು ಕಳೆದುಕೊಳ್ಳುವನು.

೨೫. ದೇವರು ಅನಂತನು ; ಜೀವಿಯಾದರೊ ಅಂತ ಉಳ್ಳವನು. ಹಾಗಾದರೆ ಈ ಅಂತ ಉಳ್ಳವನು ಅನಂತವನ್ನು ಹೇಗೆ ಗ್ರಹಿಸಬಲ್ಲನು ? ಉಪ್ಪಿನಿಂದ ಮಾಡಿದ ಒಂದು ಬೊಂಬೆ ಸಮುದ್ರದ ಆಳವನ್ನು ಪರೀಕ್ಷಿ ಸಲು ಇಳಿದಂತೆ. ಇದರಿಂದ ಉಪ್ಪಿನ ಬೊಂಬೆ ನೀರಿನಲ್ಲಿ ಕರಗಿ ಕಣ್ಮರೆ ಯಾಗುವುದು. ಇದರಂತೆಯೇ ಜೀವನೂ ಕೂಡ ದೇವರನ್ನು ಅಳತೆ ಮಾಡಿ ತಿಳಿಯಬೇಕೆಂಬ ಪ್ರಯತ್ನದಲ್ಲಿ ತನ್ನ ಪ್ರತ್ಯೇಕತೆಯನ್ನು ಕಳೆದು ಕೊಂಡು ಅವನಲ್ಲಿ ಒಂದಾಗುವನು.

೨೬. ದೇವರೆ ಮನುಷ್ಯನಂತೆ ಆಡುತ್ತಿರುವನು. ಅವನು ದೊಡ್ಡ ಐಂದ್ರಜಾಲಕನು. ಈ ಜೀವ ಜಗತ್ತು ಎಂಬ ತೋರಿಕೆ ಅವನ ಅದ್ಭುತವಾದ ಇಂದ್ರಜಾಲ. ಐಂದ್ರಜಾಲಕನೊಬ್ಬನೆ ಸತ್ಯ. ಇಂದ್ರ ಜಾಲವೆಲ್ಲ ಮಿಥ್ಯ.

೨೭. ಮನುಷ್ಯದೇಹ ಒಂದು ಪಾತ್ರೆಯಂತೆ. ಮನಸ್ಸು ಬುದ್ಧಿ ಇಂದ್ರಿಯಗಳು ನೀರು ಅಕ್ಕಿ ಆಲೂಗಡ್ಡೆಯಂತೆ. ನೀರು ಅಕ್ಕಿ ಆಲೂ ಗಡ್ಡೆ ಇರುವ ಪಾತ್ರೆಯನ್ನು ಒಲೆಯ ಮೇಲೆ ಇಟ್ಟರೆ ಅದು ಬಿಸಿ ಯಾಗುತ್ತದೆ. ಅದನ್ನು ಯಾರಾದರೂ ಮುಟ್ಟಿದರೆ ಶಾಖ ನಿಜವಾಗಿ ಅಕ್ಕಿ ನೀರು ಆಲೂಗಡ್ಡೆಯಲ್ಲದೇ ಇದ್ದರೂ ಅವರ ಕೈಗಳು ಸುಡು ತ್ತವೆ. ಇದರಂತೆಯೇ ಮನಸ್ಸು ಬುದ್ಧಿ ಇಂದ್ರಿಯಗಳನ್ನು ಅವುಗಳ ಕೆಲಸವನ್ನು ಮಾಡುವಂತೆ ಪ್ರೇರೇಪಿಸುವುದು ಬ್ರಹ್ಮಶಕ್ತಿ. ಆ ಶಕ್ತಿ ಕೆಲಸಮಾಡುವುದು ನಿಂತರೆ ಇವುಗಳೆಲ್ಲವೂ ನಿಲ್ಲುತ್ತವೆ.

## ಬದ್ಧ ಜೀವಿ

೨೮. ಸಚ್ಚಿದಾನಂದಸ್ವರೂಪವೇ ಜೀವಿಯ ನಿಜಸ್ವರೂಪ. ಅಹಂಕಾರದ ದೆಸೆಯಿಂದ ಅವನು ಹಲವು ಉಪಾಧಿಗಳಲ್ಲಿ ಬದ್ಧನಾಗಿ ತನ್ನ ನಿಜಸ್ವಭಾವವನ್ನು ಮರೆತಿರುವನು.

೨೯. ಉಪಾಧಿಗಳು ಹೆಚ್ಚಿದಷ್ಟೂ ಜೀವನ ಸ್ವಭಾವ ಬದಲಾವಣೆ ಹೊಂದುವುದು. ಕಪ್ಪು ಅಂಚಿನ ಸೊಗಸಾದ ಪಂಚೆಯನ್ನು ಶೋಕಿಲಾಲನಂತೆ ಉಟ್ಟುಕೊಂಡರೆ ನಿಧೀ ಬಾಬುವಿನ ಪ್ರೀತಿಯ ಹಾಡುಗಳು ಅವನ ಬಾಯಿಗೆ ಬರುತ್ತವೆ. ಒಂದುಜೊತೆ ಇಂಗ್ಲೀಷಿನ ಜೋಡುಗಳು ನಿರ್ಗತಿಕನಿಗೂ ಜಂಭವನ್ನು ತರುವುದು. ತಕ್ಷಣವೇ ಅವನು ಸಿಳ್ಳೆಯನ್ನು ಹಾಕಲು ಮೊದಲುಮಾಡುವನು. ಅವನೇನಾದರೂ ಮೆಟ್ಟಿಲಿನ ಸಾಲನ್ನು ಹತ್ತಬೇಕಾದರೆ ಸಾಹೇಬರಂತೆ ಮೆಟ್ಟಿಲಿನಿಂದ ಮೆಟ್ಟಿಲಿಗೆ ನೆಗೆದುಕೊಂಡು ಹೋಗುತ್ತಾನೆ. ಕೈಯಲ್ಲಿ ಒಂದು ಲೇಖನಿ ಇದ್ದರೆ ಸಿಕ್ಕಿದ ಕಾಗದದ ಮೇಲೆಲ್ಲ ಗೀಚುತ್ತಾ ಹೋಗುತ್ತಾನೆ.

೩೦. ಹಾವು ತನ್ನ ಪರೆಯಿಂದ ಹೇಗೆ ಬೇರೆಯೋ ಹಾಗೆಯೇ ಆತ್ಮ ದೇಹಕ್ಕಿಂತ ಬೇರೆ.

೩೧. ಆತ್ಮನು ಯಾವುದಕ್ಕೂ ಸಂಬಂಧಿಸಿದವನಲ್ಲ. ಸುಖದುಃಖಗಳು ಧರ್ಮಅಧರ್ಮಗಳು ಆತ್ಮನನ್ನು ಯಾವ ವಿಧದಲ್ಲಿಯೂ ವಿಕಾರಿಯಾಗಿ ಮಾಡಲಾರವು. ಆದರೆ ಯಾರು ದೇಹವನ್ನು ತಾವೆಂದು ತಿಳಿದುಕೊಂಡಿರುವರೊ ಅವರ ಮೇಲೆ ತನ್ನ ಪರಿಣಾಮವನ್ನು ಬೀರುವುದು. ಹೊಗೆಯು ಗೋಡೆಯನ್ನು ಕಪ್ಪಾಗಿ ಮಾಡುವುದೇ ಹೊರತು ಗೋಡೆಗಳ ಮಧ್ಯದಲ್ಲಿರುವ ಆಕಾಶವನ್ನಲ್ಲ.

೩೨. ಆತ್ಮನು ಸಂಪೂರ್ಣವಾಗಿ ಅನಾಸಕ್ತನು ಎಂದು ವೇದಾಂತಿಗಳು ಹೇಳುತ್ತಾರೆ. ಪಾಪಪುಣ್ಯಗಳು ಸುಖದುಃಖಗಳು ಅವನನ್ನು ಏನೂ ಮಾಡಲಾರವು. ಆದರೆ ಯಾರು ದೇಹವನ್ನು ತಾವೆಂದು ತಿಳಿದುಕೊಂಡಿರುವರೋ ಅವರಿಗೆ ದುಃಖವನ್ನು ಕೊಡುವುದು. ಹೊಗೆಯು ಗೋಡೆಯನ್ನು ಕಪ್ಪುಮಾಡುವುದು. ಆದರೆ ಆಕಾಶವನ್ನು ಏನೂ ಮಾಡಲಾರದು.

೩೩. ಸತ್ತ್ವ ರಜಸ್ಸು ತಮಸ್ಸುಗಳ ಆಧಿಕ್ಯದಂತೆ ಮಾನವನು ಬೇರೆ ಬೇರೆ ಸ್ವಭಾವಗಳಿಂದ ಕೂಡಿರುವನು.

೩೪. ಎಲ್ಲಾ ಜೀವಿಗಳೂ ಪರಮಾರ್ಥದೃಷ್ಟಿಯಿಂದ ಒಂದೇ ಆದರೂ ಸ್ವಭಾವತಃ ಅವು ನಾಲ್ಕು ವಿಧವಾಗಿರುವುವು. ಅವುಗಳೇ ಬದ್ಧರು, ಮುಮುಕ್ಷುಗಳು (ಮುಕ್ತರಾಗಲು ಯತ್ನಿಸುತ್ತಿರುವವರು) ಮುಕ್ತರು ಮತ್ತು ನಿತ್ಯಮುಕ್ತರು.

೩೫. ಒಬ್ಬ ಬೆಸ್ತರವನು ಹೊಳೆಗೆ ಬಲೆಯನ್ನು ಬೀಸಿ ಮೀನನ್ನು ಹಿಡಿದನು. ಕೆಲವು ಮೀನುಗಳು ಬಲೆಯಲ್ಲಿ ಸ್ವಲ್ಪವೂ ಆಚೆಗೆ ಬರಲು ಪ್ರಯತ್ನಪಡದೆ ಸುಮ್ಮನೆ ಇದ್ದುವು. ಮತ್ತೆ ಕೆಲವು ತಪ್ಪಿಸಿಕೊಂಡು ಹೋಗುವುದಕ್ಕೆ ಒದ್ದಾಡಿದುವು. ಆದರೆ ಪ್ರಯೋಜನವಾಗಲಿಲ್ಲ. ಮೂರನೆ ಬಗೆಯ ಮೀನುಗಳು ಹೇಗೋ ಅಲ್ಲಿಂದ ತಪ್ಪಿಸಿಕೊಂಡು ಹೋದವು. ಪ್ರಪಂಚದಲ್ಲಿಯೂ ಕೂಡ ಇದರಂತೆ ಮೂರುಬಗೆ ಜನರು ಇರುವರು. ಮುಕ್ತರಾಗಲು ಸ್ವಲ್ಪವೂ ಪ್ರಯತ್ನಪಡದ ಬದ್ಧರು, ಮುಕ್ತರಾಗಲು ಪ್ರಯತ್ನಿಸುತ್ತಿರುವವರು, ಮತ್ತು ಆಗಲೆ ಮುಕ್ತಿಯನ್ನು ಪಡೆದವರು.

೩೬. ಮೂರುತರಹ ಗೊಂಬೆಗಳಿವೆ. ಒಂದನೆಯದು ಉಪ್ಪಿನಿಂದ ಮಾಡಿದ್ದು, ಎರಡನೆಯದು ಬಟ್ಟೆಯಿಂದ ಮಾಡಿದ್ದು, ಮೂರನೆಯದು ಕಲ್ಲಿನಿಂದ ಮಾಡಿದ್ದು. ಇವನ್ನು ನೀರಿನಲ್ಲಿ ಮುಳುಗಿಸಿದರೆ ಉಪ್ಪಿನಗೊಂಬೆ ಕರಗಿಹೋಗಿ ತನ್ನ ಆಕಾರವನ್ನು ಕಳೆದುಕೊಳ್ಳುತ್ತದೆ. ಬಟ್ಟೆಯಗೊಂಬೆ ಬೇಕಾದಷ್ಟು ನೀರನ್ನು ಹೀರಿಕೊಂಡರೂ ತನ್ನ ಆಕಾರವನ್ನು ಇಟ್ಟುಕೊಂಡಿರುವುದು. ಕಲ್ಲಿನಗೊಂಬೆ ತನ್ನಲ್ಲಿ ನೀರು ಇಳಿಯುವುದಕ್ಕೆ ಅವಕಾಶವನ್ನೇ ಕೊಡುವುದಿಲ್ಲ. ಉಪ್ಪಿನಗೊಂಬೆ ಸರ್ವವ್ಯಾಪಿಯಾದ ಪರಮಾತ್ಮನಲ್ಲಿ ಐಕ್ಯವಾದ ಜೀವಾತ್ಮನನ್ನು ಹೋಲುತ್ತದೆ. ಬಟ್ಟೆಯಗೊಂಬೆ ಭಕ್ತ ಅಥವಾ ನಿಜವಾಗಿ ದೇವರನ್ನು ಪ್ರೀತಿಸುವವನು. ಅವನು ಪರಮಾನಂದ ಮತ್ತು ಜ್ಞಾನದಿಂದ ಪೂರಿತನಾಗಿರುವನು. ಕಲ್ಲಿನಗೊಂಬೆಯೋ ಒಂದು ಸ್ವಲ್ಪಜ್ಞಾನವಾದರೂ ತನ್ನ ಮನಸ್ಸನ್ನು ಪ್ರವೇಶಿಸದಂತೆ ನೋಡಿಕೊಳ್ಳುವ ಪ್ರಾಪಂಚಿಕ.

೩೭. ಮನುಷ್ಯರು ತಲೆದಿಂಬಿನ ಚೀಲಗಳಂತೆ. ಒಂದರ ಬಣ್ಣ ಕೆಂಪು, ಮತ್ತೊಂದು ನೀಲಿ, ಮೂರನೆಯದು ಕಪ್ಪು ಇರಬಹುದು. ಆದರೆ ಎಲ್ಲಾ ದಿಂಬಿನ ಒಳಗೂ ಒಂದೇ ಹತ್ತಿ ಇದೆ. ಇದರಂತೆಯೇ ಮನುಷ್ಯರೂ ಕೂಡ. ಒಬ್ಬನು ಸುಂದರನಾಗಿರುವನು, ಮತ್ತೊಬ್ಬನು ಕಪ್ಪಾಗಿರುವನು. ಮೂರನೆಯವನು ಪುಣ್ಯಾತ್ಮನಾಗಿರಬಹುದು,

ನಾಲ್ಕನೆಯವನು ದುರಾತ್ಮನಾಗಿರಬಹುದು. ಆದರೆ ಪರಮಾತ್ಮನು ಎಲ್ಲರಲ್ಲಿಯೂ ಇರುವನು.

೩೮. ಕಡಬಿನ ಮೇಲಿನ ಮುಸುಕು ಅಕ್ಕಿ ಹಿಟ್ಟಿನಿಂದ ಮಾಡಿದೆ. ಆದರೆ, ಒಳಗೆ ಬೇರೆ ಬೇರೆ ತರಹ ಹೂರಣಗಳಿವೆ. ಒಳಗೆ ಇರುವ ಹೂರಣದ ಮೇಲೆ ಅದು ಒಳ್ಳೆಯದು ಅಥವಾ ಕೆಟ್ಟದ್ದು ಎಂದು ಹೇಳುವೆವು. ಇದರಂತೆಯೇ ಎಲ್ಲಾ ಮಾನವ ದೇಹಗಳೂ ಕೂಡ ಒಂದೇ ವಸ್ತುವಿನಿಂದ ಆಗಿದೆ. ಆದರೆ ಅವರ ಮನಸ್ಸಿನ ಪರಿಶುದ್ಧತೆಯ ಮೇಲೆ ಬೇರೆ ಬೇರೆ ಮನುಷ್ಯರಾಗುವರು.

೩೯. ಬ್ರಾಹ್ಮಣನ ಮಗ ಜಾತಿಯಲ್ಲಿ ಬ್ರಾಹ್ಮಣನ ಮಗನೇನೋ ನಿಜ. ಆದರೆ ಇಂತಹ ಹುಟ್ಟು ಬ್ರಾಹ್ಮಣರಲ್ಲಿ ಕೆಲವರು ದೊಡ್ಡ ವಿದ್ವಾಂಸರಾಗುತ್ತಾರೆ, ಕೆಲವರು ಪುರೋಹಿತರಾಗುತ್ತಾರೆ; ಕೆಲವರು ಅಡಿಗೆಯವರಾಗುತ್ತಾರೆ, ಮತ್ತೆ ಕೆಲವರು ಸೂಳೆಯ ಮನೆಯ ಮುಂದೆ ಧೂಳಿನಲ್ಲಿ ಹೊರಳಾಡುತ್ತಾರೆ.

೪೦. ದೇವರು ಹುಲಿಯಲ್ಲಿ ಕೂಡ ಇರುವುದು ನಿಜ. ಆದರೆ ಅದಕ್ಕಾಗಿ ನಾವು ಹೋಗಿ ಅದನ್ನು ಮುಟ್ಟಬೇಕಾಗಿಲ್ಲ. ಅತ್ಯಂತ ದುಷ್ಟರಲ್ಲಿ ಕೂಡ ದೇವರು ಇರುತ್ತಾನೆ ಎಂಬುದು ನಿಜ. ಆದರೆ ಅವರೊಂದಿಗೆ ನಾವು ಸಲಿಗೆಯಿಂದ ಇರುವುದು ಯೋಗ್ಯವಲ್ಲ.

೪೧. ಶ್ರೀಮನ್ನಾರಾಯಣ ನೀರಿನ ಮೇಲೆ ಮಲಗುತ್ತಾನೆ. ಆದರೆ ಎಲ್ಲಾ ವಿಧದ ನೀರು ಕುಡಿಯಲು ಯೋಗ್ಯವಲ್ಲ. ಇದರಂತೆಯೆ ದೇವರು ಸರ್ವಾಂತರ್ಯಾಮಿಯಾಗಿರುವುದು ನಿಜವಾದರೂ ಮನುಷ್ಯರು ಎಲ್ಲಾ ಸ್ಥಳಕ್ಕೂ ಹೋಗುವುದು ಯೋಗ್ಯವಲ್ಲ. ಒಂದು ನೀರನ್ನು ಕಾಲು ತೊಳೆಯುವುದಕ್ಕೆ ಉಪಯೋಗಿಸಬಹುದು. ಮತ್ತೊಂದನ್ನು ಬಾಯಿ ಮುಕ್ಕಳಿಸುವುದಕ್ಕೆ, ಮೂರನೆಯದನ್ನು ಕುಡಿಯುವುದಕ್ಕೆ ಉಪಯೋಗಿಸಬಹುದು. ಮುಟ್ಟಲು ಕೂಡ ಯೋಗ್ಯವಲ್ಲದ ಉಳಿದ ಎಷ್ಟೋ ಬಗೆಯ ನೀರು ಕೂಡ ಇವೆ. ಇದರಂತೆಯೇ ಹಲವು ಸ್ಥಳಗಳಿವೆ. ಕೆಲವದರ ಹತ್ತಿರ ಹೋಗಬಹುದು; ಮತ್ತೊಂದನ್ನು ಪ್ರವೇಶಿಸಬಹುದು; ಮತ್ತೆ ಕೆಲವು ಸ್ಥಳಗಳಿವೆ; ಅವಕ್ಕೆ ದೂರದಿಂದಲೇ ನಮಸ್ಕಾರ ಮಾಡಬೇಕು.

೪೨. ಕೆಳಗೆ ಬರುವ ಜನರನ್ನು ಕಂಡರೆ ಬಹಳ ಜೋಪಾನವಾಗಿರಿ: ಬಹಳ ಹರಟೆ ಹೊಡೆಯುವವನು, ಸರಳಸ್ವಭಾವವಲ್ಲದವನು,

ತನ್ನಲ್ಲಿರುವ ಭಕ್ತಿಯನ್ನು ಪ್ರಕಟಿಸುವುದಕ್ಕಾಗಿ ಕಿವಿಯ ಮೇಲೆ ತುಳಸೀ ದಳ ಸಿಕ್ಕಿಸಿಕೊಳ್ಳುವವನು, ದೊಡ್ಡ ಮುಸುಕನ್ನು ಮುಂದೆ ಬಿಟ್ಟು ಕೊಳ್ಳುವ ಹೆಂಗಸು.

## ಸಾವು ಮತ್ತು ಪುನರ್ಜನ್ಮ

೪೩. ಸಾಯುವ ಸಮಯದಲ್ಲಿ ಕೂಡ ಬದ್ಧಜೀವಿಗಳು ಪ್ರಾಪಂಚಿಕವಿಷಯವನ್ನೆ ಮಾತನಾಡುತ್ತಾರೆ. ಮನಸ್ಸಿನಲ್ಲಿ ಪ್ರಾಪಂಚಿಕ ಆಸೆ ಇದ್ದರೆ, ತೀರ್ಥಯಾತ್ರೆ ಗಂಗಾಸ್ನಾನ, ಜಪ ಮುಂತಾದುವುಗಳನ್ನು ಮಾಡಿ ಪ್ರಯೋಜನವಿಲ್ಲ. ಪ್ರಾಪಂಚಿಕ ಸಂಸ್ಕಾರಗಳು ಕೊನೆಗಾಲ ದಲ್ಲಿ ವ್ಯಕ್ತವಾಗುತ್ತವೆ. ಆದಕಾರಣವೇ ಬದ್ಧಜೀವಿಗಳು ಅಂತಹ ಕಾಲದಲ್ಲಿ ಹುಚ್ಚುಹುಚ್ಚಾಗಿ ಅರಚುತ್ತಾರೆ. ಗಿಣಿ ಸಾಧಾರಣ ಕಾಲದಲ್ಲಿ ರಾಧಾಕೃಷ್ಣ ಎಂದು ಹಾಡಬಹುದು. ಆದರೆ ಅದನ್ನು ಬೆಕ್ಕು ಹಿಡಿದಾಗ ' ಕಾಂಗ್ ಕಾಂಗ್ ' ಎಂಬ ಅದರ ಸಹಜ ಧ್ವನಿಮಾತ್ರ ವ್ಯಕ್ತವಾಗುವುದು.

೪೪. ದೇವರ ಮೇಲೆ ಭಕ್ತಿ ಇಲ್ಲದೇ ಇರುವುದರಿಂದ ಮನುಷ್ಯನು ಅಷ್ಟು ದುಃಖಪಡುವುದು. ಆದಕಾರಣವೇ ಕಡೆಗಾಲದಲ್ಲಿ ದೇವರ ಆಲೋಚನೆ ಬರುವಂತೆ ಒಬ್ಬನು ಅಭ್ಯಾಸ ಮಾಡಬೇಕು. ಈಶ್ವರ ಭಕ್ತಿಯೇ ಇದಕ್ಕೆ ಮಾರ್ಗ. ಬದುಕಿರುವಾಗ ಇದನ್ನು ಮಾಡಿದರೆ ಕೊನೆ ಗಾಲದಲ್ಲಿ ಕೂಡ ದೇವರ ಆಲೋಚನೆ ಬರುವುದರಲ್ಲಿ ಸಂದೇಹವಿಲ್ಲ.

೪೫. ಸಾಯುವುದಕ್ಕೆ ಮುಂಚೆ ಅವನು ಏನನ್ನು ಆಲೋಚಿಸು ತ್ತಿದ್ದನೋ ಅದರ ಮೇಲೆ ಅವನ ಜನ್ಮ ನಿಷ್ಕರ್ಷೆಯಾಗುವುದು. ಭಕ್ತಿ ಅದಕ್ಕೆ ಅತ್ಯಾವಶ್ಯಕ. ಪ್ರತಿ ದಿನದ ಸಾಧನೆಯಿಂದ ಒಬ್ಬನ ಮನಸ್ಸಿನಲ್ಲಿ ಪ್ರಾಪಂಚಿಕತೆಯಿಲ್ಲ ಹೋಗಿದ್ದರೆ, ಆ ಸ್ಥಳವನ್ನು ಆಕ್ರಮಿಸುವ ದೇವರ ಆಲೋಚನೆಗಳು ಸಾಯುವ ಸಮಯದಲ್ಲಿ ಕೂಡ ಬಿಟ್ಟು ಹೋಗುವುದಿಲ್ಲ.

೪೬. ಇನ್ನೂ ಸುಡದ ಮಡಕೆ ಒಡೆದರೆ ಕುಂಬಾರನು ಅದನ್ನು ಹೊಸ ಮಡಿಕೆ ಮಾಡುವುದಕ್ಕೆ ಉಪಯೋಗಿಸುತ್ತಾನೆ. ಆದರೆ ಸುಟ್ಟ ಮಡಕೆ ಒಡೆದರೆ ಅದರಿಂದ ಪ್ರಯೋಜನವಿಲ್ಲ. ಇದರಂತೆಯೇ ಅಜ್ಞಾನ ದಲ್ಲಿರುವಾಗ ಒಬ್ಬ ಮನುಷ್ಯನು ಕಾಲವಾದರೆ ಅವನು ಪುನಃ ಹುಟ್ಟು

ವನು. ಆದರೆ ಅವನು ನಿಜವಾದ ಜ್ಞಾನದಲ್ಲಿ ಬೆಂದು ಸಿದ್ಧನಾದಮೇಲೆ ಸತ್ತರೆ ಪುನರ್ಜನ್ಮವೆತ್ತುವುದಿಲ್ಲ.

೪೭. ಬೇಯಿಸಿದ ಭತ್ತದ ಕಾಳನ್ನು ಬಿತ್ತಿದರೆ ಅದು ಮೊಳೆಯುವುದಿಲ್ಲ. ಬೇಯದೆ ಇರುವ ಭತ್ತ ಮಾತ್ರ ಮೊಳೆಯುವುದು. ಇದರಂತೆಯೇ ಸಿದ್ಧನಾದ ಮೇಲೆ ಮನುಷ್ಯ ಸತ್ತರೆ ಅವನು ಪುನಃ ಹುಟ್ಟುವುದಿಲ್ಲ. ಆದರೆ ಅಸಿದ್ಧನಾದರೆ ಸಿದ್ಧನಾಗುವ ವರೆಗೆ ಪುನಃ ಪುನಃ ಹುಟ್ಟುತ್ತಿರಬೇಕು.

# ಅಧ್ಯಾಯ ೨

## ಮಾಯೆ

### ಮಾಯೆ ಈಶ್ವರನ ವಿಶ್ವಶಕ್ತಿ

೪೮. ಅಚಲವಾದ ಹಾವಿನೊಂದಿಗೆ ಚಲಿಸುವ ಹಾವನ್ನು ಹೋಲಿಸಿದರೆ ಹೇಗೋ ಹಾಗೆಯೇ ಮಾಯೆ ಮತ್ತು ಬ್ರಹ್ಮರ ಸಂಬಂಧ. ಕರ್ಮದಲ್ಲಿರುವ ಶಕ್ತಿಯೇ ಮಾಯೆ. ಸುಪ್ತವಾಗಿರುವ ಶಕ್ತಿಯೇ ಬ್ರಹ್ಮ.

೪೯. ಸರೋವರದ ನೀರು ಈಗ ಶಾಂತವಾಗಿದ್ದು ಮರುಕ್ಷಣ ಅಲೆಯಾಗಿ ರೂಪಾಂತರ ಹೊಂದುವಂತೆ ಬ್ರಹ್ಮ ಮತ್ತು ಮಾಯೆ. ಶಾಂತಸ್ಥಿತಿಯಲ್ಲಿರುವ ಸರೋವರವೇ ಬ್ರಹ್ಮ. ಅದೇ ಸರೋವರ ಅಲೆಗಳಿಂದ ಕೂಡಿರುವಾಗಲೇ ಮಾಯೆ.

೫೦. ಬ್ರಹ್ಮಶಕ್ತಿಗೆ ಇರುವ ಸಂಬಂಧ, ಬೆಂಕಿಗೂ ಅದಕ್ಕೆ ಇರುವ ದಹಿಸುವ ಗುಣಕ್ಕೂ ಇರುವ ಸಂಬಂಧದಂತೆ.

೫೧. ಶಿವ ಮತ್ತು ಶಕ್ತಿ ಇಬ್ಬರೂ ಸೃಷ್ಟಿಗೆ ಆವಶ್ಯಕ. ಒಣಗಿದ ಜೇಡಿಮಣ್ಣಿನಿಂದ ಯಾವ ಕುಂಬಾರನೂ ಮಡಕೆಯನ್ನು ಮಾಡಲಾರ. ನೀರು ಕೂಡ ಆವಶ್ಯಕ. ಹಾಗೆಯೇ ಶಕ್ತಿಯ ಸಹಾಯವಿಲ್ಲದೆ ಶಿವನೊಬ್ಬನೆ ಸೃಷ್ಟಿಸಲಾರ.

೫೨. ಮಾಯೆಯನ್ನು ನೋಡಬೇಕೆಂದು ಇದ್ದಾಗ ನನಗೆ ಒಂದು ದಿನ ದೃಶ್ಯವೊಂದು ಕಂಡಿತು. ಒಂದು ಸಣ್ಣ ಬಿಂದು ಕ್ರಮೇಣ ವಿಸ್ತಾರವಾಗಿ ಒಂದು ಹುಡುಗಿಯಾಯಿತು. ಆ ಹುಡುಗಿ ಹೆಂಗಸಾಗಿ ಒಂದು ಮಗುವನ್ನು ಹೆತ್ತಳು. ಮಗು ಹುಟ್ಟಿದ ತಕ್ಷಣವೇ ಅದನ್ನು

ತೆಗೆದುಕೊಂಡು ನುಂಗಿಬಿಟ್ಟಳು. ಹೀಗೆಯೇ ಅವಳಿಗೆ ಅನೇಕ ಮಕ್ಕಳು ಹುಟ್ಟಿದರು. ಎಲ್ಲವನ್ನೂ ಅವಳು ನುಂಗಿಬಿಟ್ಟಳು. ಆಗ ಇವಳು ಮಾಯೆ ಎಂದು ನನಗೆ ಗೊತ್ತಾಯಿತು.

೫೩. ಹಾವಿಗೆ ತನ್ನ ಹಲ್ಲಿನಲ್ಲಿರುವ ವಿಷದಿಂದ ಅದಕ್ಕೆ ಏನೂ ಅಪಾಯವಿಲ್ಲ. ಆದರೆ ಅದು ಇನ್ನೊಂದು ಪ್ರಾಣಿಯನ್ನು ಕಚ್ಚಿದಾಗ ವಿಷ ಆ ಪ್ರಾಣಿಯನ್ನು ಕೊಲ್ಲುತ್ತದೆ. ಹೀಗೆಯೇ ಮಾಯೆಯು ಈಶ್ವರ ನಲ್ಲಿದೆ. ಆದರೆ ಅವನಿಗೆ ಇದರಿಂದ ಏನೂ ತೊಂದರೆ ಇಲ್ಲ. ಆದರೆ ಅದೇ ಮಾಯೆ ವಿಶ್ವವನ್ನೇ ಮೋಹಗೊಳಿಸುವುದು.

## ಅವಿದ್ಯಾ ಮಾಯೆ

೫೪. ದಕ್ಷಿಣೇಶ್ವರ ದೇವಸ್ಥಾನದ ಒಂದು ಕೋಣೆಯಲ್ಲಿ ಕೆಲವು ದಿನಗಳು ಸಾಧು ಒಬ್ಬನು ವಾಸಿಸುತ್ತಿದ್ದನು. ಅವನು ಯಾರೊಂದಿಗೂ ಮಾತನಾಡುತ್ತಿರಲಿಲ್ಲ. ದಿನವೆಲ್ಲ ದೇವರ ಧ್ಯಾನದಲ್ಲಿ ಕಳೆಯು ತ್ತಿದ್ದನು. ಒಂದು ದಿನ ಇದ್ದಕ್ಕಿದ್ದಂತೆಯೆ ಮೋಡ ಬಂದು ಆಕಾಶವನ್ನೆಲ್ಲ ಆವರಿಸಿಕೊಂಡಿತು. ಸ್ವಲ್ಪ ಹೊತ್ತಾದಮೇಲೆ ಗಾಳಿ ಅದನ್ನೆಲ್ಲ ಚದುರಿಸಿತು. ಆ ಸಾಧು ಕೋಣೆಯಿಂದ ಹೊರಗೆ ಬಂದು ನಗುತ್ತ ಕುಣಿದಾಡಲು ಮೊದಲುಮಾಡಿದನು. ಇದನ್ನು ನೋಡಿ ಶ್ರೀ ರಾಮಕೃಷ್ಣರು ಆ ಸಾಧುವನ್ನು ಕುರಿತು, "ಪ್ರತಿದಿನ ನಿನ್ನ ಕೋಣೆಯಲ್ಲಿ ಮೌನವಾಗಿ ಕಾಲಕಳೆಯುತ್ತಿದ್ದವನು ಇಂದು ಸಂತೋಷ ದಿಂದ ಕುಣಿದಾಡುತ್ತಿರುವೆಯಲ್ಲ. ಇಷ್ಟು ಹರ್ಷಚಿತ್ತನಾಗಿರುವುದಕ್ಕೆ ಕಾರಣವೇನು?" ಎಂದು ಕೇಳಿದರು. ಅದಕ್ಕೆ ಆ ಸಾಧು "ಪ್ರಪಂಚ ವನ್ನು ಆವರಿಸಿರುವ ಆಮಾಯೆಯ ಸ್ವಭಾವ ಇದು! ಮೊದಲು ಅದರ ಸುಳಿವೇ ಇರಲಿಲ್ಲ. ತಕ್ಷಣವೆ ಅದು ಬ್ರಹ್ಮನ ಆಕಾಶದಲ್ಲಿ ಪ್ರಪಂಚವನ್ನು ಸೃಷ್ಟಿಸುತ್ತ ಕಾಣಿಸಿಕೊಳ್ಳುವುದು. ಬ್ರಹ್ಮನ ಒಂದು ಉಸಿರಿನಿಂದ ಎಲ್ಲ ಚದುರಿಹೋಗುವುದು" ಎಂದನು.

೫೫. ರಾಮ ಸೀತೆ ಮತ್ತು ಲಕ್ಷ್ಮಣರು ಅರಣ್ಯವಾಸಕ್ಕೆ ಕಾಡಿಗೆ ಹೋದರು. ರಾಮನು ಮುಂದೆ ಹೋಗುತ್ತಿದ್ದನು. ಸೀತೆ ಮಧ್ಯೆ, ಲಕ್ಷ್ಮಣ ಅವಳ ಹಿಂದೆ ಹೋಗುತ್ತಿದ್ದನು. ರಾಮನನ್ನು ಪೂರ್ತಿ ನೋಡಬೇಕೆಂದು ಲಕ್ಷ್ಮಣನ ಇಚ್ಛೆಯಾಗಿತ್ತು. ಆದರೆ ಸೀತೆ ಮಧ್ಯದಲ್ಲಿ ಇದ್ದುದರಿಂದ ಅದು ಸಾಧ್ಯವಾಗಲಿಲ್ಲ. ಆಗ ಸೀತೆಯನ್ನು

ಒಂದು ಪಕ್ಕಕ್ಕೆ ಸರಿಯುವಂತೆ ಕೇಳಿಕೊಂಡನು. ಅವಳು ಸರಿದ ತಕ್ಷಣವೇ ಲಕ್ಷ್ಮಣನ ಬಯಕೆ ಈಡೇರಿತು. ಅವನು ರಾಮನನ್ನು ನೋಡಿದನು. ಬ್ರಹ್ಮ ಮಾಯೆ ಮತ್ತು ಜೀವರ ಹೊಂದಿಕೆ ಹೀಗೆ ಇರುವುದು. ಎಲ್ಲಿಯವರೆವಿಗೂ ವಸ್ತುವನ್ನು ಮರೆಮಾಡುವ ಮಾಯಾ ಶಕ್ತಿ ಆಚೆಗೆ ಸರಿಯುವುದಿಲ್ಲವೊ ಅಲ್ಲಿಯವರೆವಿಗೂ ಮಾನವನು ದೇವರನ್ನು ನೋಡಲಾರ.

೫೬. ಸಾಧು ಒಬ್ಬನು ಒಂದು ತ್ರಿಕೋಣಾಕಾರವಾದ ಗಾಜಿನ ಮೂಲಕ ಹಗಲು ರಾತ್ರಿ ನೋಡುತ್ತ ನಗುತ್ತಿದ್ದ. ಹೀಗೆ ಮಾಡುತ್ತಿದ್ದುದಕ್ಕೆ ಕಾರಣ, ಅವನು ಗಾಜಿನಲ್ಲಿ ಕೆಂಪು, ನೀಲಿ, ಹಳದಿ ಮುಂತಾದ ಬಣ್ಣವನ್ನು ನೋಡುತ್ತಿದ್ದುದು. ಈ ಬಣ್ಣಗಳು ಸುಳ್ಳಾದಂತೆಯೇ ಪ್ರಪಂಚವೂ ನಶ್ವರ ಎಂದು ನಗುತ್ತ ತಿಳಿದುಕೊಂಡನು.

೫೭. ಹರಿಯು ಸಿಂಹದ ಮುಖವಾಡವನ್ನು ಹಾಕಿಕೊಂಡಾಗ ನಿಜವಾಗಿಯೂ ಬಹಳ ಭಯಂಕರವಾಗಿ ಕಾಣುತ್ತಾನೆ. ತನ್ನ ತಂಗಿ ಆಡುತ್ತಿರುವ ಕಡೆಗೆ ಹೋಗಿ ಭಯಂಕರವಾಗಿ ಕೂಗುವನು. ಅವಳು ತಲ್ಲಣಿಸುತ್ತ ಭಯದಿಂದ ಈ ವಿಚಿತ್ರ ಮೃಗದಿಂದ ತಪ್ಪಿಸಿಕೊಳ್ಳಲು ಪ್ರಯತ್ನಿಸುವಳು. ಆದರೆ ಹರಿ ಮುಖವಾಡವನ್ನು ತೆರೆದಮೇಲೆ, ಈ ಅಂಜಿಕೊಂಡ ಹುಡುಗಿ ತನ್ನ ಪ್ರಿಯ ಅಣ್ಣನನ್ನು ಗುರುತುಹಿಡಿದು "ಓ! ನನ್ನ ಅಣ್ಣ ಇವನು ಅಷ್ಟೆ!" ಎಂದು ಸಂತೋಷದಿಂದ ಅವನ ಹತ್ತಿರ ಓಡುವಳು. ಎಲ್ಲಾ ಮನುಷ್ಯರ ಸ್ವಭಾವವೇ ಹೀಗೆ. ಮಹಾ ಮಾಯಾಶಕ್ತಿಗೆ ಮರುಳಾಗಿ ಅಂಜಿಕೆಯಿಂದ ಎಂತೆಂತಹ ಕೆಲಸಗಳನ್ನೊ ಮಾಡುವರು. ಆ ಮಾಯೆಯ ಹಿಂದೆ ಬ್ರಹ್ಮನು ಅವಿತಿರುವನು. ಮಾಯಾತೆರೆಯು ಬ್ರಹ್ಮನ ಮುಖದಿಂದ ಸರಿದ ಮೇಲೆ ಅಲ್ಲಿ ಎಂದಿಗೂ ಒಲಿಯದ ಕ್ರೂರಿಯಾದ ಪ್ರಭುವನ್ನು ನೋಡುವುದಿಲ್ಲ. ಒಬ್ಬನ ಪರಮ ಪ್ರೀತಿಗೆ ಪಾತ್ರನಾದ ಪರಮಾತ್ಮನನ್ನು ನೋಡುತ್ತಾನೆ.

೫೮. ದೇವರು ಸರ್ವಾಂತರ್ಯಾಮಿಯಾದರೆ ನಾವು ಅವನನ್ನು ಯಾತಕ್ಕೆ ನೋಡುವುದಿಲ್ಲ? ಪಾಚಿಯಿಂದ ಬೆಳೆದ ಕೊಳದ ಸಮೀಪದಲ್ಲಿ ನಿಂತು ನೋಡಿದರೆ ನೀರು ಅಲ್ಲಿ ಕಾಣಿಸುವುದಿಲ್ಲ. ನೀರನ್ನು ನೋಡಬೇಕೆಂದು ನೀನು ಬಯಸಿದರೆ, ಕೊಳದ ಮೇಲಿಂದ ಪಾಚಿಯನ್ನು ತೆಗೆ. ಮಾಯೆಯ ತೆರೆಯಿಂದ ಆವೃತನಾಗಿರುವಾಗ ದೇವರನ್ನು ಕಾಣಲಾರೆ

ಎಂದು ದೂರು ಹೇಳುವೆ. ನೀನು ಅವನನ್ನು ನೋಡಬೇಕೆಂದು ಬಯಸಿದರೆ ನಿನ್ನ ಕಣ್ಣಿನಿಂದ ಮಾಯೆಯ ಪರೆಯನ್ನು ತೆರೆ.

೫೯. ಮೋಡ ಸೂರ್ಯನನ್ನು ಮುಚ್ಚುವಂತೆ ಮಾಯೆ ದೇವರನ್ನು ಮುಚ್ಚುವುದು, ಮೋಡ ಚಲಿಸಿದರೆ ಸೂರ್ಯ ಕಾಣಿಸುತ್ತಾನೆ. ಮಾಯೆ ಜಾರಿದರೆ ದೇವರು ಕಾಣಿಸುತ್ತಾನೆ.

೬೦. ಪುರಾಣಪ್ರಸಿದ್ಧವಾದ ರಾಜಹಂಸ ಹಾಲನ್ನು ಅದರೊಂದಿಗೆ ಬೆರೆಸಿದ ನೀರಿನಿಂದ ಬೇರೆಮಾಡಿ ನೀರನ್ನು ಬಿಟ್ಟು ಹಾಲನ್ನು ಮಾತ್ರ ಕುಡಿಯುವುದು. ಉಳಿದ ಹಕ್ಕಿಗಳು ಇದನ್ನು ಮಾಡಲಾರವು. ದೇವರು ಮಾಯೆಯೊಂದಿಗೆ ಮಿಶ್ರವಾಗಿ ಹೋಗಿರುವನು. ಸಾಧಾರಣ ಮನುಷ್ಯರು ಅವನನ್ನು ಮಾಯೆಯಿಂದ ಬೇರೆ ನೋಡಲಾರರು. ಪರಮಹಂಸನೊಬ್ಬನೇ ಮಾಯೆಯನ್ನು ತ್ಯಜಿಸಿ, ಪರಿಶುದ್ಧನಾದ ದೇವರನ್ನು ಸೇರುವನು.

೬೧. ಮೋಹಕಾರಿಯಾದ ಮಾಯೆಯ ಸ್ವಭಾವವನ್ನು ನೀನು ತಿಳಿದರೆ, ಪತ್ತೆಯಾದ ಕಳ್ಳ ಓಡಿಹೋಗುವಂತೆ ಅದು ಮಾಯವಾಗುವುದು.

## ವಿದ್ಯಾಮಾಯೆ

೬೨. ದೇವರಲ್ಲಿ ವಿದ್ಯಾಮಾಯೆ ಮತ್ತು ಅವಿದ್ಯಾಮಾಯೆ ಎರಡೂ ಇವೆ. ವಿದ್ಯಾಮಾಯೆ ಜೀವಿಯನ್ನು ದೇವರ ಕಡೆಗೆ ಕರೆದೊಯ್ಯುವುದು. ಅವಿದ್ಯಾಮಾಯೆ ಜೀವಿಯನ್ನು ದೇವರಿಗೆ ವಿಮುಖವಾಗಿ ಕರೆದೊಯ್ಯುವುದು. ಜ್ಞಾನ, ಭಕ್ತಿ, ವೈರಾಗ್ಯ, ದಯೆ ಇವು ವಿದ್ಯಾಮಾಯೆಯ ಲಕ್ಷಣ. ಇವುಗಳ ಸಹಾಯದಿಂದ ಮಾತ್ರ ನಾವು ದೇವರನ್ನು ಪಡೆಯಬಹುದು.

೬೩. ಮಾಯೆಯ ಮೂಲಕವೇ ಬ್ರಹ್ಮಸಾಕ್ಷಾತ್ಕಾರ. ಮಾಯೆಯ ಕೃಪೆ ಇಲ್ಲದೆ ಬ್ರಹ್ಮಸಾಕ್ಷಾತ್ಕಾರ ಯಾರಿಗೆತಾನೆ ಸಾಧ್ಯ? ಬ್ರಹ್ಮದ ವ್ಯಕ್ತಸ್ವರೂಪವಾದ ಶಕ್ತಿಯನ್ನು ಅರಿತಲ್ಲದೆ ಬ್ರಹ್ಮಾನುಭವಕ್ಕೆ ಬೇರೆ ಮಾರ್ಗವಿಲ್ಲ.

೬೪. ಮಾಯೆಯ ಅನುಗ್ರಹದಿಂದ ಮಾತ್ರ ಪರಮಜ್ಞಾನ ಮತ್ತು ಪರಮಾನಂದ ಹೊಂದಲು ಸಾಧ್ಯ. ಇಲ್ಲದೆ ಇದ್ದರೆ ಇವುಗಳನ್ನೆಲ್ಲ ಕನಸಿನಲ್ಲಿ ಕಲ್ಪಿಸಿಕೊಳ್ಳುವುದಕ್ಕೆ ಕೂಡ ಯಾರಿಗೆ ಸಾಧ್ಯ. ದ್ವೈತ

ಮತ್ತು ದ್ವಂದ್ವಭಾವ ಮಾಯೆಯಿಂದಲೇ ಮೂಡುತ್ತವೆ. ಮಾಯೆಯ ಆಚೆ ಭೋಕ್ತೃತ್ವ ಇಲ್ಲ ಅಥವಾ ಭೋಜ್ಯವೂ ಇಲ್ಲ.

೬೫. ಬೆಕ್ಕು ತನ್ನ ಹಲ್ಲಿನಿಂದ ಮರಿಯನ್ನು ಹಿಡಿದುಕೊಳ್ಳುತ್ತದೆ. ಅದರಿಂದ ಮರಿಗೆ ವ್ಯಥೆಯಾಗುವುದಿಲ್ಲ. ಆದರೆ ಇಲಿಯನ್ನು ಹಾಗೆ ಹಿಡಿದರೆ ಅದು ಸಾಯುತ್ತದೆ. ಹೀಗೆಯೆ ಮಾಯೆ ಉಳಿದವರನ್ನು ನಾಶಮಾಡಿದರೂ ಎಂದಿಗೂ ಭಕ್ತರನ್ನು ಕೊಲ್ಲುವುದಿಲ್ಲ.

# ಅಧ್ಯಾಯ ೩

## ಕಾಮಿನಿ ಕಾಂಚನ ರೂಪಿನಲ್ಲಿ ಮಾಯೆ

### ರತ್ಯಾಸಕ್ತಿಯ ಪಾಶ

೬೬. ಮಾಯೆಯೆಂದರೇನು ? ಆಧ್ಯಾತ್ಮಿಕ ವಿಕಾಸವನ್ನು ತಡೆಯುವ ರತ್ಯಾಸಕ್ತಿಯೇ ಅದು.

೬೭. ಮಾಯೆ ಅಥವಾ ರತ್ಯಾಸಕ್ತಿಯೇ ಪ್ರಪಂಚವನ್ನೆಲ್ಲ ಆವರಿಸಿಕೊಂಡಿರುವುದು.

೬೮. ಸಂಸಾರದಲ್ಲಿ ಸಿಕ್ಕಿದ ಬದ್ಧ ಜೀವಿಗಳು ಸಾವಿರಾರು ಅಪಮಾನಗಳು ಬಂದರೂ ಕಾಮಕಾಂಚನಗಳನ್ನು ನಿಗ್ರಹಿಸಿ ದೇವರ ಕಡೆಗೆ ಮನಸ್ಸನ್ನು ಕೊಡಲಾರರು.

೬೯. ಗೃಹಸ್ಥರೆ! ಜೋಪಾನವಾಗಿರಿ. ಹೆಂಗಸರಲ್ಲಿ ಹೆಚ್ಚು ನೆಚ್ಚಿಗೆಯನ್ನು ಇಡಬೇಡಿ. ಹೊಂಚಿಕೊಂಡಿದ್ದು ನಿಮ್ಮನ್ನು ಅವರು ಹೇಳಿದಂತೆ ಕೇಳುವಂತೆ ಮಾಡುವರು.

೭೦. ಮಸಿ ಇರುವ ಕೋಣೆಯಲ್ಲಿ ನೀವು ಎಷ್ಟೇ ಜೋಪಾನವಾಗಿದ್ದರೂ ಸ್ವಲ್ಪ ಮಸಿಯಾಗದೆ ಇರದು. ಇದರಂತೆಯೆ ಮನುಷ್ಯನು ಹೆಂಗಸಿನೊಂದಿಗೆ ಇದ್ದರೆ, ಅವನು ಎಷ್ಟೇ ಇಂದ್ರಿಯ ನಿಗ್ರಹಮಾಡಿದ್ದರೂ, ಅಲ್ಪ ಪ್ರಮಾಣದಲ್ಲಾದರೂ ಕಾಮದ ಆಲೋಚನೆ ಏಳುವುದು.

---

**ಕಾಮಿನಿ—ಪ್ರಾಣಿವರ್ಗದಲ್ಲಿ ಪ್ರಕೃತಿಸಹಜವಾಗಿರುವ ರತ್ಯಾಸಕ್ತಿಯನ್ನು** (Sexual Pleasure) **ನಿರ್ದೇಶಿಸುವಾಗ ಪರಮಹಂಸರು ಪ್ರಯೋಗಿಸುತ್ತಿದ್ದ ಒಂದು ಪರಿಭಾಷೆ.**

೭೧. ತುಂಬಾ ಜ್ವರದಿಂದ ನರಳುತ್ತ ಪ್ರಜ್ಞೆ ಇಲ್ಲದೆ ಬಿದ್ದಿರುವ ರೋಗಿಯ ಕೋಣೆಯಲ್ಲಿ ಗಡಿಗೆಯಲ್ಲಿ ತಣ್ಣೀರು, ರುಚಿಯಾದ ಉಪ್ಪಿನ ಕಾಯಿನ ಜಾಡಿ ಇವುಗಳನ್ನು ಇಟ್ಟಿದ್ದರೆ, ಸ್ವಭಾವತಃ ಬಾಯಾರಿ ಚಾಪಲ್ಯಕ್ಕೆ ಒಳಗಾದವನು ಗಡಿಗೆಯ ನೀರನ್ನೋ ಅಥವಾ ಜಾಡಿಯ ಉಪ್ಪಿನಕಾಯನ್ನೋ ರುಚಿನೋಡದೆ ಇರುತ್ತಾನೆಯೆ? ಇದರಂತೆಯೇ ಕಾಮವೆಂಬ ಜ್ವರದಿಂದ ನರಳುತ್ತ ವಿಷಯಸುಖಕ್ಕೆ ಬಾಯಾರುತ್ತಿರುವ ಬದ್ಧಜೀವಿ ರೂಪ ಮತ್ತು ಐಶ್ವರ್ಯ ಇವುಗಳ ಮಧ್ಯದಲ್ಲಿ ಇರುವಾಗ ಮನಸ್ಸಿನ ಚಪಲತೆಯನ್ನು ನಿಗ್ರಹಿಸುತ್ತಾನೆಯೆ? ಆಗ ಭಕ್ತಿ ಅಡ್ಡದಾರಿ ಹಿಡಿಯುವುದರಲ್ಲಿ ಸಂದೇಹವಿಲ್ಲ.

೭೨. ಒಂದು ದಿನ ಮಾರ್ವಾಡಿ ಗೃಹಸ್ಥನೊಬ್ಬನು ಶ್ರೀ ರಾಮಕೃಷ್ಣರ ಹತ್ತಿರ ಬಂದು ಹೀಗೆ ಕೇಳಿದನು: "ಸ್ವಾಮಿ ನಾನು ಎಲ್ಲವನ್ನೂ ತ್ಯಜಿಸಿದ್ದರೂ ದೇವರು ಏತಕ್ಕೆ ನನಗೆ ಕಾಣುವುದಿಲ್ಲ?"

ಶ್ರೀ ರಾಮಕೃಷ್ಣರು: "ಎಣ್ಣೆ ಇಡುವ ಚರ್ಮದ ಚೀಲವನ್ನು ನೀನು ನೋಡಿಲ್ಲವೆ. ಅದನ್ನು ಖಾಲಿಮಾಡಿದರೂ ಅದರಲ್ಲಿ ಸ್ವಲ್ಪ ಎಣ್ಣೆ ಮತ್ತು ವಾಸನೆ ಇದ್ದೇ ಇರುತ್ತದೆ. ಇದರಂತೆಯೇ ನಿನ್ನಲ್ಲಿ ಇನ್ನೂ ಪ್ರಾಪಂಚಿಕತೆ ಉಳಿದಿದೆ. ಅದರ ವಾಸನೆಯೂ ಇದೆ."

೭೩. "ಕಾಮ ಕಾಂಚನ" ಇವೆರಡು ಮನುಷ್ಯರನ್ನು ದೇವರಿಂದ ವಿಮುಖರನ್ನಾಗಿ ಮಾಡಿ ಸಂಸಾರದಲ್ಲಿ ಮಗ್ನರಾಗುವಂತೆ ಮಾಡುವುದು. ಇದನ್ನು ನೆನಪಿನಲ್ಲಿಡಿ; ಎಲ್ಲರೂ ತಮ್ಮ ಹೆಂಡತಿಯನ್ನು ಅವಳು ಒಳ್ಳೆಯವಳೊ ಕೆಟ್ಟವಳೊ, ಕೆಲಸಕ್ಕೆ ಬಾರದವಳೊ, ಏನಾದರಾಗಲಿ ಹೊಗಳುವರಲ್ಲದೆ ಮತ್ತೇನೂ ಇಲ್ಲ. ಇದೊಂದು ವಿಚಿತ್ರವೇ ಸರಿ.

೭೪. ಬೇಟೆಯವನ ಕಾಲಿನ ಹತ್ತಿರ ಕೋತಿ ತನ್ನ ಪ್ರಾಣವನ್ನು ಕಳೆದುಕೊಳ್ಳುವಂತೆ ಮನುಷ್ಯ ಸುಂದರ ನಾರಿಯ ಪಾದತಳದಲ್ಲಿ ಬಿದ್ದು ಸಾಯುವನು.

## ರತ್ಯಾಸಕ್ತಿ ಮತ್ತು ಆಧ್ಯಾತ್ಮಿಕ ಬೆಳವಣಿಗೆ

೭೫. ಯಾರು ದೇವರನ್ನು ಹೊಂದಬೇಕು ಅಥವಾ ಸಾಧನೆಯಲ್ಲಿ ಮುಂದುವರಿಯಬೇಕು ಎಂದು ಬಯಸುವರೋ ಅವರು ಕಾಮ ಕಾಂಚನದ ಬಲೆಗೆ ಬೀಳದಂತೆ ಜೋಪಾನವಾಗಿ ಇರಬೇಕು. ಹಾಗಿಲ್ಲದೆ ಇದ್ದರೆ ಅವರೆಂದಿಗೂ ಗುರಿಯನ್ನು ಸೇರಲಾರರು.

೭೬. ನಿತ್ಯಾನಂದನು ಶ್ರೀ ಚೈತನ್ಯರನ್ನು "ನನ್ನ ಪರಮ ಭಕ್ತಿ ಬೋಧನೆಗಳೆಲ್ಲ ಜನರ ಮನಸ್ಸಿನ ಮೇಲೆ ಸಾಕಾದಷ್ಟು ಪರಿಣಾಮವನ್ನು ಏತಕ್ಕೆ ಉಂಟುಮಾಡಲಿಲ್ಲ" ಎಂದು ಕೇಳಿದನು. ಅದಕ್ಕೆ ಚೈತನ್ಯರು "ಹೆಂಗಸಿನ ಸಂಗದಿಂದ ಅವರು ಗಹನವಿಷಯವನ್ನು ತಿಳಿದುಕೊಳ್ಳಲಾರರು; ಕೇಳು, ಸೋದರ ನಿತ್ಯಾನಂದ, ಪ್ರಪಂಚದಲ್ಲೇ ನಿರತನಾದವನಿಗೆ ಮೋಕ್ಷವಿಲ್ಲ" ಎಂದರು.

೭೭. ತಕ್ಕಡಿಯ ಕೋಲು ಮಧ್ಯದ ಸೂಜಿಯಿಂದ ಯಾವಾಗ ವಾಲುವುದು? ಒಂದು ತಟ್ಟೆ ಮತ್ತೊಂದು ಕಡೆಗಿಂತ ಭಾರವಾದಾಗ. ಇದರಂತೆಯೆ ಮನಸ್ಸಿನ ಮೇಲೆ ಕಾಮ ಕಾಂಚನಗಳ ಭಾರ ಬಿದ್ದಾಗ ಸಮತ್ವ ಹೋಗಿ ದೇವರಿಗೆ ವಿರೋಧವಾಗಿ ವಾಲುವುದು.

೭೮. ನೀರಿನ ಗಡಿಗೆಯ ತಳದಲ್ಲಿ ಒಂದು ಸಣ್ಣ ತೂತು ಇದ್ದರೆ ನೀರೆಲ್ಲ ಸೋರಿಹೋಗುವುದು. ಇದರಂತೆಯೆ ಸಾಧಕನಲ್ಲಿ ಅತ್ಯಲ್ಪ ಪ್ರಾಪಂಚಿಕತೆ ಇದ್ದರೂ ಕೂಡ ಅವನ ಸಾಧನೆಯೆಲ್ಲ ನಿಷ್ಫಲವಾಗುವುದು.

೭೯. ಕಾಮವನ್ನು ಸಂಪೂರ್ಣ ನಿಗ್ರಹಿಸಲು ಯತ್ನಿಸು. ಒಬ್ಬನು ಇದರಲ್ಲಿ ಜಯಶೀಲನಾದರೆ ಇದುವರೆಗೂ ಇನ್ನೂ ಬೆಳೆಯದ ಮೇಧಾ ಎಂಬ ನರವು ಅಭಿವೃದ್ಧಿಯಾಗಿ, ದೇಹವು ಪಾಶವೀ ಶಕ್ತಿಯನ್ನು ದೈವೀಶಕ್ತಿಯನ್ನಾಗಿ ಮಾರ್ಪಡಿಸುವುದು. ಈ ಮೇಧಾನರ ಅಭಿವೃದ್ಧಿಯಾದಮೇಲೆ ನಮಗೆ ಪರಮಾತ್ಮನ ಪರಿಚಯವಾಗುವುದು.

೮೦. ಕಾಮ ಕಾಂಚನಗಳಲ್ಲಿ ಆಸಕ್ತವಾದ ಮನಸ್ಸು ಹಸಿಯ ಅಡಿಕೆಯಂತೆ. ಅಡಿಕೆ ಹಸಿಯಾಗಿರುವ ವರಿಯಂತವೂ ಆದರ ಸಿಪ್ಪೆಗೆ ಕಚ್ಚಿಕೊಂಡು ಇರುವುದು. ಆದರೆ ಅದು ಒಣಗಿ ಹೋದಮೇಲೆ ಅಡಿಕೆ ಮತ್ತು ಸಿಪ್ಪೆ ಬೇರೆಯಾಗಿ ಅಲ್ಲಾಡಿಸಿದರೆ ಅಡಿಕೆ ಸಿಪ್ಪೆಯೊಳಗೆ ಅಲುಗಾಡುವುದು. ಇದರಂತೆಯೇ ಕಾಮ ಕಾಂಚನದ ಮೇಲೆ ನಮಗೆ ಇರುವ ಆಸೆ ಒಣಗಿಹೋದಮೇಲೆ ಆತ್ಮ ದೇಹಕ್ಕಿಂತ ಬೇರೆ ಎಂದು ಗೊತ್ತಾಗುವುದು.

೮೧. ಮನಸ್ಸು ವಿಷಯವಸ್ತುಗಳ ಮೇಲಿನ ಆಸಕ್ತಿಯಿಂದ ಪಾರಾದಮೇಲೆ ಅದು ದೇವರ ಕಡೆಗೆ ತಿರುಗಿ ಅವನ ಮೇಲೆ ಏಕಾಗ್ರವಾಗುವುದು. ಬದ್ಧಜೀವಿ ಹೀಗೆ ಮುಕ್ತನಾಗುವನು. ದೇವರಿಗೆ

ವಿಮುಖವಾಗಿರುವ ದಾರಿಯಲ್ಲಿ ಹೋಗುವ ಜೀವಿ ಬಂಧನದಲ್ಲಿ ಬೀಳುವನು.

೮೨. ಮನಸ್ಸಿನಿಂದ ಕಾಮ ಕಾಂಚನಗಳ ಆಸೆಯನ್ನು ತೊಡೆದು ಹಾಕಿದ ಮೇಲೆ ಆತ್ಮನಲ್ಲಿ ಉಳಿಯುವುದೇನು ? ಬ್ರಹ್ಮಾನಂದ ಒಂದೇ.

## ರತ್ಯಾಸಕ್ತಿಯನ್ನು ಗೆಲ್ಲುವುದು ಹೇಗೆ ?

೮೩. ವಿಷಸರ್ಪಗಳಿಂದ ಕೂಡಿದ ಮನೆಯಲ್ಲಿರುವವರು ಯಾವಾಗಲೂ ಜೋಪಾನವಾಗಿರುವಂತೆ ಕಾಮ ಕಾಂಚನಗಳ ಪ್ರಲೋಭನಗಳಿಗೆ ಸಿಕ್ಕದಂತೆ ಯಾವಾಗಲೂ ಜೋಪಾನವಾಗಿರಬೇಕು.

೮೪. ಹಾವನ್ನು ನೋಡಿದಾಗ ಸಾಧಾರಣವಾಗಿ " ತಾಯಿ ಮಾನಸ, ನಿನ್ನ ಹೆಡೆಯನ್ನು ಮುಚ್ಚಿಕೊಂಡು ಬಾಲವನ್ನು ತೋರಿಸಿ ಹೊರಟುಹೋಗು " ಎನ್ನುವೆವು. ಇದರಂತೆಯೇ ಕಾಮೋದ್ದೀಪನಗೊಳಿಸುವ ವಿಷಯಗಳಿಂದ ದೂರವಿರುವುದು ಲೇಸು. ಅವುಗಳ ಬಲೆಗೆ ಬಿದ್ದು ಅನುಭವವನ್ನು ಪಡೆಯುವುದಕ್ಕಿಂತ ಅವುಗಳ ಗೋಜಿಗೆ ಹೋಗದೇ ಇರುವುದೇ ಮೇಲು.

೮೫. ಶಿಷ್ಯನೊಬ್ಬನು ಶ್ರೀರಾಮಕೃಷ್ಣರನ್ನು ಒಂದು ದಿನ ಕಾಮವನ್ನು ಗೆಲ್ಲುವುದು ಹೇಗೆ ? ಧಾರ್ಮಿಕ ವಿಷಯಗಳಲ್ಲಿ ಕಾಲವನ್ನು ಕಳೆಯುತ್ತಿದ್ದರೂ, ಆಗಿಂದಾಗ್ಯೆ ಹಲವು ಕೆಟ್ಟ ಆಲೋಚನೆಗಳು ಮನಸ್ಸಿನಲ್ಲಿ ಏಳುತ್ತಿವೆ, ಎಂದು ಕೇಳಿದನು. ಆದಕ್ಕೆ ಶ್ರೀರಾಮಕೃಷ್ಣರು ಹೀಗೆ ಹೇಳಿದರು : " ಒಬ್ಬನಿಗೆ ಒಂದು ಮುದ್ದು ನಾಯಿ ಇತ್ತು. ಅವನು ಅದನ್ನು ಮುದ್ದಾಡುತ್ತಿದ್ದನು. ಹೋದಕಡೆ ಅದನ್ನು ಎತ್ತಿಕೊಂಡು ಹೋಗುತ್ತಿದ್ದನು, ಅದರೊಂದಿಗೆ ಆಡುತ್ತಿದ್ದನು. ಒಬ್ಬ ತಿಳಿದವನು ಈ ಮೂರ್ಖನ ನಡವಳಿಕೆಯನ್ನು ನೋಡಿ, ನಾಯಿ ಮೇಲೆ ಅಷ್ಟೊಂದು ಪ್ರೇಮವನ್ನು ತೋರಬೇಡವೆಂದು ಎಚ್ಚರಿಸಿದನು. ಎಷ್ಟೇ ಆದರೂ ಅದೊಂದು ವಿವೇಚನೆ ಇಲ್ಲದ ಮೃಗ. ಒಂದಲ್ಲ ಒಂದು ದಿನ ಕಚ್ಚಬಹುದು, ಎಂದನು. ನಾಯಿಯವನು ಈ ಎಚ್ಚರಿಕೆಯನ್ನು ಗಮನಿಸಿ ನಾಯಿಯನ್ನು ತನ್ನ ಕೈಗಳಿಂದ ಇಳಿಸಿ, ಅದನ್ನು ಇನ್ನು ಮೇಲೆ ಪ್ರೀತಿಸುವುದಿಲ್ಲವೆಂದು ಪ್ರತಿಜ್ಞೆಮಾಡಿದನು. ಮೊದಮೊದಲು ನಾಯಿಗೆ ತನ್ನ ಯಜಮಾನನ ಮನಸ್ಸಿನಲ್ಲಿ ದೃಷ್ಟಿ ಬದಲಾವಣೆಯಾಗಿದೆ ಎಂದು ತಿಳಿಯದೆ ತನ್ನನ್ನು ಎತ್ತಿ ಮುದ್ದಾಡಿಸಲಿ ಎಂದು ಅನೇಕವೇಳೆ

ಅವನ ಹತ್ತಿರ ಬರುವುದು. ಅನೇಕವೇಳೆ ಪೆಟ್ಟುತಿಂದ ಮೇಲೆ ಅದು ಯಜಮಾನನಿಗೆ ತೊಂದರೆಕೊಡುವುದನ್ನು ಬಿಟ್ಟಿತು. ನಿನ್ನ ಸ್ಥಿತಿಯೂ ಕೂಡ ಅದರಂತೆ. ನಿನ್ನ ಮನಸ್ಸಿನಲ್ಲಿ ಇಷ್ಟು ದಿನವೂ ಮುದ್ದಾಡುತ್ತಿರುವ ನಾಯಿಯು ನೀನು ಈಗ ಅದರಿಂದ ಪಾರಾಗಬೇಕೆಂದು ಬಯಸಿದರೂ ಅದು ನಿನ್ನನ್ನು ಸುಲಭವಾಗಿ ಬಿಡುವುದಿಲ್ಲ. ಆದರೂ ಅದರಿಂದ ಏನೂ ತೊಂದರೆ ಇಲ್ಲ. ಇನ್ನು ಹೆಚ್ಚು ನಾಯಿಯನ್ನು ಮುದ್ದಿಸಬೇಡ. ಅದು ನಿನ್ನ ಹತ್ತಿರ ಮುದ್ದಾಡಿಸಿಕೊಳ್ಳಲು ಬಂದಾಗ ಲೆಲ್ಲ ಚೆನ್ನಾಗಿ ಪೆಟ್ಟನ್ನು ಕೊಡು. ಕೆಲವು ದಿನಗಳಾದಮೇಲೆ ಅದರ ಕಾಟದಿಂದ ಸಂಪೂರ್ಣವಾಗಿ ಬಿಡುಗಡೆ ಹೊಂದುವೆ.

೮೬. ಕಾಮ ಕಾಂಚನ, ಪ್ರಪಂಚವನ್ನೆಲ್ಲ ಪಾಪದಲ್ಲಿ ಮುಳುಗಿಸಿದೆ. ಕಾಮಿನಿಯನ್ನು ಜಗನ್ಮಾಯಿಯ ಆವಿರ್ಭಾವವೆಂದು ನೋಡಿದಾಗ ಅವಳು ನಿಶ್ಶಸ್ತ್ರಳಾಗುವಳು. ಕಾಮ ಕಾಂಚನಗಳ ಮೇಲೆ ಜೀವಿಗೆ ಇರುವ ಆಸೆ ನಂದದ ತನಕ ದೇವರನ್ನು ನೋಡಲಾರ.

೮೭. ತೀವ್ರ ವೈರಾಗ್ಯದಿಂದ ಯಾರು ದೇವರನ್ನು ಪಡೆಯುತ್ತಾರೆಯೊ ಅವರಿಗೆ ಕಾಮದ ಆಸೆ ಮತ್ತು ಮಾಯೆ ಮಾಯವಾಗುವುವು. ತನ್ನ ಹೆಂಡತಿಯಿಂದಲೂ ಕೂಡ ಅವನಿಗೆ ಆಗ ಏನೂ ಅಪಾಯವಿರುವುದಿಲ್ಲ. ಒಂದು ಕಬ್ಬಿಣದ ತುಂಡಿಗೆ ಸಮದೂರದಲ್ಲಿ ಹೆಚ್ಚು ಮತ್ತು ಕಡಿಮೆ ಶಕ್ತಿಯುಳ್ಳ ಅಯಃಕಾಂತಶಿಲೆ ಇದ್ದರೆ, ಯಾವುದು ಕಬ್ಬಿಣವನ್ನು ಹೆಚ್ಚು ವೇಗದಿಂದ ಸೆಳೆಯುವುದು. ನಿಜವಾಗಿಯೂ ಯಾವುದಕ್ಕೆ ಹೆಚ್ಚು ಶಕ್ತಿ ಇದೆಯೊ ಅದು. ನಿಸ್ಸಂಶಯವಾಗಿಯೂ ದೇವರು ಹೆಚ್ಚು ಶಕ್ತಿಯುಳ್ಳ ಅಯಃಕಾಂತ ಶಿಲೆ. ಸಣ್ಣ ಅಯಃಕಾಂತ ಶಿಲೆಯಾದ ಹೆಣ್ಣು ಏನನ್ನು ಮಾಡಬಲ್ಲಳು.

೮೮. ಹಾವುಗಳು ವಿಷಪೂರಿತ ಹರಿದಾಡುವ ಜಂತುಗಳು. ನೀನು ಅದನ್ನು ಹಿಡಿಯಲು ಪ್ರಯತ್ನಿಸಿದರೆ ಅದರಿಂದ ಕಚ್ಚಿಸಿಕೊಳ್ಳುವುದರಲ್ಲಿ ಸಂದೇಹವಿಲ್ಲ. ಮಂತ್ರಧೂಳಿನಿಂದ ಹಾವನ್ನು ಹಿಡಿಯುವ ವಿದ್ಯೆಯನ್ನು ಬಲ್ಲವನಿಗೆ ಅದನ್ನು ಹಿಡಿಯುವುದಕ್ಕೆ ಅಷ್ಟೇನೂ ಕಷ್ಟವಲ್ಲ. ಬೇಕಾದರೆ ಅವನು ಏಳು ಹಾವುಗಳನ್ನು ಒಟ್ಟಿಗೆ ಸುತ್ತಿ ಕೊರಳಿಗೆ ಹಾಕಿಕೊಂಡು ಅವುಗಳೊಂದಿಗೆ ಆಟವಾಡಬಲ್ಲನು. ಇದರಂತೆಯೇ ಸಾಕ್ಷಾತ್ಕಾರವನ್ನು ಪಡೆದವರು ಪ್ರಪಂಚದ ಅಪಾಯದಿಂದ ಪಾರಾದವರು.

೮೯. ಒಂದು ದಿನ ಮಾರ್ವಾಡಿ ಗೃಹಸ್ಥನೊಬ್ಬನು ಶ್ರೀರಾಮಕೃಷ್ಣರ ಹತ್ತಿರ ಹೋಗಿ ಅವರಿಗಾಗಿ ಕೆಲವು ಸಾವಿರ ರೂಪಾಯಿಗಳನ್ನು ದಾನಮಾಡಲು ಅಪ್ಪಣೆಬೇಕೆಂದು ಕೇಳಿದನು. ಇಷ್ಟು ಒಳ್ಳೆಯ ಉದ್ದೇಶದಿಂದ ಬೇಡಿಕೊಂಡರೂ ಶ್ರೀರಾಮಕೃಷ್ಣರು ಇದನ್ನು ನಿರಾಕರಿಸಿದರು. " ನಿನ್ನ ಹಣದಿಂದ ನನಗೆ ಏನೂ ಆಗಬೇಕಾಗಿಲ್ಲ. ನಾನು ಅದನ್ನು ಸ್ವೀಕರಿಸಿದರೆ ಮನಸ್ಸು ಯಾವಾಗಲೂ ಅದರ ಮೇಲೆ ಇರುತ್ತದೆ " ಎಂದರು. ಆಗ ಗೃಹಸ್ಥನು ಶ್ರೀ ರಾಮಕೃಷ್ಣರ ನೆಂಟರೊಬ್ಬರ ಹೆಸರಿನಲ್ಲಿ ಇವರ ಖರ್ಚಿಗಾಗಿ ಆ ದುಡ್ಡನ್ನು ಹಾಕುತ್ತೇನೆ ಎಂದನು. ಅದಕ್ಕೆ ಶ್ರೀ ರಾಮಕೃಷ್ಣರು " ಇಲ್ಲ. ಅದೂ ವಂಚಿಸಿದಂತೆ ಆಗುವುದು. ಅದೂ ಅಲ್ಲದೆ ಇಂತಹವನ ಹತ್ತಿರ ನನ್ನ ದುಡ್ಡು ಇದೆ ಎಂದು ಯಾವಾಗಲೂ ನನ್ನ ಮನಸ್ಸಿನಲ್ಲಿ ಇರುವುದು " ಎಂದರು.

ಆದರೆ ಮಾರ್ವಾಡಿಯು ಅಷ್ಟಕ್ಕೇ ಬಿಡಲಿಲ್ಲ. ಶ್ರೀರಾಮಕೃಷ್ಣರ ಉಪದೇಶವೊಂದನ್ನೇ ಹೇಳುತ್ತ, ಮನಸ್ಸು ಎಣ್ಣೆಯಂತೆ ಇದ್ದರೆ ಕಾಮ ಕಾಂಚನದ ಸಾಗರದ ಮೇಲೂ ತೇಲುವುದು ಎಂದನು.

ಅದಕ್ಕೆ ಶ್ರೀ ರಾಮಕೃಷ್ಣರು ಹೀಗೆ ಉತ್ತರ ಕೊಟ್ಟರು: " ಅದೇನೋ ನಿಜ. ಆದರೆ ಎಣ್ಣೆ ಬಹಳ ಕಾಲ ನೀರಮೇಲೆ ತೇಲಿದರೆ ಅದಕ್ಕೆ ವಾಸನೆ ಬರುತ್ತದೆ. ಇದರಂತೆಯೆ ಮನಸ್ಸು ಕಾಮ ಕಾಂಚನದ ಮೇಲೆ ಬಹಳ ಕಾಲ ತೇಲಿದರೆ, ಇದರ ಸಂಪರ್ಕದಿಂದ ಮನಸ್ಸು ಕೆಟ್ಟು ದುರ್ಗಂಧವನ್ನು ಹೊರಗೆಡಹುವುದು."

## ಐಶ್ವರ್ಯ ಮತ್ತು ಆಧ್ಯಾತ್ಮಿಕ ಸಾಧನೆ

೯೦. ಧನಸಂಪಾದನೆ ಸಾಧಕನ ಮನಸ್ಸನ್ನು ದೇವರಿಂದ ವಿಮುಖನನ್ನಾಗಿ ಮಾಡುವುದು ಎಂದು ಒಬ್ಬ ತರುಣ ಶಿಷ್ಯನಿಗೆ ಹೇಳುತ್ತ " ಸಂಸಾರಿಯಂತೆ ನೀನು ಸಂಬಳದ ನೌಕರಿಗೆ ಸೇರಿರುವೆ. ಆದರೆ ನೀನು ನಿನ್ನ ತಾಯಿಗಾಗಿ ಕೆಲಸ ಮಾಡುತ್ತಿರುವೆ. ಇಲ್ಲದೆ ಇದ್ದರೆ ' ನಾಚಿಕೆಗೇಡು, ನಾಚಿಕೆಗೇಡು ' ಎನ್ನುತ್ತಿದ್ದೆ" ಎಂದರು. ಇದನ್ನು ಹಲವು ಬಾರಿ ಒತ್ತಿ ಹೇಳಿ " ದೇವರನ್ನು ಮಾತ್ರ ಸೇವಿಸು " ಎಂದು ಕೊನೆಗೆ ಹೇಳಿದರು.

೯೧. ಹಣಕ್ಕೋಸುಗವಾಗಿ ಮಾಡುವ ಚಾಕರಿ ಎಂತಹ ಹೀನಾಯಕ್ಕೆ ಮನುಷ್ಯನನ್ನು ತರುತ್ತದೆ, ಎಂಬುದನ್ನು ಒಬ್ಬ ತರುಣ

ಶಿಷ್ಯನಿಗೆ ಹೇಳಿದರು. "ಏನೋ ಕೆಟ್ಟದ್ದಕ್ಕೆ ಬದಲಾಯಿಸಿದಂತಿದೆ. ಅವನ ಮುಖದ ಮೇಲೆ ಅಂಧಕಾರದ ಛಾಯೆಯ ತೆರೆಯೊಂದು ಮುತ್ತಿದಂತಿದೆ. ಇದೆಲ್ಲ ಕಚೇರಿಯ ಕೆಲಸದ ಪರಿಣಾಮ. ಅಲ್ಲಿ ನೋಡಿಕೊಳ್ಳುವುದಕ್ಕೆ ಲೆಕ್ಕಾಚಾರ ಮತ್ತು ನೂರಾರು ವಿಷಯಗಳಿವೆ."

೯೨. ದ್ರವ್ಯ ಬಹಳ ಪ್ರಬಲವಾದ ಉಪಾಧಿ. ಒಬ್ಬನು ಧನವಂತನಾದೊಡನೆಯೆ ಬದಲಾಯಿಸುವನು. ಬಹಳ ನಮ್ರನಾದ ಸಾಧುಸ್ವಭಾವದ ಬ್ರಾಹ್ಮಣನೊಬ್ಬನು ಇಲ್ಲಿಗೆ (ದಕ್ಷಿಣೇಶ್ವರಕ್ಕೆ) ಆಗಿಂದಾಗ್ಯೆ ಬರುತ್ತಿದ್ದನು. ಕೆಲವು ಕಾಲದ ಮೇಲೆ ಅವನು ತಕ್ಷಣ ಬರುವುದನ್ನು ನಿಲ್ಲಿಸಿದನು. ಅವನಿಗೆ ಏನಾಗಿದೆ ಎಂಬುದು ನಮಗೆ ಗೊತ್ತಾಗಲಿಲ್ಲ. ಒಂದು ದಿನ ಕೊನ್ನಗರಕ್ಕೆ ದೋಣಿಯಲ್ಲಿ ಹೋದೆವು. ನಾವು ದೋಣಿಯಿಂದ ಇಳಿಯುವಾಗ ಅವನು ಗಂಗಾನದಿಯ ತೀರದಲ್ಲಿ ದೊಡ್ಡ ಮನುಷ್ಯನಂತೆ ನದಿಯಮೇಲೆ ಬೀಸುವ ತಂಗಾಳಿಯನ್ನು ಸೇವಿಸುತ್ತಿದ್ದ. ನನ್ನನ್ನು ನೋಡಿದಮೇಲೆ "ಓಹೋ! ಠಾಕೂರರೆ ಹೇಗಿರುವಿರಿ?" ಎಂದು ಕೇಳಿದನು. ಅವನ ಧ್ವನಿಯಲ್ಲಿ ಆದ ಬದಲಾವಣೆಯನ್ನು ನಾನು ತಕ್ಷಣ ಕಂಡುಹಿಡಿದು, ನನ್ನ ಹತ್ತಿರ ಇದ್ದ ಹೃದಯನಿಗೆ "ಹೃದಯ, ಇವನಿಗೆ ಏನೋ ಆಸ್ತಿ ಸಿಕ್ಕಿರಬೇಕು. ನೋಡು ಇವನಲ್ಲಿ ಆದ ಬದಲಾವಣೆಯನ್ನು" ಎಂದೆ. ಹೃದಯ ಗೊಳ್ಳೆಂದು ನಕ್ಕನು.

೯೩. ಹಣದಿಂದ ಅನ್ನ ಮಾತ್ರ ಸಿಕ್ಕುತ್ತದೆ. ಅದನ್ನೇ ನಿನ್ನ ಜೀವನದ ಗುರಿಯನ್ನಾಗಿ ಮಾಡಿಕೊಳ್ಳಬೇಡ.

೯೪. ಕೆಲವರು ತಮ್ಮ ಐಶ್ವರ್ಯ, ದರ್ಪ, ಹೆಸರು, ಕೀರ್ತಿ, ಸಮಾಜದಲ್ಲಿ ತಮಗೆ ಇರುವ ಸ್ಥಾನ ಇವುಗಳನ್ನು ಜಂಭ ಕೊಚ್ಚಿಕೊಳ್ಳುವರು. ಆದರೆ ಇವು ಕೆಲವು ದಿನ ಮಾತ್ರ. ಸತ್ತಮೇಲೆ ಇವುಗಳಾವುವೂ ಹಿಂದೆ ಬರುವುದಿಲ್ಲ.

೯೫. ಎರಡುವೇಳೆ ದೇವರು ನಗುತ್ತಾನೆ. ಮೊದಲನೆ ಸಲ ವೈದ್ಯನು ಇನ್ನೇನು ಸಾಯಲಿರುವ ರೋಗಿಯ ಬಳಿಗೆ ಬಂದು "ಏನಮ್ಮ ಅಂಜಿಕೊಳ್ಳಬೇಕಾಗಿಲ್ಲ. ನಿನ್ನ ಮಗನ ಜೀವವನ್ನು ಉಳಿಸುವ ಜವಾಬ್ದಾರಿಯನ್ನು ನಾನು ವಹಿಸಿಕೊಳ್ಳುತ್ತೇನೆ" ಎಂದಾಗ. ಎರಡನೆಸಲ, ಇಬ್ಬರು ಅಣ್ಣತಮ್ಮಂದಿರು ಭೂಮಿಯನ್ನು ವಿಭಾಗ ಮಾಡಿಕೊಳ್ಳುವಾಗ, ಅಳೆಯುವ ದಾರವನ್ನು ಜಮೀನಿನ ಮೇಲೆ ಇಟ್ಟು "ಈ ಕಡೆಯದು ನನ್ನದು ಆ ಕಡೆಯದು ನಿನ್ನದು" ಎಂದು ಹೇಳುವಾಗ

೯೬. ಐಶ್ವರ್ಯದಿಂದ ಹೆಮ್ಮೆ ಪಡುವಂತಹುದು ಏನೂ ಇಲ್ಲ. ನೀನು ಐಶ್ವರ್ಯವಂತನೆಂದರೆ ನಿನಗಿಂತ ಹೆಚ್ಚು ಹೆಚ್ಚು ಐಶ್ವರ್ಯವಂತರಿರುವರು. ಅವರೊಂದಿಗೆ ಹೋಲಿಸಿ ನೋಡಿದರೆ ನೀನು ಒಬ್ಬ ಭಿಕ್ಷುಕನಂತೆ. ಸಂಜೆಯಾದಮೇಲೆ ಮಿಂಚುಹುಳುಗಳು ಬಂದಾಗ "ನಾವು ಜಗತ್ತಿಗೆ ಬೆಳಕನ್ನು ಕೊಡುತ್ತಿರುವೆವು" ಎಂದು ಜಂಭ ಕೊಚ್ಚಿಕೊಳ್ಳುವುವು ಸ್ವಲ್ಪ ಹೊತ್ತಾದ ಮೇಲೆ ಚಂದ್ರೋದಯದ ಕಾಂತಿಯು ನಕ್ಷತ್ರಕ್ಕೆ ನಾಚಿಕೆ ತರುತ್ತದೆ. ನಕ್ಷತ್ರಗಳು ವ್ಯಸನದಿಂದ ಮಾಸಿಹೋಗುತ್ತವೆ. ಪುನಃ ಚಂದ್ರನು ಅಹಂಕಾರಿಯಾಗಿ ತನ್ನ ಬೆಳಕಿನಿಂದ ಜಗತ್ತು ಪ್ರಕಾಶಮಾನವಾಗಿದೆ, ಸೌಂದರ್ಯದಲ್ಲಿ ಮುಳುಗಿದೆ, ಎಂದು ತಿಳಿಯುವನು. ಆದರೆ ತಕ್ಷಣವೆ ಅರುಣೆ ಪೂರ್ವ ದಿಗಂತದಲ್ಲಿ ಸೂರ್ಯೋದಯವನ್ನು ಸಾರುವಳು. ಈಗ ಚಂದ್ರನೆಲ್ಲಿ !

ಯಾರು ತಾವು ಐಶ್ವರ್ಯವಂತರೆಂದು ತಿಳಿದುಕೊಂಡಿರುವರೋ ಅವರು, ಜಗತ್ತಿನಲ್ಲಿರುವ ಈ ವಿಷಯವನ್ನು ಆಲೋಚನೆ ಮಾಡಿದರೆ, ತಮ್ಮ ಶಕ್ತಿ ಮತ್ತು ಐಶ್ವರ್ಯವನ್ನು ಕುರಿತು ಅವರೆಂದಿಗೂ ಹೊಗಳಿಕೊಳ್ಳುವುದಿಲ್ಲ.

೯೭. ಸೇತುವೆ ಕೆಳಗಡೆ ನೀರು ಯಾವಾಗಲೂ ಹರಿದು ಹೋಗುತ್ತದೆ, ಅಲ್ಲಿ ತಂಗುವುದಿಲ್ಲ. ಅದರಂತೆಯೇ ಮುಕ್ತನ ಕೈಯ್ಯಲ್ಲಿ ಹಣ ಸಾಗಿಹೋಗುತ್ತದೆ. ಅವರೆಂದಿಗೂ ಕೂಡಿ ಇಡುವುದಿಲ್ಲ.

೯೮. ಯಾರಿಗೆ ಹಣ ಸೇವಕನೊ ಅವನೇ ನಿಜವಾದ ಮನುಷ್ಯ. ಆದಲ್ಲದೆ ಯಾರು ಹಣವನ್ನು ಹೇಗೆ ಸರಿಯಾಗಿ ಉಪಯೋಗಿಸಿಕೊಳ್ಳಬೇಕು ಎಂಬುದನ್ನು ತಿಳಿಯರೋ ಅವರನ್ನು ಮನುಷ್ಯರೆಂದು ಕರೆಯುವುದಕ್ಕೆ ಯೋಗ್ಯರಲ್ಲ.

## ಅಧ್ಯಾಯ ೪

## ಅಹಂಕಾರದ ಸ್ವರೂಪಿನಲ್ಲಿ ಮಾಯೆ

### ಅಹಂಕಾರದಿಂದಾಗುವ ಕೇಡು

೯೯. ಸೂರ್ಯ ಜಗತ್ತಿಗೆ ಶಾಖ ಮತ್ತು ಬೆಳಕನ್ನು ಕೊಡಬಲ್ಲನು. ಆದರೆ ಮೋಡ ಅವನ ಕಿರಣವನ್ನು ಮುಚ್ಚಿದರೆ ಅವನು

ಕೊಡಲಾರ. ಇದರಂತೆಯೇ ಎಲ್ಲಿಯವರೆವಿಗೂ ಅಹಂಕಾರವು ಹೃದಯವನ್ನು ಆವರಿಸಿರುವುದೊ ಅಲ್ಲಿಯವರೆಗೆ ದೇವರು ಅಲ್ಲಿ ಬೆಳಗಲಾರನು.

೧೦೦. ದೇವರನ್ನು ನಮ್ಮ ಕಣ್ಣಿಗೆ ಕಾಣದಂತೆ ಮಾಡುವ ಮೋಡ ಅಹಂಕಾರವೆನ್ನುವುದು. ಗುರುವಿನ ದಯೆಯಿಂದ ಅದು ತೊಲಗಿದರೆ ದೇವರ ನೈಜಸ್ವಭಾವವನ್ನು ನೋಡಬಹುದು. ಉದಾಹರಣೆಗೆ ನೀವು ಚಿತ್ರದಲ್ಲಿ ನೋಡಿ; ಸಾಕ್ಷಾತ್ ಭಗವಂತನಾದ ರಾಮಚಂದ್ರನು ಲಕ್ಷ್ಮಣನಿಗಿಂತ (ಜೀವನಿಗಿಂತ) ಒಂದೆರಡು ಹೆಜ್ಜೆ ಮುಂದೆ ಇರುವನು. ಆದರೆ ಸೀತೆ (ಮಾಯೆ) ಇವರಿಬ್ಬರ ಮಧ್ಯೆ ಬರುವುದರಿಂದ ಲಕ್ಷ್ಮಣನಿಗೆ ರಾಮನ ದರ್ಶನ ಸಿಕ್ಕುವುದಿಲ್ಲ.

೧೦೧. ಪ್ರಶ್ನೆ—ಸ್ವಾಮಿ ನಾವು ಏತಕ್ಕೆ ಹೀಗೆ ಬಂಧನದಲ್ಲಿರುವುದು? ನಾವು ಏತಕ್ಕೆ ದೇವರನ್ನು ನೋಡಲಾರೆವು?

ಉತ್ತರ—ಮನುಷ್ಯನ ಅಹಂಕಾರವೆ ಮಾಯೆ. ಬೆಳಕನ್ನು ತಡೆಯುವ ತೆರೆಯೆ ಅದು. ನಿಜವಾಗಿಯೂ "ನಾನು" ಎಂಬುದು ನಾಶವಾದಾಗ ಕಷ್ಟಗಳೆಲ್ಲ ಕೊನೆಗಂಡಂತೆ. ದೇವರ ದಯೆಯಿಂದ ಮನುಷ್ಯನಿಗೆ ನಾನು ಮಾಡುವವನಲ್ಲ ಎಂಬ ಜ್ಞಾನ ಸಿದ್ಧಿಸಿದರೆ ಅವನು ನಿಜವಾಗಿಯೂ ಜೀವನ್ಮುಕ್ತನಾಗುತ್ತಾನೆ. ಈ ಜೀವನದಲ್ಲೆ ಮುಕ್ತನಾಗುವನು. ಎಲ್ಲಾ ಭಯದಿಂದ ಪಾರಾಗುವನು.

೧೦೨. ನನ್ನ ಮುಂದೆ ಈ ಬಟ್ಟೆಯನ್ನು ಹಿಡಿದರೆ, ನಾನು ಹಿಂದೆ ಇದ್ದಷ್ಟೇ ಹತ್ತಿರವಿದ್ದರೂ ನೀನು ನನ್ನನ್ನು ನೋಡಲಾರೆ. ಅದರಂತೆಯೆ ದೇವರು ಉಳಿದ ಎಲ್ಲಾ ವಸ್ತುಗಳಿಗಿಂತಲೂ ಹತ್ತಿರದಲ್ಲಿದ್ದರೂ ಮಾಯದ ತೆರೆ ಇರುವುದರಿಂದ ನೀನು ಅವನನ್ನು ನೋಡಲಾರೆ.

೧೦೩. ಅಹಂಕಾರವಿರುವತನಕ ಆತ್ಮಜ್ಞಾನವಾಗಲೀ ಮುಕ್ತಿಯಾಗಲಿ ದೊರಕುವುದಿಲ್ಲ; ಜನನ ಮರಣಗಳಿಗೆ ಕೊನೆಯಿಲ್ಲ.

೧೦೪. ಅಕ್ಕಿ, ಬೇಳೆ, ಆಲೂಗೆಡ್ಡೆ ಮತ್ತು ಇನ್ನೂ ಇತರ ಪದಾರ್ಥಗಳನ್ನು ಮಡಿಕೆಯಲ್ಲಿ ತಣ್ಣೀರಿನಲ್ಲಿ ಹಾಕಿ, ಅದನ್ನು ಬೆಂಕಿಯ ಮೇಲೆ ಇಟ್ಟು ಬೇಯಿಸುವುದಕ್ಕೆ ಮುಂಚೆ ಕೈಯಿಂದ ಮುಟ್ಟಬಹುದು. ಜೀವನೂ ಕೂಡ ಇದರಂತೆಯೆ. ಈ ದೇಹ ಮಣ್ಣಿನ ಪಾತ್ರೆಯಂತೆ. ಐಶ್ವರ್ಯ, ವಿದ್ಯೆ, ಜಾತಿ, ಶಕ್ತಿ, ದರ್ಪ ಇವುಗಳೆಲ್ಲ ಬೇಳೆ ಅಕ್ಕಿ ಆಲೂಗೆಡ್ಡೆಯಂತೆ. ಅಹಂಕಾರವೇ ಬೆಂಕಿ. ಅಹಂಕಾರದಿಂದ ಜೀವ ದರ್ಪತಾಳುತ್ತದೆ.

೧೦೫. ಮಳೆಯ ನೀರು ಎಂದಿಗೂ ಎತ್ತರದ ಪ್ರದೇಶದಲ್ಲಿ ನಿಲ್ಲುವುದಿಲ್ಲ. ಯಾವಾಗಲೂ ಇಳಿಜಾರಿನ ಪ್ರದೇಶಕ್ಕೆ ಹರಿದು ಬರುವುದು. ಇದರಂತೆಯೇ ದೇವರೂ ಕೂಡ ಅತಿ ವಿನೀತರ ಹೃದಯದಲ್ಲಿ ಇರುವನು. ದುರಭಿಮಾನಿಗಳ ಮತ್ತು ಅಹಂಕಾರಿಗಳಿಂದ ಜಾರಿ ಹೋಗುವನು.

೧೦೬. ಮನುಷ್ಯನಿಗೆ ಅಹಂಕಾರ ಬಹಳ ಕೆಡಕನ್ನು ಉಂಟುಮಾಡುವುದು. ಇದು ಹೋಗುವ ತನಕ ಅವನಿಗೆ ಮುಕ್ತಿಯಿಲ್ಲ. ಅಹಂಕಾರದಿಂದ ಸಣ್ಣ ಕರುವಿಗೆ ಬರುವ ಕಷ್ಟಪರಂಪರೆಗಳನ್ನು ನೋಡಿ. ಹುಟ್ಟುತ್ತಲೆ ಅದು "ಹಂಹೈ" "ಹಂಹೈ" (ನಾನಿರುವೆ, ನಾನಿರುವೆ) ಎಂದು ಕಿರುಚುವುದು. ಇದರ ಅಹಂಕಾರದ ಪರಿಣಾಮವಾಗಿ, ಅದು ದೊಡ್ಡದಾದ ಮೇಲೆ ಎತ್ತಾದರೆ, ನೇಗಿಲಿಗೆ ಕಟ್ಟುತ್ತಾರೆ, ಭತ್ತದ ಗಾಡಿಯನ್ನು ಎಳೆಸುತ್ತಾರೆ, ಕೆಲವು ವೇಳೆ ಅದನ್ನು ಕೊಂದು ತಿನ್ನುತ್ತಾರೆ. ಇಷ್ಟೊಂದು ಶಿಕ್ಷೆ ಅನುಭವಿಸಿದರೂ ಆ ಪ್ರಾಣಿ ತನ್ನ ಅಹಂಕಾರವನ್ನು ಕಳೆದುಕೊಳ್ಳಲಾರದು. ಏಕೆಂದರೆ ಇದರ ಚರ್ಮದಿಂದ ಮಾಡಿದ ತಮ್ಮಟೆಯಿಂದ ಹಂ ಎಂಬ ಧ್ವನಿ ಬರುವುದು. ಹತ್ತಿಯನ್ನು ಬಡಿಯುವವನು ಅದರ ಕರುಳಿನಿಂದ ಬಿಲ್ಲಿನ ನಾರನ್ನು ಮಾಡಿ ಅದನ್ನು ಹೊಡೆಯುವ ತನಕ ಅದಕ್ಕೆ ನಮ್ರತೆ ಬರುವುದಿಲ್ಲ. ಆಗ ಆ ಪ್ರಾಣಿಯ ಕರುಳು "ತು ಹೈ" ನೀನಿರುವೆ ಎಂದು ಹಾಡುವುದು. 'ನಾನು' ಹೋಗಿ 'ನೀನು' ಎನ್ನುವುದಕ್ಕೆ ಅವಕಾಶ ಕೊಡಬೇಕು. ಆಧ್ಯಾತ್ಮಿಕ ಜೀವನದಲ್ಲಿ ಜಾಗ್ರತನಾಗುವವರೆಗೆ ಇದು ಸಿದ್ಧಿಸುವುದಿಲ್ಲ.

೧೧೭. 'ನಾನು' ಎಂಬ ಅಹಂಕಾರ ಮಾಯವಾದಾಗ ಮುಕ್ತಿ ಬರುವುದು. ಆಗ ನೀನೆ ಪರಮಾತ್ಮನಲ್ಲಿ ಐಕ್ಯನಾಗುವೆ.

೧೦೮. ಮನುಷ್ಯನಿಗೆ ಯಾವಾಗ ಮುಕ್ತಿ ಸಿಕ್ಕುತ್ತದೆ? ಅವನ ಅಹಂಕಾರ ಸತ್ತಾಗ.

೧೦೯. ಪ್ರಶ್ನೆ: ನಾನು ಯಾವಾಗ ಮುಕ್ತನಾಗುವೆ?

ಉತ್ತರ: 'ನಾನು' ಎಂಬುದು ನಿನ್ನಿಂದ ಮಾಯವಾದಾಗ. ನಾನು ನನ್ನದು ಎಂಬುದೇ ಅಜ್ಞಾನ. ನೀನು ನಿನ್ನದು ಎಂಬುದು ಜ್ಞಾನ. ನಿಜವಾದ ಭಕ್ತ ಯಾವಾಗಲೂ, "ಹೇ ಭಗವಂತ ನೀನೆ ಕರ್ತ. ನೀನೆ ಎಲ್ಲವನ್ನು ಮಾಡುವವನು. ಇದೆಲ್ಲ ನಿನ್ನ ಲೀಲೆ. ಈ ಮನೆ, ಈ ಸಂಸಾರ, ಎಲ್ಲ ನಿನ್ನದು, ನನ್ನದಲ್ಲ. ನೀನು ಅಪ್ಪಣೆ ಕೊಡಿಸಿದಂತೆ ಮಾಡುವುದಕ್ಕೆಮಾತ್ರ ನನಗೆ ಅಧಿಕಾರವಿದೆ" ಎಂದು ಹೇಳುವನು.

## ಅಹಂಕಾರವನ್ನು ಗೆಲ್ಲುವುದು ಕಷ್ಟ

೧೧೦. ಎಲ್ಲರ ಅಹಂಕಾರವು ಕ್ರಮೇಣ ನಾಶವಾಗಿಹೋಗು ವುದು. ಆದರೆ ಸಾಧುವಿಗೆ ತನ್ನ ಸಾಧುತ್ವದ ಮೇಲೆ ಇರುವ ಅಹಂಕಾರ ತೊಲಗುವುದು ಬಹಳ ಕಷ್ಟ.

೧೧೧. ಬೆಳ್ಳುಳ್ಳಿ ರಸವಿಟ್ಟ ಬಟ್ಟಲನ್ನು ಎಷ್ಟುಸಲ ತೊಳೆದರೂ ಆ ವಾಸನೆ ಇದ್ದೇ ಇರುತ್ತದೆ. ಅಹಂಕಾರವೆನ್ನುವುದು ಬಡಪೆಟ್ಟಿಗೆ ಬಿಡಲೊಲ್ಲದ ಮಾಯೆಯ ಸ್ವಭಾವ. ಅದರಿಂದ ಪಾರಾಗಲು ನೀನು ಎಷ್ಟು ಪ್ರಯತ್ನಪಟ್ಟರೂ ಅದು ಸಂಪೂರ್ಣ ಎಂದಿಗೂ ಬಿಟ್ಟುಹೋಗು ವುದಿಲ್ಲ.

೧೧೨. ಹುಳಿ ಪದಾರ್ಥಗಳು ಅಗ್ನಿಮಾಂದ್ಯದಿಂದ ನರಳುವವ ನಿಗೆ ಕೆಟ್ಟದ್ದು ಎಂಬುದು ಗೊತ್ತಿದೆ. ಆದರೆ ಹಿಂದಿನ ಅಭ್ಯಾಸ ಅಂತಹುದು; ಕಣ್ಣಿಗೆ ಬಿದ್ದ ಒಡನೆ ಬಾಯಲ್ಲಿ ನೀರು ಊರುವುದು. ಇದರಂತೆಯೆ ನಾನು ನನ್ನದು ಎಂಬುದನ್ನು ಅಡಗಿಸಲು ಒಬ್ಬನು ಎಷ್ಟು ಪ್ರಯತ್ನಪಟ್ಟರೂ ಕೆಲಸಮಾಡುವಾಗ ಮಾಗದ ಅಹಂಕಾರ ನಾನಿರುವೆನು ಎಂದು ತಲೆ ಎತ್ತುವುದು.

೧೧೩. ಸಮಾಧಿಯನ್ನು ಪಡೆದು, ತಮ್ಮಲ್ಲಿರುವ ಅಹಂಕಾರ ವನ್ನು ಕಳೆದುಕೊಳ್ಳುವವರು ಬಹಳ ಅಪರೂಪ. ಸಾಧಾರಣವಾಗಿ ಅದು ಹೋಗುವುದಿಲ್ಲ. ಬೇಕಾದಷ್ಟು ನೀನು ಆಲೋಚನೆ ಮಾಡಬಹುದು; ವಿಮರ್ಶೆ ಮಾಡಬಹುದು ಆದರೂ ಈ " ನಾನು " ಎಂಬುದು ಪುನಃ ತಲೆಯೆತ್ತುವುದು. ಇಂದು ನೀವು ಪಿಪ್ಪಲದ ಮರವನ್ನು ಕಡಿಯ ಬಹುದು. ಪುನಃ ಅದು ನಾಳೆ ಚಿಗುರುವುದು ನಿಮಗೆ ಕಾಣುವುದು.

೧೧೪. ಹೆಸರು ಮತ್ತು ಕೀರ್ತಿಯನ್ನು ಗಳಿಸಬೇಕೆಂದಿರು ವವರು ಮೋಹದಲ್ಲಿರುವರು. ಎಲ್ಲಾ ಇತ್ಯರ್ಥವಾಗುವುದು ಭಗವಂತ ನಿಂದ ಎನ್ನುವುದನ್ನು ಅವರು ಮರೆತಿರುವರು. ಒಳ್ಳೆಯವನು ಯಾವಾ ಗಲೂ " ಎಲ್ಲವೂ ನೀನೆ, ಹೇ ಭಗವಂತ " ಎನ್ನುವನು. ಅಜ್ಞಾನಿಗಳು, ಮೋಹದಲ್ಲಿ ಬಿದ್ದವರು " ನಾನು " " ನಾನು " ಎನ್ನುವರು.

## ಮಾಗಿದ ಅಹಂಕಾರ ಮತ್ತು ಮಾಗದ ಅಹಂಕಾರ

೧೧೫. ಎರಡು ತರಹ ಅಹಂಕಾರಗಳಿವೆ. ಒಂದು ಮಾಗಿದ ಅಹಂಕಾರ ಮತ್ತೊಂದು ಮಾಗದ ಅಹಂಕಾರ. " ಯಾವುದೂ ನನ್ನ

ದಲ್ಲ. ನಾನು ಏನು ನೋಡಿದರೂ, ಅನುಭವಿಸಿದರೂ, ಕೇಳಿದರೂ ಈ ದೇಹವು ಕೂಡ ನನ್ನದಲ್ಲ. ನಾನು ಯಾವಾಗಲೂ ಅನಾದಿಯು ನಿತ್ಯಸ್ವತಂತ್ರನು, ಮತ್ತು ಸರ್ವಜ್ಞನು," ಎಂಬುದು ಮಾಗಿದ ಅಹಂಕಾರದಿಂದ ಬರುವುದು. "ಇದು ನನ್ನ ಮಗು. ಇವಳು ನನ್ನ ಹೆಂಡತಿ, ಇದು ನನ್ನ ದೇಹ" ಎಂಬ ಭಾವ ಮಾಗದ ಅಹಂಕಾರದಿಂದ ಬಂದಿರುವುದು.

೧೧೬. ನಾನು ದೇವರ ಸೇವಕ ಎಂದು ಕಾಣಿಸಿಕೊಳ್ಳುವ ಅಹಂಕಾರ ಭಕ್ತನ ಲಕ್ಷಣ. ಇದೇ ವಿದ್ಯಾ ಅಹಂಕಾರ. ಇದನ್ನೆ ಮಾಗಿದ ಅಹಂಕಾರವೆನ್ನುವುದು.

೧೧೭. "ಕೆಟ್ಟ ನಾನೆಂಬುದು ಯಾವುದು?" ಯಾವ ನಾನು ಎಂಬುದು, "ಏನು, ಅವರಿಗೆ ನಾನು ಗೊತ್ತಿಲ್ಲವೆ. ನನಗೆ ಅಷ್ಟೊಂದು ಐಶ್ವರ್ಯವಿದೆ! ನನ್ನಷ್ಟು ಐಶ್ವರ್ಯವಂತರು ಯಾರು? ನನ್ನನ್ನು ಮೀರಿಸುವವರು ಯಾರು?" ಎನ್ನುವುದು.

೧೧೮. ಯಾವ ಅಹಂಕಾರ ಮನುಷ್ಯನನ್ನು ಪ್ರಾಪಂಚಿಕನನ್ನಾಗಿ ಮಾಡಿ, ಕಾಮ ಕಾಂಚನಗಳಿಗೆ ಆಸಕ್ತನಾಗುವಂತೆ ಮಾಡುವುದೋ ಅದು ಕೆಟ್ಟ ಅಹಂಕಾರ. ಜೀವಾತ್ಮ ಮತ್ತು ಪರಮಾತ್ಮರು ಬೇರೆ. ಏಕೆಂದರೆ ಮಧ್ಯೆ ನಾನು ಎಂಬುದು ಬರುವುದು. ನೀರಿನ ಮೇಲೆ ಒಂದು ಕಡ್ಡಿಯನ್ನು ಇಟ್ಟರೆ ನೀರು ವಿಭಾಗವಾದ ಹಾಗೆ ಕಾಣುವುದು. ಕಡ್ಡಿಯೇ ನಾನು ಎಂಬ ಅಹಂಕಾರ. ಅದನ್ನು ತೆರೆಯಿರಿ. ನೀರು ಪುನಃ ಒಂದಾಗುವುದು.

## ಅಹಂಕಾರವನ್ನು ಗೆಲ್ಲುವುದು ಹೇಗೆ?

೧೧೯. "ನಾನು" ಎಂದರೆ ಏನೆಂದು ಕಂಡುಹಿಡಿಯಬೇಕೆಂದು ಅದನ್ನು ಪರೀಕ್ಷಿಸಿದರೆ ಕೇವಲ ಅಹಂಕಾರವನ್ನು ಸೂಚಿಸುವ ಒಂದು ಪದ ಎಂದು ಗೊತ್ತಾಗುವುದು. ಆದರೆ ಅದರಿಂದ ಮುಕ್ತರಾಗುವುದು ಕಷ್ಟ. ಆದಕ್ಕೇ ಒಬ್ಬನು "ಎಲೆ ಕೇಡಿಗ ಅಹಂಕಾರವೆ, ನೀನು ಯಾವ ವಿಧದಿಂದಲೂ ಹೋಗದೆ ಇದ್ದರೆ, ದೇವರ ದಾಸನಂತೆ ಇರು" ಎನ್ನಬೇಕು. ನಾನು ದೇವರ ದಾಸನೆಂದು ತಿಳಿಯುವ ಅಹಂಕಾರ ಮಾಗಿದ ಅಹಂಕಾರ.

೧೨೦. ಶಂಕರಾಚಾರ್ಯರನ್ನು ಬಹಳ ಕಾಲ ಶುಶ್ರೂಷೆಮಾಡುತ್ತಿದ್ದ ಶಿಷ್ಯನೊಬ್ಬನು ಇದ್ದನು. ಆದರೂ ಅವನಿಗೆ ಯಾವ ಉಪದೇಶವನ್ನೂ ಕೊಟ್ಟಿರಲಿಲ್ಲ. ಒಂದು ದಿನ ಶಂಕರಾಚಾರ್ಯರು ಕುಳಿತುಕೊಂಡಿದ್ದಾಗ ಹಿಂದಿನಿಂದ ಯಾರೋ ಬರುವ ಸದ್ದು ಕೇಳಿಸಿತು. ಅವರು "ಯಾರವರು" ಎಂದು ಕೇಳಿದರು. ಶಿಷ್ಯನು "ನಾನು" ಎಂದನು. ಆಗ ಶಂಕರಾಚಾರ್ಯರು "ಈ ನಾನೆಂಬುದು ನಿನಗೆ ಅಷ್ಟೊಂದು ಇಷ್ಟವಾದರೆ ಅದನ್ನು ಅನಂತತೆಗೆ ವಿಸ್ತಾರ ಮಾಡು (ಅಂದರೆ ವಿಶ್ವವೇ ನಾನೆಂದು ತಿಳಿ) ಅಥವಾ ಅದನ್ನು ಒಂದೇ ಸಲ ತ್ಯಾಗ ಮಾಡು" ಎಂದರು.

೧೨೧. ನಾನು ಎಂಬುದನ್ನು ಓಡಿಸುವುದಕ್ಕೆ ಆಗದೆ ಇದ್ದರೆ "ದಾಸನಾದ ನಾನು" ಉಳಿಯಲಿ. "ನಾನು ದೇವರ ಸೇವಕ" "ನಾನು ದೇವರ ಭಕ್ತ" ಎಂಬ ಅಹಂಕಾರವಿರುವುದರಿಂದ ಅಷ್ಟೇನೂ ಅಂಜಿಕೆ ಇಲ್ಲ. ಸಿಹಿ ಪದಾರ್ಥಗಳು ಅಗ್ನಿಮಾಂದ್ಯವನ್ನು ಉಂಟುಮಾಡುತ್ತವೆ. ಆದರೆ ಕಲ್ಲುಸಕ್ಕರೆ ಈ ಗುಂಪಿಗೆ ಸೇರಿಲ್ಲ. "ಸೇವಕನಾದ ನಾನು" "ನಾನು ಅವನ ಭಕ್ತ" ಮುಗುವಿನ "ನಾನು" ಎನ್ನುವ ಪ್ರತಿಯೊಂದು ಭಾವವೂ ನೀರಿನಮೇಲೆ ಕಡ್ಡಿಯಿಂದ ಎಳೆದ ಗೆರೆಯಂತೆ. ಅದು ಬಹಳಕಾಲ ಇರುವುದಿಲ್ಲ.

೧೨೨. ಹೇಗೆ ಉಳಿದ ಸಿಹಿಪದಾರ್ಥಗಳಿಗೆ ಇರುವ ದೋಷ ಕಲ್ಲುಸಕ್ಕರೆಗೆ ಇಲ್ಲವೋ ಹಾಗೆಯೇ ನಾನು ದೇವರ ಭಕ್ತ, ಅವನ ಸೇವಕ ಎಂದು ತಿಳಿದುಕೊಳ್ಳುವ ಮಾಗಿದ ಅಹಂಕಾರದಲ್ಲಿ ಮಾಗದ ಅಹಂಕಾರಕ್ಕೆ ಇರುವ ಕೆಡಕುಗಳು ಯಾವುವೂ ಇರುವುದಿಲ್ಲ. ಅದಲ್ಲದೆ ಇದು ಭಗವಂತನ ಕಡೆಗೆ ಕರೆದೊಯ್ಯುವುದು. ಒಬ್ಬನು ಭಕ್ತಿಯೋಗದಲ್ಲಿ ಮುಂದುವರಿಯುತ್ತಿರುವನು ಎನ್ನುವುದಕ್ಕೆ ಇದು ಚಿಹ್ನೆ.

೧೨೩. ಸೇವಕನಾದ ನಾನು ಎಂಬುವ ಭಾವವನ್ನು ಹೊಂದಿರುವವನ ಭಾವ ಮತ್ತು ಉದ್ವೇಗಗಳೇನು? ಅವನ ನಂಬಿಕೆ ಸತ್ಯವಾಗಿಯೂ ನಿಜವಾಗಿದ್ದರೆ ಹಿಂದಿನ ಭಾವ ಮತ್ತು ಉದ್ವೇಗಗಳ ಆಕಾರ ಮಾತ್ರ ಇರುತ್ತವೆ. ಸೇವಕನ ಅಥವಾ ಭಕ್ತನ ಅಹಂಕಾರ ಉಳಿದಿದ್ದರೂ, ಯಾರು ದೇವರನ್ನು ಸಾಕ್ಷಾತ್ಕಾರಮಾಡಿಕೊಂಡಿರುವರೋ ಅವರು ಇನ್ನೊಬ್ಬರನ್ನು ಹಿಂಸಿಸುವುದಿಲ್ಲ. ಅಹಂಕಾರದ ವಿಷ ಅವನಿಂದ ಸಂಪೂರ್ಣವಾಗಿ ನಾಶವಾಗುವುದು. ಕತ್ತಿ ಸ್ಪರ್ಶಮಣಿಗೆ

ತಾಕಿದರೆ ಅದು ಚಿನ್ನವಾಗುವುದು. ಅದು ಹಿಂದಿನ ಆಕಾರವನ್ನು ಉಳಿಸಿಕೊಂಡಿರುತ್ತದೆ. ಆದರೆ ಇನ್ನೆಂದಿಗೂ ಇನ್ನೊಬ್ಬರಿಗೆ ತೊಂದರೆ ಕೊಡಲಾರದು.

೧೨೪. ನಿನಗೆ ಅಹಂಕಾರವಾದರೆ ನೀನು ದೇವರ ಸೇವಕ, ದೇವರ ಮಗ ಎಂಬ ಭಾವವಿರಲಿ. ಮಹಾಪುರುಷರದು ಮಕ್ಕಳಂತೆ ಸರಳಸ್ವಭಾವ. ಅವರು ಅಹಂಕಾರದಿಂದ ಪಾರಾಗಿರುವರು. ಅವರಲ್ಲಿರುವ ಶಕ್ತಿಯೆಲ್ಲ ದೇವರದು, ಅವರ ಸ್ವಂತದ್ದಲ್ಲ. ಅದೆಲ್ಲ ಅವನದು, ಅವನಿಂದ ಬರುವುದು.

೧೨೫. ಎಲ್ಲವೂ ದೇವರ ಇಚ್ಛೆಯಂತೆ ನಡೆಯುವುದು ಎಂಬುದನ್ನು ದೃಢನಿಶ್ಚಯಮಾಡಿಕೊಂಡವನು, ತಾನು ದೇವರ ಕೈಯ್ಯಲ್ಲಿ ಕೇವಲ ಯಂತ್ರವೆಂದು ಭಾವಿಸುತ್ತಾನೆ. ಆಗ ಅವನು ಈ ಜನ್ಮದಲ್ಲಿಯೇ ಎಲ್ಲಾ ಬಂಧನಗಳಿಂದ ಪಾರಾಗಿರುವನು. ಹೇ ದೇವ, ನೀನು ನಿನ್ನ ಕೆಲಸವನ್ನು ಮಾಡುವೆ. ಆದರೆ ಮನುಷ್ಯ ನಾನು ಮಾಡುತ್ತೇನೆ ಎನ್ನುತ್ತಾನೆ.

೧೨೬. "ನನಗೆ ಗೊತ್ತಿದೆ" ಅಥವಾ "ನನಗೆ ಗೊತ್ತಿಲ್ಲ" ಎಂದು ಎಲ್ಲಿಯವರೆಗೆ ಒಬ್ಬನು ಹೇಳುತ್ತಾನೆಯೊ ಅಲ್ಲಿಯವರೆವಿಗೂ ಅವನು ತಾನು ಒಂದು ವ್ಯಕ್ತಿಯೆಂದು ತಿಳಿಯುತ್ತಾನೆ. ಜಗನ್ಮಾಯಿ "ನಾನು ನಿನ್ನಲ್ಲಿರುವ ಅಹಂಕಾರವನ್ನೆಲ್ಲ ಸಂಪೂರ್ಣ ನಾಶಮಾಡಿದ ಮೇಲೆ ಮಾತ್ರ ಅವ್ಯಕ್ತಬ್ರಹ್ಮನನ್ನು ಸಮಾಧಿಯಲ್ಲಿ ತಿಳಿಯಬಹುದು" ಎಂದು ಹೇಳುತ್ತಾಳೆ. ಅಲ್ಲಿಯವರೆವಿಗೂ ನಿನ್ನಲ್ಲಿ 'ನಾನು' ಎಂಬ ಅಹಂಕಾರವಿರುತ್ತದೆ.

೧೨೭. ಒಬ್ಬನು ಹೀನಗುಣಗಳೊಂದಿಗೆ ಸತತ ಹೋರಾಟ ನಡೆಸಿ ಆತ್ಮಜ್ಞಾನವನ್ನು ಹೊಂದುವುದಕ್ಕೆ ನಿರಂತರ ಸಾಧನೆ ಮಾಡಿದ ಮೇಲೆ, ಅವನಿಗೆ ಸಮಾಧಿಯ ಅವಸ್ಥೆ ಪ್ರಾಪ್ತವಾಗುವುದು. ಆಗ ಅಹಂಕಾರ ತನ್ನ ಬಳಗಗಳೊಂದಿಗೆ ನಾಶವಾಗುವುದು. ಆದರೆ ಸಮಾಧಿಯನ್ನು ಪಡೆಯುವುದು ಬಹಳ ಕಷ್ಟ. ಅಹಂಕಾರ ಬಡಪೆಟ್ಟಿಗೆ ಬಿಟ್ಟು ಹೋಗುವುದಿಲ್ಲ. ಆದಕಾರಣ ನಾವು ಈ ಪ್ರಪಂಚದಲ್ಲಿ ಪುನಃ ಪುನಃ ಹುಟ್ಟಬೇಕಾಗುವುದು.

೧೨೮. ಎಲ್ಲಿಯವರೆವಿಗೂ ಒಬ್ಬನಿಗೆ ಪರಮಾತ್ಮನ ದರ್ಶನವಾಗಿಲ್ಲವೊ, ಎಲ್ಲಿಯವರೆವಿಗೂ ಹೀನ ಅಹಂಕಾರವನ್ನು ಸ್ಪರ್ಶಮಣಿ

ಚಿನ್ನವನ್ನಾಗಿ ಮಾಡಿಲ್ಲವೊ, ಅಲ್ಲಿಯವರೆವಿಗೂ "ನಾನು ಕರ್ತ" ಎಂಬ ಮೋಹವಿರುವುದು. ಮೋಹ ಹೋಗುವವರೆಗೆ "ನಾನು ಒಳ್ಳೆಯ ಕೆಲಸವನ್ನು ಮಾಡಿದೆ. ಕೆಟ್ಟ ಕೆಲಸ ಮಾಡಿದೆ" ಎಂಬ ವ್ಯತ್ಯಾಸದ ಭಾವ ಇರುವುದು. ಮಾಯೆಯೆಂದರೆ ಈ ವ್ಯತ್ಯಾಸ. ಇದರಿಂದಲೇ ಪ್ರಪಂಚವಿರುವುದು. ಸತ್ತ್ವಗುಣಪ್ರಧಾನವಾದ ಒಳ್ಳೆ ಮಾರ್ಗದಲ್ಲಿ ಕರೆದುಕೊಂಡು ಹೋಗುವ ವಿದ್ಯಾಮಾಯೆಯಲ್ಲಿ ಒಬ್ಬನು ಶರಣಾಗತ ನಾದರೆ ಅವನು ದೇವರನ್ನು ಸೇರುತ್ತಾನೆ. ಯಾವನು ದೇವರನ್ನು ಪ್ರತ್ಯಕ್ಷವಾಗಿ ನೋಡುತ್ತಾನೆಯೋ ಅವನೇ ಮಾಯಾಸಾಗರವನ್ನು ದಾಟುವನು. ದೇವರೊಬ್ಬನೇ ನಿಜವಾದ ಕರ್ತ, ಸ್ವತಃ ತಾನು ಏನನ್ನು ಮಾಡಲೂ ಶಕ್ತನಲ್ಲ ಎಂದು ತಿಳಿದಿರುತ್ತಾನೆಯೊ ಅವನು ಈ ದೇಹ ಧಾರಿಯಾಗಿದ್ದರೂ ಮುಕ್ತನು.

## ಮುಕ್ತನ ಅಹಂಕಾರ

೧೨೯. ನಾನು ಎಂಬ ಭಾವನೆ ಸಂಪೂರ್ಣವಾಗಿ ಎಂದಿಗೂ ನಾಶವಾಗುವುದಿಲ್ಲವೆ? ತಾವರೆಯ ರೇಕು ಉದುರಿಹೋದರೂ ತಮ್ಮ ಗುರುತನ್ನು ಹಿಂದೆ ಬಿಡುವುವು. ಇದರಂತೆ (ದೇವರನ್ನು ಕಂಡಮೇಲೆ) ಒಬ್ಬನ ಅಹಂಕಾರ ಸಂಪೂರ್ಣವಾಗಿ ಮಾಯವಾಗುವುದು. ಆದರೆ ಹಿಂದೆ ಇದ್ದ ಗುರುತು ಇರುವುದು. ಇದರಿಂದ ಎಂತಹ ಕೆಟ್ಟ ಪರಿಣಾಮವೂ ಆಗುವುದಿಲ್ಲ.

೧೩೦. ಯಾರು ದೇವರನ್ನು ಕಂಡಿರುವನೋ ಅವನೇ ನಿಜವಾದ ಜ್ಞಾನಿ. ಅವನು ಮಗುವಿನಂತೆ ಆಗುವನು. ಮಗು ತನಗೆ ಏನೋ ಒಂದು ವ್ಯಕ್ತಿತ್ವ ಪ್ರತ್ಯೇಕವಾಗಿ ಇರುವುದು ಎಂದು ತಿಳಿದುಕೊಳ್ಳು ವುದು. ಆದರೆ ಆ ವ್ಯಕ್ತಿತ್ವ ಕೇವಲ ತೋರಿಕೆಯದು; ಅದು ನಿಜವಲ್ಲ. ಮಗುವಿನ ಮನಸ್ಸು ದೊಡ್ಡವರ ಮನಸ್ಸಿನಂತೆ ಅಲ್ಲ.

೧೩೧. ಏಳನೆ ಅಥವಾ ಸಮಾಧಿಯ ಪರಮಪದವನ್ನು ಮುಟ್ಟಿ ಪರಮಾತ್ಮನಲ್ಲಿ ತಲ್ಲೀನರಾದ ಕೆಲವು ಮಹಾಪುರುಷರು ಜನಸಾಮಾನ್ಯರ ಹಿತಕ್ಕೋಸುಗ ಕೆಳಗೆ ಇಳಿದು ಬರುತ್ತಾರೆ. ಅವರು ವಿದ್ಯಾ ಅಹಂಕಾರ ವನ್ನು ಅಂದರೆ ಶುದ್ಧಾತ್ಮನ ಅಹಂಕಾರವನ್ನು ಇಟ್ಟುಕೊಂಡಿರುತ್ತಾರೆ. ಆದರೆ ಈ ಅಹಂಕಾರ ಕೇವಲ ತೋರಿಕೆಯದು. ಇದು ನೀರಿನ ಮೇಲೆ ಎಳೆದ ಗೀರಿನಂತೆ.

೧೩೨. ಒಂದು ಚೂರು ಹಗ್ಗವನ್ನು ಸುಟ್ಟಮೇಲೆ ಅದು ತನ್ನ ಹಗ್ಗದ ಆಕಾರವನ್ನು ಇಟ್ಟುಕೊಂಡಿದ್ದರೂ ಅದರಿಂದ ಕಟ್ಟಲು ಆಗ ಲಾರದಂತೆ ಇರುವುದು. ಜ್ಞಾನಾಗ್ನಿಯಿಂದ ಭಸ್ಮವಾದ ಅಹಂಕಾರ ಕೂಡ ಹೀಗೆಯೆ.

೧೩೩. ಒಬ್ಬನು ತನ್ನನ್ನು ಕತ್ತರಿಸಿಹಾಕುವುದಕ್ಕೆ ಬರುತ್ತಿರು ವನು ಎಂದು ಕನಸು ಕಾಣುತ್ತಾನೆ. ಅಂಜಿ ನರಳುತ್ತ ಅವನು ಏಳು ವನು. ಕಣ್ಣು ತೆರೆದು ನೋಡುವಾಗ ಬಾಗಿಲು ಒಳಗಿನಿಂದ ಹಾಕಿಯೇ ಇರುವುದು. ಒಳಗೆ ಕೂಡ ಯಾರೂ ಇಲ್ಲದೆ ಇರುವುದು ಕಾಣುವುದು. ಆದರೂ ಕೂಡ ಅವನ ಎದೆ ಕೆಲವು ಕ್ಷಣ ಹೊಡೆದುಕೊಳ್ಳುತ್ತ ಇರು ವುದು. ಇದರಂತೆಯೇ ಅಭಿಮಾನವೂ ಕೂಡ ತಾನು ತೊಲಗಿ ಹೋದ ಮೇಲೂ ಹಿಂದಿನ ವೇಗಾವಶೇಷವನ್ನು ಬಿಟ್ಟುಹೋಗುತ್ತದೆ.

೧೩೪. ಸಮಾಧಿಯನ್ನು ಹೊಂದಿದ ಮೇಲೆಯೂ ಕೂಡ ಕೆಲ ವರು ತಾನು ದೇವರಭಕ್ತ, ಅಥವಾ ಅವನ ಸೇವಕ ಎಂಬ ಅಹಂಕಾರ ವನ್ನು ಇಟ್ಟುಕೊಂಡಿರುತ್ತಾರೆ. ಶಂಕರಾಚಾರ್ಯರು ಇತರರಿಗೆ ಬೋಧಿಸುವುದಕ್ಕಾಗಿ ವಿದ್ಯಾಭಿಮಾನವನ್ನು ಇಟ್ಟುಕೊಂಡಿದ್ದರು.

೧೩೫. ಹನುಮಂತನಿಗೆ ದೇವರ ಸಾಕಾರ ಮತ್ತು ನಿರಾಕಾರದ ದರ್ಶನಗಳೆರಡೂ ಆಗಿತ್ತು. ಆದರೂ ಅವನು ತಾನು ದೇವರ ಸೇವಕ ಎಂಬ ಭಾವವನ್ನು ಇಟ್ಟುಕೊಂಡಿದ್ದನು. ನಾರದ, ಸನಕ, ಸನಂದನ, ಸನತ್ಕುಮಾರರ ಸ್ಥಿತಿ ಕೂಡ ಅವನಂತೆಯೇ.

ಒಬ್ಬ ಭಕ್ತ--ನಾರದ, ಮುಂತಾದವರು ಬರಿಯ ಭಕ್ತರೊ ಅಥವಾ ಜ್ಞಾನಿಗಳೂ ಆಗಿದ್ದರೊ?

ಶ್ರೀರಾಮಕೃಷ್ಣರು—ನಾರದ ಮುಂತಾದವರು ಬ್ರಹ್ಮಜ್ಞಾನದ ಪರಮಪದವನ್ನು ಹೊಂದಿದ್ದರು. ಆದರೂ ಕೂಡ ಅವರು 'ಗಳ, ಗಳ' ನಿನಾದವನ್ನು ಮಾಡಿಕೊಂಡು ಹರಿಯುವ ತೊರೆಯಂತೆ, ಭಗವಂತನ ವಿಚಾರವಾಗಿ ಮಾತನಾಡುತ್ತ, ಅವನ ಗುಣವನ್ನು ಗಾನಮಾಡುತ್ತ, ಕಾಲಕಳೆಯುತ್ತಿದ್ದರು. ಭಗವಂತನಿಂದ ತಾವು ಬೇರೆ ಎಂದು ತಿಳಿದು ಕೊಳ್ಳುವುದಕ್ಕಾಗಿ ಅವರೂ ಕೂಡ ವಿದ್ಯಾ ಅಹಂಕಾರವನ್ನು, ವ್ಯಕ್ತಿತ್ವದ ಒಂದು ಅಂಶವನ್ನು, ಜೀವಿಗಳನ್ನು ಉದ್ಧಾರಮಾಡುವ ಧರ್ಮಾಮೃತದ ಬೋಧೆಯನ್ನು ಮಾಡುವುದಕ್ಕಾಗಿ ಇಟ್ಟುಕೊಂಡಿರುವರು.

೧೩೬. ಹುಡುಗಾಟಕ್ಕಾಗಿ ಶ್ರೀ ರಾಮಕೃಷ್ಣರು ಶಿಷ್ಯರೊಬ್ಬರನ್ನು "ಏನಾದರೂ ಅಭಿಮಾನ ನಿನಗೆ ನನ್ನಲ್ಲಿ ಕಾಣುವುದೇ? ನನ್ನಲ್ಲಿ ಏನಾದರೂ ಅಭಿಮಾನವಿದೆಯೇ?" ಎಂದು ಕೇಳಿದರು.

ಶಿಷ್ಯ: "ಹೌದು ಸ್ವಲ್ಪವಿದೆ. ಆದರೆ ಅದನ್ನು ಈ ಕೆಳಗಿನ ಕೆಲಸಕ್ಕಾಗಿ ಇಟ್ಟುಕೊಂಡಿರುವಿರಿ. ಮೊದಲನೆಯದು ದೇಹವನ್ನು ಕಾಪಾಡುವುದಕ್ಕೆ, ಎರಡನೆಯದು ಭಗವಂತನ ಭಕ್ತಿಯನ್ನು ಅಭ್ಯಾಸಮಾಡುವುದಕ್ಕೆ, ಮೂರನೆಯದಾಗಿ ಭಕ್ತರೊಂದಿಗೆ ಬೆರೆಯುವುದಕ್ಕೆ, ನಾಲ್ಕನೆಯದಾಗಿ ಜನರಿಗೆ ಉಪದೇಶ ಮಾಡುವುದಕ್ಕೆ. ಆದರೆ ಇದನ್ನು ಎಷ್ಟೋ ಪ್ರಾರ್ಥನೆಯಾದ ಮೇಲೆ ನೀವು ಇಟ್ಟುಕೊಂಡಿರುವಿರಿ ಎಂದು ಹೇಳಬೇಕು ಅಂದರೆ ನಿಮ್ಮ ಮನಸ್ಸಿನ ಸಾಧಾರಣ ಸ್ಥಿತಿಯನ್ನು ಸಮಾಧಿ ಎಂಬ ಮಾತಿನಿಂದ ಮಾತ್ರ ವಿವರಿಸಬಹುದು. ನಿಮ್ಮಲ್ಲಿರುವ ಆಭಿಮಾನ ಪ್ರಾರ್ಥನೆಯ ಫಲ."

ಶ್ರೀ ರಾಮಕೃಷ್ಣರು: "ಹೌದು ನಾನಲ್ಲ ಇದನ್ನು ಇಟ್ಟುಕೊಂಡಿರುವುದು. ಜಗನ್ಮಾಯಿ ಇದನ್ನು ಇಟ್ಟಿರುವಳು. ಪ್ರಾರ್ಥನೆಯನ್ನು ಅನುಗ್ರಹಿಸುವ ಶಕ್ತಿ ಜಗನ್ಮಾಯಿಯ ಕೈಯಲ್ಲಿದೆ."

# ಅಧ್ಯಾಯ ೫

## ಪಾಂಡಿತ್ಯದ ಬಂಧನ

### ಕೇವಲ ಪಾಂಡಿತ್ಯದ ನಿಷ್ಪ್ರಯೋಜನ

೧೩೭. ಒಂದು ದಿನ ಗತಿಸಿದ ಮಾನ್ಯ ಕೇಶವಚಂದ್ರಸೇನರು ದಕ್ಷಿಣೇಶ್ವರದೇವಾಲಯಕ್ಕೆ ಬಂದು ಶ್ರೀ ರಾಮಕೃಷ್ಣರನ್ನು ಹೀಗೆ ಕೇಳಿದರು: "ಎಷ್ಟು ದೊಡ್ಡ ಪಂಡಿತರಾದರೂ, ಎಷ್ಟು ಪುಸ್ತಕಗಳ ಹೊರೆಯನ್ನು ಕರತಲಾಮಲಕವಾಗಿ ಮಾಡಿಕೊಂಡಿದ್ದರೂ, ಆಧ್ಯಾತ್ಮಿಕ ಜೀವನದಲ್ಲಿ ಯಾವುದು ಮುಖ್ಯ ಎಂಬುದು ತಿಳಿದೇ ಇರುವುದಿಲ್ಲ ಅವರಿಗೆ." ಅದಕ್ಕೆ ಶ್ರೀ ರಾಮಕೃಷ್ಣರು ಹೀಗೆ ಉತ್ತರ ಹೇಳಿದರು: "ರಣಹದ್ದುಗಳು ಆಕಾಶದಲ್ಲಿ ಬಹಳ ಮೇಲಕ್ಕೆ ಹಾರುವುವು. ಆದರೂ ಕೂಡ ಅವುಗಳ ದೃಷ್ಟಿಯೆಲ್ಲ ನೆಲದಮೇಲೆ ಕೊಳೆತುನಾರುತ್ತಿರುವ

ಹೆಣಗಳು ಬಿದ್ದಿರುವ ಕಡೆಗೆ. ಇದರಂತೆಯೇ ಯಾರನ್ನು ಬಹಳ ಬುದ್ಧಿವಂತರು ಎನ್ನುವರೊ ಅವರ ಮನಸ್ಸೆಲ್ಲ ಪ್ರಪಂಚದಲ್ಲಿರುವ ಕಾಮಕಾಂಚನದ ಮೇಲೆ ಇರುವುದು. ಆದಕಾರಣ ಅವರು ಶಾಸ್ತ್ರದಲ್ಲಿ ಅಷ್ಟೊಂದು ಪಾಂಡಿತ್ಯವನ್ನು ಹೊಂದಿದ್ದರೂ ಅವರಿಗೆ ನಿಜವಾದ ಜ್ಞಾನ ಬರುವುದಿಲ್ಲ.

೧೩೮. ಯಾವುದು ಚಿತ್ತ ಮತ್ತು ಹೃದಯವನ್ನು ಶುದ್ಧಿಮಾಡುವುದೋ ಅದೇ ನಿಜವಾದ ಜ್ಞಾನ. ಉಳಿದುದೆಲ್ಲ ಅಜ್ಞಾನ.

೧೩೯. ಸುಮ್ಮನೆ ಪಾಂಡಿತ್ಯದಿಂದ ಏನು ಪ್ರಯೋಜನ? ಪಂಡಿತರಿಗೆ ಬೇಕಾದಷ್ಟು ಶಾಸ್ತ್ರ ಗೊತ್ತಿರಬಹುದು. ಶ್ಲೋಕಗಳು ಬಾಯಿಗೆ ಬರಬಹುದು. ಅವುಗಳನ್ನು ಹೇಳಿದುದರಿಂದ ಪ್ರಯೋಜನವೇನು? ಶಾಸ್ತ್ರದಲ್ಲಿರುವ ಸತ್ಯಗಳನ್ನು ಒಬ್ಬನು ತನ್ನ ಜೀವಮಾನದಲ್ಲಿ ಸಾಕ್ಷಾತ್ಕಾರ ಮಾಡಿಕೊಳ್ಳಬೇಕು. ಎಲ್ಲಿಯವರೆವಿಗೂ ಮನುಷ್ಯನು ಪ್ರಪಂಚದಲ್ಲಿ ಆಸಕ್ತನಾಗಿರುವನೋ, ಕಾಮಿನಿಕಾಂಚನಗಳನ್ನು ಆಶಿಸುವನೋ, ಅಲ್ಲಿಯವರೆಗೂ ವಿದ್ಯೆಯಿಂದ ಜ್ಞಾನವಾಗಲೀ ಮೋಕ್ಷವಾಗಲೀ ಬರುವುದಿಲ್ಲ.

೧೪೦. ನಮ್ಮ ಪಂಡಿತರು ದೊಡ್ಡ ದೊಡ್ಡ ಮಾತುಗಳನ್ನು ಆಡುವರು. ಬ್ರಹ್ಮ, ದೇವರು, ಅವ್ಯಕ್ತ, ಜ್ಞಾನ, ಯೋಗ, ತತ್ತ್ವ, ಆತ್ಮ, ಮುಂತಾದುವುಗಳ ವಿಚಾರವನ್ನೆಲ್ಲ ಮಾತನಾಡುವರು. ಆದರೆ ತಾವು ಮಾತಾಡುವುದನ್ನು ಕಣ್ಣಾರೆ ಕಂಡವರು ಬಹಳ ಕಡಿಮೆ. ನಿರ್ದಯರು, ಸ್ವಲ್ಪವಾದರೂ ರಸವಿಲ್ಲ, ಕೆಲಸಕ್ಕೆ ಬಾರದವರು.

೧೪೧. ಧು, ರಿ, ಮಿ, ಲ, ಸಿ, ಧು, ಇವುಗಳನ್ನು ಬಾಯಿನಲ್ಲಿ ಹೇಳುವುದು ಬಹಳ ಸುಲಭ. ಆದರೆ ಅವನ್ನು ಯಂತ್ರಗಳ ಮೇಲೆ ನುಡಿಸುವುದು ಬಹಳ ಕಷ್ಟ. ಇದರಂತೆಯೇ ಧಾರ್ಮಿಕ ವಿಷಯಗಳನ್ನು ಮಾತನಾಡುವುದು ಬಹಳ ಸುಲಭ. ಅದನ್ನು ಆಚರಣೆಗೆ ತರುವುದು ಕಷ್ಟ.

೧೪೨. ಗಿಳಿ ರಾಧಾಕೃಷ್ಣನ ಹೆಸರನ್ನು ಬಾಯಿನಲ್ಲಿ ಹೇಳುವುದು. ಆದರೆ ಅದು ಬೆಕ್ಕಿನ ಬಾಯಿಗೆ ಸಿಕ್ಕಿಬಿದ್ದ ಕೂಡಲೆ ಅದರ 'ಕಾ, ಕಾ' ಎಂಬ ಸಹಜ ಸ್ವರ ಹೊರಡುವುದು. ಪ್ರಾಪಂಚಿಕರು ಲಾಭದಾಸೆಯಿಂದ ದೇವರ ಹೆಸರನ್ನು ಕೆಲವು ವೇಳೆ ಜಪಮಾಡುತ್ತಾರೆ. ಒಳ್ಳೆಕೆಲಸವನ್ನು ಮಾಡುತ್ತಾರೆ. ಆದರೆ ಗ್ರಹಚಾರ, ದುಃಖ, ದಾರಿದ್ರ್ಯ,

ಮತ್ತು ಸಾವಿನ ಬಾಯಿಗೆ ಬೀಳುವ ಸಮಯದಲ್ಲಿ ದೇವರನ್ನು ಮರೆಯುವರು.

೧೪೩. ಶಾಸ್ತ್ರಗಳನ್ನು ಓದುವುದರಿಂದ ಭಕ್ತಿ ಬರುವುದೆ? ಪಂಚಾಂಗದಲ್ಲಿ ಇಂತಹ ದಿನ ಇಪ್ಪತ್ತು ಅಂಗುಲ ಮಳೆ ಬರುತ್ತದೆ ಎಂದು ಹೇಳಿರುವುದು. ಆದರೆ ಪಂಚಾಂಗವನ್ನು ಹಿಂಡಿದರೆ ಒಂದು ತೊಟ್ಟು ನೀರು ಕೂಡ ಬರುವುದಿಲ್ಲ. ಇದರಂತೆಯೇ ಶಾಸ್ತ್ರದಲ್ಲಿ ಎಷ್ಟೋ ಒಳ್ಳೆಯ ವಿಷಯಗಳು ಬರಬಹುದು. ಆದರೆ ಸುಮ್ಮನೆ ಅವುಗಳನ್ನು ಓದಿದ ಮಾತ್ರದಿಂದ ಒಬ್ಬನು ಧಾರ್ಮಿಕನಾಗಲಾರ. ಭಕ್ತಿಯನ್ನು ಹೊಂದಬೇಕಾದರೆ ಅಲ್ಲಿರುವುದನ್ನು ಅಭ್ಯಾಸಮಾಡಬೇಕು.

೧೪೪. ದೇವರಿರುವ ಕಡೆ ಯುಕ್ತಿ, ಬುದ್ಧಿ, ಪಾಂಡಿತ್ಯ ಇವುಗಳಿಂದ ಏನೂ ಪ್ರಯೋಜನವಿಲ್ಲ. ಅಲ್ಲಿ ಮೂಗರು ಮಾತನಾಡುತ್ತಾರೆ, ಕುರುಡರು ನೋಡುತ್ತಾರೆ, ಕಿವುಡರು ಕೇಳುತ್ತಾರೆ.

೧೪೫. ಬರೀ ಶಾಸ್ತ್ರವನ್ನು ಓದಿ ದೇವರನ್ನು ವರ್ಣಿಸುವುದು ಎಂದರೆ, ಕಾಶೀ ನಗರವನ್ನು ಭೂಪಟದಲ್ಲಿ ನೋಡಿ ಅದನ್ನು ವಿವರಿಸಿದಂತೆ.

೧೪೬. ಭಂಗಿ ಎಂಬ ಪದವನ್ನು ಸಾವಿರಸಾರಿ ಹೇಳಿದರೂ ಅಮಲು ಏರುವುದಿಲ್ಲ. ಸ್ವಲ್ಪ ಭಂಗಿಯನ್ನು ತಂದು ನೀರಿನೊಂದಿಗೆ ಅರೆದು ಕಷಾಯ ಮಾಡಿ ಕುಡಿದರೆ ಆಗ ನಿಜವಾದ ಅಮಲು ತಲೆಗೇರುವುದು. ಸುಮ್ಮನೆ ದೇವರೆ, ದೇವರೆ ಎಂದು ಕಿರಿಚಿಕೊಳ್ಳುವುದರಿಂದ ಪ್ರಯೋಜನವೇನು? ಪ್ರತಿದಿನವೂ ಸಾಧನೆಮಾಡಿ. ಆಗ ದೇವರನ್ನು ನೋಡುವಿರಿ.

೧೪೭. ಯಾರು ತಮ್ಮಲ್ಲಿರುವ ಪಾಂಡಿತ್ಯ ಮತ್ತು ಐಶ್ವರ್ಯಕ್ಕೆ ಹೆಮ್ಮೆ ಪಡುತ್ತಿರುವರೋ ಅವರಿಗೆ ದೇವರ ವಿಚಾರ ಗೊತ್ತಾಗುವುದಿಲ್ಲ. ಅಂತಹವನಿಗೆ "ಅಲ್ಲಿ ಒಂದು ಸ್ಥಳದಲ್ಲಿ ಒಬ್ಬ ಮಹಾತ್ಮನಿರುವನು. ನೀನು ಅವನನ್ನು ನೋಡಲು ಇಚ್ಛಿಸುವೆಯ?'' ಎಂದು ಕೇಳಿದರೆ ಅವನು ಏನಾದರೂ ನೆವ ಹೇಳಿ ಹೋಗಲು ಸಾಧ್ಯವಿಲ್ಲ ಎನ್ನುವನು. ಅಂತಹವನನ್ನು ನೋಡಲು ಹೋಗುವುದಕ್ಕೆ ತಾನು ತುಂಬ ದೊಡ್ಡ ಮನುಷ್ಯ ಎಂದು ಅವನು ತಿಳಿದುಕೊಳ್ಳುವನು. ಅಜ್ಞಾನದಿಂದ ಇಂತಹ ಅಹಂಕಾರ ಹುಟ್ಟುವುದು.

೧೪೮. ಸ್ವಲ್ಪ ಓದಿದವರಿಗೆ ಅಹಂಕಾರದಿಂದ ತಲೆ ತಿರುಗು

ವುದು. ದೇವರ ವಿಚಾರವಾಗಿ ನಾನು ಒಬ್ಬನೊಂದಿಗೆ ಮಾತನಾಡಿದರೆ, ಅವನು "ನನಗೆ ಇದೆಲ್ಲ ಗೊತ್ತಿದೆ" ಎಂದನು. ನಾನು ಅವನಿಗೆ "ಯಾರು ಡೆಲ್ಲಿಗೆ ಹೋಗಿರುವರೋ ಅವರು ತಾವು ಅಲ್ಲಿಗೆ ಹೋಗಿ ಬಂದಿರುವೆವೆಂದು ಜಂಭ ಕೊಚ್ಚಿಕೊಳ್ಳುವರೇನು? ಒಬ್ಬ ಸಭ್ಯನು ತಾನು ಸಭ್ಯನೆಂದು ನಮಗೆ ಹೇಳುತ್ತಾನೇನು?" ಎಂದೆ.

೧೪೯. ಗ್ರಂಥವೆಂದರೆ ಯಾವಾಗಲೂ ಶಾಸ್ತ್ರವೆಂದು ಅರ್ಥವಲ್ಲ. ಅನೇಕವೇಳೆ ಅದು ಗ್ರಂಥಿ ಅಥವಾ ಗಂಟಾಗುವದು. ತನ್ನ ಅಹಂಕಾರವನ್ನು ತೊರೆದು ಸತ್ಯವನ್ನು ತಿಳಿಯಬೇಕು ಎಂಬ ತೀವ್ರ ಆಕಾಂಕ್ಷೆಯಿಂದ ಒಬ್ಬನು ಶಾಸ್ತ್ರವನ್ನು ಓದದೆ ಇದ್ದರೆ, ಅದರಿಂದ ಕೇವಲ ಪಾಂಡಿತ್ಯ, ತಾನೇ ಸರ್ವಜ್ಞನೆಂಬ ತಪ್ಪು ಅಭಿಪ್ರಾಯ, ಮತ್ತು ಅಹಂಕಾರ ಇವು ಬರುತ್ತವೆ. ಇವು ಅವನ ಮನಸ್ಸನ್ನು ಬಂಧಿಸುವ ಅನೇಕ ಗ್ರಂಥಿಗಳಂತೆ.

೧೫೦. ಬೂದಿಯ ರಾಶಿಯಮೇಲೆ ನೀರನ್ನು ಸುರಿದರೆ ಅದು ತಕ್ಷಣವೇ ಇಂಗಿಹೋಗುತ್ತದೆ. ಅಹಂಕಾರವೆನ್ನುವುದು ಬೂದಿಯ ರಾಶಿಯಂತೆ ಅಹಂಕಾರದಿಂದ ಮೆರೆಯುವವರ ಮನಸ್ಸಿನ ಮೇಲೆ ಪ್ರಾರ್ಥನೆ ಮತ್ತು ಧ್ಯಾನದಿಂದ ಏನೂ ಪ್ರಯೋಜನವಿಲ್ಲ.

## ವ್ಯರ್ಥ ವಾದ

೧೫೧. ಬರಿಯ ಕೊಡಕ್ಕೆ ನೀರು ಹಾಕಿದರೆ ಶಬ್ದವಾಗುತ್ತದೆ. ಆದರೆ ಕೊಡ ತುಂಬಿದಮೇಲೆ ಏನೂ ಶಬ್ದವಾಗುವುದಿಲ್ಲ. ಇದರಂತೆಯೇ ಯಾರು ದೇವರನ್ನು ಕಂಡಿಲ್ಲವೊ ಅವರು ದೇವರ ಇರುವಿಕೆ ಮತ್ತು ಅವನ ಸ್ವಭಾವದ ವಿಚಾರವಾಗಿ ಬೇಕಾದಷ್ಟು ವಾದವನ್ನು ಮಾಡುವರು. ಆದರೆ ಯಾರು ಅವನನ್ನು ನೋಡಿರುವರೋ ಅವರು ಮೌನವಾಗಿ ಬ್ರಹ್ಮಾನಂದವನ್ನು ಅನುಭವಿಸುವರು.

೧೫೨. ಸಾಧಾರಣ ಮನುಷ್ಯರು ಹೊರೆಯಷ್ಟು ಧಾರ್ಮಿಕ ವಿಚಾರವನ್ನು ಮಾತನಾಡುವರು. ಆದರೆ ಒಂದು ಕಣದಷ್ಟೂ ಅಭ್ಯಾಸ ಮಾಡುವುದಿಲ್ಲ. ಜ್ಞಾನಿಯು ಇಡೀ ಜೀವನವೇ ಅನುಷ್ಠಾನ ರೂಪವಾದ ಧರ್ಮದಂತೆ ಇದ್ದರೂ ಮಾತನಾಡುವುದು ಸ್ವಲ್ಪ.

೧೫೩. ಬೇಕಾದಷ್ಟು ನೆಂಟರಿಷ್ಟರನ್ನು ಔತಣಕ್ಕೆ ಕರೆದಾಗ ಮೊದಲು ಅವರು ಮಾಡುವ ವಿಪರೀತ ಗಲಾಟೆ ಕೇಳುವುದು. ಆದರೆ

ಇದು ಅವರು ಊಟಮಾಡುವುದಕ್ಕೆ ಮೊದಲುಮಾಡುವ ತನಕ ಬಡಿಸಿದ ಮೇಲೆ ಮುಕ್ಕಾಲುಪಾಲು ಶಬ್ದವೆಲ್ಲ ನಿಲ್ಲುವುದು. ನಂತರ ಸಿಹಿ ಪದಾರ್ಥಗಳು ಬರುವುವು. ಭೋಜನ ಮುಂದುವರಿದಂತೆ ಶಬ್ದವು ಅಷ್ಟು ಕಡಿಮೆಯಾಗುವುದು. ನಂತರ ಸಿಹಿ ಮೊಸರಿಗೆ ಬಂದಾಗ "ಸೂಪ್" "ಸೂಪ್" ಎಂಬ ಶಬ್ದವೊಂದೇ ಕೇಳುವುದು. ಊಟವಾದ ಮೇಲೆ ಅತಿಥಿಗಳಿಗೆ ಮಾಡುವುದೊಂದೇ ಕೆಲಸ, ನಿದ್ದೆ.

ನೀನು ದೇವರ ಸಮೀಪಕ್ಕೆ ಬಂದಷ್ಟೂ ಪ್ರಶ್ನೆಮಾಡುವುದಕ್ಕೆ, ವಿಚಾರಮಾಡುವುದಕ್ಕೆ ಮನಸ್ಸು ಹೆಚ್ಚು ಹೋಗುವುದಿಲ್ಲ. ನೀನು ಅವನನ್ನು ಪ್ರತ್ಯಕ್ಷ ಕಂಡಾಗ ಅವನೇ ಪರಮಸತ್ಯವೆಂದು ಗೊತ್ತಾಗುವುದು. ಆಗ ಶಬ್ದವೆಲ್ಲ, ವಾದವೆಲ್ಲ ನಿಲ್ಲುವುದು. ಆಗ ನಿದ್ದೆಗೆ ಸಮಯ, ಅಂದರೆ ಸಮಾಧಿಯಿಂದ ಬರುವ ಪರಮಾತ್ಮನ ಆನಂದವನ್ನು ಅನುಭವಿಸುವ ಸಮಯ.

೧೫೪. ಎಲ್ಲಿಯವರೆಗೂ ಜೇನುನೊಣವು ಹೂವಿನ ದಳದ ಆಚೆ ಇರುವುದೋ ಮತ್ತು ಒಳಗೆ ಇರುವ ಮಕರಂದವನ್ನು ಕುಡಿದಿಲ್ಲವೋ, ಅಲ್ಲಿಯವರೆಗೂ ಝೇಂಕಾರ ಮಾಡಿಕೊಂಡು ಸುತ್ತಲೂ ಹಾರಾಡುವುದು. ಆದರೆ ಅದು ಹೂವನ್ನು ಪ್ರವೇಶಿಸಿದ ಮೇಲೆ ನಿಶ್ಶಬ್ದವಾಗಿ ಮಕರಂದವನ್ನು ಸೇವಿಸುವುದು. ಎಲ್ಲಿಯವರೆಗೆ ಒಬ್ಬನು ಸಿದ್ಧಾಂತಗಳನ್ನು ಮತ್ತು ನಂಬಿಕೆಗಳನ್ನು ಚರ್ಚೆಮಾಡುತ್ತಿರುವನೊ ಅಲ್ಲಿಯವರೆಗೂ ಅವನು ನಿಜವಾದ ಭಕ್ತಿಯ ಅಮೃತವನ್ನು ಕುಡಿದಿಲ್ಲ. ಒಂದು ಸಲ ಅವನು ಅದನ್ನು ಕುಡಿದರೆ ಮೌನವಾಗುವನು.

೧೫೫. ಒಬ್ಬನು ಹೊಸದಾಗಿ ಪರಭಾಷೆಯನ್ನು ಕಲಿಯಲು ಮೊದಲು ಮಾಡಿದ್ದರೆ, ಮಾತನಾಡುವಾಗ ಅನೇಕ ವೇಳೆ ತೋರಿಸಿಕೊಳ್ಳುವುದಕ್ಕಾಗಿ ಅವನು ಅದನ್ನು ಉಪಯೋಗಿಸುತ್ತಾನೆ. ಆದರೆ ಯಾರಿಗೆ ಆ ಭಾಷೆ ಚೆನ್ನಾಗಿ ಗೊತ್ತಿದೆಯೋ ಅವನು ತನ್ನ ಮಾತೃಭಾಷೆಯಲ್ಲಿ ಮಾತನಾಡುವಾಗ ಅಪರೂಪವಾಗಿ ಉಪಯೋಗಿಸುತ್ತಾನೆ. ಅದರಂತೆಯೇ ಸಾಧನೆಯಲ್ಲಿ ಬಹಳ ಮುಂದುವರಿದವರ ಸ್ಥಿತಿಯೂ ಕೂಡ.

೧೫೬. ಪೇಟೆಗೆ ಸ್ವಲ್ಪ ದೂರದಲ್ಲಿ ಬರೀ ಗುಜು ಗುಜು ಶಬ್ದ ಮಾತ್ರ ಕೇಳುವುದು. ಆದರೆ ಒಮ್ಮೆ ಒಳಗೆ ಪ್ರವೇಶ ಮಾಡಿದರೆ ಅದು ಕೇಳುವುದಿಲ್ಲ. ಅಲ್ಲಿ ಆಗುತ್ತಿರುವ ಚೌಕಾಶಿಯನ್ನು ನೋಡುತ್ತೇವೆ. ಇದರಂತೆಯೇ ದೇವರಿಂದ ದೂರದಲ್ಲಿರುವತನಕ ವೃಥಾವಾದ,

ಮೂಢ ನಂಬಿಕೆ, ಇವುಗಳಲ್ಲಿ ಸಿಕ್ಕಿರುವನು. ಆದರೆ ಒಮ್ಮೆ ಅವನು ದೇವರನ್ನು ಸಮೀಪಿಸಿದಾಗ ವಾದಗಳೆಲ್ಲ ನಿಲ್ಲುವುವು. ದೇವರ ಅದ್ಭುತ ಗುಣಗಳು ಸ್ಪಷ್ಟವಾಗಿ ಕಾಣುವುವು.

೧೫೭. ಕಾದ ತುಪ್ಪಕ್ಕೆ ಹಸಿಯ ಹಿಟ್ಟನ್ನು ಹಾಕಿದರೆ ಅದು ಒಂದು ವಿಧದ ಶಬ್ದವನ್ನು ಮಾಡುವುದು. ಅದು ಹೆಚ್ಚು ಬೆಂದಷ್ಟೂ ಶಬ್ದ ಕಡಿಮೆ. ಅದು ಸಂಪೂರ್ಣ ಬೆಂದ ಮೇಲೆ ಶಬ್ದ ಸಂಪೂರ್ಣವಾಗಿ ನಿಲ್ಲುವುದು. ಸ್ವಲ್ಪ ವಿದ್ಯೆ ಇರುವ ತನಕ, ಅವನು ಮಾತನಾಡುತ್ತ ಅದನ್ನು ಇನ್ನೊಬ್ಬರಿಗೆ ಹೇಳುತ್ತಾ ಹೋಗುತ್ತಾನೆ. ಪೂರ್ಣ ಜ್ಞಾನದಿಂದ ಪವಿತ್ರತೆ ಪಡೆದ ಮೇಲೆ ಅವನು ಇನ್ನು ಜಂಭಕೊಚ್ಚಿಕೊಳ್ಳುವುದಿಲ್ಲ.

೧೫೮. ದೇವರ ದಯೆ ಯಾರ ಮೇಲೆ ಬಿದ್ದರೂ ಅವರು ತಕ್ಷಣವೇ ತಮ್ಮ ತಪ್ಪನ್ನು ತಿಳಿದುಕೊಳ್ಳುವರು. ಇದನ್ನು ತಿಳಿದು ವಾದ ಮಾಡಬೇಡಿ.

## ವಿದ್ಯೆಯ ಗುರಿ

೧೫೯. ಶಾಸ್ತ್ರಗಳು ಸುಮ್ಮನೆ ದೇವರ ಕಡೆಗೆ ಕೈದೋರುತ್ತವೆ. ಒಮ್ಮೆ ನಿಮಗೆ ದಾರಿ ಗೊತ್ತಾದಮೇಲೆ ಶಾಸ್ತ್ರದ ಆವಶ್ಯಕತೆ ಇನ್ನು ಏನಿದೆ? ಆಗ ದೇವರಿಗೆ ಏಕಾಂತದಲ್ಲಿ ಮಾಡುವ ಪ್ರಾರ್ಥನೆಯಿಂದ ಅವುಗಳನ್ನು ಅನುಷ್ಠಾನಕ್ಕೆ ತರಬೇಕಾಗಿದೆ. ಒಬ್ಬನಿಗೆ ತನ್ನ ಹಳ್ಳಿಯ ಮನೆಯಿಂದ ನೆಂಟರಿಗೆ ಕೆಲವು ಸಾಮಾನನ್ನು ಕಳುಹಿಸೆಂದು ಒಂದು ಕಾಗದ ಬಂದಿತು. ಆ ಸಾಮಾನನ್ನು ವಿಚಾರಿಸುವಾಗ ಅದರಲ್ಲಿರುವ ಪದಾರ್ಥಗಳನ್ನೆಲ್ಲ ಕಾಗದದಿಂದ ತಿಳಿದುಕೊಳ್ಳಬೇಕಾಯಿತು. ಆಗ ಕಳೆದುಹೋದ ಕಾಗದವನ್ನು ಹುಡುಕಾಡಿದನು. ಕೊನೆಗೆ ತುಂಬ ಹುಡುಕಾಡಿದ ಮೇಲೆ ಕಾಗದ ಸಿಕ್ಕಿ ಸಂತೋಷವಾಯಿತು. ಅದನ್ನು ತೆಗೆದುಕೊಂಡು ಓದಿ ನೋಡಿದನು. ಅದರಲ್ಲಿ ಹೀಗಿತ್ತು: "ದಯವಿಟ್ಟು ಐದು ಸೇರು ಮಿಠಾಯಿ, ಒಂದು ನೂರು ಕಿತ್ತಲೆ ಹಣ್ಣು, ಎಂಟು ಪಂಚೆ, ಇವುಗಳನ್ನು ಕಳುಹಿಸು." ಇದು ಗೊತ್ತಾದ ಮೇಲೆ ಕಾಗದವನ್ನು ಎಸೆದು ಸಾಮಾನನ್ನು ಕೊಂಡುಕೊಳ್ಳಲು ಹೊರಟನು.

ಎಲ್ಲಿಯವರೆಗೂ ಒಬ್ಬನಿಗೆ ಅಂತಹ ಕಾಗದ ಬೇಕು? ಕಾಗದದಲ್ಲಿ ಇರುವ ವಿಷಯ ತಿಳಿಯದೆ ಇರುವ ತನಕ. ಒಂದು ಸಲ ಕಾಗದ

ದಲ್ಲಿರುವುದು ಗೊತ್ತಾದ ಮೇಲೆ ನಂತರದ ಕೆಲಸವೇ ಅದರಲ್ಲಿರುವ ವಸ್ತು ಗಳನ್ನು ಸಿದ್ಧಪಡಿಸಲು ಕಷ್ಟ ತೆಗೆದುಕೊಳ್ಳುವುದು. ಇದರಂತೆಯೇ ಸಾಸ್ತ್ರಗಳು ದೇವರನ್ನು ಸೇರುವ ಹಾದಿಯನ್ನು ಹೇಳುತ್ತವೆ. ಅದು ಒಂದು ಸಲ ಗೊತ್ತಾದ ಮೇಲೆ ಎರಡನೆ ಕೆಲಸವೇ ಗುರಿಯನ್ನು ಸೇರು ವುದಕ್ಕೆ ಕಷ್ಟಪಡುವುದು. ಪರಮಾತ್ಮನ ಸಾಕ್ಷಾತ್ಕಾರವೇ ಗುರಿ.

೧೬೦. ಯಾವ ವಿದ್ಯೆಯಿಂದ ನಾವು ದೇವರನ್ನು ತಿಳಿಯುತ್ತೇವೆಯೋ ಅದಕ್ಕೆ ಪರಾವಿದ್ಯೆ ಎಂದು ಹೆಸರು. ಉಳಿದವು ಕೇವಲ ಶಾಸ್ತ್ರಗಳು, ತತ್ತ್ವ, ತರ್ಕ ಅಥವಾ ವ್ಯಾಕರಣ. ಇವು ನಮ್ಮ ಮನಸ್ಸಿಗೆ ಒಂದು ಹೊರೆಯಂತೆ. ಭ್ರಾಂತಿಯನ್ನು ಹುಟ್ಟಿಸುವುವು. ಗ್ರಂಥಗಳು ಕೆಲವು ವೇಳೆ ಗ್ರಂಥಿಗಳು. ಪರಾವಿದ್ಯೆಗೆ ಕರೆದೊಯ್ದರೆ ಮಾತ್ರ ಅವು ಒಳ್ಳೆಯುವು.

೧೬೧. ಶಾಸ್ತ್ರವನ್ನು ಓದಿದಲ್ಲದೆ ದೇವರ ವಿಚಾರ ಗೊತ್ತಾಗುವುದಿಲ್ಲವೆಂದು ಕೆಲವರು ತಿಳಿಯುವರು. ಆದರೆ ಓದುವುದಕ್ಕಿಂತ ಕೇಳುವುದು ಉತ್ತಮ. ಕೇಳುವದಕ್ಕಿಂತ ಉತ್ತಮವಾಗಿರುವುದು, ನೋಡುವುದು ಅಥವಾ ಆತ್ಮಸಾಕ್ಷಾತ್ಕಾರ ಮಾಡಿಕೊಳ್ಳುವುದು. ಶಾಸ್ತ್ರಗಳನ್ನು ಓದುವುದಕ್ಕಿಂತ ಗುರುಮುಖದಿಂದ ಕೇಳುವುದರಿಂದ ಮನಸ್ಸಿನ ಮೇಲೆ ಒಳ್ಳೆಯ ಪರಿಣಾಮವಾಗುತ್ತದೆ. ಆದರೆ ಪ್ರತ್ಯಕ್ಷವಾಗಿ ನೋಡುವದು ಅತ್ಯಂತ ಪರಿಣಾಮಕಾರಿ. ಕಾಶಿಯ ವಿಚಾರವಾಗಿ ಓದುವುದಕ್ಕಿಂತ ಅದನ್ನು ನೋಡಿದವನ ಬಾಯಿಂದ ಕೇಳುವುದು ಮೇಲು. ಆದರೆ ಪ್ರತ್ಯಕ್ಷವಾಗಿ ನೋಡುವುದು ಅತ್ಯುತ್ತಮ.

೧೬೨. ಎರಡು ವಿಧದ ಮನುಷ್ಯರಿಗೆ ಮಾತ್ರ ಆತ್ಮಜ್ಞಾನ ಲಾಭವಾಗುವುದು. ಪಾಂಡಿತ್ಯದ ಭಾರದಿಂದ ಬಾಗದವರು, ಅಂದರೆ, ಪರರಿಂದ ಎರವಲಾಗಿ ತೆಗೆದುಕೊಂಡ ಭಾವಗಳಿಂದ ಮನಸ್ಸನ್ನು ತುಂಬಿಸಿಕೊಳ್ಳದೆ ಇರುವವರು, ಮತ್ತು ಯಾರು ಎಲ್ಲಾ ಶಾಸ್ತ್ರಗಳನ್ನು ಓದಿದ ಮೇಲೆ ತಮಗೆ ಏನೂ ಗೊತ್ತಿಲ್ಲ ಎಂದು ತಿಳಿದಿರುವರೋ ಅವರು.

೧೬೩. ಜನರು ತಪ್ಪು ಅಭಿಪ್ರಾಯ ಮತ್ತು ಮೂಢನಂಬಿಕೆಗಳ ವಿಚಾರವಾಗಿ ಮಾತನಾಡುವರು. ತಮ್ಮ ಪಾಂಡಿತ್ಯದ ವಿಚಾರವಾಗಿ ಹೆಮ್ಮೆ ಕೊಚ್ಚಿಕೊಳ್ಳುವರು. ಆದರೆ ನಿಜವಾದ ಭಕ್ತನಿಗೆ ತನಗೆ ದೇವರು ಯಾವಾಗಲೂ ಸಹಾಯ ಮಾಡುವುದು. ಗೊತ್ತಾಗುವುದು. ಕೆಲವು ಕಾಲ ತಪ್ಪು ದಾರಿಯಲ್ಲಿ ಹೋಗುತ್ತಿದ್ದರೂ ಚಿಂತೆಯಿಲ್ಲ. ಅವನಿಗೆ

ಏನು ಬೇಕು ಎನ್ನುವುದು ದೇವರಿಗೆ ಗೊತ್ತಿದೆ. ಕೊನೆಗೆ ಅವನ ಬಯಕೆಯನ್ನು ಈಡೇರಿಸುವನು

೧೬೪. ಇಬ್ಬರು ಒಂದು ತೋಟಕ್ಕೆ ಹೋದರು. ಅವರಲ್ಲಿ ತುಂಬಾ ಪ್ರಾಪಂಚಿಕ ಜ್ಞಾನವಿದ್ದವನು ಅಲ್ಲಿರುವ ಮಾವಿನ ಮರಗಳನ್ನು ಎಣಿಸಲು ಮೊದಲು ಮಾಡಿದನು. ಅವುಗಳಲ್ಲಿ ಸುಮಾರು ಎಷ್ಟು ಮಾವಿನ ಹಣ್ಣು ಬಿಡಬಹುದು, ಒಟ್ಟು ತೋಟದ ಬೆಲೆ ಎಷ್ಟಾಗಬಹುದು ಎಂಬುದನ್ನು ಅಂದಾಜು ಮಾಡಲು ಮೊದಲು ಮಾಡಿದನು. ಇವನ ಸ್ನೇಹಿತನು ತೋಟದ ಯಜಮಾನನ ಹತ್ತಿರ ಹೋಗಿ ಸುಮ್ಮನೆ ಹಣ್ಣನ್ನು ಬಿಡಿಸಿ ತಿನ್ನಲು ಮೊದಲುಮಾಡಿದನು. ಇಬ್ಬರಲ್ಲಿ ಯಾರು ಬುದ್ಧಿವಂತರೆಂದು ತಿಳಿಯುವಿರಿ ? ಮಾವಿನಹಣ್ಣನ್ನು ತಿನ್ನಿ! ನಿಮ್ಮ ಹಸಿವು ಅಡಗುವುದು. ಅಲ್ಲಿರುವ ಮರಗಳನ್ನು ಮತ್ತು ಎಲೆಗಳನ್ನು ಎಣಿಸುವುದರಿಂದ ಪ್ರಯೋಜನವೇನು ? ಬರಿಯ ಕೆಲಸಕ್ಕೆ ಬಾರದ ಪಂಡಿತನು, ಸೃಷ್ಟಿಗೆ ಕಾರಣವೇನು? ಅದು ಎಲ್ಲಿಂದ ಬಂದಿತು? ಎಂಬುದನ್ನು ವಿಚಾರಿಸಲು ಯತ್ನಿಸುವನು. ಆದರೆ ನಮ್ರನಾದ ಜ್ಞಾನಿಯಾದರೊ, ಸೃಷ್ಟಿಕರ್ತನೊಂದಿಗೆ ಸ್ನೇಹ ಬೆಳೆಸಿ, ಅವನು ಕರುಣಿಸುವ ಪರಮಾನಂದವನ್ನು ಅನುಭವಿಸುವನು.

೧೬೫. ಜ್ಞಾನಸ್ವರೂಪಳಾದಂತಹ ನನ್ನ ಜಗನ್ಮಾಯಿಯ ಕಿರಣವೊಂದು ಬಹಳ ಬುದ್ಧಿವಂತನಾದ ಪಂಡಿತನನ್ನು ಕೂಡ ಅಡಗಿಸಿ ಪ್ರಪಂಚದ ಮೇಲೆ ಹರಿದಾಡುವ ಕೀಟಕ್ಕೆ ಸಮಾನವಾಗಿ ಮಾಡುವುದು.

೧೬೬. ಗೀತಾ, ಗೀತಾ ಎಂದು ನೀವು ಹಲವುಬಾರಿ ಉಚ್ಚರಿಸಿ. ಆಗ ಅದನ್ನು ನಿಜವಾಗಿ ತ್ಯಾಗಿ, ತ್ಯಾಗಿ ಅಂದರೆ ದೇವರಿಗಾಗಿ ಎಲ್ಲವನ್ನೂ ತ್ಯಾಗಮಾಡಿರುವವನು, ಎಂದಂತೆ ಆಗುವುದು ಗೀತೆಯು ಒಂದು ಮಾತಿನಲ್ಲಿ, " ಎಲೈ ಸಂಸಾರಿಯೇ ತ್ಯಾಗಮಾಡು ! ಎಲ್ಲವನ್ನೂ ಬಿಟ್ಟು ದೇವರಮೇಲೆ ಮನಸ್ಸನ್ನು ಇಡು " ಎಂದು ಬೋಧಿಸುವುದು.

೧೬೭. ಚೈತನ್ಯದೇವನು ದಕ್ಷಿಣದೇಶದಲ್ಲಿ ತೀರ್ಥಯಾತ್ರೆ ಮಾಡುತ್ತಿದ್ದಾಗ ಪಂಡಿತನೊಬ್ಬನು ಗೀತೆಯನ್ನು ಓದುತ್ತಿದ್ದಾಗ ಭಕ್ತನೊಬ್ಬನು ಸಮೀಪದಲ್ಲಿ ಕಣ್ಣೀರು ಸುರಿಸುವುದನ್ನು ನೋಡಿದನು. ಆ ಭಕ್ತನಿಗೆ ಅಕ್ಷರಕೂಡ ಗೊತ್ತಿರಲಿಲ್ಲ. ಗೀತೆಯ ಒಂದು ಶ್ಲೋಕವೂ ಅರ್ಥವಾಗುತ್ತಿರಲಿಲ್ಲ. ಏತಕ್ಕೆ ಅವನು ಕಣ್ಣೀರನ್ನು ಸುರಿಸುತ್ತಿರುವನು ಎಂದು ಪ್ರಶ್ನಿಸಿದಾಗ ಅವನು ಹೀಗೆ ಹೇಳಿದನು : " ನನಗೆ ಗೀತೆಯ

ಒಂದು ಅಕ್ಷರವೂ ತಿಳಿಯುವುದಿಲ್ಲ, ನಿಜ. ಆದರೆ ಇದನ್ನು ಓದುವಾಗ ಕುರುಕ್ಷೇತ್ರ ರಣರಂಗದಲ್ಲಿ ಅರ್ಜುನನ ಎದುರಿಗೆ ಕುಳಿತ ಕೃಷ್ಣನು ಗೀತೋಪದೇಶವನ್ನು ಮಾಡುತ್ತಿದ್ದ ಸುಂದರದೃಶ್ಯವು ನನ್ನ ಮನಸ್ಸಿನ ಕಣ್ಣಿಗೆ ಕಾಣಿಸುತ್ತಿದೆ. ನನ್ನ ಕಣ್ಣುಗಳಲ್ಲಿ ಪ್ರೇಮ ಮತ್ತು ಆನಂದಾಶ್ರುಗಳು ತುಂಬಿದುದಕ್ಕೆ ಅದೇ ಕಾರಣ."

ಅಕ್ಷರಜ್ಞಾನವಿಲ್ಲದ ಇವನಿಗೆ ಪರಮಜ್ಞಾನ ಲಾಭವಾಗಿತ್ತು. ಏಕೆಂದರೆ ಅವನಿಗೆ ದೇವರ ಮೇಲೆ ನಿಜವಾದ ಭಕ್ತಿ ಇತ್ತು. ಇದರಿಂದ ಭಗವಂತನನ್ನು ಸಾಕ್ಷಾತ್ಕಾರ ಮಾಡಿಕೊಳ್ಳಲು ಸಾಧ್ಯವಾಯಿತು.

# ಅಧ್ಯಾಯ ೬

## ಗುರುಗಳು : ಸಹಜ ಮತ್ತು ಕಪಟ

### ಗುರುತ್ವದ ಅಪಾಯ

೧೬೮. ಎಲೈ ಪ್ರಚಾರಕನೆ ನೀನೇನು ಅಧಿಕಾರದ ಮುದ್ರೆಯನ್ನು ಪಡೆದಿರುವೆಯೇನು? ದೊರೆಯ ಅಪ್ಪಣೆಯನ್ನು ಪರಿಪಾಲಿಸುವ ಅತ್ಯಂತ ದೀನನಾದ ಸೇವಕನ ಮಾತನ್ನು ಕೂಡ ಗೌರವ ಮತ್ತು ಭಯಭಕ್ತಿಯಿಂದ ಕೇಳುತ್ತಾರೆ. ತನ್ನ ಅಧಿಕಾರದ ಮುದ್ರೆಯನ್ನು ತೋರಿ ಅವನು ಒಂದು ದಂಗೆಯನ್ನೆ ಅಡಗಿಸಬಲ್ಲ. ಆದಕಾರಣವೆ, ಎಲೆ ಪ್ರಚಾರಕನೆ ಮೊದಲು ದೇವರಿಂದ ಅಪ್ಪಣೆಯ ಸ್ಫೂರ್ತಿಯನ್ನು ಪಡೆ. ಎಲ್ಲಿಯವರೆವಿಗೂ ನಿನಗೆ ದೇವರ ಸ್ಫೂರ್ತಿಯ ಮುದ್ರೆಯಿಲ್ಲವೋ ಅಲ್ಲಿಯವರೆವಿಗೆ ನೀವು ಬದುಕಿರುವತನಕ ಬೋಧೆಮಾಡಬಹುದು, ಆದರೆ ಇದರಿಂದ ವೃಥಾ ಶಕ್ತಿ ವ್ಯಯವಾಗುವುದು, ಅಷ್ಟೆ.

೧೬೯. ಪರಮಪ್ರೀತಿಯ ಕಡಲಿನಲ್ಲಿ ಮುಳುಗುವುದಕ್ಕೆ ಯಾರಿಗೂ ಸಮಾಧಾನವಿಲ್ಲ, ಅಥವಾ ಆಸೆಯೂ ಇಲ್ಲ. ಪ್ರಾಪಂಚಿಕ ವಸ್ತುಗಳ ಮೇಲೆ ವಿವೇಕ ವೈರಾಗ್ಯ ಅಥವಾ ಸಾಧನದ ಮೇಲೆ ಯಾರಿಗೂ ಇಚ್ಛೆಯಿಲ್ಲ. ಆದರೂ ಎಲ್ಲೋ ಪುಸ್ತಕದಿಂದ ಕಲಿತ ಸ್ವಲ್ಪವನ್ನು ಎಲ್ಲರೂ ಉಪನ್ಯಾಸ ಮಾಡಲು ಬಯಸುವರು. ಇನ್ನೊಬ್ಬರಿಗೆ ಕಲಿಸುವುದು ಬಹಳ ಕಷ್ಟದ ಕೆಲಸ. ದೇವರನ್ನು ಸಾಕ್ಷಾತ್ಕಾರ ಮಾಡಿಕೊಂಡಮೇಲೆಯಾರು ಅವನಿಂದ ಅಪ್ಪಣೆಯನ್ನು ಪಡೆಯುವರೋ ಅವರು ಮಾತ್ರ ಇನ್ನೊಬ್ಬರಿಗೆ ಬೋಧಿಸಬಹುದು.

೧೭೦. **ದೊಡ್ಡ ವಾಗ್ಮಿ ಮತ್ತು ಬೋಧಕನು ಆದರೂ ಅವನ ಆಧ್ಯಾತ್ಮಿಕ ಜಾಗ್ರತಿ ಇನ್ನೂ ವಿಕಾಸವಾಗದಿದ್ದರೆ ನೀನು ಏನೆಂದು ತಿಳಿಯುವೆ?** ಇಂತಹವನು ಇನ್ನೊಬ್ಬರು ತನ್ನ ಹತ್ತಿರ ಇಟ್ಟಿರುವ ದ್ರವ್ಯವನ್ನು ವೆಚ್ಚಮಾಡುವ ಹಾಗೆ. ಅವನು ಇನ್ನೊಬ್ಬರಿಗೆ ಸುಲಭವಾಗಿ ಹೇಳಬಲ್ಲ. ಏಕೆಂದರೆ ಅವನಿಗೆ ಇದರಿಂದ ಏನೂ ಖರ್ಚಾಗುವುದಿಲ್ಲ. ಅವನು ಬೋಧಿಸುವ ವಿಷಯಗಳು ಅವನ ಸ್ವಂತವಲ್ಲ, ಎರವಲಾಗಿ ತಂದದ್ದು.

೧೭೧. ಪ್ರಖ್ಯಾತನಾದ ಉಪನ್ಯಾಸಗಾರನೊಬ್ಬನು ಒಂದು ಸಲ ಹರಿಸಭೆಯಲ್ಲಿ ಮಾತನಾಡುತ್ತಿದ್ದನು. ಮಾತನಾಡುವಾಗ ಅವನು ಹೀಗೆ ಹೇಳಿದನು : "ದೇವರಲ್ಲಿ ಸ್ವಲ್ಪವೂ ರಸವಿಲ್ಲ. ನಮ್ಮ ಸ್ವಭಾವದ ಮಧುರತೆಯನ್ನು ಅವನಲ್ಲಿ ಆರೋಪಿಸಿ ಅವನನ್ನು ಮಧುರಮಯನನ್ನಾಗಿ ಮಾಡಬೇಕಾಗಿದೆ." ರಸವೆಂದರೆ ಪ್ರೀತಿ ಮತ್ತು ಇನ್ನೂ ಇತರ ಗುಣಗಳು ಎಂದು ಅವನ ಅಭಿಪ್ರಾಯ. ಇದನ್ನು ಕೇಳಿದಾಗ, ಒಬ್ಬ ಹುಡುಗನು ತನ್ನ ಸೋದರಮಾವನ ಹತ್ತಿರ ಬೇಕಾದಷ್ಟು ಕುದುರೆಗಳು ಇವೆ, ಅವು ಒಂದು ಗೊಂತಿನ ತುಂಬ ಇವೆ ಎಂದು ಕೇಳುವವನನ್ನು ಒಪ್ಪಿಸಲು ಯತ್ನಿಸಿದವನ ಜ್ಞಾಪಕ ಬಂದಿತು. ಗೊಂತು ಕುದುರೆಗಳಿಗೆ ಅಲ್ಲ ಇರುವುದು. ಹುಡುಗನು ಸುಳ್ಳು ಹೇಳುತ್ತಿರುವನು, ಅವನಿಗೆ ಕುದುರೆಗಳ ಅನುಭವವೇ ಇಲ್ಲ ಎಂದು ಬುದ್ಧಿವಂತರಿಗೆ ಗೊತ್ತಾಯಿತು.

ದೇವರನ್ನು ಅವನು ನೀರಸ ಎಂದು ಹೇಳುವುದು ಶುದ್ಧ ಅವಿವೇಕ. ಉಪನ್ಯಾಸಕ ತಾನು ಏನು ಮಾತನಾಡುತ್ತಿರುವೆ ಎಂಬುದು ಅವನಿಗೇ ಗೊತ್ತಿಲ್ಲ ಎಂದು ಇದರಿಂದ ಗೊತ್ತಾಗುವುದು. ಯಾರು ಅನಂತಪ್ರೇಮ ಜ್ಞಾನ ಆನಂದಗಳಿಗೆ ಮೂಲವಾಗಿರುವನೊ ಅಂತಹ ದೇವರನ್ನು ಅವನು ಎಂದೂ ಕಂಡವನಲ್ಲ.

೧೭೨. ಇಂದಿನ ಕಾಲದ ಧಾರ್ಮಿಕಪ್ರಚಾರಕರು ಹಿಡಿದ ಮಾರ್ಗದ ವಿಚಾರವಾಗಿ ನಿಮ್ಮ ಅಭಿಪ್ರಾಯವೇನು ? ಎಂದು ಯಾರೋ ಕೇಳಿದರು. ಇದು, ಒಬ್ಬನಿಗೆಮಾತ್ರ ಸಾಕಾಗುವಷ್ಟು ಊಟ ಇರುವಾಗ, ನೂರು ಜನರನ್ನು ಊಟಕ್ಕೆ ಕರೆದಂತೆ. ಎಲ್ಲೋ ಸ್ವಲ್ಪ ಆಧ್ಯಾತ್ಮಿಕ ಅನುಭವ ಹೊಂದಿ ದೊಡ್ಡ ಧಾರ್ಮಿಕಬೋಧಕನಂತೆ ನಟಿಸುವರು.

೧೭೩. **ನಿನ್ನ ಹೃದಯ ಮಂದಿರದಲ್ಲಿ ಮೊದಲು ದೇವರನ್ನು ಪ್ರತಿಷ್ಠಾಪನೆ ಮಾಡು. ಮೊದಲು ಆತನನ್ನು ಸಾಕ್ಷಾತ್ಕಾರ ಮಾಡಿಕೊ.**

ಮೊದಲು ದೇವರನ್ನು ನೋಡಿದ ಮೇಲೆ ಉಪನ್ಯಾಸ ಮುಂತಾದುವನ್ನು ಮಾಡಬಹುದು ಅದಕ್ಕೆ ಮುಂಚೆ ಅಲ್ಲ. ಪ್ರಪಂಚದ ವಿಷಯಗಳಲ್ಲಿ ಇನ್ನೂ ಆಸಕ್ತರಾಗಿರುವಾಗ ಜನರು, ದೇವರು ಬ್ರಹ್ಮ ಮುಂತಾದುವುಗಳ ವಿಚಾರವಾಗಿ ಮಾತನಾಡುವರು. ಇದರಿಂದ ಏನು ಪ್ರಯೋಜನ? ದೇವಸ್ಥಾನದಲ್ಲಿ ದೇವರಿಲ್ಲದೆ ಮಂಗಳಾರತಿಗೆ ಶಂಖ ಊದಿದಂತೆ.

೧೭೪. ಒಂದು ದಿನ ನಾನು ಪಂಚವಟಿಯ ಹತ್ತಿರ ಹೋಗುತ್ತಿದ್ದಾಗ ಕಪ್ಪೆ ಅರಚಿಕೊಳ್ಳುತ್ತಿದ್ದುದನ್ನು ಕೇಳಿದೆನು. ಹಾವು ಅದನ್ನು ಹಿಡಿದಿರಬಹುದೆಂದು ಊಹಿಸಿದೆನು. ಬಹಳ ಹೊತ್ತಾದ ಮೇಲೆ ನಾನು ಆ ದಾರಿಯಲ್ಲಿ ಹಿಂತಿರುಗುತ್ತಿದ್ದಾಗ ಪುನಃ ಅದೇ ಧ್ವನಿಯನ್ನು ಕೇಳಿದೆನು. ಪೊದೆಯಲ್ಲಿ ಇಣಿಕಿ ನೋಡಿದಾಗ ಒಂದು ನೀರುಹಾವಿನ ಬಾಯಲ್ಲಿ ಕಪ್ಪೆಯನ್ನು ನೋಡಿದೆನು. ಇದು ಕಪ್ಪೆಯನ್ನು ನುಂಗಲೂ ಆರದು, ಹೊರಗೆ ಬಿಡಲೂ ಆರದು. ಕಪ್ಪೆಯ ಸಂಕಟಕ್ಕೆ ಕೊನೆಯೇ ಇರಲಿಲ್ಲ. ಆಗ ನಾನು ಆಲೋಚಿಸಿದೆನು: "ಏನಾದರೂ ಅದು ನಾಗರಹಾವಿನ ಬಾಯಿಗೆ ಸಿಕ್ಕಿದ್ದರೆ ಹೆಚ್ಚು ಎಂದರೆ ಮೂರು ಸಲ ಅರಚಿಕೊಳ್ಳುವುದರೊಳಗೆ ಸಾಯುತ್ತಿತ್ತು. ಆಗ ಕಪ್ಪೆಗಾಗಲೀ ಹಾವಿಗಾಗಲೀ ಸಂಕಟವಾಗುತ್ತಿರಲಿಲ್ಲ. ಇಲ್ಲಿ ಹಾವಿನ ಸಂಕಟ ಕಪ್ಪೆಯ ಸಂಕಟದಷ್ಟೇ ಇರುವುದು. ಇದರಂತೆಯೇ ಯಾರಿಗೆ ಇನ್ನೂ ಜ್ಞಾನ ಪ್ರಾಪ್ತವಾಗಿಲ್ಲವೋ ಅವನು ಬುದ್ಧಿಯಿಲ್ಲದೆ ಇನ್ನೊಬ್ಬನನ್ನು ಉದ್ಧಾರ ಮಾಡುವ ಜವಾಬ್ದಾರಿಯನ್ನು ತನ್ನ ಮೇಲೆ ವಹಿಸಿಕೊಂಡರೆ ಇಬ್ಬರ ಸಂಕಟಕ್ಕೆ ಮಿತಿಯೇ ಇಲ್ಲ. ಶಿಷ್ಯನ ಅಹಂಕಾರ ಮಾಯವಾಗುವ ಹಾಗಿಲ್ಲ. ಅಥವಾ ಸಂಸಾರ ಬಂಧನ ಕತ್ತರಿಸುವ ಹಾಗಿಲ್ಲ. ಅಯೋಗ್ಯನಾದ ಗುರುವಿನ ಪ್ರಭಾವಕ್ಕೆ ಶಿಷ್ಯನು ಒಳಗಾದರೆ ಅವನಿಗೆ ಮೋಕ್ಷವೆಂದಿಗೂ ಸಿಕ್ಕುವುದಿಲ್ಲ. ಆದರೆ ಯೋಗ್ಯನಾದ ಗುರುವಿನ ಕೆಳಗೆ ಇದ್ದರೆ ಮೂರು ಸಲ ಅರಚುವುದರೊಳಗಾಗಿ ಜೀವದ ಅಹಂಕಾರ ಕೊನೆಗಾಣುವುದು.

೧೭೫. ಒಬ್ಬನು ಪ್ರಚಾರ ಕೆಲಸದಲ್ಲಿದ್ದನು. ಅವನು ಧಾರ್ಮಿಕ ಪ್ರಸಂಗಗಳನ್ನು ನಡೆಸಿದಾಗ ಕೇಳುವವರ ಮನಸ್ಸಿನಲ್ಲಿ ಬಹಳ ಭಕ್ತಿರಸವನ್ನು ಹುಟ್ಟಿಸುತ್ತಿದ್ದನು. ಆದರೆ ಅವನು ಶುದ್ಧ ಚಾರಿತ್ರ್ಯದವನಲ್ಲ. ಇವನು ಬಾಳುತ್ತಿದ್ದ ಹೀನ ಜೀವನವನ್ನು ನೋಡಿ ದುಃಖದಿಂದ

ಅವನನ್ನು ಒಂದು ದಿನ, "ಕೇಳುವವರಲ್ಲಿ ಅಷ್ಟೊಂದು ಭಕ್ತಿರಸ ಉದ್ರೇಕಿಸುವಂತೆ ಮಾಡಿದರೂ ನೀನು ಮಾತ್ರ ಇಂತಹ ಹೀನವಾದ ಜೀವನದಲ್ಲಿ ಹೇಗೆ ಇರುವೆ?" ಎಂದು ಕೇಳಿದೆನು. ಮನುಷ್ಯನು ನಮಸ್ಕಾರ ಮಾಡಿ "ಹೌದು ಮಹಾಸ್ವಾಮಿ, ಪರಕೆ ತುಚ್ಛ ವಸ್ತುವಾದರೂ ಅಂಗಳ ಮತ್ತು ರಸ್ತೆಯ ಮೇಲೆ ಇರುವ ಕಸವನ್ನು ಗುಡಿಸುತ್ತದೆ" ಎಂದನು. ನನಗೆ ಇದಕ್ಕೆ ಉತ್ತರ ಕೊಡಲು ಆಗಲಿಲ್ಲ.

## ನಿಜವಾದ ಗುರು ಯಾರು ?

೧೭೬. ಸತ್ಯದ ಪರಂಜ್ಯೋತಿಯಿಂದ ಯಾರು ಪರಿಶುದ್ಧಾತ್ಮರಾಗಿರುವರೋ ಅವರೇ ನಿಜವಾದ ಗುರುಗಳು.

೧೭೭. ಹೇಗೆ ಹಲವು ಮಂದಿ ಮಂಜಿನ ಗಡ್ಡೆಯನ್ನು ಕೇಳಿರುವರೊ ಆದರೆ ನೋಡಿಲ್ಲವೊ, ಹಾಗೆಯೆ ಹಲವು ಧರ್ಮ ಪ್ರಚಾರಕರು ದೇವರ ಗುಣಗಳ ವಿಷಯವಾಗಿ ಪುಸ್ತಕದಲ್ಲಿ ಓದಿರುವರು. ಆದರೆ ಪ್ರತ್ಯಕ್ಷವಾಗಿ ಅದನ್ನು ಕಂಡಿಲ್ಲ. ಹಲವರು ಮಂಜಿನಗಡ್ಡೆಯನ್ನು ನೋಡಿರುವರು. ಆದರೆ ಅದರ ರುಚಿಯನ್ನು ಅರಿಯರು. ಅದರಂತೆಯೇ ಹಲವರಿಗೆ ಪರಮಾತ್ಮನ ಮಹಿಮೆಯ ಕ್ಷಣಿಕ ದೃಶ್ಯ ಲಭಿಸಿರಬಹುದು. ಆದರೆ ಅದರ ಸತ್ಯಾಂಶವನ್ನು ತಿಳಿದುಕೊಂಡಿಲ್ಲ. ಯಾರು ಮಂಜಿನ ಗಡ್ಡೆಯನ್ನು ತಿಂದಿರುವರೋ ಅವರು ಮಾತ್ರ ಅದು ಹೇಗಿದೆ ಎಂಬುದನ್ನು ಹೇಳಬಹುದು. ಇದರಂತೆಯೆ ಯಾರು ದೇವರೊಂದಿಗೆ ಹಲವು ಭಾವಗಳಲ್ಲಿ ಅಂದರೆ ದಾಸನಂತೆ, ಸ್ನೇಹಿತನಂತೆ, ಪ್ರೇಮಿಯಂತೆ ಆತನಲ್ಲಿ ತನ್ಮಯನಾಗಿ ಐಕ್ಯನಾದಮೇಲೆ ಮಾತ್ರ ಅವನ ಮಹಿಮೆಯನ್ನು ಹೇಳಬಲ್ಲ.

೧೭೮. ತಾನು ಒಬ್ಬ ಮುಂದಾಳು, ಒಂದು ಪಂಗಡವನ್ನು ಮಾಡಿರುವೆನು, ಎಂದು ತಿಳಿದುಕೊಂಡರೆ ಅವನ ಅಹಂಕಾರ ಇನ್ನೂ ಮಾಗಿಲ್ಲ. ಆದರೆ ದೇವರನ್ನು ಕಂಡಾದಮೇಲೆ ಅವನಿಂದ ಅಪ್ಪಣೆ ಪಡೆದುಕೊಂಡು ಇತರರ ಮೇಲ್ಮೆಗಾಗಿ ಉಪದೇಶಿಸಿದರೆ ಅದರಿಂದ ಕೆಡಕಿಲ್ಲ. ಶುಕದೇವ ಭಾಗವತವನ್ನು ಪರೀಕ್ಷಿತ ರಾಜನಿಗೆ ಹೇಳುವುದಕ್ಕೆ ಅಂತಹ ಅಧಿಕಾರ ಪಡೆದಿದ್ದನು.

೧೭೯. ಕೊಡ ತುಂಬಿದಮೇಲೆ ಶಬ್ದ ಮಾಡುವುದಿಲ್ಲ. ಇದರಂತೆ ಆತ್ಮಸಾಕ್ಷಾತ್ಕಾರವನ್ನು ಪಡೆದವನು ಹೆಚ್ಚು ಮಾತನಾಡು

ವುದಿಲ್ಲ. ಆದರೆ ನಾರದ ಮುಂತಾದವರು ಹೇಗೆ? ಹೌದು ನಾರದ, ಶುಕದೇವ ಮತ್ತು ಇಂತಹ ಇನ್ನು ಕೆಲವರು ಸಮಾಧಿಯನ್ನು ಹೊಂದಿದ ಮೇಲೆ ಹಲವು ಮೆಟ್ಟಲುಗಳು ಕೆಳಗೆ ಬಂದು ಮಾನವಕೋಟಿಗೆ ಮರುಕತಾಳಿ ಕರುಣೆ ಮತ್ತು ಪ್ರೀತಿಯಿಂದ ಬೋಧಿಸಿದರು.

೧೮೧. ಪ್ರಪಂಚದಲ್ಲಿ ಎರಡು ವಿಧ ಮುಕ್ತಪುರುಷರಿರುವರು: ಸತ್ಯವನ್ನು ಪಡೆದಾದಮೇಲೆ ಮೌನವಾಗಿ, ಮತ್ತೊಬ್ಬರ ಯೋಚನೆ ಯಿಲ್ಲದೆ ತಮಗೆ ತಾವೇ ಆನಂದಪಡುವರು, ಮತ್ತು ಯಾರು ಸತ್ಯ ವನ್ನು ಪಡೆದಾದಮೇಲೆ ತಮಗೆ ಮಾತ್ರ ಅದನ್ನು ಇಟ್ಟುಕೊಂಡಿರು ವುದರಿಂದ ಸಂತೋಷವಿಲ್ಲದೆ ಎಲ್ಲರೂ ಬನ್ನಿ, ತಮ್ಮೊಂದಿಗೆ ಸತ್ಯವನ್ನು ತಿಳಿದು ಆನಂದಿಸಿ ಎಂದು ಘಂಟಾ ಘೋಷವಾಗಿ ಸಾರುವವರು.

೧೮೧. ತಂಗಾಳಿಯು ಬೀಸಿ ಪೂರ್ಣ ವಿಕಸಿತವಾದ ಹೂವಿನ ಪರಿಮಳವನ್ನು ದಿಕ್ಕು ದಿಕ್ಕಿಗೆ ಎರಚಿದಾಗ ದುಂಬಿಗಳು ತಮಗೆ ತಾವೆ ಬರುವುವು. ಸಿಹಿ ಪದಾರ್ಥಗಳು ಇರುವ ಸ್ಥಳಕ್ಕೆ ಇರುವೆಗಳನ್ನು ಯಾರೂ ಕರೆಯಬೇಕಾಗಿಲ್ಲ. ಇದರಂತೆಯೇ ಯಾವಾಗ ಒಬ್ಬನು ಪರಿಶುದ್ಧನಾಗಿ ಪರಿಪೂರ್ಣನಾಗುವನೋ ಆಗ ಅವನಲ್ಲಿರುವ ಮಂಗಳ ಗುಣಗಳ ಮಾಧುರ್ಯ ಸುತ್ತಲೂ ಹಬ್ಬುವುದು. ಸತ್ಯಾನ್ವೇಷಕರೆಲ್ಲ ಸ್ವಭಾವತಃ ಅವನ ಹತ್ತಿರಕ್ಕೆ ಬರುವರು. ತಾನು ಮಾತನಾಡುವುದನ್ನು ಕೇಳುವುದಕ್ಕಾಗಿ ಪ್ರೇಕ್ಷಕರ ಸಂದಣಿಯನ್ನು ಅವನು ಹುಡುಕಿಕೊಂಡು ಹೋಗಬೇಕಾಗಿಲ್ಲ.

೧೮೨. ಮಿಠಾಯಿ ಬಿದ್ದ ಕಡೆ ಇರುವೆಗಳು ಸ್ವಭಾವತಃ ನೆರೆಯು ವುವು. ಕಲ್ಲು ಸಕ್ಕರೆಯಾಗಲು ಪ್ರಯತ್ನಿಸಿ. ಜಾಗ್ರತವಾದ ಆಧ್ಯಾತ್ಮಿಕ ಮನೋಭಾವದ ಮಾಧುರ್ಯತೆ ನಿಮ್ಮಲ್ಲಿರಲಿ. ಇರುವೆಗಳು (ಭಕ್ತರು) ತಮಗೆ ತಾವೆ ನಿಮ್ಮಲ್ಲಿಗೆ ಬರುವರು. ದೇವರಿಂದ ಅಪ್ಪಣೆ ಪಡೆಯದೆ ನೀವು ಬೋಧಿಸಿದರೆ ನಿಮ್ಮ ಬೋಧನೆಯಿಂದ ಏನೂ ಪ್ರಯೋಜನವಿಲ್ಲ. ಅದನ್ನು ಯಾರೂ ಕೇಳುವುದಿಲ್ಲ. ಒಬ್ಬನು ಭಕ್ತಿ ಮತ್ತು ಇನ್ನೂ ಯಾವುದಾದರೂ ಹಾದಿಯ ಮೂಲಕ ದೇವರನ್ನು ಹೊಂದಬೇಕು. ಅನಂತರ ದೇವರ ಅಪ್ಪಣೆಯನ್ನು ಪಡೆದರೆ ಎಲ್ಲಿ ಬೇಕಾದರೆ ಅಲ್ಲಿ ಅದನ್ನು ಬೋಧಿಸಬಹುದು. ಹೀಗೆ ಮಾತ್ರ ಅವನು ದೇವರಿಂದ ಶಕ್ತಿ ಯನ್ನು ಪಡೆದುಕೊಳ್ಳಬಲ್ಲ. ಆಗಮಾತ್ರ ಗುರುವಿನ ಜವಾಬ್ದಾರಿ ಯನ್ನು ಸರಿಯಾಗಿ ನಿಶ್ಚಯಿಸಬಲ್ಲ.

೧೮೩. ಬೆಂಕಿ ಉರಿಯುತ್ತಿರುವಾಗ ಪತಂಗದ ಹುಳುಗಳು ಬಂದು ಬೀಳುತ್ತವೆ. ಅವು ಎಲ್ಲಿಂದ ಬರುತ್ತವೆ ಎನ್ನುವುದು ಯಾರಿಗೂ ಗೊತ್ತಿಲ್ಲ. ಬೆಂಕಿ ಪತಂಗದ ಹುಳುಗಳನ್ನು ಕೂಗಿ ಕರೆಯುವುದಿಲ್ಲ. ಸಿದ್ಧರ ಉಪದೇಶವೂ ಇದರಂತೆಯೆ! ಅವರು ಯಾರನ್ನೂ ಕರೆಯುವುದಿಲ್ಲ. ನೂರಾರುಜನ ಅವರಿಂದ ಉಪದೇಶ ಪಡೆಯಲು ಹೋಗುತ್ತಾರೆ. ಅವರು ಎಲ್ಲಿಂದ ಬರುತ್ತಾರೆ ಎನ್ನುವುದು ಗೊತ್ತಾಗುವುದಿಲ್ಲ.

೧೮೪. ನಿಜವಾದ ಬೋಧನೆ ಎಂದರೇನು? ಇನ್ನೊಬ್ಬರಿಗೆ ಬೋಧೆ ಮಾಡುವುದಕ್ಕಿಂತ, ಒಬ್ಬನು ಸದಾ ದೇವರನ್ನು ಪೂಜಿಸುತ್ತಿದ್ದರೆ ಅದೇ ಸಾಕಾದಷ್ಟು ಬೋಧನೆ. ಜನನ ಮರಣಗಳಿಂದ ಯಾರು ಬಿಡುಗಡೆ ಹೊಂದಬೇಕೆಂದು ಪ್ರಯತ್ನಿಸುತ್ತಿರುವರೋ ಅವರೇ ನಿಜವಾದ ಬೋಧಕರು. ಯಾರು ಮುಕ್ತರೋ ಅವರ ಸಮೀಪಕ್ಕೆ ಎಷ್ಟೋ ಕಡೆಗಳಿಂದ ನೂರಾರು ಜನರು ಕಾತುರರಾಗಿ ಬರುವರು.

೧೮೫. ಒಬ್ಬ ದೊಡ್ಡ ವರ್ತಕನ ಕಣಜದಿಂದ ಧಾನ್ಯವನ್ನು ಅಳೆದು ಕೊಡುವಾಗ ಅಳೆಯುವವನು ಸುಮ್ಮನೆ ಎಣಿಸುತ್ತಾ ಹೋಗುವನು. ಬೇಕಾದಷ್ಟು ದವಸ ಅವನ ಬಳಿ ಯಾವಾಗಲೂ ಇರುವುದು. ಚಿಲ್ಲರೆ ವ್ಯಾಪಾರಿಯ ಕಣಜದಲ್ಲಿ ಅದು ಬೇಗ ಮುಗಿದುಹೋಗುವುದು. ಇದರಂತೆ ತನ್ನ ಭಕ್ತರ ಹೃದಯದಲ್ಲಿ ಆಲೋಚನೆ ಮತ್ತು ಭಾವನೆಗಳನ್ನು ಪ್ರೇರೇಪಿಸುವವನು ದೇವರು. ಆದುದರಿಂದಲೇ ಅವರಿಗೆ ಯಾವುದು ಒಳ್ಳೆಯದೋ ಮತ್ತು ಹೊಸದೋ ಅದಕ್ಕೆ ಬರಗಾಲವಿರುವುದಿಲ್ಲ. ಆದರೆ ಪಂಡಿತರಾದರೋ ಚಿಲ್ಲರೆ ವ್ಯಾಪಾರಿಗಳಂತೆ. ಅವರ ಆಲೋಚನೆ ಮತ್ತು ಭಾವನೆಗಳು ಬೇಗ ಬರಿದಾಗುತ್ತವೆ.

೧೮೬. ಅನಿಲ ಜ್ಯೋತಿಯು (Gas Light) ಸ್ವಲ್ಪ ಹೆಚ್ಚು ಕಡಿಮೆಯಾಗಿ ನಗರದ ಬೇರೆ ಬೇರೆ ಭಾಗಗಳನ್ನು ಬೆಳಗಿಸುವುದು. ಆದರೆ ಬೆಳಕಿನ ಜೀವಾಳವಾದ ಅನಿಲವು ಒಂದೇ ಮೂಲದಿಂದ ಬರುವುದು. ಇದರಂತೆ ಎಲ್ಲ ದೇಶದ ಮತ್ತು ಕಾಲದ ಬೋಧಕರು ದೀಪದಂತೆ. ಇವರೆಲ್ಲ ಒಂದೇ ಮೂಲವಾದ ಪರಮಾತ್ಮನಿಂದ ಸದಾ ಹರಿದುಬರುವ ಆಧ್ಯಾತ್ಮಿಕ ಕಾಂತಿಯನ್ನು ಬೆಳಗುವರು.

೧೮೭. ಮಾಳಿಗೆಯ ಮೇಲೆ ಬಿದ್ದ ಮಳೆಯ ನೀರು ವಿಚಿತ್ರವಾಗಿ ಮಾಡಿರುವ ಹುಲಿಯ ಬಾಯಿನಿಂದ ಕೆಳಗೆ ಹರಿದುಬರುತ್ತದೆ. ಹುಲಿಯ ಬಾಯಿಂದ ನೀರು ಬರುತ್ತದೆ ಎಂದು ಭಾಸವಾಗುವುದು. ಆದರೆ

ಆಡು ನಿಜವಾಗಿ ಆಕಾಶದಿಂದ ಬಂದುದು. ಇದರಂತೆ ಮಹಾಪುರುಷರ ಬಾಯಿಂದ ಬರುವ ಉಪದೇಶಗಳು ಅವರಿಂದ ಬಂದಂತೆ ಕಾಣುವುದು. ಆದರೆ ನಿಜವಾಗಿ ಅವು ದೇವರಿಂದ ಬರುವುವು.

# ಅಧ್ಯಾಯ ೭

## ಪ್ರಾಪಂಚಿಕರು ಮತ್ತು ಅವರ ರೀತಿ

### ಪ್ರಾಪಂಚಿಕರ ಸ್ವಭಾವ

೧೮೮. ಮನುಷ್ಯರಲ್ಲಿ ಎರಡು ವಿಧ: ಹೆಸರಿಗೆ ಮಾತ್ರ ಮನುಷ್ಯರು ಮತ್ತು ಎಚ್ಚೆತ್ತ ಮನುಷ್ಯರು. ದೇವರಿಗೋಸ್ಕರ ಯಾರು ಕಾತುರರಾಗಿರುವರೋ ಅವರು ಕೊನೆಯ ಗುಂಪಿಗೆ ಸೇರಿದವರು. ಕಾಮಕಾಂಚನಗಳಲ್ಲೇ ಯಾರು ತೃಪ್ತರಾಗಿರುವರೋ ಅವರು ಸಾಧಾರಣ ಮನುಷ್ಯರು ಹೆಸರಿಗೆ ಮಾತ್ರ.

೧೮೯. ಹೇಗೆ ಒಂದು ಮುಖವಾಡವನ್ನು ಹಲವು ಮನುಷ್ಯರು ಉಪಯೋಗಿಸಬಹುದೋ ಹಾಗೆಯೇ ಹಲವು ಬಗೆಯ ಪ್ರಾಣಿಗಳು ಮನುಷ್ಯನ ವೇಷವನ್ನು ಧರಿಸಿವೆ. ಇವುಗಳೆಲ್ಲಾ ಒಂದೇ ಆಕಾರದಂತೆ ಕಂಡರೂ ಕೆಲವು ಚೂರುಚೂರಾಗಿ ಕತ್ತರಿಸುವ ತೋಳಗಳು, ಕೆಲವು ಬಹಳ ಕ್ರೂರವಾಗಿರುವ ಕರಡಿಗಳು, ಮತ್ತೆ ಕೆಲವರು ನರಿಯಂತೆ ಬಹಳ ಉಪಾಯವಂತರು, ಅಥವಾ ವಿಷಸರ್ಪಗಳು.

೧೯೦. ವಂದರಿ ಹೇಗೆ ಸಣ್ಣಕಾಳನ್ನು ತೂರಿ ಕೆಲಸಕ್ಕೆಬಾರದ ಹೊಟ್ಟನ್ನು ತನ್ನಲ್ಲಿಯೇ ಇಟ್ಟುಕೊಳ್ಳುವುದೋ, ಹಾಗೆಯೇ ದುಷ್ಟರ ಸ್ವಭಾವ, ಒಳ್ಳೆಯದನ್ನು ತೂರಿ, ಕೆಟ್ಟದ್ದನ್ನು ತಮ್ಮಲ್ಲಿಟ್ಟುಕೊಳ್ಳುವುದು. ಆದರೆ ಕೇರುವ ಮರದ ಅಥವಾ ಒಳ್ಳೆಯವರ ಸ್ವಭಾವವೇ ಬೇರೆ. ಇದಕ್ಕೆ ವಿರೋಧವಾಗಿರುವುದು.

೧೯೧. ಪ್ರಪಂಚದಲ್ಲಿ ಕೆಲವು ಬಗೆಯ ಮನುಷ್ಯರು ಇರುವರು. ಅವರಿಗೆ ಪ್ರಪಂಚದಲ್ಲಿ ಯಾವ ಜವಾಬ್ದಾರಿಯೂ ಇರುವುದಿಲ್ಲ. ಆದರೂ ಅವರು ಏನನ್ನಾದರೂ ಕಟ್ಟಿಕೊಂಡು ಅದರಿಂದ ಕಷ್ಟಕ್ಕೆ ಬೀಳುತ್ತಾರೆ. ಯಾರಿಗೆ ಕಾಪಾಡುವುದಕ್ಕೆ ಒಂದು ಸಂಸಾರವಿಲ್ಲವೋ, ನೋಡಿಕೊಳ್ಳುವುದಕ್ಕಾಗಿ ನೆಂಟರ ತಂಡವಿಲ್ಲವೋ ಆಗ ಅವರು ಒಂದು ನಾಯನ್ನೋ,

ಒಂದು ಕೋತಿಯನ್ನೋ, ಒಂದು ಜಿಂಕೆಯನ್ನೋ ಅಥವಾ ಯಾವುದಾದ ರೊಂದು ಹಕ್ಕಿಯನ್ನೋ, ಮುದ್ದಿಗೆ ಇರಿಸಿಕೊಂಡು ಕಾಪಾಡಿ ಅವು ಗಳಿಗೆ ಹಾಲುಕೊಟ್ಟು ಇದರ ಬದಲು ತಾವು ನೀರನ್ನು ಕುಡಿಯುವರು.

೧೯೨. ಆಗತಾನೆ ಹುಟ್ಟಿದ ಹಸುವಿನಕರು ಬಹಳ ಚಟುವಟಿಕೆ ಯಿಂದ ಸಂತೋಷವಾಗಿರುವುದು. ದಿನವೆಲ್ಲ ನೆಗೆಯುತ್ತ ಓಡಾಡುವುದು. ಮಧ್ಯೆ ಮಧ್ಯೆ ತನ್ನ ತಾಯಿಯಿಂದ ಹಾಲನ್ನು ಕುಡಿಯುವುದಕ್ಕೆ ಮಾತ್ರ ನಿಲ್ಲುವುದು. ಆದರೆ ಅದರ ಕೊರಳಿಗೆ ಹಗ್ಗವನ್ನು ಕಟ್ಟಿದಕೂಡಲೆ ಕೊರಗಿ, ಸಂತೋಷವಾಗಿರುವ ಬದಲು ಜಿಗುಪ್ಸೆಯಿಂದ ಕೂಡಿ ದುಃಖ ದಲ್ಲಿ ನರಳುತ್ತಾ ಬಡವಾಗುವುದು. ಹೀಗೆಯೇ ಹುಡುಗನಿಗೆ ಎಲ್ಲಿಯ ವರೆಗೂ ಪ್ರಪಂಚದೊಂದಿಗೆ ಸಂಬಂಧವಿರುವುದಿಲ್ಲವೋ ಅಲ್ಲಿಯವರೆಗೆ ಸಂತೋಷವಾಗಿರುವನು. ಆದರೆ ಮದುವೆಯೆನ್ನುವ ಭಾರಿಯ ಸೆರೆಮನೆಯಲ್ಲಿ ಯಾವಾಗ ಬಂಧಿತನಾಗಿ ಸಂಸಾರದ ಜವಾಬ್ದಾರಿಯನ್ನು ಹೊರಬೇಕಾಗುವುದೋ ಆಗ ಅವನ ಸಂತೋಷವೆಲ್ಲ ಮಾಯವಾಗು ವುದು. ಜೋಲು ಮುಖವನ್ನು ಹಾಕಿಕೊಂಡು ಜವಾಬ್ದಾರಿ ಮತ್ತು ಆತಂಕಗಳಿಂದ ಬಂಧಿತನಾಗುವನು. ಅವನ ಕೆನ್ನೆಯಮೇಲೆ ಹಿಂದೆ ಇದ್ದ ಆರೋಗ್ಯದ ಚಿಹ್ನೆಯಿಲ್ಲ. ಅವನ ಹಣೆಯಮೇಲೆ ಕ್ರಮೇಣ ಚಿಂತೆಯ ಗೆರೆಗಳು ಮೂಡುವುವು. ಬೆಳಗಿನ ತಂಗಾಳಿಯಂತೆ ಸ್ವತಂತ್ರ ನಾಗಿ, ಆಗತಾನೆ ಅರಳಿದ ಹೂವಿನಷ್ಟು ಹೊಸದಾಗಿ, ಹಿಮದ ಮಣಿಯಷ್ಟು ಶುಭ್ರವಾಗಿ, ಬದುಕಿರುವವರೆಗೂ ಯಾವನು ಹುಡುಗ ನಾಗಿರುವನೋ ಅವನೇ ಧನ್ಯ.

೧೯೩. ಒಬ್ಬ ಸಣ್ಣ ಹುಡುಗ ಅಥವಾ ಹುಡುಗಿಗೆ ದಾಂಪತ್ಯದ ಸುಖ ಹೇಗೆ ತಿಳಿಯದೋ ಹಾಗೆಯೇ ಪ್ರಾಪಂಚಿಕನಿಗೆ ದೇವರ ಧ್ಯಾನ ದಿಂದ ಬರುವ ಆನಂದ ತಿಳಿಯದು.

೧೯೪. ಸಂಸಾರಿಯು ಪ್ರಪಂಚದಲ್ಲಿ ಬೇಕಾದಷ್ಟು ಕಷ್ಟ ಮತ್ತು ದುಃಖಗಳಿಂದ ಪೆಟ್ಟು ತಿನ್ನುತ್ತಿದ್ದರೂ ಕಾಮಕಾಂಚನಗಳ ಮೇಲೆ ಮನಸ್ಸನ್ನು ಸುಲಭವಾಗಿ ನಿಗ್ರಹಿಸಿ ದೇವರ ಕಡೆಗೆ ತಿರುಗಿಸಲಾರ.

೧೯೫. ಧರ್ಮದ ವಾಸನೆ ಸ್ವಲ್ಪವಿದ್ದರೂ ಯಾರಿಗೆ ರುಚಿಸುವು ದಿಲ್ಲವೋ ಅಂಥವನೇ ಪ್ರಾಪಂಚಿಕನು. ಪಾರಾಯಣ, ದೇವರನಾಮ, ಸ್ತೋತ್ರಗಳನ್ನು ತಾನು ಮಾತ್ರ ಕೇಳದೆ ಇರುವುದಲ್ಲ; ಮತ್ತೊಬ್ಬ ನನ್ನೂ ಕೇಳದಂತೆ ಮಾಡುತ್ತಾನೆ. ಪ್ರಾರ್ಥನೆ ಧರ್ಮಸಮಾಜಗಳು

ಮತ್ತು ಸಾಧು ಸಂತರು ಇವರನ್ನು ಯಾರು ನಿರ್ಲಕ್ಷದಿಂದ ನೋಡು ವರೊ ಅವರು ನಿಜವಾಗಿಯೂ ಪ್ರಾಪಂಚಿಕರು.

೧೯೬. ಕೆಲವು ವೇಳೆ! ನಿಜವಾದ ಭಕ್ತರೊಂದಿಗೆ ಪ್ರಾಪಂಚಿಕ ಬುದ್ಧಿಯುಳ್ಳವರು ಬರುವುದನ್ನು ನೋಡುವೆನು. ಇಂತಹ ಪ್ರಾಪಂಚಿ ಕರಿಗೆ ಧಾರ್ಮಿಕ ಮಾತುಕಥೆಗಳಲ್ಲಿ ಸ್ವಲ್ಪವೂ ಆಸೆಯಿಲ್ಲ. ಉಳಿದವರು ದೇವರು ಮತ್ತು ಆಧ್ಯಾತ್ಮಿಕ ವಿಚಾರವಾಗಿ ಮಾತುಕಥ ಆಡುತ್ತಿದ್ದರೆ ಅವರಿಗೆ ಸಹನೆತಪ್ಪಿ ಚಂಚಲರಾಗುತ್ತಾರೆ. ಅವರಿಗೆ ಸುಮ್ಮನೆ ಕುಳಿತು ಕೊಳ್ಳುವುದಕ್ಕೆ ಕಷ್ಟವಾಗುವುದು. ಆದಕಾರಣವೇ ಅವರು ತಮ್ಮ ಸ್ನೇಹಿತರನ್ನು "ಯಾವಾಗ ಹೋಗುವೆ? ಎಷ್ಟು ಕಾಲ ಇರುವೆ?" ಎಂದು ಕೇಳುವರು. ಅವರ ಸ್ನೇಹಿತರು "ಸ್ವಲ್ಪ ತಾಳು ಈಗಲೇ ಬರುತ್ತೇನೆ" ಎನ್ನುವರು. ಈ ಮಾತನ್ನು ಕೇಳಿ ಬೇಜಾರಾಗಿ ಈ ಪ್ರಾಪಂಚಿಕರು "ಆಗಲಿ ನಿಮ್ಮ ಪಾಡಿಗೆ ನೀವು ಮಾತನಾಡಿ. ನಾವು ಹೋಗಿ ದೋಣಿಯಲ್ಲಿ ನಿಮಗಾಗಿ ಕಾಯುವೆವು" (ಕಲ್ಕತ್ತೆಗೆ ಹಿಂತಿರುಗಿ ಹೋಗುವ ದೋಣಿಯಲ್ಲಿ) ಎನ್ನುವರು.

೧೯೭. ಹಕ್ಕಿಯ ಹಿಕ್ಕೆಯಲ್ಲಿ ಅದು ತಿಂದ ದವಸಗಳೆಲ್ಲಾ ಇರುವಂತೆ, ಒಬ್ಬ ಪ್ರಾಪಂಚಿಕನೊಂದಿಗೆ ಮಾತನಾಡುವಾಗ ಅವನ ಮನಸ್ಸು ಎಲ್ಲಾ ವಿಧದ ಆಸೆ ಆಲೋಚನೆಗಳಿಂದ ಕೂಡಿದೆ ಎಂಬು ದನ್ನು ನೋಡಬಹುದು.

೧೯೮. ಪಾಪಿಯ ಮನಸ್ಸು ಡೊಂಕು ಕೂದಲಿನಂತೆ. ನೀವು ಎಷ್ಟು ಪ್ರಯತ್ನಪಟ್ಟರೂ ಅದನ್ನು ನೇರವಾಗಿ ಮಾಡಲಾಗುವುದಿಲ್ಲ. ಇದರಂತೆಯೇ ದುಷ್ಟನ ಮನಸ್ಸನ್ನು ಸುಲಭವಾಗಿ ನೇರಮಾಡ ಲಾಗುವುದಿಲ್ಲ.

೧೯೯. ಸನ್ಯಾಸಿಯ ಕಮಂಡಲು ನಾಲ್ಕು ತೀರ್ಥಯಾತ್ರೆ ಗಳನ್ನು ಮಾಡಿರಬಹುದು. ಆದರೂ ಆದರೂ ಅದು ಹಿಂದಿನಷ್ಟೆ ಕಹಿಯಾಗಿರುವುದು. ಪ್ರಾಪಂಚಿಕರ ಸ್ವಭಾವವೂ ಹೀಗೆಯೇ.

೨೦೦. ಹಸಿಯ ಜೇಡಿಮಣ್ಣಿನಿಂದ ಕುಂಬಾರನು ಹಲವು ಮಡಿಕೆಗಳನ್ನು ಮಾಡುತ್ತಾನೆ. ಆದರೆ ಒಮ್ಮೆ ಸುಟ್ಟಮೇಲೆ ಅದರಿಂದ ಏನನ್ನೂ ಮಾಡಲಾಗುವುದಿಲ್ಲ. ಇದರಂತೆಯೇ ವಿಷಯದಾಸೆಯಲ್ಲಿ ಬೆಂದ ಮನಸ್ಸಿನಮೇಲೆ ಮತ್ತಾವ ಆಲೋಚನೆಯೂ ತನ್ನ ಪ್ರಭಾವ

ವನ್ನು ಬೀರಲಾರದು. ಅದಕ್ಕೆ ಮತ್ತೊಂದು ಸುಂದರವಾದ ರೂಪನ್ನು ಕೊಡಲು ಸಾಧ್ಯವಿಲ್ಲ.

೨೦೧. ಹೇಗೆ ನೀರು ಕಲ್ಲಿನ ಒಳಗೆ ಇಳಿಯಲಾರದೊ ಹಾಗೆಯೇ ಧಾರ್ಮಿಕ ಉಪದೇಶಗಳೊಂದೂ ಬದ್ಧಜೀವಿಯ ಮೇಲೆ ಪರಿಣಾಮವನ್ನು ಉಂಟುಮಾಡಲಾರದು.

೨೦೨. ಕಬ್ಬಿಣದ ಮೊಳೆಯನ್ನು ಕಲ್ಲಿನೊಳಕ್ಕೆ ಹೊಡೆಯಲಾರೆವು; ಆದರೆ ಮಣ್ಣಿನೊಳಕ್ಕೆ ಸುಲಭವಾಗಿ ಹೊಡೆಯಬಹುದು. ಹಾಗೆಯೇ ಧರ್ಮಾತ್ಮರ ಉಪದೇಶಗಳು ಬದ್ಧಜನಗಳಮೇಲೆ ಏನನ್ನೂ ಮಾಡಲಾರವು. ಆದರೆ ಶ್ರದ್ಧೆಯಿಂದ ಕೂಡಿದ ಭಕ್ತನ ಹೃದಯದ ಆಳಕ್ಕೆ ಹೋಗುವುವು

೨೦೩. ಹಸಿಯ ಜೇಡಿಯುಮಣ್ಣು ಸುಲಭವಾಗಿ ಯಾವ ಆಕಾರವನ್ನಾದರೂ ತಾಳಬಲ್ಲದು. ಆದರೆ ಗಟ್ಟಿಯ ಕಲ್ಲಿಗೆ ಸಾಧ್ಯವಿಲ್ಲ. ಇದರಂತೆಯೇ ಭಕ್ತರ ಹೃದಯದಮೇಲೆ ಧಾರ್ಮಿಕ ಉಪದೇಶಗಳು ತಮ್ಮ ಪ್ರಭಾವವನ್ನು ಬೀರುವುವು. ಆದರೆ ಬದ್ಧ ಜೀವಿಯಮೇಲೆ ಸಾಧ್ಯವಾಗುವುದಿಲ್ಲ.

೨೦೪. ಸೇತುವೆಯ ಕೆಳಗೆ ಹೇಗೆ ನೀರು ಒಂದು ಕಡೆಯಿಂದ ಮತ್ತೊಂದು ಕಡೆಗೆ ಪ್ರವೇಶಿಸಿ ಹರಿದುಹೋಗುವುದೋ ಅದರಂತೆಯೆ ಪ್ರಾಪಂಚಿಕರಿಗೆ ಬುದ್ಧಿವಾದವೂ ಸಹ ಒಂದು ಕಿವಿಯಿಂದ ಒಳಗೆ ಪ್ರವೇಶಿಸಿ ಯಾವ ಪರಿಣಾಮವನ್ನೂ ಉಂಟುಮಾಡದೆ ಮತ್ತೊಂದು ಕಿವಿಯಿಂದ ಹೊರಗೆ ಹೊರಟುಹೋಗುವುದು.

೨೦೫. ಪ್ರಾಪಂಚಿಕನ ಸ್ವಭಾವವೆಂತಹುದು? ಆಟವಾಡುವವನ ಹತ್ತಿರವಿರುವ ಮುಂಗಸಿಯ ಹಾಗೆ. ಮುಂಗಸಿಯವನು ಗೋಡೆಯ ಮೇಲೆ ಎತ್ತರದಲ್ಲಿ ಮುಂಗಸಿಗೆ ಗೂಡಿನಂತೆ ಒಂದು ಮಡಿಕೆಯನ್ನಿಡುವನು. ದಾರದ ಒಂದು ತುದಿಯನ್ನು ಮುಂಗಸಿಯ ಕತ್ತಿಗೂ ಮತ್ತೊಂದು ತುದಿಯನ್ನು ಒಂದು ಭಾರವಾದ ವಸ್ತುವಿಗೂ ಕಟ್ಟಿಬಿಡುವನು. ಗೂಡಿನಿಂದ ಹೊರಗೆ ಬರುವಾಗ ಮುಂಗಸಿಯು ಗೋಡೆಯಿಂದ ಇಳಿದು ಅಲ್ಲಿ ಇಲ್ಲಿ ಸಂಚಾರಮಾಡುವುದು. ಅಂಜಿಕೆಯಾದಾಗ ಪುನಃ ಮಡಕೆಯಲ್ಲಿ ಅವಿತುಕೊಳ್ಳಲು ಹೋಗುವುದು. ಆದರೆ ಪಾಪ ಅದು ಅಲ್ಲಿ ಬಹಳಹೊತ್ತು ಇರಲಾರದು. ದಾರದ ಮತ್ತೊಂದು ಕಡೆ

ಕಟ್ಟಿರುವ ಭಾರ ಇದನ್ನು ಕೆಳಗೆ ಎಳೆಯುತ್ತಿರುವುದು. ಇದರಂತೆಯೆ ಪ್ರಾಪಂಚಿಕನು ಕೂಡ ಕೆಲವುವೇಳೆ ದುಃಖ ನಷ್ಟದ ಪೆಟ್ಟಿಗೆ ಸಿಕ್ಕಿರುವಾಗ ಅವನನ್ನು ದೇವರಿಗೆ ಶರಣಾಗತನಾಗುವಂತೆ ಮಾಡಬಹುದು. ಆದರೆ ಹಲವು ಪ್ರಲೋಭನೆಗಳಿಂದ ಕೂಡಿದ ಸಂಸಾರದ ಭಾರ ಪ್ರಪಂಚದಕಡೆಗೆ ಬೇಗ ಸೆಳೆಯುವುದು.

೨೦೬. ಗದ್ದೆಗಳಲ್ಲಿಟ್ಟಿರುವ ಗಳುವಿನ ಮೂಲಕ ನೀರು ಬೆಳಗುತ್ತ ಹೋಗುತ್ತಿರುವುದನ್ನು ನೋಡಿ ಸಂತೋಷದಿಂದ ಮರಿ ಮೀನುಗಳು ಬಲೆಯನ್ನು ಪ್ರವೇಶಿಸುವುವು. ಆದರೆ ಒಮ್ಮೆ ಪ್ರವೇಶಿಸಿದರೆ ಪುನಃ ಹೊರಗೆ ಬರಲಾರವು. ಇದರಂತೆಯೇ ಮೋಸದ ಕಾಂತಿಗೆ ಬೆರಗಾಗಿ, ಹರಡಿರುವ ಪ್ರಪಂಚದ ಬಲೆಗೆ ಬೀಳುವರು. ಮರಿಮೀನುಗಳಂತೆ ಅವರು ಅದರಲ್ಲಿ ಒಂದೇಸಲ ಬೀಳುವರು.

೨೦೭. ಬದ್ಧಜೀವಿಗಳು ಎಂದಿಗೂ ಜಾಗ್ರತರಾಗುವುದಿಲ್ಲ. ದುಃಖ ಅವರನ್ನು ಪೀಡಿಸುವುದು. ಕಪಟಿಗಳು ಅವರನ್ನು ಹೇಗೆ ವಂಚಿಸುವರು ? ಅಪಾಯಗಳು ಹೇಗೆ ಅವರನ್ನು ಅಂಜಿಸುವುವು ? ಆದರೂ ಅವರು ಜಾಗ್ರತರಾಗುವುದಿಲ್ಲ. ಒಂಟೆಗೆ ಮುಳ್ಳಿನ ಪೊದೆ ತಿನ್ನುವಾಗ, ಬಾಯಿಂದ ರಕ್ತ ಸೋರಿದರೂ, ಅದೇ ಅದಕ್ಕೆ ಇಷ್ಟವಾದಂತೆ ಪ್ರಪಂಚದಲ್ಲಿ ಜೀವಿಸುವವನು ಅಷ್ಟು ಕಷ್ಟನಷ್ಟವನ್ನು ಅನುಭವಿಸುವನು. ಆದರೆ ಸ್ವಲ್ಪದಿನದಲ್ಲೇ ಎಲ್ಲವನ್ನೂ ಅವನು ಮರೆಯುವನು. ಅವನ ಹೆಂಡತಿ ಕಾಲವಾದಳು, ಅಥವಾ ಇನ್ನಾರನ್ನಾದರೂ ಪ್ರೀತಿಸಿದಳು ಎಂದಿಟ್ಟುಕೊಳ್ಳೋಣ. ನೋಡಿ ಅವನು ಆಗಲೇ ಪುನಃ ಮದುವೆಯಾಗುತ್ತಾನೆ. ಬಹುಶಃ ಅವನ ಮಗು ಸತ್ತುಹೋಗಿದೆ. ಅವನು ಅಳುತ್ತಾನೆ. ಆದರೆ ಇನ್ನು ಸ್ವಲ್ಪದಿನದಲ್ಲೇ ಇದೆಲ್ಲಾ ಮನಸ್ಸಿನಿಂದ ಮಾಯವಾಗಿದೆ. ದುಃಖದಿಂದ ಕೊರಗಿದ ಮಗುವಿನ ತಾಯಿಯಾದರೋ ಆಗಲೇ ಸ್ನಾನ, ಸೀರೆ, ಒಡವೆ ಮುಂತಾದವುಗಳನ್ನೂ ತೊಟ್ಟುಕೊಳ್ಳುವುದರಲ್ಲಿ ನಿರತಳಾಗಿರುವಳು. ಮಗಳ ಮದುವೆಯಿಂದ ತಂದೆತಾಯಿಗಳು ದರಿದ್ರರಾಗಿಹೋಗುವರು. ಆದರೂ ಪ್ರತಿವರ್ಷವೂ ಅವರಿಗೆ ಮಕ್ಕಳು ಹುಟ್ಟುವುವು. ವ್ಯಾಜ್ಯದಿಂದ ಮನೆ ಹಾಳಾಗಿದ್ದರೂ ಪುನಃ ಕೋರ್ಟು ಕಛೇರಿಗೆ ಹೋಗುವರು. ಇರುವ ಮಕ್ಕಳನ್ನು ಕಾಪಾಡುವುದಕ್ಕೆ ಗತಿಯಿಲ್ಲ. ಆದರೂ ಪ್ರತಿವರ್ಷವೂ ಮಕ್ಕಳನ್ನು ಹೆರುವರು.

ಕೆಲವುವೇಳೆ ಸಂಸಾರಿಯು ದೊಡ್ಡ ಕಪ್ಪೆಯನ್ನು ಹಿಡಿದ ಹಾವಿನಂತೆ. ಅದನ್ನು ನುಂಗಲೂ ಆರ ಹೊರಗೆ ಎಸೆಯಲೂ ಆರ. ಪ್ರಪಂಚದಲ್ಲಿ ಏನೂ ಇಲ್ಲ. ಅದೆಲ್ಲಾ ಬರೀ ಸಿಪ್ಪೆ ಮತ್ತು ಬೀಜದಿಂದ ಕೂಡಿದ ಅಮ್ರದ ಹಣ್ಣಿನಂತೆ ಎಂದು ತಿಳಿದಿರಬಹುದು. ಆದರೂ ಅವನು ಪ್ರಪಂಚವನ್ನು ಮರೆತು ದೇವರ ಮೇಲೆ ಮನಸ್ಸನ್ನು ಇಡಲಾರ. ಅವನನ್ನು ಸಂಸಾರದ ವಾತಾವರಣದಿಂದ ತೆಗೆದು ಒಂದು ಉತ್ತಮ ಸ್ಥಳದಲ್ಲಿ ಇಟ್ಟರೆ ಧೈರ್ಯಗೆಟ್ಟು, ಸಗಣಿಯಲ್ಲಿ ಜೀವಿಸುವ ಹುಳುವನ್ನು ಅನ್ನದ ಜೊತೆಯಲ್ಲಿಟ್ಟರೆ ಸಾಯುವಂತೆ ಕೊರಗಿ ನರಳುತ್ತಾನೆ.

೨೦೮. ಒಂದುಸಲ ಮೊಸರಿಟ್ಟ ಮಡಕೆಯಲ್ಲಿ ಮತ್ತೊಮ್ಮೆ ಯಾರೂ ಹಾಲನ್ನಿಡುವುದಿಲ್ಲ. ಏಕೆಂದರೆ ಅದೂ ಕೂಡ ಮೊಸರಾಗಿ ಬಿಡಬಹುದು. ಆ ಮಡಕೆಯಲ್ಲಿ ಧೈರ್ಯವಾಗಿ ಅಡಿಗೆ ಮಾಡಲೂ ಸಾಧ್ಯವಿಲ್ಲ. ಅದು ಒಲೆಯಮೇಲೆ ಇರುವಾಗ ಸೀಳಬಹುದು. ಆದ ಕಾರಣ ಅದು ಇನ್ನಾವ ಉಪಯೋಗಕ್ಕೂ ಬರುವುದಿಲ್ಲ. ಆದರಂತೆಯೇ ಅನುಭವವುಳ್ಳ ಒಳ್ಳೆಯ ಗುರು ಪ್ರಾಪಂಚಿಕ ಮನುಷ್ಯನಿಗೆ ಅತ್ಯುತ್ಕೃಷ್ಟ ವಾದಂತಹ ಸೂಕ್ಷ್ಮ ಉಪದೇಶಗಳನ್ನು ಹೇಳುವುದಿಲ್ಲ. ಏಕೆಂದರೆ ಅವನು ಅದನ್ನು ತಪ್ಪು ತಿಳಿದುಕೊಂಡು ತನ್ನ ಉಪಯೋಗಕ್ಕೆ ತಿರುಗಿಸಿ ಕೊಳ್ಳುವನು ಎಂಬುದು ಗುರುವಿಗೆ ಗೊತ್ತಿದೆ. ಅಥವಾ ಅವನಿಗೆ ಶ್ರಮಸಾಧ್ಯವಾದಂತಹ ಕೆಲಸವನ್ನು ಮಾಡು ಎಂದು ಹೇಳುವುದೂ ಇಲ್ಲ. ಇದರಿಂದ ಗುರುಗಳು ತನ್ನ ಹತ್ತಿರ ಬಹಳ ಸದರ ತೆಗೆದುಕೊಂಡರು ಎಂದು ಅವನು ತಿಳಿದುಕೊಳ್ಳುವನು.

೨೦೯. ಪ್ರಯತ್ನಪಟ್ಟರೂಕೂಡ ಮನುಷ್ಯನು ಪ್ರಪಂಚವನ್ನು ತ್ಯಜಿಸಲಾರ. ಈ ಜನ್ಮದಲ್ಲೂ ಫಲಬಿಡುತ್ತಿರುವ ಹಿಂದಿನ ಕರ್ಮಗಳು ಮತ್ತು ಸಂಸ್ಕಾರಗಳೂ ಇದಕ್ಕೆ ಅಡ್ಡಿಯನ್ನು ತರುತ್ತವೆ. ಹಿಂದೆ ಒಂದು ದಿನ ಯೋಗಿಯೊಬ್ಬನು, ದೊರೆಗೆ ತನ್ನ ಹತ್ತಿರ ಕುಳಿತು ದೇವರ ಧ್ಯಾನ ಮಾಡುವಂತೆ ಹೇಳಿದನು. ಅವಕ್ಕೆ ದೊರೆ ಹೀಗೆ ಹೇಳಿದನು : " ಇಲ್ಲ ಸ್ವಾಮಿ ! ಅದು ನನ್ನಿಂದ ಸಾಧ್ಯವಿಲ್ಲ. ನಾನೇನೊ ನಿಮ್ಮ ಹತ್ತಿರ ಇರ ಬಹುದು. ಆದರೂ ಪ್ರಪಂಚವನ್ನು ಅನುಭವಿಸಬೇಕೆಂಬ ಆಸೆ ನನ್ನ ಮನಸ್ಸಿನಲ್ಲಿರುವುದು. ನಾನು ಇನ್ನೂ ಅನುಭವಿಸಬೇಕಾಗಿರುವುದರಿಂದ ಕಾಡಿನಮಧ್ಯೆಯಿದ್ದರೂ ಅಲ್ಲಿಯೂ ಕೂಡ ಒಂದು ರಾಜ್ಯವೇಳಬಹುದು."

## ಪ್ರಾಪಂಚಿಕರ ಚಂಚಲ ಭಕ್ತಿ

೨೧೦. ಪ್ರಾಪಂಚಿಕರು ಅನೇಕ ದಾನಧರ್ಮ ಕೆಲಸಗಳನ್ನು ಪ್ರತಿಫಲದ ದೃಷ್ಟಿಯಿಂದ ಮಾಡಬಹುದು. ಆದರೆ ದುರದೃಷ್ಟದಿಂದ ದುಃಖ, ಬಡತನಗಳು ಬಂದಾಗ ಇವರ ದಾನಧರ್ಮಗಳು ಇವರನ್ನು ಕೈಬಿಡುವುವು. ಅವರು ದಿನವೆಲ್ಲ "ರಾಧಾಕೃಷ್ಣ ರಾಧಾಕೃಷ್ಣ" ಎಂದು ಅರಚಿಕೊಳ್ಳುವ ಅರಗಿಳಿಯಂತೆ. ಆದರೆ ಬೆಕ್ಕಿನ ಬಾಯಿಗೆ ಸಿಕ್ಕಿದಾಗ ದೇವರ ಹೆಸರನ್ನು ಮರೆತು "ಕಾಂಗ್" "ಕಾಂಗ್" ಎಂದು ಅರಚಿಕೊಳ್ಳುವುದು. ಅದಕ್ಕೋಸ್ಕರವೇ ಅಂಥವರಿಗೆ ಧರ್ಮಬೋಧನೆಯನ್ನು ಮಾಡಿ ಪ್ರಯೋಜನವಿಲ್ಲವೆಂದು ಹೇಳುತ್ತೇನೆ. ನೀವು ಅವರಿಗೆ ಎಷ್ಟು ಬುದ್ಧಿ ಹೇಳಿದರೂ ಹಿಂದಿನಂತೆ ಸಂಸಾರದಲ್ಲಿ ಬಿದ್ದು ನರಳುವರು.

೨೧೧. ಸ್ಪ್ರಿಂಗ್ ಕುರ್ಚಿಯಮೇಲೆ ಒಬ್ಬನು ಕೂತರೆ ಅದು ತಗ್ಗುವುದು. ಆದರೆ ಮೇಲಿನ ಒತ್ತಡ ನಿಂತೊಡನೆಯೇ ಪುನಃ ಮೇಲೆ ಏಳುವುದು. ಪ್ರಾಪಂಚಿಕರ ರೀತಿಯೂ ಹೀಗೆಯೇ. ಧಾರ್ಮಿಕ ವಿಷಯಗಳನ್ನು ಕೇಳುವಾಗ ಒಳ್ಳೆಯ ವಿಷಯಗಳೇ ಅವರ ಮನಸ್ಸಿನಲ್ಲಿರುವುವು. ಆದರೆ ನಿತ್ಯಜೀವನದ ಕೆಲಸಕ್ಕೆ ಕೈಹಾಕಿದಾಗ ಒಳ್ಳೆಯ ಪರಿಶುದ್ಧವಾದ ಭಾವನೆಗಳನ್ನೆಲ್ಲಾ ಮರೆತು ಹಿಂದಿನಂತೆಯೇ ದೋಷದಿಂದ ಕೂಡಿರುವುದು.

೨೧೨. ಕುಲುಮೆಯಲ್ಲಿರುವತನಕ ಕಬ್ಬಿಣ ಕಾದು ಕೆಂಪಗೆ ಇರುತ್ತದೆ. ಅದರಿಂದ ತೆಗೆದ ತಕ್ಷಣವೇ ಕಪ್ಪಾಗುತ್ತದೆ. ಇದರಂತೆಯೇ ಪ್ರಾಪಂಚಿಕರು ಸಾಧುಸಂತರ ಸಂಗದಲ್ಲಿ ಅಥವಾ ದೇವಾಲಯದಲ್ಲಿರುವ ತನಕ ಒಳ್ಳೆಯ ಭಾವಗಳಿಂದ ಕೂಡಿರುವರು. ಈ ಸಂಗದಿಂದ ದೂರವಾದೊಡನೆಯೇ ಭಕ್ತಿಯ ಪ್ರವಾಹವೂ ಇಂಗಿಹೋಗುವುದು.

೨೧೩. ಹೇಗೆ ನೊಣವು ಈಗ ಗಾಯದಮೇಲೆ ಕುಳಿತು, ಮರುಕ್ಷಣ ದೇವರಪ್ರಸಾದದ ಮೇಲೆ ಕುಳಿತುಕೊಳ್ಳುವುದೋ ಹಾಗೆಯೇ ಪ್ರಾಪಂಚಿಕರು ಒಂದುಸಲ ಧಾರ್ಮಿಕ ವಿಷಯಗಳನ್ನು ಮಾತನಾಡುವರು. ಮರುಕ್ಷಣವೇ ಕಾಮ ಕಾಂಚನಗಳ ಮಾತಿನಲ್ಲಿ ತಮ್ಮನ್ನೇ ಮರೆತುಬಿಡುವರು.

೨೧೪. ಪ್ರಾಪಂಚಿಕರ ಮನಸ್ಸು ಗೊಬ್ಬರದ ಗುಂಡಿಯಲ್ಲಿರುವ ಹುಳುವಿನಂತೆ. ಆದಕ್ಕೆ ಯಾವಾಗಲೂ ಅಲ್ಲಿರುವುದಕ್ಕೆ ಆಸೆ. ಯಾರಾ

ದರೂ ಅದನ್ನು ಅಕಸ್ಮಾತ್ ಅಲ್ಲಿಂದ ತೆಗೆದು ಒಂದು ಕಮಲದ ಮೇಲಿಟ್ಟರೆ ಅದು ಹೂವಿನ ಪರಿಮಳದಿಂದ ಬೇಗ ಸತ್ತುಹೋಗುವುದು. ಇದರಂತೆಯೇ ಪ್ರಾಪಂಚಿಕನು ವಿಷಯವಸ್ತುಗಳ ಆಸೆ ಮತ್ತು ಆಲೋಚನೆಗಳ ವಾತಾವರಣದಿಂದ ಹೊರಗೆಬಂದು ಕ್ಷಣವಾದರೂ ಜೀವಿಸಲಾರ.

೨೧೫. ಪ್ರಾಪಂಚಿಕರಲ್ಲಿ ದೇವರ ಭಾವನೆಯೆನ್ನುವುದು ಹೇಗಿದೆ ಗೊತ್ತೆ? ಹುಡುಗರು ಆಟವಾಡುವಾಗ ತಮ್ಮಲ್ಲಿ ಮಾತನಾಡಿಕೊಳ್ಳುವಂತೆ: ಕೆಲವು ವೇಳೆ ಅವರು ' ದೇವರ ಆಣೆಗೂ ಹೇಳುತ್ತೇನೆ ' ಎನ್ನುವರು. ಇವರು ಇದನ್ನು ತಮ್ಮ ಹಿರಿಯರಿಂದ ಕಲಿತುಕೊಳ್ಳುವರು. ಅಥವಾ ಬಹಳ ಹೆಚ್ಚು ಎಂದರೆ, ಬಾಬು ಸುಮ್ಮನೆ ಸಿಳ್ಳುಹಾಕಿಕೊಂಡು ಕೈಯಲ್ಲಿ ಬೆತ್ತ ತಿರುಗಿಸುತ್ತ ಶೋಕಿ ಮಾಡಿಕೊಂಡು ಒಂದು ತೋಟಕ್ಕೆ ಹೋಗಿ, ಗಿಡದಿಂದ ಒಂದು ಹೂವನ್ನು ಕಿತ್ತು "ದೇವರು ಎಂತಹ ಸುಂದರವಾದ ಹೂವನ್ನು ಮಾಡಿರುವನು" ಎನ್ನುವಂತೆ. ಕೆಂಪಗೆ ಕಾದ ಕಾವಲಿಯಮೇಲೆ ಒಂದುತೊಟ್ಟು ನೀರುಹಾಕಿದಂತೆ ಕ್ಷಣಕಾಲದ ಆಲೋಚನೆ ಮಾತ್ರ ಇದು. ಅದಕ್ಕೇ ನೀವು ದೇವರಿಗಾಗಿ ಕಾತುರರಾಗಬೇಕು ಎನ್ನುತ್ತೇನೆ. ಸಾಗರದ ಆಳಕ್ಕೆ ನೀವು ಮುಳುಗಬೇಕು.

## ಪ್ರಾಪಂಚಿಕರು ಮತ್ತು ಆಧ್ಯಾತ್ಮಿಕ ಸಾಧನೆ

೨೧೬. ಒಬ್ಬ ರೈತನು ದಿನವೆಲ್ಲಾ ಕಬ್ಬಿನತೋಟಕ್ಕೆ ನೀರನ್ನು ಹಾಯಿಸುತ್ತಿದ್ದನು. ತನ್ನ ಕೆಲಸವೆಲ್ಲಾ ಆದಮೇಲೆ ಬಂದು ನೋಡಲಾಗಿ ಒಂದು ತೊಟ್ಟು ನೀರು ಕೂಡ ಗದ್ದೆಗೆ ಪ್ರವೇಶಿಸಿರಲಿಲ್ಲ. ನೀರೆಲ್ಲಾ ದೊಡ್ಡದೊಡ್ಡ ಇಲಿಯ ಬಿಲದ ಮೂಲಕವಾಗಿ ಇಂಗಿ ಹೋಗಿತ್ತು. ಗುಪ್ತವಾಗಿ ವಿಷಯದಾಸೆ ಮತ್ತು ಆಕಾಂಕ್ಷೆಗಳನ್ನು ಮನಸ್ಸಿನಲ್ಲಿಟ್ಟುಕೊಂಡು ಹೊರಗಡೆ ದೇವರನ್ನು ಪ್ರಾರ್ಥಿಸುವ ಭಕ್ತನ ಸ್ಥಿತಿಯೂ ಹೀಗೆಯೇ. ಅವನು ಪ್ರತಿದಿನವೂ ಪ್ರಾರ್ಥಿಸಬಹುದು. ಆದರೂ ಅವನು ಸ್ವಲ್ಪವೂ ಮುಂದುವರಿಯುವುದಿಲ್ಲ. ಏಕೆಂದರೆ ಅವನ ಭಕ್ತಿಯೆಲ್ಲ ಆಸೆಯ ಬಿಲದಮೂಲಕ ವ್ಯರ್ಥವಾಗುವುದು. ಎಷ್ಟುದಿನ ಪ್ರಾರ್ಥನೆ ಮಾಡಿದರೂ ಕೊನೆಗೆ ಹಿಂದಿದ್ದಂತೆಯೇ ಇರುವನು.

೨೧೭. ಧ್ಯಾನಮಾಡುವಾಗ ಮನಸ್ಸು ಏಕೆ ಚಂಚಲವಾಗುವುದು? ಮಿಠಾಯಿ ಅಂಗಡಿಯಲ್ಲಿ ಕೆಲವು ವೇಳೆ ನೊಣಗಳು ಅದರ

ಮೇಲೆ ಕುಳಿತಿರುವುವು. ಪಕ್ಕದಲ್ಲೇ ಜಾಡಮಾಲಿಯು ಹೇಸಿಗೆ ಬುಟ್ಟಿಯನ್ನು ತೆಗೆದುಕೊಂಡು ಹೋಗುತ್ತಿರುವಾಗ ತಕ್ಷಣವೇ ಹಾರಿಹೋಗಿ ಅದರ ಮೇಲೆ ಕುಳಿತುಕೊಳ್ಳುವುವು. ಆದರೆ ಮಕರಂದವನ್ನು ಹುಡುಕುವ ಜೇನು ಹುಳುವಾದರೋ, ಯಾವಾಗಲೂ ಹೂವಿನ ಮೇಲೆ ಮಾತ್ರ ಕುಳಿತುಕೊಳ್ಳುವುದು. ಎಂದಿಗೂ ಕಸದಮೇಲೆ ಕುಳಿತುಕೊಳ್ಳುವುದಿಲ್ಲ. ನೊಣದಂತೆ ಪ್ರಾಪಂಚಿಕರಿಗೆ ಕೆಲವು ವೇಳೆ ಪರಮಾತ್ಮನ ಭಕ್ತಿಯ ಸವಿ ಸಿಕ್ಕುವುದು. ಆದರೆ ವಿಷಯ ಸುಖದಮೇಲೆ ಅವರಿಗೆ ಸ್ವಭಾವತಃ ಇರುವ ಆಸೆ, ಅವರನ್ನು ಬೇಗ ವಿಷಯ ಸುಖದ ಕಸದ ಬುಟ್ಟಿಯೊಳಕ್ಕೆ ಕರೆದುಕೊಂಡು ಹೋಗುವುದು. ಆದರೆ ದೊಡ್ಡ ಪರಮಹಂಸರುಗಳಾದರೋ ಯಾವಾಗಲೂ ದೇವತಾಧ್ಯಾನ ಮತ್ತು ಭಜನೆಯಲ್ಲಿ ನಿರತರಾಗಿರುವರು.

೨೧೮. ದೆವ್ವ ಮೆಟ್ಟಿಕೊಂಡವರ ಮೇಲೆ ಮಂತ್ರದ ಸಾಸುವೆಕಾಳನ್ನು ಹಾಕಿ ದೆವ್ವ ಬಿಡಿಸುವನು. ದೆವ್ವ ಸಾಸುವೆಕಾಳನ್ನು ಮೆಟ್ಟಿಕೊಂಡಿದ್ದರೆ ಇತರರ ಮೇಲಿರುವ ದೆವ್ವವನ್ನು ಬಿಡಿಸುವುದಕ್ಕೆ ಹೇಗೆ ಉಪಯೋಗವಾಗುವುದು? ನೀನು ದೇವರನ್ನು ಧ್ಯಾನಮಾಡುವ ಮನಸ್ಸೇ ಪ್ರಪಂಚದ ಆಸೆಗಳಿಂದ ಕೂಡಿದ್ದರೆ, ಇಂತಹ ಕೆಟ್ಟ ಯಂತ್ರದಿಂದ ನೀನು ಹೇಗೆ ಸಾಧನೆಮಾಡಬಲ್ಲೆ.

೨೧೯. ಒದ್ದೆಯಾದ ದೀಪದ ಕಡ್ಡಿಯನ್ನು ಎಷ್ಟು ಗೀರಿದರೂ ಅದು ಉರಿಯುವುದಿಲ್ಲ. ಬರೀ ಹೊಗೆ ಬರುವುದು. ಒಣಗಿದ ದೀಪದ ಕಡ್ಡಿಯನ್ನು ಸ್ವಲ್ಪ ಗೀರಿದ ತಕ್ಷಣವೇ ಹತ್ತಿಕೊಳ್ಳುವುದು. ನಿಜವಾದ ಭಕ್ತನಹೃದಯ ಒಣಗಿದ ದೀಪದ ಕಡ್ಡಿಯಂತೆ. ಒಮ್ಮೆ ದೇವರ ಹೆಸರನ್ನು ಕೇಳಿದರೆ ಸಾಕು, ಅವನ ಹೃದಯದಲ್ಲಿ ಭಕ್ತಿಯ ಜ್ಯೋತಿಯನ್ನು ಹಚ್ಚಿಸುವುದು. ಕಾಮ ಮತ್ತು ಕಾಂಚನಗಳಲ್ಲಿ ನಿರತರಾದ ಪ್ರಾಪಂಚಿಕರ ಮನಸ್ಸು ಒದ್ದೆಯಾದ ದೀಪದ ಕಡ್ಡಿಯಂತೆ. ಎಷ್ಟು ಗೀರಿದರೂ ಹತ್ತಿಕೊಳ್ಳುವುದಿಲ್ಲ. ಎಷ್ಟು ವೇಳೆ ಅವನಿಗೆ ದೇವರ ವಿಷಯವಾಗಿ ಬೋಧನೆ ಮಾಡಿದರೂ ಪರಮಾತ್ಮನ ಪ್ರೇಮದ ಜ್ಯೋತಿಯನ್ನು ಹತ್ತಿಸಲಾಗುವುದಿಲ್ಲ.

೨೨೦. ಪ್ರಾಪಂಚಿಕನಿಗೆ ಜ್ಞಾನಿಗೆ ಇರುವಷ್ಟೇ ಬುದ್ಧಿ ಮತ್ತು ಜ್ಞಾನ ಇರಬಹುದು. ಯೋಗಿಯಷ್ಟೆ ಇವನು ಕಷ್ಟಗಳನ್ನು ಪಡಬಹುದು. ತಪಸ್ವಿಯಷ್ಟೆ ತ್ಯಾಗ ಮಾಡಬಹುದು. ಇವನ ಶಕ್ತಿಯೆಲ್ಲ

ತಪ್ಪು ದಾರಿಗೆ ಹೋಗಿರುವುದರಿಂದ ಇವನ ಶ್ರಮವೆಲ್ಲಾ ವೃಥಾ ವ್ಯರ್ಥ. ಇವನು ಇದನ್ನೆಲ್ಲ ಕೇವಲ ಪ್ರಪಂಚದ ಕೀರ್ತಿ ಮತ್ತು ಕಾಂಚನಗಳ ಆಸೆಗೆ ಮಾಡುತ್ತಾನೆಯೇ ಹೊರತು, ದೇವರಿಗೋಸ್ಕರವಾಗಿ ಅಲ್ಲ.

೨೨೧. ಕೊಳೆಯಾದ ಕನ್ನಡಿ ಸೂರ್ಯ ರಶ್ಮಿಯನ್ನು ಎಂದಿಗೂ ಪ್ರತಿಬಿಂಬಿಸುವುದಿಲ್ಲ. ಇದರಂತೆಯೇ ಯಾರ ಹೃದಯ ಕಶ್ಮಲದಿಂದ ಕೂಡಿ, ಮಾಯೆಯ ಬಲೆಗೆ ಬಿದ್ದಿರುವದೋ ಅವರೆಂದಿಗೂ ಭಗವಂತನ ಮಹಿಮೆಯನ್ನು ತಿಳಿಯಲಾರರು. ಆದರೆ ಯಾರ ಹೃದಯ ಪರಿಶುದ್ಧ ವಾಗಿರುವುದೋ ಅವರು ಶುಭ್ರವಾದ ಕನ್ನಡಿ ಪ್ರತಿಬಿಂಬಿಸುವಂತೆ ದೇವರನ್ನು ನೋಡುವರು. ಆದಕಾರಣವೇ ಒಬ್ಬನು ಪರಿಶುದ್ಧವಾ ಗಿರಬೇಕು.

೨೨೨. ಒಂದು ಪ್ರಮಾಣದ ಹಾಲನ್ನು ಅದಕ್ಕೆರಡರಷ್ಟು ನೀರಿನೊಂದಿಗೆ ಬೆರಸಿದರೆ ಅದನ್ನು ಇಂಗಿಸಿ ಖೋವ ಮಾಡಬೇಕಾದರೆ, ಕಾಲ ಮತ್ತು ಶ್ರಮ ತುಂಬಾ ಬೇಕಾಗುವುದು. ಪ್ರಾಪಂಚಿಕನ ಮನಸ್ಸು ಹೀಗೆ ಆಲೋಚನೆಗಳೆಂಬ ನೀರಿನಲ್ಲಿ ಬೆರತುಹೋಗಿರುವುದು. ನಿಜವಾದ ಪರಿಶುದ್ಧ ಹೃದಯದಿಂದ ಕೂಡಿದ ಭಕ್ತನ ಪವಿತ್ರತೆ, ಮತ್ತು ಶಕ್ತಿಯನ್ನು ಪಡೆಯಬೇಕಾದರೆ ಅವನು ದೀರ್ಘಕಾಲ ಶ್ರಮ ಪಟ್ಟು ಸಾಧನೆ ಮಾಡಬೇಕು.

೨೨೩. ಪ್ರಶ್ನೆ—ಪ್ರಾಪಂಚಿಕರು ದೇವರನ್ನು ಹುಡುಕುವುದಕ್ಕಾಗಿ ಎಲ್ಲವನ್ನೂ ಏಕೆ ತ್ಯಜಿಸುವುದಿಲ್ಲ?

ಉತ್ತರ—ವೇಷ ಕಟ್ಟಿರುವವನು ರಂಗಭೂಮಿಗೆ ಬಂದೊಡ ನೆಯೇ ತನ್ನ ವೇಷವನ್ನು ಬಿಟ್ಟುಬಿಡುವನೇನು? ಪ್ರಾಪಂಚಿಕರು ತಮ್ಮ ತಮ್ಮ ಪಾತ್ರಗಳನ್ನು ಆಡಿತೋರಿಸಿ ಕ್ರಮೇಣ ತಮ್ಮ ಕಪಟ ವೇಷವನ್ನು ತೆಗೆದು ಹಾಕುವರು.

೨೨೪. ಸಂಪೂರ್ಣವಾಗಿ ವಿಷಯ ಭೋಗದಲ್ಲಿ ನೆಲೆಸಿರುವ ಮನಸ್ಸು ಯಾವಾಗಲೂ ಗೊಬ್ಬರದಲ್ಲಿ ವಾಸಿಸುವ ಹುಳುವಿನಂತೆ. ಅದು ಅಲ್ಲೇ ಸಾಯುವುದು. ಅದಕ್ಕಿಂತ ಉತ್ತಮವಾದುದು ಏನಾದರೂ ಇರುವುದು ಎಂಬ ಭಾವನೆಯೇ ಅದಕ್ಕಿರುವುದಿಲ್ಲ. ಯಾರಿಗೆ ಪ್ರಾಪಂಚಿ ಕತೆಯು ಸ್ವಲ್ಪ ಕಡಿಮೆಯಾಗಿರುವುದೋ ಅವರು ಸ್ವಲ್ಪ ಹೊತ್ತು ಹೇಸಿಗೆಯ ಮೇಲೆ ಮತ್ತೆ ಸ್ವಲ್ಪ ಹೊತ್ತು ಸಕ್ಕರೆಯ ಮೇಲೆ ಕುಳಿತು ಕೊಳ್ಳುವ ನೊಣದಂತೆ. ಜೀವನ್ಮುಕ್ತನೊಬ್ಬನೇ ಮಕರಂದವನ್ನು

ಯಾವಾಗಲೂ ಹೀರುವ ಜೇನು ನೊಣದಂತೆ. ಅವನು ಮತ್ತೇನನ್ನೂ ಸೇವಿಸುವುದಿಲ್ಲ.

೨೨೫, ಪ್ರಾಪಂಚಿಕನು ಮೊಸಳೆಯಂತೆ. ಯಾವ ಆಯುಧ ದಿಂದಲೂ ನಾವು ಅದನ್ನು ಭೇದಿಸಲಾರೆವು. ಹೊಟ್ಟೆಯ ಮೇಲೆ ಹೊಡೆದಲ್ಲದೆ ಅದನ್ನು ಕೊಲ್ಲಲು ಅಸಾಧ್ಯ. ಹಾಗೆಯೇ ಪ್ರಾಪಂಚಿಕ ನಿಗೆ ನೀವು ಎಷ್ಟು ಸದ್ಬೋಧನೆ ಮಾಡಿದರೂ ಒಂದೆ. ಅವನ ಮನಸ್ಸಿ ನಲ್ಲಿ ಎಷ್ಟು ಜಿಗುಪ್ಸೆ ಹುಟ್ಟಿದರೂ ಒಂದೆ. ಅವನು ಆಸಕ್ತನಾಗಿರುವ ವಿಷಯವಸ್ತುಗಳಿಂದ ಕೂಡ ಇರುವವರೆಗೂ ತನ್ನ ಸ್ಥಿತಿಯನ್ನು ತಿಳಿದು ಕೊಳ್ಳಲಾರ.

೨೨೬. ಎಲ್ಲವನ್ನೂ ಬಿಟ್ಟು ಭಗವಂತನ ಪಾದಪದ್ಮಗಳನ್ನು ಮಾತ್ರ ಸ್ಮರಿಸು, ಎಂದು ನೀವು ಅವನಿಗೆ ಬುದ್ಧಿ ಹೇಳಿದರೆ ಅವನು ಕೇಳುವುದಿಲ್ಲ. ಅಂತಹ ಬದ್ಧ ಜೀವಿಗಳನ್ನು ಹೇಗೆ ಆಕರ್ಷಿಸುವುದು ಎಂದು ಬಹಳ ಹೊತ್ತು ಆಲೋಚಿಸಿದಮೇಲೆ ಅವರನ್ನು ವಶಮಾಡಿಕೊಳ್ಳುವ ಒಂದು ಉಪಾಯವನ್ನು ಗೌರಾಂಗ ಮತ್ತು ನಿತ್ಯಾನಂದರು ಕಂಡುಹಿಡಿದರು. "ಬನ್ನಿ ಹರಿಯ ಹೆಸರನ್ನು ತೆಗೆದುಕೊಳ್ಳಿ, ನಿಮಗೆ ಮಾಗೂರುಮತ್ಸ್ಯದ ಸಾರು ಮತ್ತು ನವತರುಣಿಯರ ಆಲಿಂಗನ ಸಿಕ್ಕುವುದು" ಎಂದು ಹೇಳಿದರು. ಇವೆರಡೂ ಅನೇಕರನ್ನು ಆಕರ್ಷಿಸಿ, ದೇವರ ಹೆಸರನ್ನು ತೆಗೆದುಕೊಳ್ಳುವಂತೆ ಮಾಡಿತು. ಅನಂತರ ಕ್ರಮೇಣ ಅವರಿಗೆ ಪವಿತ್ರ ನಾಮಸ್ಮರಣೆಯ ರಸಾನುಭವವಾದಮೇಲೆ ನಿತ್ಯಾನಂದನ ಬೋಧನೆ ಯಲ್ಲಿ ಹುದುಗಿದ್ದ ಅರ್ಥ ಹೊಳೆಯಿತು. ಮಾಗೂರು ಮತ್ಸ್ಯದ ಸಾರೆ ಭಕ್ತಿಪರವಶವಾಗಿ ಸುರಿವ ಕಣ್ಣೀರು ಕೋಡಿ. ಭೂಮಿಯೆ ನವತರುಣಿ. ಅವಳಿಂದ ಆಲಿಂಗನ ಪಡೆಯುವುದೆಂದರೆ, ಭಕ್ತಿಪರವಶರಾಗಿ ನೆಲದ ಮೇಲೆ ಹೊರಳಾಡುವುದು.

# ಎರಡನೆಯ ಭಾಗ

## ಅಧ್ಯಾಯ ೮

## ಮಾನವನ ಪುರೋಗಮನ

## ಕೆಲವು ಬಗೆಯ ಸಾಧಕರು

೨೨೭. ಆಕಾಶದಲ್ಲಿ ಹಾರಾಡುತ್ತಿರುವ ಹಲವು ಕಾಗದದ ಗಾಳಿಪಟಗಳಲ್ಲಿ ಎಲ್ಲೋ ಒಂದಕ್ಕೋ ಎರಡಕ್ಕೋ ದಾರ ಕಿತ್ತುಹೋಗಿ ಸ್ವಾತಂತ್ರ್ಯ ಸಿಕ್ಕುವುದು. ಇದರಂತೆಯೇ ಆಧ್ಯಾತ್ಮಿಕಸಾಧನೆ ಮಾಡುತ್ತಿರುವ ನೂರಾರು ಮಂದಿಗಳಲ್ಲಿ ಒಬ್ಬರೋ, ಇಬ್ಬರೋ, ಸಂಸಾರ ಬಂಧನದಿಂದ ಮುಕ್ತರಾಗುವರು.

೨೨೮. ಪುರಾಣದಲ್ಲಿ ಬರುವ ಹೋಮ ಎಂಬ ಒಂದುಜಾತಿಯ ಪಕ್ಷಿಯಿದೆ. ಅವು ಯಾವಾಗಲೂ ಅಂತರಿಕ್ಷದಲ್ಲಿ ವಾಸಿಸುತ್ತವೆ. ಅಂತರಿಕ್ಷವನ್ನು ಅವು ಅಷ್ಟು ಪ್ರೀತಿಸುವುವು. ಭೂಮಿಯ ಮೇಲೆ ಬರುವುದಕ್ಕೂ ಅವುಗಳಿಗೆ ಇಚ್ಛೆಯಿರುವುದಿಲ್ಲ. ಅವು ತಮ್ಮ ಮೊಟ್ಟೆಯನ್ನು ಕೂಡ ಆಕಾಶದಲ್ಲೇ ಹಾಕುತ್ತವೆಂದು ಹೇಳಿದೆ. ಆ ಮೊಟ್ಟೆ ಭೂಮಿಯ ಆಕರ್ಷಣಕ್ಕೊಳಗಾಗಿ ನೆಲದಕಡೆಗೆ ಬೀಳುತ್ತಿರುವಾಗ ಮೊಟ್ಟೆಯೊಡೆದು ಮರಿಗಳು ಹುಟ್ಟುವುವು. ಈ ಮರಿಗಳಿಗೆ ತಾವು ನೆಲದ ಮೇಲೆ ಬೀಳುತ್ತೇವೆಂದು ಗೊತ್ತಾದ ಒಡನೆಯೆ ಅವು ತಮ್ಮ ಪ್ರಯಾಣವನ್ನು ಬದಲಾಯಿಸಿ ಸ್ವಭಾವತಃ ತಮ್ಮ ಮನೆಯಾದ ಅಂತರಿಕ್ಷದ ಕಡೆಗೆ ಹಾರುತ್ತವೆ. ಶುಕದೇವ, ನಾರದ, ಜೀಸಸ್ ಮತ್ತು ಶಂಕರಾಚಾರ್ಯ ಇವರು ಇಂತಹ ಗುಂಪಿಗೆ ಸೇರಿದವರು. ಬಾಲ್ಯದಲ್ಲಿಯೇ ಅವರು ಪ್ರಾಪಂಚಿಕ ವಸ್ತುಗಳ ಮೇಲೆ ವೈರಾಗ್ಯಹೊಂದಿ ನಿಜವಾದ ಜ್ಞಾನ ಮತ್ತು ಪರಮಾತ್ಮಾನುಭವದ ಕಡೆಗೆ ದೃಷ್ಟಿಯನ್ನು ಇಡುವರು.

೨೨೯. ಗುಪ್ತರು ಮತ್ತು ವ್ಯಕ್ತರು ಎಂಬ ಎರಡು ಬಗೆಯ ಯೋಗಿಗಳಿರುವರು. ಮೊದಲನೆಯವರು ಗುಪ್ತವಾಗಿ ಸಾಧನೆಮಾಡಿ ಹೊರಗಿನವರಿಗೆ ಕಾಣಿಸದಂತಿರುವರು. ಕೊನೆಯವರು ಸನ್ಯಾಸದ ಬಾಹ್ಯಚಿಹ್ನೆಯಾದ ದಂಡ ಮುಂತಾದವುಗಳನ್ನು ಹಿಡಿದುಕೊಂಡು, ಆಧ್ಯಾತ್ಮಿಕ ವಿಷಯಗಳ ಮೇಲೆ ಸರಾಗವಾಗಿ ಮಾತನಾಡುವರು.

೨೩೦. ಮೊದಲು ಹೂಬಿಟ್ಟು ಅನಂತರ ಕಾಯಾಗುವುದು ಸಾಧಾರಣವಾಗಿ ರೂಢಿಯಾದರೂ, ಕೆಲವು ವಿಧದ ಬಳ್ಳಿಗಳು ಮತ್ತು ಗಿಡಗಳು, ಮೊದಲು ಕಾಯಿಬಿಟ್ಟು ನಂತರ ಹೂವಾಗುವುವು. ಇದರಂತೆಯೆ ಸಾಧಾರಣ ಮನುಷ್ಯರು ತಾವು ದೇವರನ್ನು ನೋಡುವುದಕ್ಕೆ ಮುಂಚೆ ಸಾಧನೆಯನ್ನು ಮಾಡಬೇಕಾಗಿರುವುದು. ಆದರೆ ಬೇರೊಂದು ಬಗೆಯ ಸಾಧಕರು ಇರುವರು. ಅವರು ಮೊದಲು ದೇವರನ್ನು ಕಂಡು ಅನಂತರ ಸಾಧನೆಯನ್ನು ಮಾಡುವರು.

೨೩೧. ಬೋಗುಣಿಯಲ್ಲಿ ಹುರಿಯುವ ಬತ್ತದಲ್ಲಿ ಯಾವ ಕೆಲವು ಕಾಳುಗಳು ಅದರಿಂದ ನೆಗೆದು ಹೊರಕ್ಕೆ ಸಿಡಿಯುತ್ತವೆಯೋ ಅವು ಚೆನ್ನಾಗಿ ಹುರಿದಕಾಳುಗಳು. ಏಕೆಂದರೆ ಅವುಗಳಮೇಲೆ ಸುಟ್ಟ ಯಾವ ಗುರುತೂ ಇರುವುದಿಲ್ಲ. ಆದಲ್ಲದೆ ಸಾಧಾರಣವಾಗಿ ಬೋಗುಣಿಯಲ್ಲಿ ಹುರಿದ ಪ್ರತಿಯೊಂದು ಕಾಳಿನಮೇಲೂ ಎಷ್ಟು ಸಣ್ಣದಾದರೂ ಒಂದು ಸುಟ್ಟಗುರುತು ಇದ್ದೇ ಇರುವುದು. ಇದರಂತೆ ಸದ್ಭಕ್ತರಲ್ಲಿ ಪ್ರಪಂಚವನ್ನು ಸಂಪೂರ್ಣವಾಗಿ ಬಿಟ್ಟುಹೋದ ಕೆಲವರು ಮಾತ್ರ ಕುಂದಿಲ್ಲದ ಸಿದ್ಧರು. ಆದರೆ ಪ್ರಪಂಚದಲ್ಲಿರುವ ಅತ್ಯುತ್ತಮರಲ್ಲಿ ಕೂಡ ಒಂದು ಸಣ್ಣ ಅಪರಿಪಕ್ವದ ಚಿಹ್ನೆ ಇದ್ದೇಇರುವುದು.

೨೩೨. ಬೆಳಗಿನಜಾವದಲ್ಲಿ ಕಡೆದ ಬೆಣ್ಣೆ ಅತ್ಯುತ್ತಮವಾದುದು. ಸೂರ್ಯೋದಯವಾದಮೇಲೆ ಕಡೆದ ಬೆಣ್ಣೆ ಅಷ್ಟೇನೂ ಉತ್ತಮವಲ್ಲ. ಅನಂತರ, ಸನ್ಯಾಸಧರ್ಮವನ್ನು ಸ್ವೀಕಾರಮಾಡಿದ ತಮ್ಮ ಕಿರಿಯ ಶಿಷ್ಯರನ್ನು ನೋಡಿ ಶ್ರೀ ಗುರುದೇವರು ಹೀಗೆಂದರು: "ನೀನು ಹೊತ್ತಿಗೆ ಮುಂಚೆ ಕಡೆದ ಬೆಣ್ಣೆಯಂತೆ. ನನ್ನ ಗೃಹಸ್ಥ ಶಿಷ್ಯರಾದರೋ ಹೊತ್ತಾದ ಮೇಲೆ ಕಡೆದ ಬೆಣ್ಣೆಯಂತೆ."

೨೩೩. ಎಳೆಯ ಬೊಂಬನ್ನು ಸುಲಭವಾಗಿ ಬಗ್ಗಿಸಬಹುದು. ಆದರೆ ಬಲಿತ ಬೊಂಬನ್ನು ಬಗ್ಗಿಸಿದರೆ ಅದು ಮುರಿದುಹೋಗುವುದು. ಎಳೆಯ ಮನಸ್ಸನ್ನು ದೇವರಕಡೆಗೆ ತಿದ್ದುವುದು ಸುಲಭ. ಆದರೆ ವಯಸ್ಸಾಗಿ ನಿಯಮಕ್ಕೆ ಒಳಗಾಗದವರ ಮನಸ್ಸನ್ನು ತಿರುಗಿಸಲು ಯತ್ನಿಸಿದರೆ ತಪ್ಪಿಸಿಕೊಳ್ಳುವುದು.

೨೩೪. ಗಿಳಿಯ ಧ್ವನಿಯ ಸ್ಪಂದನಕ್ಕೆ ಕಾರಣವಾದ ಗಂಟಲಿನ ಪೊರೆ ಬಲಿತಮೇಲೆ ಹಾಡುವುದನ್ನು ಕಲಿಸಲಾಗುವುದಿಲ್ಲ. ಕತ್ತಿನಮೇಲೆ ಕರಿಯಚುಕ್ಕೆ ಬರುವುದಕ್ಕೆ ಮುಂಚೆ ಅದಕ್ಕೆ ಕಲಿಸಬೇಕು.

ಇದರಂತೆಯೇ ವಯಸ್ಸಾದಮೇಲೆ ದೇವರಮೇಲೆ ಮನಸ್ಸನ್ನು ನಿಲ್ಲಿಸ ಬೇಕಾದರೆ ಬಹಳ ಕಷ್ಟ. ಆದರೆ ಬಾಲ್ಯದಲ್ಲಿ ಅದನ್ನು ಸುಲಭವಾಗಿ ಕಲಿಯಬಹುದು.

೨೩೫. ಮಾಗಿದ ಮಾವಿನಹಣ್ಣನ್ನು ದೇವರಿಗೆ ಬೇಕಾದರೂ ಅರ್ಪಿಸಬಹುದು ಅಥವಾ ಅದರಿಂದ ಇನ್ನೂ ಏನನ್ನು ಬೇಕಾದರೂ ಮಾಡಬಹುದು. ಅದನ್ನು ಒಮ್ಮೆ ಹಕ್ಕಿ ಕುಕ್ಕಿತು ಎಂದರೆ ಯಾವ ಕೆಲಸಕ್ಕೂ ಬರುವುದಿಲ್ಲ. ಅದನ್ನು ದೇವರಿಗೂ ನೈವೇದ್ಯ ಮಾಡುವುದ ಕ್ಕಾಗುವುದಿಲ್ಲ, ಬ್ರಾಹ್ಮಣನಿಗೆ ದಾನಮಾಡುವುದಕ್ಕೂ ಆಗುವುದಿಲ್ಲ. ಅಥವಾ ಅದನ್ನು ಸಜ್ಜನರು ತಿನ್ನುವುದಕ್ಕೂ ಆಗುವುದಿಲ್ಲ. ಆದ ಕಾರಣವೇ ಹುಡುಗಿಯರು ಮತ್ತು ಹುಡುಗರನ್ನು, ಪ್ರಾಪಂಚಿಕತೆ ಅವರನ್ನು ಮುಟ್ಟುವುದಕ್ಕೆ ಮುಂಚೆ ದೇವರ ಸೇವೆಗೆ ಅರ್ಪಿಸಬೇಕು. ಒಮ್ಮೆ ಪ್ರಪಂಚದ ಆಸೆಗಳು ಅವರ ಮನಸ್ಸನ್ನು ಪ್ರವೇಶಿಸಿದರೆ ಅಥವಾ ಇಂದ್ರಿಯಭೋಗವೆಂಬ ಕ್ರೂರರಾಕ್ಷಸ ಅವರನ್ನು ವಶಪಡಿಸಿಕೊಂಡರೆ ಅವರನ್ನು ಸದ್ಗುಣಿಗಳನ್ನಾಗಿ ಮಾಡುವುದು ಬಹಳ ಕಷ್ಟ.

೨೩೬. ಹುಡುಗನಲ್ಲಿರುವ ಭಕ್ತಿ ಪೂರ್ಣವಾದುದು. ಭಾಗವಾಗದೆ ಇರುವುದು. ಕಾಲಕ್ರಮೇಣ ಮದುವೆಯಾದಮೇಲೆ, ಅವನ ಅರ್ಧ ಮನಸ್ಸು ಅಥವಾ ಅದಕ್ಕಿಂತ ಹೆಚ್ಚನ್ನೆ ಹೆಂಡತಿಗೆ ಕೊಡುವನು ಅವನಿಗೆ ಮಕ್ಕಳಾದಮೇಲೆ ಉಳಿದ ಕಾಲುಪಾಲು ಅವುಗಳಿಗೆ ಹೋಗುವುದು. ಇನ್ನುಳಿದ ಕಾಲುಪಾಲು ತಂದೆ, ತಾಯಿ, ಗೌರವ, ಕೀರ್ತಿ, ಅಹಂಕಾರ ಉಡಿಗೆ ತೊಡಿಗೆ, ಇವುಗಳಿಗೆ ಹೋಗುತ್ತದೆ. ಇನ್ನು ದೇವರಿಗೆ ಅರ್ಪಿಸು ವುದಕ್ಕೆ ಅವನಲ್ಲಿ ಪ್ರೀತಿ ಇರುವುದಿಲ್ಲ. ಆದಕಾರಣವೇ ಇನ್ನೂ ವಿಭಾಗ ವಾಗದ ಹುಡುಗನ ಮನಸ್ಸನ್ನು ದೇವರ ಕಡೆಗೆ ತಿರುಗಿಸಿದರೆ ಅವನು ಪರಮಾತ್ಮನ ಪ್ರೀತಿಯನ್ನು ಪಡೆಯಬಹುದು; ಸುಲಭವಾಗಿ ಅವನನ್ನು ನೋಡಬಹುದು. ಆದರೆ ವಯಸ್ಸಾದವರಿಗೆ ಹೀಗೆ ಮಾಡುವುದು ಸುಲಭವಲ್ಲ.

೨೩೭. ಪ್ರಪಂಚದಲ್ಲಿರುವ ಜ್ಞಾನಿಗಳಿಗೂ ಮತ್ತು ಅದನ್ನು ತ್ಯಜಿಸಿದವರಿಗೂ ಏನಾದರೂ ವ್ಯತ್ಯಾಸವಿದೆಯೇ ಎಂದು ಕೇಳಿದರೆ ಅವರಿಬ್ಬರೂ ಒಂದೇ ಎಂದು ಹೇಳುತ್ತೇವೆ. ಇಬ್ಬರಲ್ಲಿಯೂ ಒಂದೇ ಜ್ಞಾನವಿರುವುದು. ಆದರೆ ಜ್ಞಾನಿ ಪ್ರಪಂಚದಲ್ಲಿದ್ದರೆ ಅಂಜುವುದಕ್ಕೆ ಅವಕಾಶವಿದೆ. ಇಂದ್ರಿಯ ಪ್ರಲೋಭನಗಳ ಮಧ್ಯೆ ಇರುವಾಗ ಸ್ವಲ್ಪ

ವಾದರೂ ಅದರ ವಶವಾಗುವ ಅವಕಾಶವಿದೆ. ಮಸಿಯಿಂದ ತುಂಬಿರುವ ಕೋಣೆಯಲ್ಲಿದ್ದರೆ ಎಷ್ಟೇ ಜೋಪಾನವಾಗಿದ್ದರೂ ನಿಮಗೆ ಸ್ವಲ್ಪ ವಾದರೂ ಮಸಿ ತಗುಲುವುದರಲ್ಲಿ ಸಂದೇಹವಿಲ್ಲ.

೨೩೮. ಯಾರಿಗೋ ಒಬ್ಬರಿಗೆ ಠಾಕೂರರು ಹೀಗೆ ಹೇಳಿದರು : "ನಿನ್ನ ಜೀವನದ ಮುಖ್ಯ ಆಯುಸ್ಸನ್ನೆಲ್ಲಾ ಪ್ರಪಂಚದಲ್ಲಿ ಕಳೆದಮೇಲೆ ನೀನು ದೇವರನ್ನು ಹುಡುಕಲು ಬಂದಿರುವೆ. ದೇವರನ್ನು ಸಾಕ್ಷಾತ್ಕಾರ ಮಾಡಿಕೊಂಡಮೇಲೆ ನೀನು ಪ್ರಪಂಚವನ್ನು ಪ್ರವೇಶಿಸಿದ್ದರೆ ಎಷ್ಟು ಶಾಂತಿ ಸಂತೋಷಗಳು ನಿನ್ನಲ್ಲಿ ನಲಿದಾಡುತ್ತಿದ್ದವು ! "

೨೩೯. ಪ್ರಶ್ನೆ:—ಸಾತ್ತ್ವಿಕ, ರಾಜಸಿಕ ಮತ್ತು ತಾಮಸಿಕ ಯೋಚನೆಗಳಿಗೆ ವ್ಯತ್ಯಾಸವೇನು ?

ಉತ್ತರ :—ಯಾವನು ಹೃತ್ಪೂರ್ವಕವಾಗಿ ಸ್ವಲ್ಪವಾದರೂ ಆಡಂಬರ ಮತ್ತು ಅಹಂಕಾರವಿಲ್ಲದೆ ಪೂಜಿಸುವನೋ ಅವನು ಸಾತ್ತ್ವಿಕ ಭಕ್ತ. ಯಾರು ಮನೆಯನ್ನು ಶೃಂಗರಿಸುವುದಕ್ಕೆ ಹೆಚ್ಚು ಗಮನ ಕೊಡುತ್ತಾನೊ, ಸಂಗೀತ ಮತ್ತು ನೃತ್ಯ ಇವುಗಳಮೇಲೆ ಹೆಚ್ಚು ಗಮನ ಕೊಟ್ಟು ದೇವಿಯ ಪೂಜೆ ಸಮಯದಲ್ಲಿ ಭಾರಿ ಔತಣವನ್ನು ಅಣಿ ಮಾಡುವನೋ ಅವನು ರಾಜಸಿಕ ಭಕ್ತ. ಯಾರು ದೇವಿಯ ಪೀಠದಲ್ಲಿ ನೂರಾರು ಸಾಧು ಪ್ರಾಣಿಗಳಾದ ಕುರಿ ಮತ್ತು ಆಡುಗಳನ್ನು ಬಲಿ ಕೊಟ್ಟು ನೈವೇದ್ಯಕ್ಕೆ ಮದ್ಯ ಮತ್ತು ಮಾಂಸ ಭಕ್ಷಗಳನ್ನಿಟ್ಟು, ಪೂಜೆ ಮಾಡುವಾಗ ಯಾರು ನೃತ್ಯ ಮತ್ತು ಗೀತಗಳಲ್ಲೇ ತಲ್ಲೀನರಾಗುವರೋ ಅವರೇ ತಾಮಸಿಕ ಭಕ್ತರು.

## ನಿಜವಾದ ಸಾಧಕರ ಲಕ್ಷಣ

೨೪೦. ನೂರಾರು ವರ್ಷಗಳು ಚಕ್ಕುಮುಕ್ಕಿಯ ಕಲ್ಲು ನೀರಿನಲ್ಲಿ ಮುಳುಗಿರಬಹುದು. ಆದರೂ ಅದು ತನ್ನ ಸ್ವಭಾವವನ್ನು ಕಳೆದುಕೊಳ್ಳುವುದಿಲ್ಲ. ಬೇಕಾದಾಗ ಅದನ್ನು ಉಕ್ಕಿನಿಂದ ಹೊಡೆಯಿರಿ ; ತಕ್ಷಣವೇ ಕಿಡಿ ಏಳುವುದು. ಇದರಂತೆಯೇ ನಿಜವಾದ ಭಕ್ತನಲ್ಲಿರುವ ಶ್ರದ್ಧೆಯೂ ಕೂಡ ಅಚಲವಾದುದು. ಅವನು ಹೀನವಾದ ಪ್ರಾಪಂಚಿಕ ವಸ್ತುಗಳಿಂದ ಸುತ್ತಲೂ ಆವರಿಸಿಕೊಂಡಿದ್ದರೂ, ದೇವರಲ್ಲಿ ಶ್ರದ್ಧೆ ಮತ್ತು ಪ್ರೀತಿಯನ್ನು ಎಂದಿಗೂ ಕಳೆದುಕೊಳ್ಳುವುದಿಲ್ಲ. ದೇವರ ಹೆಸರನ್ನು ಕೇಳಿದೊಡನೆಯೇ ಅವನು ಉತ್ಸಾಹದಿಂದ ಜಾಗ್ರತನಾಗುವನು.

೨೪೧. ಚಿನ್ನ ಮತ್ತು ಹಿತ್ತಾಳೆಯನ್ನು ನಾವು ಹೇಗೆ ಒರೆಗಲ್ಲಿನ ಮೇಲೆ ಪರೀಕ್ಷೆ ಮಾಡುತ್ತೇವೆಯೋ 'ಹಾಗೆಯೇ ನಿಜವಾದ ಮತ್ತು ಕಪಟ ಸಾಧಕರನ್ನು ಹಿಂಸೆ ಮತ್ತು ಚಾಡಿಕೋರತನವೆಂಬ ಒರೆಗಲ್ಲು ವ್ಯಕ್ತಪಡಿಸುವುದು.

೨೪೨. ರೈಲ್ವೆಯಂತ್ರ ಸುಲಭವಾಗಿ ತನಗೆ ಸೇರಿದ ಗಾಡಿಗಳನ್ನು ಎಳೆದುಕೊಂಡು ಹೋಗುತ್ತದೆ. ಶ್ರದ್ಧೆ ಮತ್ತು ಭಕ್ತಿಯಿಂದ ಅಚಲವಾಗಿ ದೇವರನ್ನು ಪ್ರೀತಿಸುವವರು ಎಷ್ಟೇ ಕಷ್ಟಬರಲಿ ಆತಂಕಗಳು ಬರಲಿ ಜೀವನ ಸಾಗಿಸುವುದಕ್ಕೆ ಅವರಿಗೆ ಕಷ್ಟತೋರುವುದಿಲ್ಲ. ಆದೇಕಾಲದಲ್ಲಿ ಅವರು ಹಲವರನ್ನು ದೇವರ ಕಡೆಗೆ ಕರೆದುಕೊಂಡು ಹೋಗುವರು.

೨೪೩. ಇಂದ್ರಿಯಸುಖದ ಆಕರ್ಷಣೆ ಎಂದು ನಾಶವಾಗುವುದು? ಯಾವಾಗ ಒಬ್ಬನು ಎಲ್ಲಾ ಸುಖ ಮತ್ತು ಸಂತೋಷವನ್ನು ಅಖಂಡ ಸಚ್ಚಿದಾನಂದಬ್ರಹ್ಮನಲ್ಲಿ ಪಡೆಯುವನೋ ಆಗ. ಯಾರು ಅವನಲ್ಲಿ ಆನಂದಿಸುವರೋ ಅವರಿಗೆ ಅಗ್ಗವಾದ ಕೆಲಸಕ್ಕೆಬಾರದ ಪ್ರಾಪಂಚಿಕ ಭೋಗಗಳ ಮೇಲೆ ಇಷ್ಟವಿಲ್ಲ.

೨೪೪. ಯಾರು ಒಮ್ಮೆ ಶುಭ್ರವಾದ ಕಲ್ಲುಸಕ್ಕರೆಯನ್ನು ರುಚಿನೋಡಿರುವರೋ ಅವರಿಗೆ ಕೆಲಸಕ್ಕೆಬಾರದ ಕೊಳೆಯಾದ ಜಿನುಗಿನ ಬೆಲ್ಲದಮೇಲೆ ಇಷ್ಟವಿಲ್ಲ. ಯಾರು ಅರಮನೆಯಲ್ಲಿ ಮಲಗಿದ್ದರೋ ಅವರಿಗೆ ಕಸದಗುಂಡಿಯಲ್ಲಿ ಮಲಗಲು ಇಷ್ಟವಿಲ್ಲ. ಸಚ್ಚಿದಾನಂದ ಸುಖವನ್ನು ಅನುಭವಿಸಿದ ಜೀವನಿಗೆ ಕೆಲಸಕ್ಕೆಬಾರದ ಪ್ರಾಪಂಚಿಕ ವಿಷಯಗಳ ಮೇಲೆ ಇಚ್ಛೆಯಿರುವುದಿಲ್ಲ.

೨೪೫. ಯಾವ ಹೆಂಗಸನು ಪ್ರೀತಿಸುವುದಕ್ಕೆ ದೊರೆಯೇ ಇರುವನೋ, ಅವಳು ಭಿಕ್ಷುಕನ ಕರೆಗೆ ಮೆಚ್ಚುವುದಿಲ್ಲ. ಪರಮಾತ್ಮನ ಕೃಪಾಕಟಾಕ್ಷ ದೊರೆತ ಜೀವ ಪ್ರಪಂಚದ ಅಲ್ಪವಸ್ತುಗಳನ್ನು ಪ್ರೀತಿಸುವುದಿಲ್ಲ.

೨೪೬. ಕೇರುವ ಮೊರದ ಸ್ವಭಾವ ಹಗುರವಾದ ಕೆಲಸಕ್ಕೆ ಬಾರದ ವಸ್ತುವನ್ನು ತಿರಸ್ಕರಿಸಿ ಭಾರವಾದ ಒಳ್ಳೆಯ ವಸ್ತುಗಳನ್ನು ಮಾತ್ರ ಇಟ್ಟುಕೊಳ್ಳುವುದು. ಎಲ್ಲಾ ಭಕ್ತರ ಸ್ವಭಾವವೂ ಹೀಗೆಯೆ.

೨೪೭. ಸಕ್ಕರೆ ಮತ್ತು ಮರಳು ಮಿಶ್ರವಾಗಿರಬಹುದು. ಆದರೆ ಇರುವೆ ಮರಳನ್ನು ಬಿಟ್ಟು ಸಕ್ಕರೆಯನ್ನು ಹೊತ್ತುಕೊಂಡುಹೋಗು

ವುದು. ಇದರಂತೆಯೇ ಪರಮಹಂಸರು ಮತ್ತು ಭಕ್ತರು ಯಾವಾಗಲೂ ಒಳ್ಳೆಯದನ್ನು ಕೆಟ್ಟದ್ದರಿಂದ ಸುಲಭವಾಗಿ ಪ್ರತ್ಯೇಕಿಸುವರು.

೨೪೮. ವೇಗವಾಗಿ ಹರಿಯುವ ಪ್ರವಾಹ ಕೆಲವು ಕಡೆಗಳಲ್ಲಿ ಸುತ್ತಿಕೊಂಡು ಸುಳಿಯಲ್ಲಿ ಹರಿದುಕೊಂಡು ಹೋಗುವುದು. ಆದರೆ ಇವುಗಳನ್ನು ದಾಟಿದಮೇಲೆ ಪುನಃ ವೇಗವಾಗಿ ಹರಿಯುವುದು. ಇದರಂತೆಯೇ ಹಲವುವೇಳೆ ಭಕ್ತನ ಹೃದಯ ನಿರಾಶೆ ದುಃಖ ಅಪನಂಬಿಕೆ ಇವುಗಳ ಸುಳಿಯಲ್ಲಿ ಸಿಕ್ಕುವುದು. ಆದರೆ ಇದು ತಾತ್ಕಾಲಿಕ. ಬಹಳ ಕಾಲವಿರದು.

೨೪೯. ಭಕ್ತನ ಶಕ್ತಿ ಇರುವುದೆಲ್ಲಿ? ಅವನು ದೇವರ ಮಗು. ಅವನ ಪ್ರೇಮಾಶ್ರುಗಳೇ ಅತಿ ಅಮೋಘವಾದ ಅಸ್ತ್ರ!

೨೫೦. ಹುಳುಕಡ್ಡಿ ಇರುವ ಜಾಗವನ್ನು ಕೆರೆದಷ್ಟೂ ನವೆ ಹೆಚ್ಚುವುದು. ನವೆ ಹೆಚ್ಚಿದಷ್ಟೂ ಆನಂದ ಹೆಚ್ಚು. ಇದರಂತೆಯೇ ಭಕ್ತರಿಗೆ ಭಗವನ್ನಾಮ ಸ್ಮರಣೆಮಾಡಿದಷ್ಟೂ ದಣಿವು ತೋರುವುದಿಲ್ಲ.

೨೫೧. ದೇವರು ಎಂಬ ಹೆಸರನ್ನು ಕೇಳಿದ ಮಾತ್ರಕ್ಕೆ ಯಾರಿಗೆ ರೋಮಾಂಚನವಾಗಿ ಕಣ್ಣಿನಿಂದ ನೀರು ಸುರಿಯುವುದೋ ಅವನು ನಿಜವಾಗಿಯೂ ತನ್ನ ಕೊನೆಯ ಜನ್ಮಕ್ಕೆ ಬಂದಿರುವನು.

೨೫೨. ಒಬ್ಬ ದುಶ್ಚರಿತ್ರಳು ತನ್ನ ಹಾವಭಾವಗಳಿಂದ ಭಕ್ತನನ್ನು ಪ್ರೀತಿಸಲು ಪ್ರಯತ್ನಪಟ್ಟರೆ ಏನಾಗುವುದು? ಹೇಗೆ ಚನ್ನಾಗಿ ಮಾಗಿದ ಮಾವಿನ ಹಣ್ಣನ್ನು ಅಮುಕಿದರೆ ತಿರುಳು ಮತ್ತು ಓಟೆ ಹೊರಗೆ ಹೋಗಿ ಸಿಪ್ಪೆಮಾತ್ರ ಉಳಿಯುವುದೋ ಹಾಗೆಯೇ ಭಕ್ತನ ಮನಸ್ಸುಕೂಡ ದೇವರ ಕಡೆಗೆ ಹೋಗಿ ಅವನ ಪಾರ್ಥಿವ ದೇಹವು ಮಾತ್ರ ಹೆಂಗಸಿನ ಪ್ರಭಾವಕ್ಕೆ ಉಳಿಯುವುದು.

೨೫೩. ತಾನು ಒಂಟಿಯಾಗಿರುವಾಗ ಮತ್ತು ಹೊರಗೆ ಅವನನ್ನು ಯಾರೂ ನೋಡದೆ ಇರುವಾಗ, ಪಾಪಕಾರ್ಯವನ್ನು ಯಾವನು ಮಾಡುವುದಿಲ್ಲವೋ ಅವನೇ ನಿಜವಾದ ಧರ್ಮಾತ್ಮನು. ಏಕೆಂದರೆ ಆಗಲೂ ಕೂಡ ಆತನನ್ನು ದೇವರು ನೋಡುತ್ತಿರುವನೆಂದು ಅವನು ಭಾವಿಸುವನು. ಒಂದು ಏಕಾಂತವಾದ ಕಾಡಿನಲ್ಲಿ ಯಾರೂ ಇಲ್ಲದೆ ಇರುವಾಗ ಭ್ರಷ್ಟಗೊಳಿಸಲು ಬರುವ ಯುವತಿಯ ಪ್ರೇರಣೆಯನ್ನು, ದೇವರು ಇದನ್ನೆಲ್ಲಾ ನೋಡುತ್ತಿರುವನೆಂದು ತಿಳಿದು, ಒಮ್ಮೆ ಕೂಡ ಅವಳ ಕಡೆಗೆ ಕೆಟ್ಟ

ನೋಟವನ್ನು ಬೀರುವುದಿಲ್ಲವೋ ಅವನೇ ನಿಜವಾದ ಭಕ್ತ. ನಿರ್ಜನವಾದ ಯಾರೂ ಇಲ್ಲದ ಮನೆಯಲ್ಲಿ ಚೀಲದ ತುಂಬ ಚಿನ್ನ ಸಿಕ್ಕಿದರೂ ಅದನ್ನು ತಾನು ಪಡೆಯಬೇಕೆಂಬ ಆಸೆಯನ್ನು ಯಾವನು ತಡೆಯುವನೋ ಅವನು ನಿಜವಾದ ಭಕ್ತ. ಯಾರು ಕೇವಲ ತೋರಿಕೆಗಾಗಿ ಮತ್ತು ಜನರ ಅಭಿಪ್ರಾಯಕ್ಕೆ ಅಂಜಿ ನಡೆಯುವನೋ ಅವನನ್ನು ಧರ್ಮಾತ್ಮ ನೆಂದು ಕರೆಯಲಾಗುವುದಿಲ್ಲ. ಮೌನವಾಗಿ ಮತ್ತು ಗುಪ್ತವಾಗಿ ಮಾಡು ವುದೇ ನಿಜವಾದ ಧರ್ಮ. ಅಹಂಕಾರ ಮತ್ತು ಆಡಂಬರಗಳಿಂದ ಕೂಡಿದ್ದರೆ ಅವೆಲ್ಲಾ ಮಿಥ್ಯಾಚಾರ. ಒಂದು ನಟನೆ.

## ಭಕ್ತರ ಸಂಬಂಧ

೨೫೪. ಧಾರ್ಮಿಕ ಸ್ವಭಾವದವರು ಎಲ್ಲ ಸಾಮಾಜಿಕ ಸಂಪ್ರ ದಾಯಗಳನ್ನೂ ಮೀರಿರುವ ತಮ್ಮದೇ ಒಂದು ಪಂಗಡಕ್ಕೆ ಸೇರಿದವರು.

೨೫೫. ಹೆಂಗಸು ಪ್ರತಿದಿನವೂ ತಾನು ಗಂಡನೊಂದಿಗೆ ಮಾತ ನಾಡುವುದನ್ನು ಎಲ್ಲರೊಂದಿಗೆ ಹೇಳುವುದಕ್ಕೆ ಸಾಧಾರಣವಾಗಿ ನಾಚಿಕೆ ಪಡುವಳು. ಅವಳು ಅದನ್ನು ಮತ್ತಾರಿಗೂ ಹೇಳುವುದಿಲ್ಲ. ಅಥವಾ ಹೇಳಬೇಕೆಂದು ಬಯಸುವುದೂ ಇಲ್ಲ. ಹೇಗಾದರೂ ಅದು ಹೊರಗೆ ಬಿದ್ದರೆ ಅವಳಿಗೆ ಕೋಪಬರುವುದು. ಆದರೆ ಅದನ್ನು ಅವಳು ತನ್ನ ನೆಚ್ಚಿನ ಗೆಳತಿಗೆ ಸಂಕೋಚವಿಲ್ಲದೆ ಹೇಳುವಳು. ಹೇಳಬೇಕೆಂದು ತವಕ ಪಡುವಳು. ಹಾಗೆ ಹೇಳುವುದರಲ್ಲಿ ಸಂತೋಷಪಡುವಳು. ಇದರಂ ತೆಯೇ ದೇವರ ಭಕ್ತನು ಭಕ್ತರಲ್ಲದವರಿಗೆ ತನ್ನ ಧ್ಯಾನಾನಂದವನ್ನು ಹೇಳಲಿಚ್ಛಿಸುವುದಿಲ್ಲ. ಕೆಲವು ವೇಳೆ ಅಂತಹ ಭಕ್ತನಿಗೆ ಹೇಳುವುದಕ್ಕೆ ತವಕಪಡುವನು, ಅದರಿಂದ ಆನಂದ ಪಡುವನು.

೨೫೬. ಒಂದು ಹಸುವಿನ ಮಂದೆಯ ಹತ್ತಿರ ಯಾವುದಾದ ರೊಂದು ಹೊಸ ಪ್ರಾಣಿಯು ಬಂದರೆ ಇವುಗಳೆಲ್ಲ ಒಟ್ಟಿಗೆ ಸೇರಿ ಅದನ್ನು ಹೊರಗೆ ಅಟ್ಟುವುವು. ಆದರೆ ಒಂದು ಹಸುವು ಬಂದರೆ ಉಳಿದ ಹಸು ಗಳೆಲ್ಲ ಅದನ್ನು ನೆಕ್ಕುತ್ತಾ ಸ್ನೇಹ ಬೆಳೆಸುವುವು. ಇದರಂತೆಯೆ ಭಕ್ತನು ಮತ್ತೊಬ್ಬ ಭಕ್ತನನ್ನು ಸಂಧಿಸಿದಾಗ ಇಬ್ಬರಿಗೂ ಅತ್ಯಾನಂದ ವಾಗುವುದು. ಅಗಲುವುದಕ್ಕೆ ಇಚ್ಛೆಯೇ ಬಾರದು. ಅದೇ ಒಬ್ಬ ಹಾಸ್ಯಗಾರನು ತಮ್ಮ ಗುಂಪಿಗೆ ಬಂದರೆ ಉಪಾಯವಾಗಿ ಅವನಿಂದ ತಪ್ಪಿಸಿಕೊಳ್ಳುವರು.

೨೫೭. ದೇವರನ್ನು ಪ್ರೀತಿಸುವವನು ಏಕಾಂತವಾಗಿ ಏತಕ್ಕೆ ಇರಲೊಲ್ಲ? ಭಂಗಿಸೇದುವವನಿಗೆ ಜೊತೆಗಾರರಿಲ್ಲದಿದ್ದರೆ ಆನಂದ ವಿಲ್ಲ. ಭಂಗಿ ಸೇದುವವನಂತೆಯೇ ಭಕ್ತನೂ ಕೂಡ. ಇತರ ಭಕ್ತ ರಿಂದ ದೂರವಾಗಿ ಭಗವಂತನ ನಾಮೋಚ್ಚಾರಣೆ ಮಾಡುವುದರಿಂದ ಆನಂದಪಡಲಾರ.

## ಭವಬಂಧನದಲ್ಲಿ ಬಿದ್ದಿರುವ ಸಾಧಕನಿಗೆ ಆದರ್ಶ

೨೫೮. ತಾಂತ್ರಿಕ ಸಾಧಕನು ಗತಿಸಿದವರ ಜೀವದ ಮೂಲಕ ವಾಗಿ ಶಕ್ತಿಯನ್ನು ಆವಾಹನೆ ಮಾಡುವಾಗ ಅವನೊಂದು ಹೊಸ ಹೆಣದ ಮೇಲೆ ಕುಳಿತುಕೊಂಡು ಹತ್ತಿರದಲ್ಲಿ ಆಹಾರ ಮತ್ತು ಮದ್ಯವನ್ನು ಇಡುವನು ಎಂದು ಹೇಳಿದೆ. ಹಾಗೆ ಆವಾಹನೆ ಮಾಡುವಾಗ ಹೆಣ ತಾತ್ಕಾಲಿಕವಾಗಿ ಚೇತನಗೊಂಡು ಬಾಯಿ ತೆರೆದರೆ ಧೈರ್ಯಶಾಲಿಯಾದ ಸಾಧಕನು ಅದರ ಬಾಯಿಗೆ ಆಹಾರವನ್ನು (ಕ್ಷಣಕಾಲ ಅದನ್ನು ತನ್ನ ವಶಮಾಡಿಕೊಂಡಿರುವ ಭೂತವನ್ನು) ತೃಪ್ತಿಪಡಿಸಲು ಹಾಕಬೇಕು. ಹಾಗೆ ಮಾಡದಿದ್ದರೆ ಅವನ ಆವಾಹನೆಗೆ ಅಡ್ಡಿ ಬಂದು ಪರಾಶಕ್ತಿ ಬರು ವುದಿಲ್ಲ. ಅದರಂತೆ ಸಂಸಾರವೆಂಬ ಹೆಣದಮೇಲೆ ಕುಳಿತುಕೊಂಡು ಸಚ್ಚಿದಾನಂದವನ್ನು ಪಡೆಯಬೇಕೆಂದು ನೀವು ಬಯಸಿದರೆ ಮೊದಲು ಪ್ರಾಪಂಚಿಕ ಜವಾಬ್ದಾರಿಯನ್ನು ತೃಪ್ತಿಪಡಿಸುವುದಕ್ಕೆ ಸನ್ನದ್ಧರಾಗಿ. ಇಲ್ಲದೆ ಇದ್ದರೆ ಪ್ರಪಂಚದ ಆಸೆ ಆತಂಕಗಳಿಂದ ನಿಮ್ಮ ಭಕ್ತಿ ಭಗ್ನ ವಾಗುವುದು.

೨೫೯. ಸಂಸಾರದಲ್ಲಿ ಸಂದೇಹವಿಲ್ಲದೆ ಹಣದ ಆವಶ್ಯಕವಿದೆ. ಆದರೆ ಹಣ ಮತ್ತು ಇನ್ನಿತರ ವಸ್ತುಗಳ ಮೇಲೆ ಸುಮ್ಮನೆ ಹೆಚ್ಚು ಯೋಚನೆಮಾಡಬೇಡ. ತಾನಾಗಿ ಏನು ಬರುವುದೋ ಅದರಲ್ಲೇ ತೃಪ್ತರಾಗಿರುವುದು ಅತ್ಯುತ್ತಮವಾದ ರೀತಿ. ಕೂಡಿಡಲು ಕಾತುರ ನಾಗಿರಬೇಡ. ಯಾರು ತಮ್ಮ ಜೀವನವನ್ನು ಭಗವಂತನಿಗೆ ಅರ್ಪಿಸು ವರೋ, ಯಾರು ಅವನ ಭಕ್ತರಾಗಿ ಅವನ ಆಶ್ರಯ ಹೊಂದಿರುವರೋ, ಅವರೆಂದಿಗೂ ಪ್ರಾಪಂಚಿಕ ವಸ್ತುಗಳನ್ನು ಬಯಸುವುದಿಲ್ಲ. ಅವರಿಗೆ ಬಂದಷ್ಟು ಖರ್ಚಾಗುವುದು. ಒಂದು ಕಡೆಯಿಂದ ದುಡ್ಡು ಬಂದರೆ ಮತ್ತೊಂದು ಕಡೆಯಿಂದ ಖರ್ಚಾಗುವುದು.

೨೬೦. ಗೃಹಸ್ಥ, ಶಿಷ್ಯ:—ಸ್ವಾಮಿ, ನಾನು ಹೆಚ್ಚು ಹಣವನ್ನು ಸಂಪಾದಿಸಲು ಯತ್ನಿಸಲೆ?

ಶ್ರೀ ಗುರುದೇವರು :—ವಿವೇಕದಿಂದ ನೀನು ಅದನ್ನು ಸಂಸಾರದಲ್ಲಿ ಖರ್ಚುಮಾಡಬೇಕೆಂದು ಬಯಸಿದರೆ ಪ್ರಯತ್ನಿಸು. ಆದರೆ ಜೋಪಾನವಾಗಿರು. ನ್ಯಾಯಮಾರ್ಗದಿಂದ ಮಾತ್ರ ಹಣ ಸಂಪಾದನೆ ಮಾಡಬೇಕು. ದೇವರ ಸೇವೆ: ಹಣ ಸಂಪಾದನೆಯಲ್ಲ ನಿನ್ನ ಗುರಿ. ದೇವರಿಗೋಸ್ಕರ ಅರ್ಪಿಸಿದ ಹಣದಲ್ಲಿ ದೋಷವಿಲ್ಲ.

ಶಿಷ್ಯ:—ಎಲ್ಲಿಯವರೆಗೂ ನಾನು ಸಂಸಾರಕ್ಕೆ ನನ್ನ ಕರ್ತವ್ಯ ಮಾಡಬೇಕು?

ಶ್ರೀ ಗುರುದೇವರು :—ಎಲ್ಲಿಯವರೆಗೂ ಅವರು ಸ್ವತಂತ್ರರಾಗಿ ಬಾಳಲಾರರೊ ಅಲ್ಲಿಯವರೆಗೆ. ಆದರೆ ನಿನ್ನ ಮಕ್ಕಳು ತಮ್ಮನ್ನು ತಾವೇ ನೋಡಿಕೊಳ್ಳುವಷ್ಟು ಆದರೆ ನಿನ್ನ ಕರ್ತವ್ಯವೇನೂ ಇಲ್ಲ.

೨೬೧. ಕೆಲವು ಗೃಹಸ್ಥ ಭಕ್ತರಿಗೆ ಶ್ರೀ ಗುರುದೇವರು ಹೀಗೆ ಹೇಳಿದರು: ಊಟ, ಬಟ್ಟೆ, ವಸತಿ, ದೇವರ ಪೂಜೆ, ಸಾಧುಸಂತರ ಸೇವೆಗಾಗಿ ದುಡ್ಡು ಎಂದು ತಿಳಿಯಿರಿ. ಅದನ್ನು ಕೂಡಿಡುವುದು ಕೆಟ್ಟದ್ದು. ಜೇನುನೊಣ ಗೂಡನ್ನು ಕಟ್ಟುವುದಕ್ಕೆ ತುಂಬಾ ಕಷ್ಟಪಡುವುದು. ಆದರೆ ಮನುಷ್ಯ ಬಂದು ಅದನ್ನು ಕಿತ್ತುಕೊಂಡುಹೋಗುವನು. ನೀನು "ಸ್ತ್ರೀಯು"ನ್ನು ಸಂಪೂರ್ಣವಾಗಿ ತ್ಯಜಿಸಬೇಕಾಗಿಲ್ಲ. ಆದರೆ ಕೆಲವು ಮಕ್ಕಳಾದಮೇಲೆ ನೀನು ಮತ್ತು ನಿನ್ನ ಹೆಂಡತಿ, ಸಹೋದರ ಸಹೋದರಿಯರಂತೆ ಇರಬೇಕು.

೨೬೨. ಪ್ರಶ್ನೆ:–ನಾನು ನನ್ನ ಜೀವನೋಪಾಯವನ್ನು ಯಾವಾಗಲೂ ಆಲೋಚನೆ ಮಾಡಬೇಕಾಗಿರುವಾಗ ಸಾಧನೆಯನ್ನು ಹೇಗೆ ಮಾಡಬೇಕು?

ಉತ್ತರ :—ಯಾರಿಗಾಗಿ ನೀನು ಕೆಲಸ ಮಾಡುತ್ತಿರುವೆಯೋ ಅವನು ನಿನಗೆ ಆವಶ್ಯಕವಾದುದನ್ನು ಒದಗಿಸುವನು. ದೇವರು ನಿನ್ನನ್ನು ಪ್ರಪಂಚಕ್ಕೆ ಕಳುಹಿಸುವುದಕ್ಕೆ ಮುಂಚೆ ನಿನ್ನ ಊಟಕ್ಕೂ ಅಣಿ ಮಾಡಿರುವನು.

೨೬೩. ನಮಗೆ ಮನೆ, ಸಂಸಾರ, ಮಕ್ಕಳು ಎಲ್ಲವೂ ಕ್ಷಣಕಾಲ ಇರುತ್ತವೆ. ಆದರೆ ಇವುಗಳೆಲ್ಲ ಕ್ಷಣಿಕ. ತಾಳೆಯಗಿಡ ಒಂದೇ ಸತ್ಯ-

ಆದರ ಒಂದೆರಡು ಹಣ್ಣು ಕೆಳಗೆ ಬಿದ್ದರೆ ನಾವು ಏತಕ್ಕೆ ವ್ಯಥೆಪಡ ಬೇಕು?

೨೬೪. ಕಾಮಿನಿ ಕಾಂಚನ ತ್ಯಾಗ ಕೇವಲ ಸನ್ಯಾಸಿಗಳಿಗೆ ಮಾತ್ರ ಹೇಳಿರುವುದು. ಸನ್ಯಾಸಿಗಳು ಹೆಂಗಸರ ಚಿತ್ರದ ಕಡೆ ಕೂಡ ನೋಡಬಾರದು. ಉಪ್ಪಿನಕಾಯಿ ಆಲೋಚನೆಯೇ ಬಾಯಲ್ಲಿ ನೀರೂ ರುವಂತೆ ಮಾಡುವುದು. ನಾವು ಅವುಗಳನ್ನು ನೋಡಬೇಕಾಗಿಲ್ಲ. ಅಥವಾ ಮುಟ್ಟಬೇಕಾಗಿಲ್ಲ. ಆದರೆ ಕಠೋರ ನಿಯಮಗಳು ನಿಮ್ಮಂಥ ಗೃಹಸ್ಥರಿಗೆ ಅಲ್ಲ. ಇದು ಕೇವಲ ಸಂನ್ಯಾಸಿಗಳಿಗೆ ಮಾತ್ರ. ನಿಮ್ಮಂಥಹ ವರು ಹೆಂಗಸರ ಮಧ್ಯದಲ್ಲಿ ದೇವರ ಮೇಲೆ ಮನಸ್ಸನ್ನಿಟ್ಟು ಅನಾಸಕ್ತ ರಾಗಿ ಇರಬಹುದು. ಹಾಗೆ ನಿಮ್ಮ ಮನಸ್ಸು ಸತ್ಸಂಗದಿಂದ ದೇವರ ಮೇಲೆ ನಿಲ್ಲುವಂತೆ ಮಾಡುವುದಕ್ಕಾಗಿ ಪುರುಷರು ಸ್ತ್ರೀಯರಿಂದ ದೂರ ವಾದ ನಿರ್ಜನಪ್ರದೇಶಕ್ಕೆ ಹೋಗಬೇಕು. ನೀವೆಲ್ಲಾ ಏಕಾಂಗಿ ಯಾಗಿದ್ದು, ಜ್ಞಾನಕ್ಕಾಗಿ ತವಕದಿಂದ ದೇವರಿಗೆ ಪ್ರಾರ್ಥಿಸಬೇಕು. ಅಂತಹ ಸ್ಥಳದಲ್ಲಿ ಮೂರು ದಿನಗಳು ಇರಬೇಕು ಅಥವಾ ಸಾಧ್ಯವಿಲ್ಲ ದಿದ್ದರೆ ಒಂದು ದಿನವಾದರೂ ಇರಬೇಕು ಗೃಹಸ್ಥನಾದುದರಿಂದ ನಿಮಗೆ ಒಂದೆರಡು ಮಕ್ಕಳಾದ ಮೇಲೆ ಸಹೋದರ–ಸಹೋದರಿಯರಂತೆ ಸತಿ ಯೊಡನೆ ಇದ್ದು ಬ್ರಹ್ಮಚರ್ಯ ಮತ್ತು ಸಾಧನೆಯ ಜೀವನವನ್ನು ನಡೆಸುವುದಕ್ಕೆ ಶಕ್ತಿಯನ್ನು ನೀಡೆಂದು ದೇವರನ್ನು ಪ್ರಾರ್ಥಿಸಬೇಕು.

೨೬೫. ಪ್ರಪಂಚದಲ್ಲಿರಿ. ಆದರೆ ಪ್ರಾಪಂಚಿಕರಾಗಬೇಡಿರಿ. ಹಿಂದಿನವರು ಹೇಳುವಂತೆ, ಹಾವಿನಮುಂದೆ ಕಪ್ಪೆಯನ್ನು ಕುಣಿಯು ವಂತೆಮಾಡಿ. ಆದರೆ ಹಾವು ಅದನ್ನು ನುಂಗದಂತೆ ನೋಡಿಕೊಳ್ಳಿ.

೨೬೬. ನೀರಿನಮೇಲೆ ದೋಣಿಯಿರಬಹುದು. ಆದರೆ ದೋಣಿ ಯೊಳಗೆ ನೀರು ಇರಕೂಡದು. ಸಾಧಕ ಪ್ರಪಂಚದಲ್ಲಿರಬಹುದು, ಆದರೆ ಪ್ರಾಪಂಚಿಕತೆ ಅವನಲ್ಲಿರಕೂಡದು.

೨೬೭. ನೀವು ಗೃಹಸ್ಥರಾದರೆ ಬಾಧಕವಿಲ್ಲ. ನಿಮ್ಮ ಮನ ಸ್ಸನ್ನು ದೇವರ ಮೇಲಿಡಬೇಕು. ಒಂದು ಕೈಯ್ಯಿಂದ ನಿಮ್ಮ ಕೆಲಸ ವನ್ನು ಮಾಡಿ ಮತ್ತೊಂದು ಕೈಯ್ಯಿಂದ ದೇವರ ಪಾದಗಳನ್ನು ಹಿಡಿ ಯಿರಿ. ಪ್ರಪಂಚದಲ್ಲಿ ಮಾಡಬೇಕಾದ ಕೆಲಸವಿಲ್ಲದೆ ಇರುವಾಗ ಎರಡು ಕೈಗಳಿಂದಲೂ ಅವನ ಪಾದಗಳನ್ನು ನಿಮ್ಮ ಹೃದಯಕ್ಕೆ ಅಪ್ಪಿಕೊಳ್ಳಿ.

೨೭೮. ಪ್ರಪಂಚದಲ್ಲಿದ್ದರೂ ಅದಕ್ಕೆ ಆಸಕ್ತನಾಗದೆ ಇರುವವನ ಸ್ವಭಾವ ಎಂತಹುದು? ಅವನು ನೀರಿನಲ್ಲಿರುವ ಕಮಲದ ಎಲೆಯಂತೆ ಅಥವಾ ಕೆಸರಿನಲ್ಲಿರುವ ಕೆಸರು ಮೀನಿನಂತೆ. ಇವೆರಡೂ ತಾವು ವಾಸಿಸುವ ವಸ್ತುವಿನಿಂದ ಕೆಡುವುದಿಲ್ಲ. ನೀರು ಎಲೆಯನ್ನು ಒದ್ದೆ ಮಾಡುವುದಿಲ್ಲ. ಕೆಸರು ಮೀನಿನ ನುಣುಪಾದ ದೇಹವನ್ನು ಕೊಳೆ ಮಾಡುವುದಿಲ್ಲ.

೨೭೯. ನೀನು ಗೃಹಸ್ಥನೋ ಅಲ್ಲವೋ ಅದೇನೂ ಅಷ್ಟು ಪ್ರಾಮುಖ್ಯವಲ್ಲ. ನಿಮ್ಮ ಮನಸ್ಸನ್ನು ಯಾವಾಗಲೂ ದೇವರಮೇಲೆ ಇಟ್ಟು ಅನಾಸಕ್ತರಾಗಿ ನಿಮ್ಮ ಕೆಲಸಗಳನ್ನು ನಿರ್ವಹಿಸಿ. ಉದಾಹರಣೆಗೆ, ಬೆನ್ನಿನಮೇಲೆ ಒಂದು ಕುರು ಎದ್ದಿರುವ ಮನುಷ್ಯ ತನ್ನ ಸ್ನೇಹಿತರು ಮುಂತಾದವರೊಂದಿಗೆ ಮಾತನಾಡುತ್ತಾನೆ; ಕೆಲಸವನ್ನು ಮಾಡುತ್ತಾನೆ. ಆದರೆ ಅವನ ಮನಸ್ಸೆಲ್ಲಾ ಅವನ ನೋವಿನ ಮೇಲಿರುವುದು.

೨೮೦. ವಿವೇಕ, ವೈರಾಗ್ಯ ಮತ್ತು ಭಕ್ತಿ ಇವುಗಳೊಂದಿಗೆ ಪ್ರಪಂಚದಲ್ಲಿದ್ದರೆ ಯಾವ ಅಪಾಯವೂ ಇಲ್ಲ.

೨೮೧. ಪ್ರಶ್ನೆ: ಪ್ರಪಂಚದಲ್ಲಿ ನಮ್ಮನ್ನು ಇಟ್ಟಿರುವಾಗ ನಮ್ಮ ಕೆಲಸವೇನು?

ಉತ್ತರ: ಎಲ್ಲವನ್ನೂ ನೀವು ದೇವರಿಗೆ ಬಿಟ್ಟುಬಿಡಿ. ಅವನಲ್ಲಿ ಶರಣಾಗತರಾಗಿ. ನಿಮಗೆ ಯಾವ ತೊಂದರೆಯೂ ಬರುವುದಿಲ್ಲ. ಎಲ್ಲವೂ ಅವನ ಇಚ್ಛೆಯಿಂದ ನಡೆಯುವುದೆಂದು ಆಗ ನಿಮಗೆ ಗೊತ್ತಾಗುವುದು.

೨೮೨. ದೇವರನ್ನು ನೋಡುವ ಭಾಗ್ಯ ಗೃಹಸ್ಥರಿಗೂ ಲಭಿಸಬಹುದು. ರಾಜಋಷಿ ಜನಕಮಹಾರಾಜ ಇಂತಹವನು. ಜನಕಮಹಾರಾಜ ಪ್ರಪಂಚದ ಗೊಂದಲದಿಂದ ದೂರಹೋಗಿ ನಿರ್ಜನ ಪ್ರದೇಶದಲ್ಲಿ ಹಲವು ವರ್ಷಗಳು ಸಾಧನೆಯಲ್ಲಿ ಕಳೆದನು. ದೇವರನ್ನು ಸಾಕ್ಷಾತ್ಕಾರ ಮಾಡಿಕೊಳ್ಳುವುದಕ್ಕಾಗಿ, ಆಗಾಗ್ಗೆ ಮೂರು ದಿನಗಳಾದರೂ ನಿರ್ಜನ ಪ್ರವಾಸ ಮಾಡುವುದರಿಂದ ಗೃಹಸ್ಥರಿಗೆ ಎಷ್ಟೋ ಮೇಲಾಗುವುದು.

೨೮೩. ಕೆಲವು ಬ್ರಹ್ಮಸಮಾಜದ ಹುಡುಗರು ತಾವು ಜನಕನನ್ನು ಅನುಸರಿಸುತ್ತಿರುವೆವು, ಪ್ರಪಂಚದಲ್ಲಿರುವೆವು, ಆದರೆ ಅನಾಸಕ್ತರಾಗಿರುವೆವು ಎಂದರು. ಒಬ್ಬನನ್ನು ಜನಕನೆಂದು ಹೇಳುವುದು ಸುಲಭ, ಆದರೆ ನಿಜವಾಗಿ ಹಾಗೆ ಇರುವ ವಿಷಯವೇ ಬೇರೆ ಎಂದೆ ನಾನು. ವಿಷಯ

ವಸ್ತುಗಳಮಧ್ಯದಲ್ಲಿ ಆದರಿಂದ ಮೈಲಿಗೆಯಾಗದೆ ವ್ಯವಹರಿಸುವುದು ಬಹಳಕಷ್ಟ. ಮೊದಲಲ್ಲಿ ಜನಕನು ಎಂತಹ ಕಠಿಣಸಾಧನೆಗಳನ್ನು ಮಾಡಿದನು! ಅವನಷ್ಟೆ ನೀವೆಲ್ಲ ಕಷ್ಟಪಡಿ ಎಂದು ನಾನು ನಿಮಗೆ ಹೇಳುವುದಿಲ್ಲ. ನಿರ್ಜನಪ್ರದೇಶದಲ್ಲಿ ಕೆಲಕಾಲ ಏಕಾಂತಸಾಧನೆ ಮಾಡಬೇಕೆಂದು ನಾನು ಹೇಳುವೆನು. ಜ್ಞಾನ ಭಕ್ತಿ ಪಡೆದಮೇಲೆ ಸಂಸಾರವನ್ನು ಪ್ರವೇಶಿಸಿ. ಅಲುಗಾಡದೆ ಸುಮ್ಮನೆ ಇಟ್ಟ ಹಾಲಿನಿಂದಲೇ ಒಳ್ಳೆಯ ಮೊಸರಾಗುವುದು. ಅಲುಗಾಡಿಸುವುದರಿಂದ ಅಥವಾ ಪಾತ್ರೆಯನ್ನು ಬದಲಾಯಿಸುವುದರಿಂದ ಮೊಸರು ಕೆಡುವುದು. ಜನಕ ನಿಸ್ಸಂಗನಾಗಿದ್ದನು. ಅವನಿಗೆ ಇನ್ನೊಂದು ಹೆಸರು ವಿದೇಹ ಎಂದರೆ ದೇಹವಿಲ್ಲದವನು. ಅವನು ಜೀವನ್ಮುಕ್ತನಂತೆ ಇದ್ದನು. ದೇಹವೆಂಬ ಭಾವನೆಯನ್ನು ನಾಶಮಾಡುವುದು ಬಹಳ ಕಷ್ಟ. ಸತ್ಯವಾಗಿಯೂ ಜನಕನು ದೊಡ್ಡ ಧೀರನಾಗಿದ್ದ. ಜ್ಞಾನ ಮತ್ತು ಕರ್ಮಗಳೆಂಬ ಎರಡು ಕತ್ತಿಯನ್ನು ಸುಲಭವಾಗಿ ಅವನು ಉಪಯೋಗಿಸಿದನು.

೨೭೪. ಪ್ರಪಂಚದಲ್ಲಿದ್ದರೂ ಸಿದ್ಧಿಯನ್ನು ಪಡೆದನು ಜನಕ ಎಂದು ಜನರು ಯಾವಾಗಲೂ ಉದಾಹರಣೆಯನ್ನು ಕೊಡುತ್ತಾರೆ. ಆದರೆ ಇಡೀ ವಿಶ್ವದ ಇತಿಹಾಸದಲ್ಲಿ ಸಿಕ್ಕುವ ಉದಾಹರಣೆ ಇದೊಂದೇ. ಇದೊಂದು ನಿಯಮವಲ್ಲ, ವಿನಾಯತಿ, ಅಪರೂಪ ಸಂಗತಿ. ಸಾಧಾರಣ ನಿಯಮವೇನೆಂದರೆ ಕಾಮಕಾಂಚನ ತ್ಯಾಗವಿಲ್ಲದೆ ಯಾರೂ ದೇವರನ್ನು ಪಡೆಯಲಾರರು ಎಂಬುದು. ನೀನೊಬ್ಬ ಜನಕನೆಂದು ತಿಳಿಯಬೇಡ. ಎಷ್ಟೋ ಶತಮಾನಗಳು ಆಗಿಹೋದವು. ಆದರೂ ಪ್ರಪಂಚದಲ್ಲಿ ಎರಡನೇ ಜನಕ ಇನ್ನೂ ಹುಟ್ಟಲ್ಲ.

೨೭೫. ನೀನು ಪ್ರಪಂಚದಲ್ಲಿ ನಿಸ್ಸಂಗನಾಗಿ ಇರಬೇಕೆಂದು ಇಚ್ಛಿಸಿದರೆ ಮೊದಲು ಏಕಾಂತ ಸ್ಥಳದಲ್ಲಿ ಕೆಲವುಕಾಲ, ಅಂದರೆ ಒಂದು ವರ್ಷವೋ ಆರುತಿಂಗಳೋ, ಒಂದುತಿಂಗಳೋ, ಹನ್ನೆರಡು ದಿನಗಳೋ ಸಾಧನೆಮಾಡಿರಬೇಕು. ಹೀಗೆ ಏಕಾಂತದಲ್ಲಿರುವಾಗ ಯಾವಾಗಲೂ ದೇವರನ್ನು ಧ್ಯಾನಿಸಬೇಕು ಮತ್ತು ಭಕ್ತಿಯನ್ನು ದಯಪಾಲಿಸಬೇಕೆಂದು ಪ್ರಾರ್ಥಿಸಬೇಕು. ನಿನ್ನದು ಎಂದು ಹೇಳಿಕೊಳ್ಳುವಂತಹವಸ್ತು ಪ್ರಪಂಚದಲ್ಲಿ ಯಾವುದೂ ಇಲ್ಲವೆಂದು ತಿಳಿಯಬೇಕು. ನಿನ್ನದು ಎಂದು ಯಾವುದನ್ನು ನೀನು ತಿಳಿದುಕೊಂಡಿರುವೆಯೋ ಎಂದಾದರೊಂದುದಿನ ಅದು ನಾಶವಾಗುವುದರಲ್ಲಿ ಸಂದೇಹವಿಲ್ಲ. ದೇವರೊಬ್ಬನೆ ನಿನ್ನವನು.

ಅವನೇ ನಿನ್ನ ಸರ್ವಸ್ವ. ಅವನನ್ನು ಹೊಂದುವುದು ಹೇಗೆ? ಇದೊಂದೆ ನಿನ್ನ ಮುಖ್ಯ ಗುರಿಯಾಗಬೇಕು.

೨೭೬. ನೀನು ಸಾಧನೆಯಲ್ಲಿ ನಿರತನಾಗಿರುವಾಗ ಯಾರು ಅದನ್ನು ತಾತ್ಸಾರದಿಂದ ನೋಡುವರೋ ಮತ್ತು ಧರ್ಮ ಮತ್ತು ಧರ್ಮಾತ್ಮರನ್ನು ಯಾರು ಅಸಡ್ಡೆಯಿಂದ ಕಾಣುವರೋ ಅವರಿಂದ ದೂರವಿರು.

೨೭೭. ನೀನು ಮೊದಲು ಕೈಗೆ ಎಣ್ಣೆ ಸವರಿಕೊಂಡು ಹಲಸಿನ ಹಣ್ಣನ್ನು ಕೊಯ್ಯಲುಹೋದರೆ ಅದರ ಅಂಟು ನಿನ್ನ ಕೈಗೆ ಅಂಟಿ ತೊಂದರೆಕೊಡುವುದಿಲ್ಲ. ಪರಮಾತ್ಮನ ನಿಜವಾದ ಜ್ಞಾನದಿಂದ ನೀನು ಸಿದ್ಧನಾಗಿ ನಂತರ ಐಶ್ವರ್ಯ ಮತ್ತು ಪ್ರಪಂಚದ ಮಧ್ಯದಲ್ಲಿ ಇದ್ದರೆ ನಿಜವಾಗಿಯೂ ಅವು ನಿನಗೆ ಯಾವ ವಿಧವಾದ ತೊಂದರೆಯನ್ನೂ ಕೊಡುವುದಿಲ್ಲ.

೨೭೮. ಉತ್ತರಮುಖಿ ಯಾವಾಗಲೂ ಉತ್ತರವನ್ನೇ ತೋರುತ್ತದೆ. ಆದಕಾರಣ ಹಡಗುಗಳು ದಾರಿಯನ್ನು ತಪ್ಪುವುದಿಲ್ಲ. ಮನುಷ್ಯನ ಮನಸ್ಸು ಎಲ್ಲಿಯವರೆಗೂ ದೇವರಮೇಲೆ ನಿಂತಿರುತ್ತದೆಯೋ ಅಲ್ಲಿಯವರೆಗೆ ಅವನು ಸಂಸಾರ ಸಾಗರದಲ್ಲಿ ದಾರಿತಪ್ಪುವುದಿಲ್ಲ.

೨೭೯. ಕಣ್ಣುಮುಚ್ಚಾಲೆ ಆಟದಲ್ಲಿ ಆಡುವವನು, ಅಜ್ಜಿಯನ್ನು ಮುಟ್ಟಿದ ಮೇಲೆ, ಹಿಡಿಯುವವನು ಅವನನ್ನು ಇನ್ನೆಂದಿಗೂ ಕಳ್ಳನನ್ನಾಗಿ ಮಾಡಲಾರ. ಇದರಂತೆಯೇ ದೇವರನ್ನು ಒಮ್ಮೆ ನಾವು ನೋಡಿದ ಮೇಲೆ ಪ್ರಪಂಚದ ಬಂಧನಗಳಿಗೆ ಒಳಗಾಗುವುದಿಲ್ಲ. ಅಜ್ಜಿಯನ್ನು ಮುಟ್ಟಿದವನು ತನ್ನ ಇಚ್ಛೆಬಂದಕಡೆ ಮತ್ತೊಬ್ಬರಿಂದ ಹಿಂಬಾಲಿಸಲ್ಪಡದೆ ಕಳ್ಳನಾಗದೆ ಹೇಗೆ ಹೋಗಬಹುದೋ ಹಾಗೆಯೇ ಪ್ರಪಂಚದ ಆಳದಲ್ಲಿ ಒಮ್ಮೆ ದೇವರ ಪಾದಕಮಲಗಳನ್ನು ಮುಟ್ಟಿದವನಿಗೆ ಭಯವಿಲ್ಲ. ಅವನು ಎಲ್ಲಾ ಆಸೆ ಆತಂಕಗಳಿಂದ ಮುಕ್ತನಾಗುವನು. ಪುನಃ ಅವನನ್ನು ಯಾವುದೂ ಬಂಧಿಸಲಾರದು.

೨೮೦. ಮೊಸಳೆಗೆ ನೀರಿನಮೇಲೆ ತೇಲುವುದಕ್ಕೆ ಇಚ್ಛೆ. ಆದರೆ ಅದು ತೇಲಿದೊಡನೆಯೇ ಬೇಟೆಗಾರರ ಲಕ್ಷ್ಯಕ್ಕೆ ಗುರಿಯಾಗುತ್ತದೆ. ಅದಕ್ಕೇ ಅದು ಯಾವಾಗಲೂ ನೀರಿನಲ್ಲಿಯೇ ಇರಬೇಕಾಗುವುದು, ಮೇಲೆ ತೇಲಲು ಸಾಧ್ಯವಿಲ್ಲ. ಆದರೂ ಯಾವಾಗಾದರೂ ಸುರಕ್ಷಿತವಾದ ಸಮಯ ಒದಗಿದರೆ ದೊಡ್ಡಧ್ವನಿಮಾಡಿ ಮೇಲೆದ್ದು ನೀರಿನ

ಮೇಲೆ ಆನಂದದಿಂದ ತೇಲುವುದು. ಸಂಸಾರಬಂಧನಗಳಿಗೆ ಸಿಕ್ಕಿದ ಮನುಷ್ಯನೇ ! ಸಚ್ಚಿದಾನಂದ ಸಾಗರದಮೇಲೆ ನೀನು ಕೂಡ ಈಜಲು ತವಕಪಡುವೆ. ಆದರೆ ಸಂಸಾರದ ತಾಪತ್ರಯಗಳಿಂದ ತಡೆಯಲ್ಪಟ್ಟಿರುವೆ. ನಿನಗೆ ಸಮಯ ದೊರೆತಾಗಲೆಲ್ಲಾ ಕಾತುರನಾಗಿ ದೇವರನ್ನು ಕರೆ. ಶ್ರದ್ಧೆಯಿಂದ ಪ್ರಾರ್ಥನೆಮಾಡು. ನಿನ್ನ ಕಷ್ಟಗಳನ್ನೆಲ್ಲಾ ಅವನಿಗೆ ಹೇಳಿಕೋ. ಸಮಯಬಂದಾಗ ನಿನ್ನನ್ನು ಮುಕ್ತನನ್ನಾಗಿಮಾಡಿ ಸಚ್ಚಿದಾನಂದಸಾಗರದಮೇಲೆ ತೇಲುವಂತೆ ಮಾಡುವನು.

೨೮೧. ಪ್ರಲೋಭನೆಗಳಿಂದ ಕೂಡಿದ ಸ್ಥಳಕ್ಕೆ ಹೋಗಲೇ ಬೇಕಾಗಿ ಬಂದಾಗ ಜಗನ್ಮಾತೆಯನ್ನು ಯಾವಾಗಲೂ ಧ್ಯಾನಿಸು. ನಿನ್ನ ಮನಸ್ಸಿನಲ್ಲಿ ಹುದುಗಿಕೊಂಡಿರುವ ಹಲವು ಹೀನ ಆಲೋಚನೆಗಳಿಂದ ಅವಳು ನಿನ್ನನ್ನು ಪಾರುಮಾಡುವಳು. ಜಗನ್ಮಾತೆಯ ಸಾನ್ನಿಧ್ಯದಲ್ಲಿ ಹೀನ ಆಲೋಚನೆ ಮತ್ತು ಹೀನಕೃತ್ಯ ಮಾಡಲು ನಾಚಿಕೆಯಾಗುವುದು.

೨೮೨. ದೇವರು ಮತ್ತು ಪ್ರಪಂಚ ಇವೆರಡನ್ನೂ ಹೇಗೆ ರಾಜಿ ಮಾಡಲು ಸಾಧ್ಯ? ಬಡಗಿಯ ಹೆಂಡತಿಯನ್ನು ನೋಡಿ! ಅವಳು ಅಷ್ಟೊಂದು ಕೆಲಸದಲ್ಲಿ ನಿರತಳಾಗಿರುವಳು. ಒಂದು ಕೈಯಿಂದ ಯಾತದ ಕೆಳಗಿರುವ ಅವಲಕ್ಕಿಯನ್ನು ಕೆದಕುತ್ತಿರುವಳು. ಮತ್ತೊಂದು ಕೈಯ್ಯಿಂದ ಮಗುವಿಗೆ ಹಾಲನ್ನೂ ಕೊಡುತ್ತಿರುವಳು. ಅದೇಕಾಲದಲ್ಲಿ ಯಾರಾದರೂ ಅವಲಕ್ಕಿ ಕೊಳ್ಳಲು ಬಂದರೆ ಅವರೊಡನೆ ವ್ಯಾಪಾರ ಮಾಡುವಳು. ಇಷ್ಟೊಂದು ಕೆಲಸಗಳಲ್ಲಿ ನಿರತಳಾಗಿದ್ದರೂ ಅವಳ ಮನಸ್ಸೆಲ್ಲಾ ಎಲ್ಲಿ ಯಾತ ಕೈಮೇಲೆಬಿದ್ದು ಗಾಯವಾಗುವುದೋ ಎನ್ನುವುದರಮೇಲಿದೆ. ಆದಕಾರಣ ಪ್ರಪಂಚದಲ್ಲಿರಿ. ಆದರೆ ಯಾವಾಗಲೂ ಅವನನ್ನು ಜ್ಞಾಪಕದಲ್ಲಿಟ್ಟುಕೊಳ್ಳಿ. ಅವನನ್ನು ಬಿಟ್ಟು ಅಡ್ಡದಾರಿಯನ್ನು ಹಿಡಿಯಬೇಡಿ.

೨೮೩. ಹುಡುಗನು ಕಂಬವನ್ನು ಹಿಡಿದುಕೊಂಡು ತಾನು ಬೀಳುತ್ತೇನೆಂಬ ಅಂಜಿಕೆಯಿಲ್ಲದೆ ಹೇಗೆ ವೇಗವಾಗಿ ತಿರುಗುತ್ತಾನೆಯೋ ಹಾಗೆಯೇ ನಿಮ್ಮ ಮನಸ್ಸನ್ನೆಲ್ಲಾ ದೇವರಮೇಲೆ ಇಟ್ಟು ನಿಮ್ಮ ಪ್ರಾಪಂಚಿಕ ಕೆಲಸಗಳನ್ನು ಮಾಡಿ. ನೀವು ಅಪಾಯದಿಂದ ಪಾರಾಗುವಿರಿ.

೨೮೪. ಹಳ್ಳಿಗಳಕಡೆ ಇಂಡಿಯಾದೇಶದಲ್ಲಿ ಹೆಂಗಸರು ಒಂದರ ಮೇಲೆ ಒಂದರಂತೆ ನಾಲ್ಕೈದು ಕೊಡ ನೀರನ್ನು ಹೊತ್ತುಕೊಂಡು ಹೋಗುತ್ತ ಒಬ್ಬರೊಡನೊಬ್ಬರು ತಮ್ಮ ಸುಖ ದುಃಖದ ಕಥೆಗಳನ್ನು ಹೇಳಿಕೊಳ್ಳುತ್ತಾ ಹೋಗುವಾಗಲೂ ಒಂದುತೊಟ್ಟು ನೀರೂ ಚೆಲ್ಲದಂತೆ

ನೋಡಿಕೊಳ್ಳುವ ಹಾಗೆಯೇ, ಧರ್ಮದ ಹಾದಿಯಲ್ಲಿ ನಡೆಯುವವನೂ ಕೂಡ ಇರಬೇಕು. ಅವನು ಎಂತಹ ಸ್ಥಿತಿಯಲ್ಲಿದ್ದರೂ ಧರ್ಮದಿಂದ ದೂರವಾಗದಂತೆ ಜೋಪಾನವಾಗಿರಬೇಕು.

೨೮೫. ಜಾರೆ ಮನೆಯ ಕೆಲಸದಲ್ಲಿ ನಿರತಳಾಗಿದ್ದರೂ ಯಾವಾಗಲೂ ಜಾರನನ್ನು ನೆನೆಯುವಂತೆಯೇ, ಎಲೈ ಗೃಹಸ್ಥನೇ ನಿಮ್ಮ ಪ್ರಪಂಚದ ಕಾರ್ಯಗಳನ್ನು ಮಾಡು, ಆದರೆ ನಿನ್ನ ಮನಸ್ಸು ಯಾವಾಗಲೂ ದೇವರಮೇಲೆ ನೆಲಸಿರಲಿ.

೨೮೬. ಶ್ರೀಮಂತರ ಮನೆಯಲ್ಲಿ ದಾದಿಯು ಯಜಮಾನನ ಮಗುವಿನಮೇಲೆ ತನ್ನ ಸ್ವಾಧೀನವೇನೂ ಇಲ್ಲದೆ ಇದ್ದರೂ ಅದನ್ನು ತನ್ನದೆಂದೇ ಪ್ರೀತಿಸುವಂತೆ ನೀವುಕೂಡ ನಿಮ್ಮಮಕ್ಕಳ ಹಿತಚಿಂತಕರು ಮತ್ತು ರಕ್ಷಕರು ದೇವರೇ ಅವರ ತಂದೆ ಎಂದು ತಿಳಿಯಬೇಕು.

೨೮೭. ದಾರಿಹೋಕನು ಒಂದು ಕೈಯಲ್ಲಿ ಕಿಂದರಿ ಬಾರಿಸುತ್ತ ಮತ್ತೊಂದು ಕೈಯಲ್ಲಿ ತಬಲ ಹೊಡೆಯುತ್ತ ಅದೇಕಾಲದಲ್ಲಿಯೇ ಹಾಡುವಂತೆಯೆ, ಎಲೈ ಗೃಹಸ್ಥನೇ, ನೀನೂಕೂಡ ಕೈಗಳಿಂದ ಎಲ್ಲಾ ಕೆಲಸಗಳನ್ನೂ ಮಾಡುತ್ತ ಹೃತ್ಪೂರ್ವಕವಾಗಿ ದೇವರ ಕೀರ್ತನೆ ಮತ್ತು ಸ್ತೋತ್ರಗಳನ್ನು ಮಾಡುವುದನ್ನು ಮರೆಯಬೇಡ.

೨೮೮. ದಾಸಿಯು ತನ್ನ ಯಜಮಾನನ ಮನೆಯನ್ನು ಕುರಿತು "ಇದು ನನ್ನ ಮನೆ" ಎನ್ನುವಳು. ಆದರೆ ನಿಜವಾಗಿ ಇದು ತನ್ನ ಮನೆ ಅಲ್ಲ. ಅದು ಇರುವುದು ದೂರದಲ್ಲಿ, ಬರ್ದವಾನಿನ ನದಿಯ ತೀರದಲ್ಲಿ ಎನ್ನುವುದು ಅವಳಿಗೆ ಗೊತ್ತಿದೆ. ಅವಳ ಮನಸ್ಸಿನ ಆಲೋಚನೆಯೆಲ್ಲ ಅವಳ ಹಳ್ಳಿಯ ಮನೆಯಮೇಲೆ. ತನ್ನ ಕೊಂಕುಳಲ್ಲಿರುವ ಯಜಮಾನನ ಮಗುವನ್ನು ನೋಡಿ "ನನ್ನ ಹರಿ ತುಂಬ ತುಂಟ" ಅಥವಾ "ನನ್ನ ಹರಿಗೆ ಇದು ಇಷ್ಟ ಅದು ಇಷ್ಟ" ಎಂದು ಹೇಳುವಳು. ಅವಳಿಗೆ ನಿಜವಾಗಿ ತನ್ನದಲ್ಲ ಆ ಮಗುವೆಂಬುದು ಗೊತ್ತಿದೆ. ನನ್ನ ಹತ್ತಿರ ಬರುವವರಿಗೆ ಅಂತಹ ದಾಸಿಯಂತೆ ನೀವು ಜೀವನವನ್ನು ನಡೆಸಿ ಎಂದುಹೇಳುತ್ತೇನೆ. ಪ್ರಪಂಚದಲ್ಲಿರಬೇಕು ಆದರೆ ಪ್ರಾಪಂಚಿಕತೆಯಲ್ಲಿರಬಾರದು ಮತ್ತು ಏಕಕಾಲದಲ್ಲಿ ನಮ್ಮ ಮನಸ್ಸೆಲ್ಲಾ ಪರಮಾತ್ಮನ ಮೇಲೆ, ಯಾವುದು ಎಲ್ಲಾ ವಸ್ತುಗಳಿಗೂ ಮೂಲವೋ ಅದರಮೇಲೆ ನೆಲಸಿರಬೇಕು.

೨೮೯. ನಿನ್ನ ಮನೆಗೆ ಸಂಬಂಧಪಟ್ಟ ಕೆಲಸಗಳಾವುವೂ ನಿನಗೆ ಸಂಬಂಧಪಟ್ಟಿಲ್ಲ. ಇದೆಲ್ಲಾ ದೇವರಿಗೆ ಸಂಬಂಧ ಪಟ್ಟದ್ದು. ಅವನ ಅಪ್ಪಣೆಯನ್ನು ಪರಿಪಾಲಿಸುವುದಕ್ಕೆ ಬಂದ ಸೇವಕ ನೀನು ಎಂದು ಯಾವಾಗಲೂ ತಿಳಿ. ಈ ಭಾವನೆ ದೃಢವಾದರೆ ತನ್ನದು ಎಂದು ಹೇಳಿಕೊಳ್ಳುವುದು ಯಾವುದೂ ಉಳಿಯುವುದಿಲ್ಲ.

೨೯೦. ದೇವರಮೇಲೆ ತನ್ನ ಮನಸ್ಸನ್ನು ನಿಲ್ಲಿಸಿ ಯಾವನು ಪ್ರಪಂಚದ ಕರ್ತವ್ಯಗಳನ್ನೆಲ್ಲಾ ಮಾಡುತ್ತಾನೆಯೋ ಅವನೇ ನಿಜವಾದ ಧೀರ. ಎರಡು ಮಣ ಹೊರೆಯನ್ನು ತಲೆಯಮೇಲೆ ಹೊತ್ತುಕೊಂಡು ಹೋಗುತ್ತಿರುವಾಗ ದಾರಿಯಲ್ಲಿ ಬರುವ ಮದುವೆಯ ಮೆರವಣಿಗೆಯನ್ನು ನಿಂತುನೋಡಬೇಕಾದರೆ ತುಂಬ ಬಲಶಾಲಿಗಳಿಗಲ್ಲದೆ ಅನ್ಯರಿಗೆ ಸಾಧ್ಯವಿಲ್ಲ.

೨೯೧ ಪ್ರಪಂಚದಲ್ಲಿದ್ದು ಮೋಕ್ಷವನ್ನು ಪಡೆಯಲು ಯತ್ನಿಸುವವರು ಕೋಟೆಯ ಹಿಂದೆ ನಿಂತುಕೊಂಡು ಕಾದಾಡುವ ಯೋಧರಂತೆ. ದೇವರನ್ನು ಹುಡುಕುವುದಕ್ಕಾಗಿ ಎಲ್ಲವನ್ನೂ ತ್ಯಜಿಸಿದ ಸನ್ಯಾಸಿಗಳಾದರೋ ಅಡಚಣೆಯಿಲ್ಲದ ಮೈದಾನದಲ್ಲಿ ನಿಂತು ಕಾದುವ ಯೋಧರಂತೆ.

೨೯೨. ಶತ್ರುವಿನೊಂದಿಗೆ ಕಾದಾಡುವುದಕ್ಕೆ ಮುಂಚೆ ತಮ್ಮ ಕೋಟೆಯಲ್ಲೇ ಯುದ್ಧಮಾಡುವುದನ್ನು ಕಲಿತುಕೊಳ್ಳುವರು. ನಿಜವಾದ ಶತ್ರುವಿನೊಂದಿಗೆ ಹೋರಾಡುವಾಗ ಇರುವ ಕಷ್ಟಗಳು ಅವರಿಗೆ ಇರುವುದಿಲ್ಲ. ಆದಕಾರಣವೇ ಸನ್ಯಾಸಿ ಜೀವನದ ಕಠೋರ ನಿಯಮಗಳನ್ನು ಸ್ವೀಕರಿಸುವುದಕ್ಕೆ ಗೃಹಸ್ಥಾಶ್ರಮದಲ್ಲಿರುವ ಅವಕಾಶವನ್ನು ನಿಮ್ಮ ಆಧ್ಯಾತ್ಮಿಕ ಉನ್ನತಿಗೆ ಉಪಯೋಗಿಸಿ.

೨೯೩, ಯಾರಲ್ಲಿ ಹೃದಯ ಮತ್ತು ಬುದ್ಧಿಗೆ ಸಂಬಂಧಪಟ್ಟ ಗುಣಗಳೆಲ್ಲಾ ಚೆನ್ನಾಗಿ ವಿಕಾಸಹೊಂದಿ ಸಮತೂಕದಲ್ಲಿರುವುದೋ ಅವನೇ ಧನ್ಯ. ಅವನು ಯಾವ ಸನ್ನಿವೇಶದಲ್ಲಿದ್ದರೂ ಅದಕ್ಕೆ ಸರಿಯಾಗಿ ಹೊಂದಿಕೊಳ್ಳುವನು. ಸರಳಭಕ್ತಿ, ಪ್ರೇಮ ಅವನಲ್ಲಿ ತುಂಬಿತುಳುಕಾಡುತ್ತಿರುವುದು. ಆದರೂ ಅವನು ಅನ್ಯರೊಡನೆ ಮಾಡುವ ವ್ಯವಹಾರದಲ್ಲಿ ಯಾವ ಲೋಪದೋಷಗಳೂ ಇರುವುದಿಲ್ಲ. ವ್ಯಾವಹಾರಿಕ ಕರ್ತವ್ಯದಲ್ಲಿ ನಿರತನಾಗಿರುವಾಗ ಅವನು ನಿಪುಣನಾದ ಉದ್ಯೋಗಿ. ಪಂಡಿತರ ಗೋಷ್ಠಿಯಲ್ಲಿ ತಾನು ಬಹಳ ವಿದ್ಯಾವಂತ

ನೆಂದು ಪ್ರತಿಪಾದಿಸುವನು. ವಾದಮಾಡುವಾಗ ಅತಿಚಮತ್ಕಾರವಾದ ತರ್ಕಪಾಂಡಿತ್ಯವನ್ನು ತೋರುವನು. ಅವನ ತಂದೆತಾಯಿಗಳಿಗೆ ಅವನು ತುಂಬಾ ಪ್ರೀತಿಪಾತ್ರನು ಮತ್ತು ವಿಧೇಯನು. ತನ್ನ ನೆಂಟರಿಷ್ಟರಿಗೆ ಅವನು ಪ್ರೀತಿಪಾತ್ರನು ಮತ್ತು ಮೃದುಭಾಷಿಯೂ ಆಗಿರುವನು. ತನ್ನ ನೆರೆಹೊರೆಯವರಿಗೆ ದಯಾಳುವೂ ಸಹಾನುಭೂತನೂ ಆಗಿ ಅವರಿಗೆ ಸದಾ ಒಳ್ಳೆಯದನ್ನು ಮಾಡಲು ಸಿದ್ಧನಾಗಿರುವನು. ಅವನ ಹೆಂಡತಿಗೆ ಮೂರ್ತಿವೆತ್ತ ಪ್ರೇಮ. ಅಂತಹ ಮನುಷ್ಯನು ನಿಜವಾಗಿ ಪೂರ್ಣನು.

## ಸನ್ಯಾಸಿಯ ಆದರ್ಶ

೨೯೪. ಮಾನವನ ಮೊದಲನೆ ಜೀವನ ಅವನ ತಂದೆಯಿಂದ. ಉಪನಯನ ಅವನ ಎರಡನೆಯ ಜೀವನ. ಸನ್ಯಾಸ ಅವನ ಮೂರನೆ ಜೀವನ.

೨೯೫. ಪ್ರಾಪಂಚಿಕ ವಿಷಯಗಳಲ್ಲಿ ನಿರತನಾಗಿರುವುದರಿಂದ ಅವನ ಮನಸ್ಸಿನ ಶಕ್ತಿ ಎಷ್ಟೋ ವ್ಯಯವಾಗುವುದು. ಸನ್ಯಾಸ ಜೀವನ ವನ್ನು ತೆಗೆದುಕೊಂಡರೆ ಮಾತ್ರ ಆ ನಷ್ಟದಿಂದ ಪಾರಾಗಬಹುದು.

೨೯೬. ಯಾರು ಪವಿತ್ರ ಸನ್ಯಾಸಾಶ್ರಮಕ್ಕೆ ಅರ್ಹರು? ಯಾರು ಪ್ರಪಂಚವನ್ನು ಸಂಪೂರ್ಣ ತ್ಯಜಿಸಿ, ನಾಳೆ ಊಟಮಾಡುವುದೆಲ್ಲಿ? ನಾಳೆ ಉಟ್ಟುಕೊಳ್ಳುವುದೇನು? ಎಂಬುದನ್ನು ಸ್ವಲ್ಪವೂ ಮನಸ್ಸಿನಲ್ಲಿ ಇಟ್ಟುಕೊಳ್ಳದೆ ಇರುವರೋ ಅವರೇ ನಿಜವಾಗಿಯೂ ಸನ್ಯಾಸಿಯಾಗಲು ಅರ್ಹರು. ಅವನ ಸ್ವಭಾವ, ಆವಶ್ಯಕ ಬಿದ್ದರೆ ದೊಡ್ಡಮರದ ಮೇಲಿಂದ ತನ್ನನ್ನು ರಕ್ಷಿಸಿಕೊಳ್ಳಬೇಕು ಎಂಬುದನ್ನು ಕೂಡ ಲೆಕ್ಕಿಸದೆ ಕೆಳಗೆ ಬೀಳುವವನಂತೆ ಇರಬೇಕು.

೨೯೭. ಯೋಗಿ ಮತ್ತು ಸನ್ಯಾಸಿಗಳು ಹಾವಿನಂತೆ. ಹಾವು ತನಗೋಸ್ಕರವಾಗಿ ಒಂದು ಬಿಲವನ್ನೂ ಅಗೆಯುವುದಿಲ್ಲ. ಇಲಿ ಮಾಡಿದ ಬಿಲದಲ್ಲಿ ವಾಸಿಸುವುದು. ಒಂದು ಬಿಲ ವಾಸಕ್ಕೆ ಅಯೋಗ್ಯವಾದರೆ ಮತ್ತೊಂದಕ್ಕೆ ಹೋಗುವುದು. ಇದರಂತೆಯೇ ಯೋಗಿಗಳು ಮತ್ತು ಸನ್ಯಾಸಿಗಳು ತಮಗಾಗಿ ಮನೆಯನ್ನು ಕಟ್ಟಿಕೊಳ್ಳುವುದಿಲ್ಲ. ಇನ್ನೊಬ್ಬರ ಮನೆಯಲ್ಲಿ ಇಂದು ಒಂದು ಮನೆ, ನಾಳೆ ಇನ್ನೊಂದು ಮನೆ ಹೀಗೆ ಅವರು ಕಾಲ ತಳ್ಳುವರು.

೨೯೮. ಕಾಡು ಇಲ್ಲದೆ ಇರುವ ಕಡೆ, ನೀರು ಮತ್ತು ಆಹಾರ ಸಿಕ್ಕು ವುದಕ್ಕೆ ಕಷ್ಟವಾದ ಕಡೆ ಸಾಧುಗಳು ನೆಲಸುವುದಿಲ್ಲ. ಅರಣ್ಯವೆಂದರೆ ಬಹಿರ್‌ದೇಶಕ್ಕೆ ಹೋಗುವುದಕ್ಕೆ ನಿರ್ಜನಪ್ರದೇಶ. ಆಹಾರ ನೀರು ಎಂದರೆ ಭಿಕ್ಷೆ. ಸಾಧುಗಳು ಭಿಕ್ಷದಮೇಲೆ ಜೀವನ ಮಾಡುವುದರಿಂದ ಸುಲಭವಾಗಿ ಭಿಕ್ಷೆ ಸಿಕ್ಕುವ ಸ್ಥಳಗಳನ್ನು ಅವರು ಆರಿಸುವರು. ಸಂಚಾರ ಮಾಡಿ ತುಂಬಾ ಕಷ್ಟಪಟ್ಟಾಗ ಭಿಕ್ಷಕ್ಕೆ ತೊಂದರೆಯಾದರೆ ಒಂದೆರಡು ದಿನ ಅವರು ಒಂದೇಸ್ಥಳದಲ್ಲಿ ನಿಲ್ಲಬಹುದು. ಆದರೆ ತಮ್ಮ ದೇಹಬಾಧೆ ಯನ್ನು ತೀರಿಸಿಕೊಳ್ಳುವುದಕ್ಕೆ ನೀರು ಮತ್ತು ನಿರ್ಜನಪ್ರದೇಶವಿಲ್ಲ ದಿದ್ದರೆ ಅವರು ಅಲ್ಲಿ ನಿಲ್ಲುವುದಿಲ್ಲ. ನಿಜವಾದ ಸಾಧುಗಳು ಇನ್ನೊಬ್ಬರ ಕಣ್ಣಿಗೆ ಬೀಳುವಕಡೆ ದೇಹನೈರ್ಮಲ್ಯಕ್ಕೆ ಸಂಬಂಧಿಸಿದ ಯಾವ ಕಾರ್ಯ ವನ್ನೂ ಮಾಡುವುದಿಲ್ಲ ಜನರ ಗುಂಪಿನಿಂದ ದೂರವಾದ ನಿರ್ಜನ ಪ್ರದೇಶದಲ್ಲಿ ಅವರು ಇವನ್ನು ತೀರಿಸಿಕೊಳ್ಳುವರು.

೨೯೯. ಬಿಳಿಬಟ್ಟಗೆ ಒಂದು ಸಣ್ಣ ಚುಕ್ಕೆಯಾದರೂ ಅದು ಅವಲಕ್ಷಣವಾಗಿ ಕಾಣುತ್ತದೆ. ಇದರಂತೆಯೇ ಸಾಧುವಿನ ಸಣ್ಣ ತಪ್ಪು ಕೂಡ ಬಹಳ ಶೋಚನೀಯವಾದ ದೊಡ್ಡ ತಪ್ಪಿನಂತೆ ಕಾಣುವುದು.

೩೦೦. ಪೂರ್ಣ ಸನ್ಯಾಸಿ ತಾನೆ ನಿಸ್ಸಂಗಿಯಾಗಿ ಇರಬಹುದು, ಇಂದ್ರಿಯಗಳಮೇಲೆ ಪೂರ್ಣ ನಿಗ್ರಹವಿರಬಹು. ಆದರೂ ಜಗತ್ತಿಗೆ ಒಂದು ಆದರ್ಶವನ್ನು ತೋರುವುದಕ್ಕಾಗಿ ಕಾಮಿನಿ ಕಾಂಚನಗಳನ್ನು ಸಂಪೂರ್ಣ ತ್ಯಾಗಮಾಡಬೇಕು. ಸನ್ಯಾಸಿಯ ಸಂಪೂರ್ಣ ತ್ಯಾಗವನ್ನು ನೋಡಿದಾಗ ಮಾತ್ರ ಜನರಿಗೆ ಧೈರ್ಯಬರುವುದು. ಆಗಲೇ ಅವರು ಕಾಮಕಾಂಚನಗಳನ್ನು ತೊರೆಯಲು ಯತ್ನಿಸುವರು. ಸನ್ಯಾಸಿ ಇಲ್ಲದೆ ಯಿದ್ದರೆ ತ್ಯಾಗದ ವಿಷಯವಾಗಿ ಮತ್ತಾರು ಆದರ್ಶವನ್ನು ತೋರು ತ್ತಿದ್ದರು?

೩೦೧. ನಿಜವಾದ ಸನ್ಯಾಸಿ ಮತ್ತು ತ್ಯಾಗಿಯ ಲಕ್ಷಣವೇನು? ಇಬ್ಬರಿಗೂ ಕೂಡ ಕಾಮಕಾಂಚನದ ಸಂಬಂಧ ಸ್ವಲ್ಪವೂ ಇರಕೂಡದು. ಅವರಿಗೆ ಹಣದ ಮೇಲೆ ಆಸೆ ಹುಟ್ಟಿದರೆ ಅಥವಾ ಸ್ವಪ್ನದಲ್ಲಾದರೂ ಅವರಿಗೆ ಇಂದ್ರಿಯಸ್ಖಲನ ಉಂಟಾದರೆ ಅವರ ಸಾಧನೆಯೆಲ್ಲ ನಿಷ್ಪ್ರಯೋಜನವಾದಂತೆ.

೩೦೨. ಒಬ್ಬನು ಸನ್ಯಾಸಿಯ ವೇಷವನ್ನು ಧರಿಸಿದ ಮೇಲೆ ಅವನು ನಿಜವಾದ ಸಾಧುವಿನಂತೆ ವರ್ತಿಸಬೇಕು, ನಾಟಕದಲ್ಲಿ ರಾಜನ

ಪಾತ್ರವನ್ನು ಹಾಕಿರುವವನು ರಾಜನಂತೆ, ಮಂತ್ರಿಯಪಾತ್ರ ಹಾಕಿರುವವನು ಮಂತ್ರಿಯಂತೆ ನಟಿಸುವುದನ್ನು ನೀವು ನೋಡುವುದಿಲ್ಲವೆ? ಒಂದು ದಿನ ಹಳ್ಳಿಯ ಹಾಸ್ಯಗಾರನು ಸನ್ಯಾಸಿವೇಷದಲ್ಲಿ ಆ ಊರಿನ ಜಮೀನ್ದಾರ ಹತ್ತಿರ ಹೋದನು. ಜಮೀನ್ದಾರನು ಅವನಿಗೆ ಸಣ್ಣ ಹಣದ ಚೀಲವನ್ನು ಕೊಡಬೇಕೆಂದು ಇದ್ದನು. ಅವನು ಇದನ್ನು ನಿರಾಕರಿಸಿ ಹೊರಟುಹೋದನು. ಪುನಃ ಸ್ವಲ್ಪ ಹೊತ್ತಾದ ಮೇಲೆ ಅವನು ಸ್ನಾನಮಾಡಿ ವೇಷ ಬದಲಾಯಿಸಿಕೊಂಡು ಜಮೀನ್ದಾರನು ಕೊಡಬೇಕೆಂದಿದ್ದ ಹಣವನ್ನು ಕೇಳಿದನು. ಅವನು ಸನ್ಯಾಸಿಯಂತೆ ವೇಷಹಾಕಿಕೊಂಡಿದ್ದಾಗ ಹಣವನ್ನು ಮುಟ್ಟಲಾಗಲಿಲ್ಲ. ಈಗ ಅವನ ಪಾಲಿಗೆ ಬರುವ ಒಂದು ನಾಲ್ಕಾಣೆಗಾಗಿ ಅತ್ಯಂತ ಕೃತಜ್ಞನಾಗಲು ಸಿದ್ಧನಾಗಿದ್ದನು.

೩೦೩. ಒಬ್ಬ ಮನುಷ್ಯನು ತನ್ನ ಖಾಯಿಲೆ ಮಗುವಿಗೆ ಔಷಧಿಯನ್ನು ತೆಗೆದುಕೊಂಡು ಬರುವುದಕ್ಕಾಗಿ ಅದನ್ನು ಎತ್ತಿಕೊಂಡು ಒಬ್ಬ ಸಾಧುವಿನ ಹತ್ತಿರ ಹೋದನು. ಸಾಧು ಅವನಿಗೆ ಮಾರನೆ ದಿನ ಬರುವಂತೆ ಹೇಳಿದನು. ಮಾರನೆ ದಿನ ಅವನು ಹೋದಾಗ ಸಾಧು "ಮಗುವಿಗೆ ಸಿಹಿ ಪದಾರ್ಥಗಳನ್ನು ಕೊಡಬೇಡ ಅದು ಬೇಗನೆ ವಾಸಿಯಾಗುವುದು" ಎಂದನು. ಅದಕ್ಕೆ ಮನುಷ್ಯನು "ಸ್ವಾಮಿ ಇದನ್ನು ನಿನ್ನೆಯೇ ನನಗೆ ಹೇಳಬಹುದಾಗಿತ್ತು" ಎಂದನು. ಆಗ ಸಾಧು "ಹೌದು ಹೇಳಬಹುದಾಗಿತ್ತು. ಆಗ ನನ್ನ ಹತ್ತಿರ ಸ್ವಲ್ಪ ಸಕ್ಕರೆ ಇತ್ತು. ಅದನ್ನು ನೋಡಿ ನಿನ್ನ ಮಗು ಮತ್ತೊಬ್ಬರಿಗೆ ಸಿಹಿ ತಿನ್ನಬೇಡವೆಂದು ಹೇಳಿ ಸಾಧುವೆ ಸಿಹಿಯನ್ನು ತಿನ್ನುತ್ತಿದ್ದಾನೆ, ಎಂದು ತಿಳಿಯಬಹುದಾಗಿತ್ತು" ಎಂದನು.

೩೦೪. ತಂದೆ ತಾಯಿ ಅಥವಾ ಹೆಂಡತಿಯರೊಂದಿಗೆ ಬಂದ ಮನಸ್ತಾಪದಿಂದ ಯಾರು ವೈರಾಗ್ಯ ಹೊಂದುವರೋ ಅವರನ್ನು ಜಿಗುಪ್ಸಾತ್ಯಾಗಿಗಳೆನ್ನಬಹುದು. ಅವರ ವೈರಾಗ್ಯ ಕ್ಷಣಿಕ! ಯಾರಾದರೊಬ್ಬ ಶ್ರೀಮಂತರ ಮನೆಯಲ್ಲಿ ಲಾಭದಾಯಕವಾದ ಒಂದು ಕೆಲಸ ಸಿಕ್ಕಿದರೆ ಅವನು ವೈರಾಗ್ಯವನ್ನು ತ್ಯಜಿಸುವನು.

೩೦೫. ಶಿಷ್ಯ—ನಿಜವಾದ ಸಾಧುವನ್ನು ನಾವು ಹೇಗೆ ಕಂಡು ಹಿಡಿಯುವುದು?

ಶ್ರೀ ಗುರುದೇವ—ಯಾರ ಹೃದಯ ಮತ್ತು ಜೀವನ ದೇವರಿಗೆ

ಸಂಪೂರ್ಣವಾಗಿ ಅರ್ಪಿಸಲ್ಪಟ್ಟಿರುವುದೋ ಅವನೇ ನಿಜವಾದ ಸಾಧು. ಯಾರು ಕಾಮಿನಿ ಕಾಂಚನಗಳನ್ನು ತ್ಯಜಿಸುವರೋ ಅವರೇ ನಿಜವಾದ ಸಾಧು. ಸ್ತ್ರೀಯರನ್ನು ಎಂದಿಗೂ ಪ್ರಾಪಂಚಿಕ ದೃಷ್ಟಿಯಿಂದ ನೋಡುವುದಿಲ್ಲ. ಅವರಿಂದ ಯಾವಾಗಲೂ ದೂರವಾಗಿರುವನು. ಅವರು ಹತ್ತಿರ ಬಂದರೆ ಅವನು ತನ್ನ ತಾಯಿಯಂತೆ ನೋಡಿ ಗೌರವಿಸುತ್ತಾನೆ. ಅವನು ದೇವರನ್ನು ಸದಾ ಧ್ಯಾನಿಸುತ್ತಿರುವನು. ಎಲ್ಲಾ ಕಡೆಯಲ್ಲಿಯೂ ಭಗವಂತ ಇರುವನೆಂದು ತಿಳಿದು ಅವನು ಎಲ್ಲಾ ಜೀವಿಗಳನ್ನೂ ಸೇವಿಸುವನು. ನಿಜವಾದ ಸಾಧುಗಳ ಸಾಧಾರಣ ರೀತಿ ಇದು.

೩೦೬. ಯಾವ ಸನ್ಯಾಸಿ ಔಷಧಿಯನ್ನು ಕೊಡುವನೋ, ಮಾಯಮಂತ್ರಗಳನ್ನು ಮಾಡುವನೋ, ಹಣವನ್ನು ಸ್ವೀಕರಿಸುವನೋ, ದೊಡ್ಡ ದೊಡ್ಡ ಬಾಹ್ಯಚಿಹ್ನೆಗಳ ಮೂಲಕ ತನ್ನ ಭಕ್ತಿಯನ್ನು ಪ್ರದರ್ಶಿಸುವನೋ ಅವನನ್ನು ನಂಬಬೇಡಿ.

೩೦೭. ಕ್ಷಮಾಗುಣವೇ ತ್ಯಾಗಿಯ ನೈಜಸ್ವಭಾವ.

## ಅಧ್ಯಾಯ ೯

## ಆಧ್ಯಾತ್ಮಿಕ ಜೀವನಕ್ಕೆ ಸಹಾಯ

### ಜಾತಿ ಮತ್ತು ಬಾಹ್ಯಾಚಾರ

೨೦೮. ಅರ್ಥ ಮತ್ತು ಆಕಾರ—ಅಂತರಂಗದಲ್ಲಿರುವ ಭಾವ ಮತ್ತು ಹೊರಗಿರುವ ಚಿಹ್ನೆ ಎರಡನ್ನೂ ಗೌರವಿಸು.

೩೦೯. ಭತ್ತದ ಕಾಳಿನಲ್ಲಿ ಒಳಗೆ ಇರುವ ಮೊಳಕೆ ಮಾತ್ರ ಮುಂದೆ ಬೆಳೆಗೆ ಆವಶ್ಯಕವೆಂದೂ, ಹೊಟ್ಟಿನಿಂದ ಏನೂ ಪ್ರಯೋಜನವಿಲ್ಲವೆಂದೂ ಸಾಧಾರಣವಾಗಿ ತಿಳಿಯುವರು. ಆದರೆ ಹೊಟ್ಟನ್ನು ತೆಗೆದ ಕಾಳನ್ನು ಬಿತ್ತಿದರೆ ಅದು ಮೊಳೆತು ಬೆಳೆಯನ್ನು ಕೊಡುವುದಿಲ್ಲ. ಬೆಳೆ ಬೇಕಾದರೆ ಮೇಲೆ ಹೊಟ್ಟಿರುವ ಕಾಳನ್ನು ಬಿತ್ತಬೇಕು. ಆದರೆ ನಮಗೆ ಊಟಮಾಡುವುದಕ್ಕಾಗಿ ಶುದ್ಧವಾದ ಕಾಳು ಬೇಕಾದರೆ ಹೊಟ್ಟನ್ನು ಕಾಳಿನಿಂದ ಬೇರೆ ಮಾಡಬೇಕು. ನಿಯಮ ಆಚಾರಗಳು ಧರ್ಮದ ಬೆಳವಣಿಗೆಗೆ ಮತ್ತು ಮುಂದೆ ಅದರ ಸಂರಕ್ಷಣೆಗೆ ಆವಶ್ಯಕ.

ಮುಂದೆ ಮೊಳಕೆ ಆಗುವ ಸತ್ಯದ ಕಾಳುಗಳಿಗೆ ಇರುವ ಹೊದಿಕೆಗಳು ಇವು. ಆದಕಾರಣ ಅದರ ಅಂತರಂಗದಲ್ಲಿರುವ ಸತ್ಯವನ್ನು ಪಡೆಯುವ ವರೆಗೆ ಎಲ್ಲರೂ ಅವುಗಳನ್ನು ಆಚರಿಸಬೇಕು.

೩೧೦. ಒಳಗೆ ಬಹಳ ಬೆಲೆ ಬಾಳುವ ಮುತ್ತು ಇರುವ ಕಪ್ಪೆ ಚಿಪ್ಪಿಗೆ ಅಷ್ಟು ಬೆಲೆ ಇಲ್ಲ. ಆದರೆ ಮುತ್ತು ಬೆಳೆಯಬೇಕಾದರೆ ಇದು ಆವಶ್ಯಕ. ಮುತ್ತನ್ನು ಪಡೆದವನಿಗೆ ಚಿಪ್ಪಿನಿಂದ ಉಪಯೋಗವಿಲ್ಲದೆ ಇರಬಹುದು. ಇದರಂತೆಯೇ ಪರಮ ಸತ್ಯವನ್ನು ಅಂದರೆ ದೇವರನ್ನು ಪಡೆದವನಿಗೆ ನಿಯಮಾಚಾರಗಳೇನೂ ಆವಶ್ಯಕವಿಲ್ಲ.

೩೧೧. ನಿಯಮಾಚಾರಗಳನ್ನು ಪಾಲಿಸಬೇಕು. ಆಧ್ಯಾತ್ಮಿಕ ಜೀವನದಲ್ಲಿ ಮುಂದುವರಿದ ಮೇಲೆ ಹೆಚ್ಚು ಕಾಲ ಪಾಲಿಸಬೇಕಾಗಿಲ್ಲ. ಆಗ ಮನಸ್ಸು ಅವನ ಧ್ಯಾನದಲ್ಲಿ ಐಕ್ಯವಾಗಿ ನಿಲ್ಲುವುದು.

೩೧೨. ಗಾಯ ಪೂರ್ಣವಾಗಿ ಗುಣವಾದ ಮೇಲೆ ಅದರಮೇಲಿನ ಹೊಕ್ಕು ತಾನಾಗಿಯೇ ಬಿದ್ದು ಹೋಗುವುದು. ಆದರೆ ಅದನ್ನು ಮುಂಚೆ ತೆಗೆದರೆ ರಕ್ತ ಸುರಿಯುವುದು. ಪರಮಾತ್ಮನ ಜ್ಞಾನವಾಗದ ಅಜ್ಞಾನಿಗಳು ಆಚಾರಗಳನ್ನು ಅಲ್ಲಗಳೆಯುವುದು ಸರಿಯಲ್ಲ. ಇದರಿಂದ ದುಷ್ಪರಿಣಾಮಗಳಾಗಬಹುದು.

೩೧೩. ಮರದ ಮೇಲೆಯೇ ಮಾಗಿ ತಾನಾಗಿ ಕೆಳಗೆ ಬಿದ್ದ ಹಣ್ಣು ಬಹಳ ರುಚಿಯಾಗಿರುವುದು. ಕಿತ್ತು ಕೃತಕವಾಗಿ ಮಾಗಿಸಿದ ಹಣ್ಣು ಅಷ್ಟು ರುಚಿಕರವಾಗಿರುವುದಿಲ್ಲ. ಬೇಗ ಬಾಡಿ ಹೋಗುವುದು. ಇದರಂತೆಯೇ ಯಾರು ಪೂರ್ಣತೆಯನ್ನು ಪಡೆದು ಎಲ್ಲಾ ವಸ್ತುಗಳ ಐಕ್ಯತೆಯನ್ನು ಪಡೆದಿರುವರೋ ಅವರಿಗೆ ಜಾತಿಯ ನಿಯಮಗಳು ತಾವಾಗಿಯೇ ಬಿದ್ದು ಹೋಗುವುವು. ಆದರೆ ಯಾರಿಗೆ ಇಂತಹ ಜಿತೇಂದ್ರಿಯ ಅನುಭವ ಆಗಿಲ್ಲವೊ ಅವರು ಒಳ್ಳೆಯದು ಕೆಟ್ಟದ್ದು ಎಂಬ ಭಾವನೆಯಿಂದ ಪಾರಾಗಲಾರರು. ಅವರು ಜಾತಿನಿಯಮಗಳನ್ನು ಪಾಲಿಸಬೇಕು. ಇಂತಹ ಅಜ್ಞಾನಾವಸ್ಥೆಯಲ್ಲಿರುವಾಗ ಜಾತಿಯ ನಿಯಮಾಚಾರಗಳನ್ನು ಅಲ್ಲಗಳೆದು ಸಿದ್ಧನಂತೆ ನಟಿಸಿದರೆ ಅವನು ಕೃತಕವಾಗಿ ಮಾಗಿದ ಹಣ್ಣಿನಂತೆ ಇರುವನು.

೩೧೪. ಪರಮಜ್ಞಾನ ಲಭಿಸಿದವರು ಯಜ್ಞೋಪವೀತವನ್ನು ಧರಿಸಿರಬಹುದೆ? ಆತ್ಮಜ್ಞಾನ ಲಭಿಸಿದ ಮೇಲೆ ಬಂಧನಗಳೆಲ್ಲ ತಾವಾಗಿಯೇ ಕಳಚಿ ಬೀಳುವುವು. ಆಗ ಬ್ರಾಹ್ಮಣನಿಗೂ ಶೂದ್ರನಿಗೂ,

ಮೇಲುಜಾತಿಯವನಿಗೂ, ಕೀಳುಜಾತಿಯವನಿಗೂ, ಭೇದವಿಲ್ಲ. ಆಗ ಮೇಲಿನ ಜಾತಿಯ ಚಿಹ್ನೆಯಾದ ಯಜ್ಞೋಪವೀತ ತಾನಾಗಿಯೇ ಬಿದ್ದು ಹೋಗುವುದು. ಎಲ್ಲಿಯವರೆಗೂ ಒಬ್ಬನಿಗೆ, ಮೇಲು ಕೀಳು ಗಳೆಂಬ ಭಾವನೆಯಿದೆಯೋ ಅಲ್ಲಿಯವರೆವಿಗೂ ಅವನು ಬಲಾತ್ಕಾರ ದಿಂದ ಅದನ್ನು ತೆಗೆದುಹಾಕಬೇಕಾಗಿಲ್ಲ.

೩೧೫. ಬಿರುಗಾಳಿ ಎದ್ದಿರುವಾಗ ಅಶ್ವತ್ಥ ಮತ್ತು ವಟವೃಕ್ಷ ಗಳಿಗೆ ವ್ಯತ್ಯಾಸ ಕಾಣಬರುವುದಿಲ್ಲ. ಇದರಂತೆಯೇ ಪರಮಜ್ಞಾನದ ಬಿರುಗಾಳಿ ಎದ್ದಾಗ ಜಾತಿಗಳ ಭೇದಭಾವವಿರುವುದಿಲ್ಲ.

೩೧೬. ಪ್ರೇಮದಿಂದ ಉನ್ಮತ್ತನಾದ ನಿಜವಾದ ಭಕ್ತ ಒಬ್ಬ ಹೆಂಡಕುಡುಕನಂತೆ ಅವನು ಮರ್ಯಾದೆಯ ನಿಯಮಗಳನ್ನು ಸದಾಕಾಲ ದಲ್ಲಿಯೂ ಪಾಲಿಸುವುದಿಲ್ಲ.

೩೧೭. ಒಂದು ದಿನ ಕೃಷ್ಣಕಿಶೋರನು ನನ್ನನ್ನು "ನೀನು ಯಾತಕ್ಕೆ ಯಜ್ಞೋಪವೀತವನ್ನು ಎಸೆದಿರುವೆ?" ಎಂದು ಪ್ರಶ್ನಿಸಿದನು ನನಗೆ ಆಧ್ಯಾತ್ಮಿಕ ಜೀವನದಲ್ಲಿ ಭಾವೋದ್ದೀಪನವಾದಾಗ ಪ್ರಚಂಡ ಬಿರುಗಾಳಿಯ ಎದುರಿಗೆ ಎಲ್ಲವೂ ಹಾರಿಹೋದಂತೆ ಹಾರಿಹೋದವು. ಹಿಂದಿನ ಜ್ಞಾಪಕಗಳೆಲ್ಲ ಅಳಿಸಿಹೋದವು. ಆಗ ಬಾಹ್ಯ ಪ್ರಜ್ಞೆಯೇ ಇರಲಿಲ್ಲ. ಇಂತಹ ಸಮಯದಲ್ಲಿ ಯಜ್ಞೋಪವೀತವನ್ನಾಗಲೀ ಅಥವಾ ನಾನು ಉಡುವ ಬಟ್ಟೆಯನ್ನಾಗಲೀ ನೋಡಿಕೊಳ್ಳಬೇಕೆಂಬುದು ಹೇಗೆ ಬರುವುದು? ತೀವ್ರ ಭಗವಂತನ ಧ್ಯಾನದಲ್ಲಿ ತಲ್ಲೀನನಾಗಿದ್ದಾಗ ಹಗಲಿನಲ್ಲಿ ಬಹಳ ಹೊತ್ತು ನಾನು ಬೆತ್ತಲೆ ಇದ್ದೆ, ಎಂಬುದೂ ತಿಳಿ ಯುತ್ತಿರಲಿಲ್ಲ. ಆದಕಾರಣವೇ ಯಜ್ಞೋಪವೀತವನ್ನು ಎಸೆದುದಕ್ಕೆ ಕೃಷ್ಣಕಿಶೋರನು ನನ್ನಲ್ಲಿ ತಪ್ಪು ಕಂಡುಹಿಡಿದಾಗ,"ದೇವರಿಗಾಗಿ ನಿನಗೆ ಒಂದು ದಿನ ಹುಚ್ಚುಹಿಡಿದರೆ ಇದೆಲ್ಲ ನಿನಗೆ ವಿಶದವಾಗುವುದು'' ಎಂದೆ.

೩೧೮. ಭಗವಂತನ ನಾಮೋಚ್ಚಾರಣೆ ಮಾಡುವವರು ಪುಣ್ಯ ವಂತರು. ಕೃಷ್ಣಕಿಶೋರನು ಅರಿಯಾಧ ಎಂಬ ಊರಿಗೆ ಸೇರಿದ ಧರ್ಮಾತ್ಮ. ಒಂದು ಸಲ ಅವನು ಬೃಂದಾವನಕ್ಕೆ ತೀರ್ಥಯಾತ್ರೆಗೆ ಹೋಗಿದ್ದನು. ಅಲ್ಲಿ ಹೋಗುತ್ತಿದ್ದಾಗ ಒಂದು ದಿನ ಅವನಿಗೆ ಬಾಯಾ ರಿಕೆಯಾಯಿತು. ಭಾವಿಯ ಹತ್ತಿರ ಒಬ್ಬ ನಿಂತಿರುವುದನ್ನು ನೋಡಿ ತನಗೆ ಸ್ವಲ್ಪ ನೀರನ್ನು ಸೇದಿಕೊಡು ಎಂದನು. ಅವನು ತಾನು ಬಹಳ

ಹೀನಕುಲಕ್ಕೆ ಸೇರಿದವನೆಂದೂ ಬ್ರಾಹ್ಮಣನಿಗೆ ನೀರು ಸೇದಿಕೊಡು ವಷ್ಟು ಯೋಗ್ಯತೆ ತನಗಿಲ್ಲವೆಂದೂ ಹೇಳಿದನು. ಹಾಗಾದರೆ ದೇವರ ಹೆಸರನ್ನು ಹೇಳಿ ಶುದ್ಧಿ ಮಾಡಿಕೊ ಎಂದನು. ಆ ಮನುಷ್ಯನು ಹಾಗೆಯೇ ಮಾಡಿ ನೀರನ್ನು ಸೇದಿಕೊಟ್ಟನು. ಆ ಆಚಾರಶೀಲನಾದ ಬ್ರಾಹ್ಮಣ ನೀರನ್ನು ಕುಡಿದನು. ಅವನ ನಂಬಿಕೆಯ ಶಕ್ತಿ ಎಷ್ಟು ಪ್ರಬಲವಾದುದು.

೩೧೯. ಕುಡುಕನು ಕೆಲವು ವೇಳೆ ತನ್ನ ಕೋಟನ್ನು ತಲೆಯ ಮೇಲೆ ಇಟ್ಟುಕೊಳ್ಳುವನು, ಕೆಲವು ವೇಳೆ ಚಡ್ಡಿಯಂತೆ ಹಾಕಿಕೊಳ್ಳು ವನು. ಇದರಂತೆಯೇ ದೇವೋನ್ಮತ್ತನೂ ಕೂಡ ಬಾಹ್ಯ ಪ್ರಜ್ಞೆ ಇಲ್ಲ ದವನಂತೆಯೇ ಆಚರಿಸುವನು.

೩೨೦. ಈ ಕಾಲದ ಜನರು ಎಲ್ಲದರ ಸಾರವನ್ನು ಬಯಸು ತ್ತಾರೆ. ಧರ್ಮದ ಸಾರವನ್ನು ಒಪ್ಪಿಕೊಳ್ಳುತ್ತಾರೆ. ಆದರೆ ಅನಾವಶ್ಯಕ ವಾದ ಭಾಗವನ್ನು ಅಂದರೆ ಜಾತಿ, ಮತ, ನಿಯಮಾಚಾರ ಮುಂತಾ ದುವುಗಳನ್ನು ಒಪ್ಪಿಕೊಳ್ಳುವುದಿಲ್ಲ.

೩೨೧. ಯಾರು ಮೀನನ್ನು ತಿನ್ನುತ್ತಾರೆಯೋ ಅವರಿಗೆ ಮೀನಿ ನಲ್ಲಿ ಕೆಲಸಕ್ಕೆ ಬಾರದ ತಲೆ ಮತ್ತು ಬಾಲಗಳು ಬೇಕಿಲ್ಲ. ಮೃದುವಾದ ಮಧ್ಯಭಾಗ ಮಾತ್ರ ಬೇಕು. ಇದರಂತೆಯೇ ನಮ್ಮ ಶಾಸ್ತ್ರದ ಹಿಂದಿನ ನಿಯಮಾಚಾರಗಳಿಂದ ಅನಾವಶ್ಯಕವಾದ ಭಾಗಗಳನ್ನು ತೆಗೆದುಹಾಕಿ ಇಂದಿನ ಕಾಲಕ್ಕೆ ಯೋಗ್ಯವಾಗುವಂತೆ ಮಾಡಬೇಕು.

## ವಿಗ್ರಹಾರಾಧನೆ

೩೨೨. ಮನೆಯನ್ನು ಕಟ್ಟುವಾಗ ಕಾಲೂವಧಿ (Scaffolding) ಅತ್ಯಾವಶ್ಯಕ. ಕೆಲಸವಾದ ಮೇಲೆ ಅದರಿಂದ ಏನೂ ಪ್ರಯೋಜನ ವಿಲ್ಲ. ಇದರಂತೆಯೇ ಮೊದಲಲ್ಲಿ ವಿಗ್ರಹಾರಾಧನೆ ಆವಶ್ಯಕ. ಅನಂತರ ಇಲ್ಲ.

೩೨೩. ಅಕ್ಷರ ಕಲಿತುಕೊಳ್ಳುವವನು ಮೊದಲು ದೊಡ್ಡ ದೊಡ್ಡದಾಗಿ ಗೀಚಿ ಅನಂತರ ಸಣ್ಣಗೆ ಬರೆಯುವುದನ್ನು ಕಲಿಯುವಂತೆ, ಮೊದಲು ಮನುಷ್ಯನು ಸಾಕಾರದ ಮೇಲೆ ಮನಸ್ಸನ್ನು ಏಕಾಗ್ರ ಮಾಡುವುದನ್ನು ಕಲಿತು ಅನಂತರ ಅದರಲ್ಲಿ ಪಳಗಿದ ಮೇಲೆ ನಿರಾಕಾರದ ಮೇಲೆ ಯತ್ನಿಸಬೇಕು.

೩೨೪. ಗುರಿ ಹೊಡೆಯುವವನು ಮೊದಲು ದೊಡ್ಡ ವಸ್ತುಗಳನ್ನು ಹೊಡೆಯುವುದರಿಂದ ಅಭ್ಯಾಸ ಮಾಡುವನು. ಹೊಡೆಯುವುದರಲ್ಲಿ ಕ್ರಮೇಣ ಪ್ರವೀಣನಾದ ಮೇಲೆ ಗುರಿಯ ಮೇಲೆ ಇರುವ ಸಣ್ಣ ಸಣ್ಣ ವಸ್ತುಗಳನ್ನು ಸುಲಭವಾಗಿ ಹೊಡೆಯುವನು. ಇದರಂಯೇ ಸಾಕಾರದ ಮೇಲೆ ಮನಸ್ಸನ್ನು ಏಕಾಗ್ರಮಾಡುವುದನ್ನು ಕಲಿತ ಮೇಲೆ ನಿರಾಕಾರದ ಮೇಲೆ ಏಕಾಗ್ರಮಾಡುವುದು ಸುಲಭ.

೩೨೫. ಆಟದ ಹಣ್ಣು, ಅಥವಾ ಆನೆ, ನಿಜವಾದ ಆನೆಯ ಅಥವಾ ಹಣ್ಣಿನ ನೆನಪನ್ನು ತರುವಂತೆಯೇ ಪೂಜೆಮಾಡುವ ವಿಗ್ರಹಗಳು ನಿರಾಕಾರವಾದ ಸನಾತನವಾದ ದೇವರನ್ನು ನೆನಪಿಗೆ ತರುವುದು.

೩೨೬. ಒಂದು ದಿನ ಶ್ರೀ ರಾಮಕೃಷ್ಣರು ತಮ್ಮ ಶಿಷ್ಯನೊಬ್ಬನಿಗೆ ಹೀಗೆ ಹೇಳಿದರು: "ನೀನು ಮಣ್ಣಿನಿಂದ ಮಾಡಿದ ವಿಗ್ರಹಗಳ ವಿಚಾರವಾಗಿ ಮಾತನಾಡುತ್ತಿದ್ದೆ. ಅದಕ್ಕೆ ಆವಶ್ಯಕತೆ ಇದೆ. ಪೂಜೆಗಾಗಿ ಇರುವ ಹಲವು ಆಕಾರಗಳೆಲ್ಲಾ ನಾನಾ ತರಹದ ಜನರಿಗೆ ಆಧ್ಯಾತ್ಮಿಕವಿಕಾಸದ ಹಲವು ಮೆಟ್ಟಲುಗಳಲ್ಲಿರುವವರಿಗಾಗಿ ಕಲ್ಪಿಸಲ್ಪಟ್ಟವೆ."

೩೨೭. ತಾಯಿ ತನ್ನ ಮಕ್ಕಳಿಗೆ ಯಾರಿಗೆ ಯಾವ ಆಹಾರ ಒಗ್ಗುವುದೊ ಅದನ್ನು ಅಣಿ ಮಾಡುವಳು. ಅವಳಿಗೆ ಐದು ಜನ ಮಕ್ಕಳಿದ್ದು ಒಂದು ದೊಡ್ಡ ಮೀನು ಅಡಿಗೆಗೆ ಸಿಕ್ಕಿದರೆ, ಅದರಿಂದ ಹಲವು ವಿಧದ ಅಡಿಗೆಮಾಡಿ, ಯಾರು ಯಾವುದನ್ನು ಅರಗಿಸಿಕೊಳ್ಳಬಲ್ಲರೊ ಅವನ್ನು ಕೊಡುವಳು. ಒಬ್ಬನಿಗೆ ಮೀನಿನೊಂದಿಗೆ ಪುಲಾವ್, ಜೀರ್ಣಶಕ್ತಿ ಜಾಸ್ತಿಯಿಲ್ಲದವನಿಗೆ ಸ್ವಲ್ಪ ಸಾರು, ಹೀಗೆ ಅವರವರ ಜೀರ್ಣಶಕ್ತಿಗನುಸಾರವಾಗಿ ಕೊಡುವಳು. (ಸಾಧುಗಳಿಗೆ ವಿಧಿಸಿರುವ ಹಲವು ವಿಧದ ನಿಯಮಾಚಾರಗಳೂ ಇದರಂತೆಯೇ.)

೩೨೮. ಶಿಷ್ಯ:—ದೇವರು ಸಾಕಾರನೆಂದು ನಂಬಬಹುದು. ಆದರೆ ಅವನು ನಿಜವಾಗಿಯೂ ನಾವು ಪೂಜಿಸುವ ಮಣ್ಣಿನ ವಿಗ್ರಹಗಳಲ್ಲ.

ಶ್ರೀ ರಾಮಕೃಷ್ಣರು:—ಅದನ್ನು ಮೃಣ್ಮಯ ವಿಗ್ರಹವೆಂದು ಏಕೆ ಕರೆಯುತ್ತೀಯೆ, ಚಿನ್ಮಯವೆಂದು ತಿಳಿ.

೩೨೯. ಶ್ರೀ ಗುರುದೇವರು ಆಗಿನಕಾಲದ ವಿಗ್ರಹಾರಾಧನೆಯನ್ನು ವಿರೋಧಿಸುವ ಕೇಶವ ಚಂದ್ರಸೇನನಿಗೆ ಹೀಗೆ ಹೇಳಿದರು:

"ಆ ವಿಗ್ರಹಗಳು ನಿಮ್ಮ ಮನಸ್ಸಿಗೆ ಕೆಸರು, ಜೇಡಿಮಣ್ಣು, ಕಲ್ಲು ಮತ್ತು ಹುಲ್ಲು ಎಂಬ ಭಾವವನ್ನು ತರುತ್ತವೆ. ಇಂತಹ ವಿಗ್ರಹ ಗಳಲ್ಲೂ ಕೂಡ ಸಚ್ಚಿದಾನಂದಮಯಿಯನ್ನು ನೀವು ಏಕೆ ನೋಡ ಬಾರದು ?"

೩೩೦. ಹಲವು ದೇವ ದೇವಿಯರಂತೆ ಕಾಣುವ ಪರಮಾತ್ಮನ ವಿಗ್ರಹಗಳೆಲ್ಲಾ ಪವಿತ್ರವಾದುದು ಎಂದು ಪೂಜಿಸುವವನು ನಂಬಿದರೆ, ಅವುಗಳನ್ನು ಪೂಜಿಸುವುದರಿಂದ ದೇವರನ್ನು ಪಡೆಯುತ್ತಾನೆ. ಅವೆಲ್ಲಾ ಕೇವಲ ಮಣ್ಣು, ಹುಲ್ಲು, ಕಲ್ಲು, ಎಂದು ತಿಳಿದರೆ ಅವನಿಗೆ ವಿಗ್ರಹಾ ರಾಧನೆಯಿಂದ ಏನೂ ಪ್ರಯೋಜನವಿಲ್ಲ.

೩೩೧. ವಿಗ್ರಹಾರಾಧನೆಯಲ್ಲಿ ಏನಾದರೂ ತಪ್ಪಿದ್ದರೆ ಎಲ್ಲವೂ ತನಗಾಗಿ ಎಂಬುದು ದೇವರಿಗೆ ತಿಳಿಯದೆ ? ಇದೆಲ್ಲವೂ ತನಗಾಗಿ ಎಂದು ತಿಳಿದು ಅವನು ಇದನ್ನು ಸಂತೋಷದಿಂದ ಸ್ವೀಕರಿಸುವನು. ದೇವರನ್ನು ಪ್ರೀತಿಸು. ಅದು ನಿನ್ನ ಮೊದಲನೆಯ ಕರ್ತವ್ಯ.

೩೩೨. ಒಬ್ಬನು ದೇವರನ್ನು ನೋಡಿಯಾದ ಮೇಲೆ ವಿಗ್ರಹ ಮುಂತಾದುವುಗಳೆಲ್ಲ ಪರಮಾತ್ಮನ ಸ್ವರೂಪವೆಂದು ಗೊತ್ತಾಗುವುದು. ಅವನ ಪಾಲಿಗೆ ವಿಗ್ರಹವು ಮಣ್ಣಿನಿಂದ ಆಗಿಲ್ಲ. ಅದು ಚಿನ್ಮಯಮೂರ್ತಿ.

## ತೀರ್ಥಯಾತ್ರೆಯ ಪ್ರಯೋಜನ

೩೩೩. ಹಸುವಿನ ಹಾಲು ನಿಜವಾಗಿಯೂ ಅದರ ರಕ್ತದಲ್ಲಿ ದೇಹಾದ್ಯಂತವೂ ವ್ಯಾಪಿಸಿರುವುದು. ಆದರೆ ಅದರ ಕಣ್ಣು ಅಥವಾ ಕೊಂಬನ್ನು ಹಿಂಡುವುದರಿಂದ ಹಾಲನ್ನು ಕರೆಯಲಾಗುವುದಿಲ್ಲ. ಅದರ ಮೊಲೆಯಿಂದ ಮಾತ್ರ ಹಾಲನ್ನು ಹಿಂಡಬಹುದು. ಇದರಂತೆಯೆ ದೇವರು ಸರ್ವವ್ಯಾಪಿಯಾಗಿರುವನು. ಆದರೆ ಎಲ್ಲ ಕಡೆಯಲ್ಲೂ ನೀನು ಅವನನ್ನು ಕಾಣಲಾರೆ. ಹಿಂದಿನ ಕಾಲದ ಭಕ್ತರ ಜೀವನ ಮತ್ತು ಸಾಧನೆಯ ವಾತಾವರಣದಿಂದ ತುಂಬಿ ತುಳುಕಾಡುತ್ತಿರುವ ಗುಡಿಗಳಲ್ಲಿ ಮಾತ್ರ ಅವನು ವ್ಯಕ್ತವಾಗುವನು.

೩೩೪. ಹಲವು ಜನರು ಎಲ್ಲಿ ದೇವರನ್ನು ಕಾಣುವುದಕ್ಕಾಗಿ ಧ್ಯಾನ, ಜಪ, ತಪಸ್ಸು, ಪೂಜೆ, ಪ್ರಾರ್ಥನೆಗಳನ್ನು ಮಾಡಿರುವರೋ ಅಲ್ಲಿ ಬಹಳ ಕಾಲದಿಂದಲೂ ದೇವರು ವ್ಯಕ್ತವಾಗಿರಬೇಕು. ಅವರ ಭಕ್ತಿ ಪ್ರಭಾವದಿಂದ ಆಧ್ಯಾತ್ಮಿಕ ಆದರ್ಶಗಳು ಇಂತಹ ಸ್ಥಳಗಳಲ್ಲಿ ಘನೀ

ಭೂತವಾದಂತೆ ಇರುವುವು. ಆದಕಾರಣ, ಅಲ್ಲಿ ಜನರಿಗೆ ಆಧ್ಯಾತ್ಮಿಕತೆ ಸುಲಭವಾಗಿ ಜಾಗ್ರತವಾಗಿ ದೇವರನ್ನು ಕಾಣುವರು. ಬಹಳ ಹಿಂದಿನ ಕಾಲದಿಂದಲೂ ಸಾಧುಗಳೂ ಭಕ್ತರೂ ಮತ್ತು ಜ್ಞಾನಸಿದ್ಧರೂ ದೇವರನ್ನು ನೋಡುವುದಕ್ಕಾಗಿ ಇಂತಹ ಸ್ಥಳಗಳಿಗೆ ಬಂದು ಪ್ರಪಂಚದ ಆಸೆಯನ್ನೆಲ್ಲಾ ತೊರೆದು, ಅವನ ದರ್ಶನಾಕಾಂಕ್ಷಿಗಳಾಗಿ ಹೃತ್ಪೂರ್ವಕ ಪ್ರಾರ್ಥನೆ ಮಾಡಿರುವರು. ಆದಕಾರಣ ದೇವರು ಎಲ್ಲಾ ಕಡೆಯಲ್ಲಿ ಇದ್ದರೂ ಇಂತಹ ಸ್ಥಳಗಳಲ್ಲಿ ಪ್ರತ್ಯೇಕವಾಗಿ ಆವಿರ್ಭೂತನಾಗುವನು. ಭೂಮಿಯನ್ನು ತೋಡುವುದರಿಂದ ನೀರನ್ನು ಎಲ್ಲಿಬೇಕಾದರೂ ಪಡೆಯಬಹುದು. ಆದರೆ ಹತ್ತಿರದಲ್ಲಿ ಭಾವಿಯೋ, ಕೆರೆಯೋ, ಕೊಳವೋ ಇದ್ದರೆ ನೀರಿಗಾಗಿ ಅಗೆಯಬೇಕಾಗಿಲ್ಲ. ಬೇಕಾದಾಗ ಅದನ್ನು ಹೊಂದಬಹುದು.

೩೩೫. ದನಗಳು ಹೊಟ್ಟೆತುಂಬ ಹುಲ್ಲನ್ನು ತಿಂದಾದಮೇಲೆ ಒಂದು ಕಡೆ ಕೂತು ಮೆಲಕು ಹಾಕುವಂತೆ, ಪವಿತ್ರ ಕ್ಷೇತ್ರಗಳನ್ನು, ನೋಡಿಯಾದಮೇಲೆ ಅಲ್ಲಿದ್ದಾಗ ಎದ್ದ ಒಳ್ಳೆಯ ಆಲೋಚನೆಗಳನ್ನು ಯಾವುದಾದರೊಂದು ನಿರ್ಜನಪ್ರದೇಶದಲ್ಲಿ ಕುಳಿತು ಅದರಲ್ಲೇ ತನ್ಮಯನಾಗುವವರೆಗೆ ಆಲೋಚಿಸಬೇಕು. ಇಂತಹ ಸ್ಥಳಗಳನ್ನು ಬಿಟ್ಟಾದಮೇಲೆ ಪ್ರಾಪಂಚಿಕ ವಿಷಯಗಳಲ್ಲಿ ಮಗ್ನರಾಗಿ ಬರುವ ಒಳ್ಳೆಯ ಆಲೋಚನೆಗಳನ್ನು ಅಟ್ಟಬಾರದು.

೩೩೬. ಪ್ರಪಂಚದ ನಾಲ್ಕು ದಿಕ್ಕುಗಳಲ್ಲಿಯೂ ಸಂಚಾರಮಾಡಿ ಬನ್ನಿ. ಎಲ್ಲಿಯೂ ನಿಮಗೆ ಏನೂ ನಿಜವಾದ ಧರ್ಮ ಸಿಕ್ಕುವುದಿಲ್ಲ. ಇರುವುದೆಲ್ಲ ಇಲ್ಲಿದೆ. (ಅಂದರೆ ಒಬ್ಬನ ಹೃದಯಾಂತರಾಳದಲ್ಲಿದೆ.)

೩೩೭. ಶ್ರೀ ಗುರುದೇವರು ಬದುಕಿರುವಾಗ ಅವರ ಹಲವು ಶಿಷ್ಯರು ತಾವು ತೀರ್ಥಯಾತ್ರೆಯನ್ನು ಮಾಡಬೇಕೆಂದು ತಿಳಿಸಿದಾಗ ಅವರಿಗೆ ಹೀಗೆ ಹೇಳುತ್ತಿದ್ದರು : "ಸರಿ ಅದು (ಆಧ್ಯಾತ್ಮಿಕತೆ) ಯಾರಿಗೆ ಇಲ್ಲಿ, (ಶ್ರೀ ಗುರುದೇವನ ಸನ್ನಿಧಿಯಲ್ಲಿ ಅಥವಾ ಒಬ್ಬನ ಹೃದಯಾಂತರಾಳದಲ್ಲಿ) ಇದೆಯೋ ಅವರಿಗೆ ಅಲ್ಲಿಯೂ (ಅಂದರೆ ಪುಣ್ಯಕ್ಷೇತ್ರಗಳಲ್ಲಿಯೂ) ಇದೆ. ಯಾರಿಗೆ ಅದು ಇಲ್ಲಿ ಇಲ್ಲವೊ ಅವರಿಗೆ ಅಲ್ಲಿಯೂ ಇಲ್ಲ." ಅಥವಾ ಯಾರ ಹೃದಯದಲ್ಲಿ ಆಗಲೇ ಭಕ್ತಿರಸ ಇದೆಯೋ ಅವರಿಗೆ ಪುಣ್ಯಸ್ಥಳಗಳಲ್ಲಿ ಅದು ತೀವ್ರವಾಗುವುದು. ಆದರೆ ಯಾರಿಗೆ ಭಕ್ತಿಯೇ ಇಲ್ಲವೋ ಅವರಿಗೆ ಇದರಿಂದ ಏನು ಲಾಭ?

ಅನೇಕ ವೇಳೆ ನಾವು ಇಂತಹವರ ಮಗ ಮನೆ ಬಿಟ್ಟು ಓಡಿಹೋಗಿರುವನು; ಕಾಶೀಗೋ ಎಲ್ಲಿಗೋ ಹೋಗಿರುವನು ಎಂದು ಕೇಳುತ್ತೇವೆ. ಆದರೆ ಸ್ವಲ್ಪಕಾಲವಾದಮೇಲೆ ಬಹಳ ಕಷ್ಟದಿಂದ ಯಾವುದೋ ಒಂದು ಕೆಲಸ ಸಿಕ್ಕುವುದು. ಸ್ವಲ್ಪ ಹಣವನ್ನು ಕಳುಹಿಸಿ ತನ್ನ ಸುದ್ದಿಯನ್ನು ಮನೆಯವರಿಗೆ ತಿಳಿಸಿರುವುದನ್ನು ಕೇಳಿರುವೆವು. ತೀರ್ಥಸ್ಥಳಗಳಲ್ಲಿ ವಾಸಿಸಬೇಕೆಂದು ಜನರು ಹೋಗುವರು. ಹಲವರು ಅಲ್ಲಿ ಅಂಗಡಿಯನ್ನು ತೆರೆದು ವ್ಯಾಪಾರಕ್ಕೆ ಕೈಹಾಕುವರು. ಮಥುರನಾಥನೊಂದಿಗೆ ಪಶ್ಚಿಮಕ್ಕೆ (ಅಂದರೆ ಕಾಶಿಯ ಕಡೆಗೆ) ನಾನು ಹೋಗಿದ್ದಾಗ ಅಲ್ಲಿಯ ವಾತಾವರಣ ಇಲ್ಲಿನಂತೆಯೇ ಇದ್ದುದನ್ನು ಕಂಡೆನು. ಅಲ್ಲಿದ್ದ ಮಾವು, ಹುಣಿಸೆ ಮತ್ತು ಬೊಂಬಿನ ಮರಗಳು ಇಲ್ಲಿದ್ದಂತೆಯೇ ಇದ್ದವು. ಆದಕ್ಕೆ ನಾನು ಹೃದಯನಿಗೆ "ಇಲ್ಲಿ ನಾವು ಏನನ್ನು ನೋಡುವುದಕ್ಕೆ ಬಂದಿರುವೆವು. ವಸ್ತುಗಳು ಅಲ್ಲಿದ್ದಂತೆಯೇ ಇಲ್ಲಿಯೂ ಇರುವುವು. ಆದರೆ ಒಂದೇ ವ್ಯತ್ಯಾಸ. ಇಲ್ಲಿಯ ಜನರಿಗೆ ಹೆಚ್ಚು ಜೀರ್ಣಶಕ್ತಿ ಇದ್ದಂತೆ ಕಾಣುವುದು!" ಎಂದೆ.

## ಸಾಧುಸಂಗದ ಪ್ರಯೋಜನ

೩೩೮. ಹಾಲು ಮತ್ತು ನೀರನ್ನು ಒಟ್ಟಿಗೆ ಸೇರಿಸಿದರೆ ಎರಡೂ ಮಿಶ್ರವಾಗಿ ಹೋಗುವುದರಲ್ಲಿ ಸಂದೇಹವಿಲ್ಲ. ಹಾಲನ್ನೇ ಪುನಃ ಪ್ರತ್ಯೇಕ ಮಾಡಲಾಗುವುದಿಲ್ಲ. ಇದರಂತೆಯೇ ಆತ್ಮೋನ್ನತಿಗಾಗಿ ಆಶಿಸುತ್ತಿರುವ ಸಾಧಕನೂ ಕೂಡ ಹಲವು ಬಗೆಯ ಪ್ರಾಪಂಚಿಕರೊಂದಿಗೆ ಬೆರೆತರೆ ಅವನು ತನ್ನ ಆದರ್ಶವನ್ನು ಕಳೆದುಕೊಳ್ಳುವುದು ಮಾತ್ರವಲ್ಲ ಜೊತೆಗೆ ಅವನಿಗೆ ಹಿಂದೆಯಿದ್ದ ಶ್ರದ್ಧೆ, ಭಕ್ತಿ, ಉತ್ಸಾಹ ಇವು ಕ್ರಮೇಣ ಮಾಯವಾಗುವುದು.

೩೩೯. ಆತ್ಮೋನ್ನತಿಗೆ ಸಾಧುಗಳ ಮತ್ತು ಧರ್ಮಾತ್ಮರ ಸಂಗ ಬಹಳ ಮುಖ್ಯ.

೩೪೦. ಯಾರೋ ಸೌದೆ ಮುಂತಾದವುಗಳೆಲ್ಲವನ್ನೂ ಶೇಖರಿಸಿ ಹಚ್ಚಿದ ಬೆಂಕಿಯಲ್ಲಿ ಹಲವರು ಬೆಂಕಿಯನ್ನು ಕಾಯಿಸಿಕೊಳ್ಳುವರು. ಇದರಂತೆಯೇ ಬಹಳ ತಪಸ್ಸುಮಾಡಿ ದೇವರನ್ನು ಕಂಡ ಮಹಾತ್ಮರ ಸಂಗದಿಂದ ಮತ್ತು ಅವರ ಉಪದೇಶವನ್ನು ಅನುಸರಿಸುವುದರಿಂದ ಹಲವರು ದೇವರನ್ನು ಧ್ಯಾನಿಸುವರು.

೩೪೧. ಒಬ್ಬನು ವಕೀಲನನ್ನು ನೋಡಿದರೆ ಕೋರ್ಟು ಮತ್ತು ಕೇಸುಗಳನ್ನು ಸಾಧಾರಣವಾಗಿ ಆಲೋಚಿಸುವನು. ಇದರಂತೆಯೆ ಒಬ್ಬ ಭಕ್ತನನ್ನು ನೋಡಿದರೆ ದೇವರು ಮತ್ತು ನಮ್ಮ ಮುಂದಿನ ಜನ್ಮ ಇವುಗಳನ್ನು ನೆನೆಯುತ್ತೇವೆ.

೩೪೨. ಒಬ್ಬನು ತನ್ನ ಜೀವನವನ್ನು ಹೇಗೆ ಕಳೆಯಬೇಕು? ಒಲೆಯಲ್ಲಿರುವ ಬೆಂಕಿ ಆರದೆಯಿರಲಿ ಮತ್ತು ಚೆನ್ನಾಗಿ ಉರಿಯಲಿ ಎಂದು ಅನೇಕವೇಳೆ ಸಲಾಕಿಯಿಂದ ಕೆದಕುವಂತೆ ಮನಸ್ಸನ್ನು ಕೂಡ ಸಾಧುಸಂಗದಿಂದ ಕೆದಕಬೇಕು.

೩೪೩. ಕಮ್ಮಾರನು ತನ್ನ ಕುಲುಮೆಯಲ್ಲಿ ಬೆಂಕಿ ಆರದೆ ಇರುವುದಕ್ಕೆ ತಿದಿಯನ್ನು ಹೇಗೆ ಒತ್ತುವನೋ ಅದರಂತೆಯೇ ಮನಸ್ಸನ್ನು ಕೂಡ ಸಾಧು ಸಂಗದಿಂದ ಶುಭ್ರವಾಗಿ ಪ್ರೇಮವಾಗಿರುವಂತೆ ಮಾಡಬೇಕು.

೩೪೪. ಸಾಧು ಸಂಗ ಅಕ್ಕಿಯನ್ನು ತೊಳೆದ ನೀರಿನಂತೆ. ಅಕ್ಕಿಯ ನೀರಿಗೆ ಮಾದಕ ದ್ರವ್ಯಗಳ ಮತ್ತನ್ನು ಕಡಿಮೆಮಾಡುವ ಗುಣವಿದೆ. ಕೆಲಸಕ್ಕೆ ಬಾರದ ಆಸೆಯೆಂಬ ಸುರೆಯನ್ನು ಕುಡಿದು ಮತ್ತರಾದ ಪ್ರಾಪಂಚಿಕರ ಅಮಲನ್ನು ಸಾಧುಸಂಗ ಇಳಿಸುವುದು.

೩೪೫. ಜಮೀನ್ದಾರನ ಗುಮಾಸ್ತನು, ತನ್ನ ಯಜಮಾನನ ಊರಿನಿಂದ ದೂರದಲ್ಲಿರುವ ಹಳ್ಳಿಗಳ ಕಡೆಗೆ ಹೋದಾಗ ಹಲವು ಬಗೆಯಲ್ಲಿ ರೈತನನ್ನು ಹಿಂಸಿಸುವನು. ಆದರೆ ಊರಿಗೆ ಹಿಂತಿರುಗಿ ಯಜಮಾನನ ಕಣ್ಣೆದುರಿಗಿರುವಾಗ ತನ್ನ ನಡತೆಯನ್ನು ಬದಲಾಯಿಸುವನು. ತುಂಬಾ ಸಾಧುವಾಗುವನು. ರೈತರನ್ನು ಬಹಳ ದಯೆಯಿಂದ ಕಾಣುವನು. ಅವರ ಕಷ್ಟವನ್ನೆಲ್ಲಾ ಸಂಪೂರ್ಣವಾಗಿ ವಿಚಾರಿಸಿ ಎಲ್ಲರಿಗೂ ನ್ಯಾಯ ದೊರಕುವಂತೆ ಮಾಡುವನು. ಹಿಂಸೆಯನ್ನು ಕೊಡುವ ಗುಮಾಸ್ತನು ಯಜಮಾನನ ಅಂಜಿಕೆಯಿಂದ ಮತ್ತು ಅವನ ಸಮೀಪದಲ್ಲಿರುವುದರಿಂದ ಒಳ್ಳೆಯವನಾಗುವನು. ಇದರಂತೆಯೇ ಮಹಾತ್ಮರ ಸಂಗವು ದುರ್ಜನರಲ್ಲಿಯೂ ಭಯ ಗೌರವಗಳನ್ನುಂಟು ಮಾಡಿ ಸಜ್ಜನರನ್ನಾಗಿ ಮಾಡುವುದು.

೩೪೬. ಬೆಂಕಿಯ ಮೇಲೆ ಇಟ್ಟ ಹಸಿ ಸೌದೆ ಬೇಗ ಒಣಗಿ ಉರಿಯಲು ಮೊದಲಾಗುವುದು. ಇದರಂತೆಯೇ ಸಾಧು ಸಂಗ ಪ್ರಾಪಂಚಿಕರ ಹೃದಯದಲ್ಲಿರುವ ಆಸೆ ಮತ್ತು ಕಾಮವೆಂಬ ಹಸಿಯನ್ನು

ಓಡಿಸುವುದು. ಅನಂತರ ವಿವೇಕವೆಂಬ ಜ್ಞಾನ ಸ್ಥಿರವಾಗಿ ಉರಿಯು ವುದು.

೩೪೭. ಜಗನ್ಮಾಯಿಯಾದ ಉಮಾದೇವಿಯು ಹಿಮಾಲಯ ರಾಜನ ಮಗಳಾಗಿ ಹುಟ್ಟಿದಾಗ ಅವಳು ತನ್ನ ಹಲವು ಅವತಾರಗಳನ್ನು ತಂದೆಗೆ ತೋರಿದಳೆಂದು ಪುರಾಣದಲ್ಲಿ ಹೇಳಿದೆ. ಗಿರಿರಾಜನು ಅವಳನ್ನು ವೇದಾಂತದ ಬ್ರಹ್ಮನನ್ನು ತೋರಿಸೆಂದು ಕೇಳಿದಾಗ, ಉಮಾದೇವಿ "ನೀನು ಬ್ರಹ್ಮನನ್ನು ನೋಡಬೇಕಾದರೆ ಪ್ರಪಂಚವನ್ನೆಲ್ಲ ತ್ಯಜಿಸಿದ ಸಾಧುಗಳ ಸಂಗವನ್ನು ಮಾಡಬೇಕು" ಎಂದು ಹೇಳಿದಳು.

೩೪೮. ನೀವು ಒಂದು ಆನೆಯನ್ನು ತೊಳೆದು ತಿರುಗಾಡಲು ಬಿಟ್ಟರೆ ಅದು ಬಹಳ ಬೇಗ ಕೊಳೆ ಮಾಡಿಕೊಳ್ಳುವುದರಲ್ಲಿ ಸಂದೇಹವಿಲ್ಲ. ಸ್ನಾನವಾದಮೇಲೆ ಅದನ್ನು ಲಾಯದಲ್ಲಿ ಕಟ್ಟಿದರೆ ಅದು ಶುಚಿಯಾಗಿರು ವುದು. ಇದರಂತೆಯೆ ಸಾಧು ಸಂಗದಿಂದ ನೀನು ಒಂದು ಸಲ ಒಳ್ಳೆ ಯವನಾಗಿ ನಂತರ ಪ್ರಾಪಂಚಿಕರೊಂದಿಗೆ ಸರಾಗವಾಗಿ ಬೆರೆಯಲು ಮೊದಲು ಮಾಡಿದರೆ ನಿನ್ನಲ್ಲಿರುವ ಒಳ್ಳೆಯತನ ನಾಶವಾಗುವುದು. ಆದರೆ ನಿನ್ನ ಮನಸ್ಸನ್ನು ದೇವರ ಮೇಲೆ ನಿಲ್ಲಿಸಿದರೆ ಎಂದೂ ನಿನ್ನ ಮನಸ್ಸು ಮಲಿನವಾಗುವುದಿಲ್ಲ.

## ಭಗವಂತನ ನಾಮೋಚ್ಚಾರಣೆ

೩೪೯. ವಿಷಯ ವಸ್ತುಗಳ ಪ್ರಲೋಭನಕ್ಕೆ ಬೀಳುವ ಸ್ವಭಾವ ವುಳ್ಳವರು ದ್ವೈತಭಾವದಿಂದ ದೇವರ ಹೆಸರನ್ನು ನಾರದ ಪಾಂಚರಾತ್ರ ದಲ್ಲಿ ಹೇಳಿರುವಂತೆ ಪಠಿಸುವುದೇ ಒಳ್ಳೆಯದು.

೩೫೦. ಶ್ರೀ ರಾಮಕೃಷ್ಣರು ತಮ್ಮ ಶಿಷ್ಯನೊಬ್ಬನಿಗೆ ಹೀಗೆ ಹೇಳಿದರು : "ಭಕ್ತಿಮಾರ್ಗದಿಂದ ಸೂಕ್ಷ್ಮ ಇಂದ್ರಿಯಗಳು ಸ್ವಭಾವತಃ ಸುಲಭವಾಗಿ ನಮ್ಮ ಸ್ವಾಧೀನವಾಗುವುವು. ಹೃದಯದಲ್ಲಿ ಪರಮಾತ್ಮನ ಮೇಲೆ ಅನುರಾಗ ಹೆಚ್ಚಿದಷ್ಟೂ ಇಂದ್ರಿಯ ಸುಖಗಳು ಅಷ್ಟು ರುಚಿಸ ಲಾರವು. ಗಂಡ ಹೆಂಡಿರನ್ನು ಅವರ ಮಗು ಸತ್ತ ದಿನ ಕಾಮಸುಖ ಆಕರ್ಷಿಸಬಲ್ಲದೆ"?

ಶಿಷ್ಯ—ಆದರೆ ದೇವರನ್ನು ಪ್ರೀತಿಸುವುದನ್ನು ನಾನಿನ್ನೂ ಕಲಿತಿಲ್ಲ.

ಶ್ರೀ ರಾಮಕೃಷ್ಣರು—ಸದಾ ಅವನ ಹೆಸರನ್ನು ಜಪಿಸು. ಇದು

ಎಲ್ಲ ಪಾಪ ಕೋಪ ಕಾಮಗಳನ್ನು ತೊಳೆಯುವುದು. ದೈಹಿಕ ಸುಖದ ಮೇಲೆ ಇರುವ ಆಸೆಯನ್ನೆಲ್ಲಾ ನಾಶಮಾಡುವುದು.

ಶಿಷ್ಯ—ಆದರೆ ಅವನ ಹೆಸರಿನಲ್ಲಿ ನನಗೆ ಏನೂ ಆನಂದ ತೋರುವುದಿಲ್ಲ.

ಶ್ರೀ ರಾಮಕೃಷ್ಣರು—ಹಾಗಾದರೆ ವ್ಯಾಕುಲದಿಂದ ಹೃತ್ಪೂರ್ವಕವಾಗಿ ಅವನ ಹೆಸರಿನಲ್ಲಿ ಅಭಿರುಚಿಯನ್ನು ದಯಪಾಲಿಸೆಂದು ಬೇಡು. ನಿಸ್ಸಂದೇಹವಾಗಿ ಅವನು ನಿನ್ನ ಪ್ರಾರ್ಥನೆಯನ್ನು ಸಲ್ಲಿಸುವನು. ಸನ್ನಿಪಾತರೋಗಿಗೆ ಆಹಾರದ ಮೇಲೆ ಸ್ವಲ್ಪವೂ ಇಚ್ಛೆಯಿಲ್ಲದೆಯಿದ್ದರೆ ಅವನಿಗೆ ಪ್ರಾಣಾಪಾಯ ಸನ್ನಿಹಿತವಾದಂತೆಯೆ. ಅವನಿಗೆ ಸ್ವಲ್ಪವಾದರೂ ಆಹಾರಸೇರಿದರೆ ಅವನು ಬದುಕಬಹುದೆಂದು ನಂಬಬಹುದು. ಅದಕ್ಕೇ ನಾನು ನಿಮಗೆ ಅವನ ಹೆಸರಿನಲ್ಲಿ ಆನಂದಪಡಿ ಎನ್ನುವುದು. ಅವನ ಹೆಸರನ್ನು ತೆಗೆದುಕೊಳ್ಳಿ. ದುರ್ಗಾ, ಕೃಷ್ಣ, ಶಿವ ಯಾವುದಾದರೊಂದು ಸಾಕು. ಅವನ ನಾಮಧ್ಯಾನದ ಮೇಲೆ ನಿಮಗೆ ಪ್ರತಿದಿನವೂ ಹೆಚ್ಚು ಮನಸ್ಸಾದರೆ ಮತ್ತು ಅದರಲ್ಲಿ ಆನಂದ ಹೆಚ್ಚಿದರೆ, ನಿಮಗೆ ಇನ್ನು ಯಾವ ಭಯವೂಯಿಲ್ಲ. ಸನ್ನಿವಾಸಿಯಾಗಲೇಬೇಕು. ಖಂಡಿತವಾಗಿಯೂ ಅವನ ದಯೆ ನಿನ್ನ ಮೇಲೆ ಬೀಳಬೇಕು.

೩೫೧. ಏನು ಭಗವನ್ನಾಮ ಕೆಲಸಕ್ಕೆಬಾರದುದೆ? ಅವನು ಮತ್ತು ಅವನ ಹೆಸರು ಬೇರೆಯಲ್ಲ. ಸತ್ಯಭಾಮೆಗೆ ಚಿನ್ನಬೆಳ್ಳಿಯ ನಗಗಳಿಂದ ಕೃಷ್ಣನನ್ನು ತುಲಾಭಾರ ತೂಗಲು ಸಾಧ್ಯವಾಗಲಿಲ್ಲ. ಆದರೆ ರುಕ್ಮಿಣಿಯು ಶ್ರೀಕೃಷ್ಣನ ಹೆಸರನ್ನು ಮತ್ತು ತುಳಸಿದಳವನ್ನು ಇಟ್ಟಾಗ ಸಾಧ್ಯವಾಯಿತು.

೩೫೨. ನೀನು ದೇವರನ್ನು ನೋಡಬೇಕಾದರೆ ಹರಿನಾಮೋಚ್ಚಾರಣೆಯಲ್ಲಿ ಅಚಲವಾದ ಭಕ್ತಿಯನ್ನಿಡು ಮತ್ತು ನಿತ್ಯ ಅನಿತ್ಯ ವಸ್ತುವನ್ನು ವಿವೇಕಿಸು

೩೫೩. ಭಗವನ್ನಾಮ ನಿಜವಾಗಿಯೂ ಶಕ್ತಿಯಿಂದ ಕೂಡಿರುವುದು. ಅದರಿಂದ ತಕ್ಷಣವೇ ಪ್ರತಿಫಲ ಸಿಕ್ಕದೇ ಇರಬಹುದು. ಆದರೆ ಒಂದಲ್ಲ ಒಂದು ದಿನ ಅದು ಫಲವನ್ನು ಕೊಟ್ಟೇತೀರಬೇಕು. "ಮನೆಯ ಗೋಡೆಯಮೇಲೆ ಬಿದ್ದ ಬೀಜ ಬಹುಶಃ ಕಟ್ಟಡ ಕುಸಿದು ನೆಲದ ಮೇಲೆ ಬಿದ್ದಮೇಲೆ, ಆ ಬೀಜ ನೆಲವನ್ನು ಸೇರಿ ಮೊಳೆತು ಮರವಾಗಿ ಫಲವನ್ನು ಕೊಡುವುದು" ಎಂದು ಶ್ರೀ ಚೈತನ್ಯರು ಹೇಳಿರುವರು.

೩೫೪. ತಿಳಿದೋ ತಿಳಿಯದೆಯೋ ಮನಃಪೂರ್ತಿಯಾಗಿಯೋ ಅಥವಾ ಇಲ್ಲದೆಯೋ ದೇವರ ಹೆಸರನ್ನು ಉಚ್ಚರಿಸಿದರೆ ಅದನ್ನು ಉಚ್ಚರಿಸಿದ ಪ್ರತಿಫಲ ದೊರಕುವುದು. ತಾನೇ ಸ್ವತಃ ನದಿಗೆ ಹೋಗಿ ಸ್ನಾನ ಮಾಡಿದರೆ ಸ್ನಾನದ ಪ್ರತಿಫಲ ದೊರಕುವುದು. ಇದರಂತೆಯೇ ಇನ್ನೊಬ್ಬರ ಕೈಯಿಂದ ನೂಕಿಸಿಕೊಂಡು ನೀರಿಗೆ ಬಿದ್ದವನಾಗಲೀ, ಅಥವಾ ಮಲಗಿದ್ದವನ ಮೇಲೆ ನೀರನ್ನು ಎರಚಿದರಾಗಲೀ ಅವರಿಗೆ ಸ್ನಾನದ ಫಲ ಬರುವುದು.

೩೫೫. ಅಮೃತಸರೋವರಕ್ಕೆ ತಿಳಿದೋ ತಿಳಿಯದೆಯೋ ಯಾವ ರೀತಿಯಲ್ಲಾಗಲೀ ಬಿದ್ದರೂ ಅದನ್ನು ಅವನು ಸೋಕಿದೊಡನೆಯೇ ಅಮೃತತ್ವವನ್ನು ಪಡೆಯುವನು; ಯಾರಾದರಾಗಲೀ ಭಗವನ್ನಾಮವನ್ನು ಸ್ವೇಚ್ಛೆಯಿಂದಲೋ ಅಥವಾ ಬಲಾತ್ಕಾರದಿಂದಲೋ ಹೇಗಾದರೂ ಉಚ್ಚರಿಸಲಿ ಕೊನೆಗೆ ಅವನು ಅಮೃತತ್ವವನ್ನು ಪಡೆಯುವನು.

೩೫೬. ಭಗವಂತನ ಸಾಕ್ಷಾತ್ಕಾರಕ್ಕೆ ಅವನ ನಾಮೋಚ್ಚಾರಣೆಯೊಂದೇ ಸಾಕು, ಎಂದು ಹೇಳಿದ ಒಬ್ಬ ಧರ್ಮಬೋಧಕನಿಗೆ ಶ್ರೀ ರಾಮಕೃಷ್ಣರು ಹೀಗೆ ಹೇಳಿದರು: “ಹೌದು ಅವನ ಪವಿತ್ರ ನಾಮೋಚ್ಚಾರಣೆಯೇನೊ ಬಹಳ ಫಲಕಾರಿಯಾದುದು. ಆದರೆ ಅನುರಾಗವಿಲ್ಲದೆ ಇದ್ದರೆ ಇದು ಸಾಕೇನು? ಜೀವನು ದೇವರಿಗಾಗಿ ಹಂಬಲಿಸಬೇಕು. ನಾನು ಬಾಯಿಂದ ಅವನ ಹೆಸರನ್ನು ಉಚ್ಚರಿಸಿ ಮನಸ್ಸನ್ನು ಕಾಮಿನೀ ಕಾಂಚನಗಳ ಮೇಲೆ ಬಿಟ್ಟರೆ ಬಂದ ಪ್ರಯೋಜನವೇನು? ಸುಮ್ಮನೆ ಮಂತ್ರೋಚ್ಚಾರಣೆಯಿಂದ ಚೇಳಿನ ಕಡಿತ ಗುಣವಾಗುವುದಿಲ್ಲ. ಬೆರಣಿಯನ್ನು ಸುಟ್ಟು ಹೊಗೆಯನ್ನು ಸೇವಿಸಬೇಕು. ಅವನ ಹೆಸರನ್ನು ಒಂದು ಸಲ ಹೇಳುವುದರಿಂದ ಅವನು ಪಾಪದಿಂದ ವಿಮುಕ್ತನೇನೋ ಆಗುವನು. ಆದರೆ ಮರುಕ್ಷಣದಲ್ಲಿ ಅನೇಕ ಪಾಪಕಾರ್ಯಗಳ ಕಡೆಗೆ ತಿರುಗುತ್ತಾನೆ. ನಾನು ಇನ್ನೆಂದಿಗೂ ಪಾಪಕಾರ್ಯಗಳನ್ನು ಮಾಡುವುದಿಲ್ಲವೆಂದು ಅವನು ಶಪಥಮಾಡುವುದಕ್ಕೆ ಅವನಿಗೆ ಶಕ್ತಿಯಿಲ್ಲ. ಗಂಗಾಸ್ನಾನ ಮನೋಪಾಪಗಳನ್ನೆಲ್ಲಾ ತೊಳೆಯುವುದು. ಆದರೆ ಅದರಿಂದ ಅವರು ಉಪಯೋಗವನ್ನು ಹೊಂದುವುದು ಅಲ್ಪ. ದಡದ ಮರಗಳ ಮೇಲೆ ಪಾಪ ಕಾದು ಕುಳಿತುಕೊಂಡಿರುವುದು. ಸ್ನಾನ ಮಾಡಿ ಅವನು ಮೇಲೆ ಬಂದ ತಕ್ಷಣವೇ ಪಾಪಗಳು ಅವನ ಹೆಗಲ ಮೇಲೆ ಬಂದು

ಕೂಡುವುವು ಎಂದು ಕಥೆ ಇದೆ. ನೋಡಿ ಅವನು ಕೆಲವು ಹೆಜ್ಜೆಗಳಿಡುವುದರೊಳಗೆ ಪಾಪ ಅವನ ಹೆಗಲ ಮೇಲೆ ಆಗಲೆ ಇದೆ. ಅವನನ್ನು ಮೆಟ್ಟಿಕೊಂಡಿದೆ. ಆದಕ್ಕೋಸ್ಕರವೇ ಯಾವಾಗಲೂ ದೇವರನ್ನು ಜಪಿಸಿ. ಜತೆಗೆ ಅವನ ಮೇಲೆ ಪ್ರೀತಿ ಹೆಚ್ಚಲೆಂದೂ, ಹಣ, ಕೀರ್ತಿ, ದೈಹಿಕಸುಖ ಭೋಗ ಮುಂತಾದ ಕ್ಷಣಿಕವಸ್ತುಗಳ ಮೇಲೆ ನಿಮಗೆ ಇರುವ ಆಸಕ್ತಿ ಕಡಿಮೆಯಾಗಲೆಂದೂ ದೇವರನ್ನು ಬೇಡಿ.

೩೫೭. ಭಕ್ತಿಯಿಂದ ಪವಿತ್ರ ಭಗವಂತನ ನಾಮೋಚ್ಚಾರಣೆ ಮಾಡಿ. ಪಾಪವೆಂಬ ಪರ್ವತ ಮಾಯವಾಗುವುದು ; ಹತ್ತಿಯಬೆಟ್ಟಕ್ಕೆ ಒಂದು ಬೆಂಕಿ ಕಡ್ಡಿ ಬಿದ್ದರೆ ಉರಿದು ಭಸ್ಮೀಭೂತವಾಗುವಂತೆ.

೩೫೮. ಪ್ರಪಂಚದಲ್ಲಿ ಆಸಕ್ತರಾಗಿರುವವರ ಭಕ್ತಿಯೆಲ್ಲ ತಾತ್ಕಾಲಿಕ. ಅದೆಂದಿಗೂ ಅನುಗಾಲದ ಪ್ರಭಾವವನ್ನು ಮನಸ್ಸಿನ ಮೇಲೆ ಬೀರಲಾರದು. ಆದರೆ ಯಾರು ದೇವರಲ್ಲಿ ಆಸಕ್ತರಾಗಿರುವರೋ ಅವರು ಪ್ರತಿ ಕ್ಷಣದಲ್ಲಿಯೂ ಅವನ ನಾಮೋಚ್ಚಾರಣೆ ಮಾಡುವರು. ಕೆಲವರು ಸದಾ ಮನಸ್ಸಿನಲ್ಲಿ " ಓಂ ರಾಮ್ ಓಂ " ಎಂದು ನಮುಸ್ಕರಿಸುವರು. ಜ್ಞಾನಯೋಗಿಗಳು " ಸೋಹಂ " ಎನ್ನುವರು ; ಮತ್ತೆ ಕೆಲವರ ಬಾಯಿ ಯಾವಾಗಲೂ ಆಡುತ್ತಿರುವುದು (ಯಾವುದಾದರೂ ಪ್ರಾರ್ಥನೆಯನ್ನೊ ಮಂತ್ರವನ್ನೊ ಉಚ್ಚರಿಸುತ್ತಿರುವರು.)

೩೫೯. ಜಪವೆಂದರೆ ನಿಶ್ಶಬ್ದವಾದ ಸ್ಥಳದಲ್ಲಿ ಕುಳಿತು ಮೌನವಾಗಿ ಭಗವಂತನ ನಾಮೋಚ್ಚಾರಣೆ ಮಾಡುವುದು. ಭಕ್ತಿ ಮತ್ತು ಏಕಾಗ್ರತೆಯಿಂದ ದೇವರ ಹೆಸರನ್ನು ಉಚ್ಚಾರಣೆ ಮಾಡಿದರೆ ಕೊನೆಗೆ ಭಗವಂತನ ಸಾಕ್ಷಾತ್ಕಾರವಾಗುವುದರಲ್ಲಿ ಸಂದೇಹವಿಲ್ಲ. ಸರಪಳಿಗೆ ಬಿಗಿದ ದೊಡ್ಡ ತೊಲೆಯೊಂದು ಗಂಗಾನದಿಯೊಳಗಿದೆ. ಆ ಸರಪಳಿಯನ್ನು ದಡದ ಮೇಲೆ ಕಟ್ಟಿದೆ ಎಂದು ಇಟ್ಟುಕೊಳ್ಳೋಣ. ಸರಪಳಿಯ ಕೊಂಡಿಯನ್ನು ಅನುಸರಿಸುತ್ತ ನೀರಿನಲ್ಲಿ ಮುಳುಗಿ ತೊಲೆಯ ಸಮೀಪಕ್ಕೆ ಹೋಗಬಹುದು. ಇದರಂತೆಯೇ ಭಗವನ್ನಾಮೋಚ್ಚಾರಣೆಯಲ್ಲಿ ನೀನು ನಿರತನಾದರೆ ಕೊನೆಗೆ ನಿಜವಾಗಿಯೂ ಅವನನ್ನು ಕಾಣುವೆ.

೩೬೦. ಬೆಳಿಗ್ಗೆ ಸಾಯಂಕಾಲ ಚಪ್ಪಾಳೆ ತಟ್ಟಿಕೊಂಡು ಹರಿಸಂಕೀರ್ತನೆಯನ್ನು ಮಾಡಿ. ನಿಮ್ಮ ಪಾಪ ಮತ್ತು ದುಃಖಗಳೆಲ್ಲಾ ಬಿಟ್ಟು ಓಡುವುವು. ಒಂದು ಮರದ ಕೆಳಗೆ ನಿಂತು ಚಪ್ಪಾಳೆ ತಟ್ಟಿದರೆ ಮೇಲೆ ಕುಳಿತಿರುವ ಹಕ್ಕಿಗಳು ಹಾರಿಹೋಗುತ್ತವೆ. ಇದರಂತೆಯೆ

ಚಪ್ಪಾಳೆಯನ್ನು ತಟ್ಟುತ್ತ ಹರಿನಾಮಸಂಕೀರ್ತನೆ ಮಾಡಿದರೆ ನಿಮ್ಮ ದೇಹವೆಂಬ ಮರದ ಮೇಲೆ ಕುಳಿತ ಪಾಪವೆಂಬ ಹಕ್ಕಿಗಳು ಹಾರಿ ಹೋಗುತ್ತವೆ.

# ಅಧ್ಯಾಯ ೧೦

## ಆಧ್ಯಾತ್ಮಿಕಜೀವನದ ಹಾದಿ

## ಆಧ್ಯಾತ್ಮಿಕಜೀವನದ ಕೆಲವು ಆತಂಕಗಳು

೩೬೧. ಹೇಡಿತನ, ದ್ವೇಷ ಮತ್ತು ಅಂಜಿಕೆ ಇರುವ ಕಡೆ ದೇವರು ಬರುವುದಿಲ್ಲ.

೩೬೨. ತಕ್ಕಡಿಯಲ್ಲಿ ಭಾರವಾದುದು ಕೆಳಗೆ ಬರುವುದು, ಭಾರವಿಲ್ಲದುದು ಮೇಲೆ ಹೋಗುವುದು ಇದರಂತೆ ಪ್ರಪಂಚದ ಆಸೆ ಆತಂಕಗಳ ಬಂಧನಕ್ಕೆ ಒಳಗಾದವನು ಅದರ ಭಾರಕ್ಕೆ ಕೆಳಗೆ ಬರುವನು. ಇದು ಕಡಿಮೆ ಇರುವವನು ದೇವರ ಪಾದಪದ್ಮಗಳ ಕಡೆಗೆ ಏರುವನು.

೩೬೩. ಮತ್ತೊಬ್ಬರ ಒಳ್ಳೆಯ ಮತ್ತು ಕೆಟ್ಟ ಗುಣಗಳನ್ನು ಚರ್ಚಿಸುವುದರಲ್ಲಿ ನಿರತನಾಗಿರುವವನು ವೃಥಾ ತನ್ನ ಸಮಯವನ್ನು ಕಳೆಯುವನು. ಇದು ತನ್ನನ್ನಾಗಲೀ ಅಥವಾ ಪರಮಾತ್ಮನನ್ನಾಗಲಿ ಯೋಚಿಸಿದಂತೆ ಅಲ್ಲ. ಕೆಲಸಕ್ಕೆ ಬಾರದ ಮತ್ತೊಬ್ಬರನ್ನು ವಿಚಾರಿಸಿದಂತೆ.

೩೬೪. ಮನಸ್ಸಿನ ಯಾವ ಸ್ವಭಾವದಲ್ಲಿ ದೇವರದರ್ಶನವಾಗುವುದು? ಮನಸ್ಸು ಚಂಚಲವಾಗದೆ ಸಮಾಧಾನದಲ್ಲಿದ್ದಾಗ. ಒಬ್ಬನ ಚಿತ್ತಸರೋವರ ಆಸೆಯೆಂಬ ಗಾಳಿಯಿಂದ ಕಲಕಿ ಹೋದಾಗ ಅದು ದೇವರನ್ನು ಪ್ರತಿಬಿಂಬಿಸಲಾರದು. ಆಗ ದೇವರ ದರ್ಶನ ಸಾಧ್ಯವಿಲ್ಲ.

೩೬೫. ಒಬ್ಬನ ಹೊಟ್ಟೆ ತುಂಬಿದ್ದರೂ, ಜತೆಗೆ ಅಗ್ನಿಮಾಂದ್ಯವಾಗಿದ್ದರೂ, ಸಿಹಿ ಭಕ್ಷ್ಯಗಳನ್ನು ಮತ್ತು ಉಪ್ಪುಕಾರದ ಪದಾರ್ಥಗಳನ್ನು ನೋಡಿದಾಗ ನಾಲಿಗೆಯಲ್ಲಿ ನೀರು ಊರುವುದು. ಇದರಂತೆಯೆ ಒಬ್ಬನಿಗೆ ಒಂದು ವಸ್ತುವನ್ನು ತಾನು ಇಟ್ಟುಕೊಳ್ಳಬೇಕೆಂಬ ಅಭಿಮಾನ ಸ್ವಲ್ಪವಾದರೂ ಇಲ್ಲದೆ ಇರಬಹುದು. ಆದರೂ ಐಶ್ವರ್ಯ ಮತ್ತು ಇನ್ನೊ

ಇತರ ಮನಸ್ಸನ್ನು ಚಂಚಲಗೊಳಿಸುವ ವಸ್ತುಗಳು ಕಣ್ಣಿಗೆ ತೋರಿದಾಗ ಅವನು ಎಷ್ಟೇ ಸಾಧುವಾಗಿದ್ದರೂ ಮನಸ್ಸು ಸಡಿಲಿಸುವುದು.

೩೬೬. ಕೂಪ ಮಂಡೂಕದಂತೆ ಇರಬೇಡಿ, ಭಾವಿಯಲ್ಲಿರುವ ಕಪ್ಪೆಗೆ ತನ್ನ ಭಾವಿಗಿಂತ ದೊಡ್ಡದಾಗಿರುವುದು, ಅದಕ್ಕಿಂತ ಸೊಗಸಾಗಿರುವುದು ಮತ್ತಾವುದೂ ಇಲ್ಲ. ಇದರಂತೆಯೇ ಎಲ್ಲಾ ಧರ್ಮಾಂಧರಿಗೂ ತಮ್ಮ ಮತಕ್ಕಿಂತ ಉತ್ತಮವಾದುದು ಯಾವುದೂ ಇಲ್ಲ.

೩೬೭. ಮಾನ್ಯ ಶಂಕರಾಚಾರ್ಯರಿಗೆ ಮೂರ್ಖನಾದ ಶಿಷ್ಯನೊಬ್ಬನಿದ್ದನು. ಎಲ್ಲದರಲ್ಲೂ ಅವನು ಗುರುವನ್ನು ಅನುಸರಿಸುತ್ತಿದ್ದನು. ಶಂಕರಾಚಾರ್ಯರು 'ಶಿವೋಹಂ' ಎಂದು ಉಚ್ಚರಿಸಿದರೆ ಶಿಷ್ಯನೂ ಉಚ್ಚರಿಸುವನು. ಶಿಷ್ಯನ ಮೂಢತನವನ್ನು ಹೋಗಲಾಡಿಸಲು ಒಂದು ದಿನ ಕಮ್ಮಾರನ ಮನೆಯ ಹತ್ತಿರ ಹೋಗುತ್ತಿದ್ದಾಗ ಒಂದು ಕುಡಿಕೆಯ ತುಂಬ ಕರಗಿದ ಕಬ್ಬಿಣವನ್ನು ಕುಡಿದರು. ತನ್ನ ಶಿಷ್ಯನಿಗೂ ಹಾಗೆಯೇ ಮಾಡುವಂತೆ ಹೇಳಿದರು. ಶಿಷ್ಯನಿಗೆ ಗುರುವಿನ ಈ ಕೆಲಸವನ್ನು ಮಾತ್ರ ಮಾಡುವುದಕ್ಕೆ ಆಗಲಿಲ್ಲ. ಅಂದಿನಿಂದ ಶಿಷ್ಯನು ಶಿವೋಹಂ ಎಂದು ಹೇಳುವುದನ್ನು ಬಿಟ್ಟುಬಿಟ್ಟನು. ನೀಚ ಪರಾನುಕರಣೆ ಯಾವಾಗಲೂ ಕೆಟ್ಟದ್ದು. ಆದರೆ ಹಿರಿಯರ ಆದರ್ಶ ಜೀವನವನ್ನು ನೋಡಿ ನಮ್ಮನ್ನು ನಾವು ತಿದ್ದಿಕೊಳ್ಳಲು ಪ್ರಯತ್ನಿಸುವುದು ಯಾವಾಗಲೂ ಒಳ್ಳೆಯದು.

## ಪೂರ್ವಸಂಸ್ಕಾರದ ಪ್ರಭಾವ

೩೬೮. ಸಂಸ್ಕಾರದ ಪ್ರೇರಣೆ ಎಷ್ಟು ಬಲವಾದುದು? ಒಂದು ಸ್ಥಳದಲ್ಲಿ ಕೆಲವು ಸನ್ಯಾಸಿಗಳು ಕುಳಿತಿದ್ದರು. ಹತ್ತಿರದಲ್ಲೇ ಒಬ್ಬ ತರುಣಿ ಹೋದಳು. ಎಲ್ಲರೂ ಕೂಡ ಹಿಂದಿನಂತೆ ಧ್ಯಾನಾಸಕ್ತರಾಗಿದ್ದರು. ಒಬ್ಬನು ಮಾತ್ರ ಅವಳ ಕಡೆ ಎದ್ದು ನೋಡಿದನು. ಇವಳ ಸೌಂದರ್ಯದ ಆಕರ್ಷಣೆಗೆ ಒಳಗಾದ ಇವನು ಹಿಂದೆ ಗೃಹಸ್ಥನಾಗಿದ್ದು ಮೂರು ಮಕ್ಕಳ ತಂದೆಯಾಗಿದ್ದನು.

೩೬೯. ಒಮ್ಮೆ ನಾನು ಒಂದು ಕಡೆ ಎರಡು ಕಸಿಯ ಹೋರಿಗಳನ್ನು ಕಂಡೆನು. ಆಗತಾನೇ ಹತ್ತಿರದಲ್ಲೇ ಒಂದು ಹಸು ಹೋಯಿತು. ಇದನ್ನು ಕಂಡಾಗ ಅದರಲ್ಲಿ ಒಂದು ಎತ್ತಿಗೆ ಕಾಮೋದ್ರೇಕವಾಯಿತು. ಮತ್ತೊಂದು ಸುಮ್ಮನೆ ಇದ್ದಿತು: ಈ ಎತ್ತಿನ ವಿಚಿತ್ರ ರೀತಿಯನ್ನು ನೋಡಿ ಅದರ ಹಿಂದಿನ ಜೀವನವನ್ನು ವಿಚಾರಿಸಿ

ದಾಗ ಆ ಎತ್ತು ಬೆಳೆದು ದೊಡ್ಡದಾಗಿ ಕೆಲವು ಹಸುಗಳನ್ನು ಹಾರಿದ ಮೇಲೆ ಅದಕ್ಕೆ ಕಸಿಮಾಡಿದ್ದರು, ಮತ್ತೊಂದನ್ನು ಕೇವಲ ಸಣ್ಣದಾಗಿರುವಾಗಲೇ ಕಸಿ ಮಾಡಿದ್ದರು, ಎಂದು ಕೇಳಿದೆನು. ಮನಸ್ಸಿನ ಮೇಲೆ ಹಿಂದಿನ ಅಭ್ಯಾಸಗಳ ಪ್ರಭಾವ ಇಂತಹುದು. ಸಂಭೋಗ ಸುಖವನ್ನು ಅನುಭವಿಸದೆ ಸಂಸಾರ ತ್ಯಾಗ ಮಾಡಿದವರಿಗೆ ಹೆಂಗಸನ್ನು ಕಂಡಾಗ ಕಾಮ ವಿಕಾರವಾಗುವುದಿಲ್ಲ. ಯಾರು ಸಂಸಾರದಲ್ಲಿದ್ದು ವಯಸ್ಸಾದ ಮೇಲೆ ಸನ್ಯಾಸಿಗಳಾಗುವರೋ ಅವರು ಹಲವು ವರುಷಗಳು ನಿಗ್ರಹಿಸಿದ್ದರೂ ಅವರ ಹಿಂದಿನ ಸಂಸ್ಕಾರಗಳು ಮೇಲೇಳಬಹುದು.

೩೭೦. ಹೀನ ಆಲೋಚನೆಗಳಲ್ಲಿ ಮಗ್ನವಾಗಿರುವ ಮನಸ್ಸು, ಉತ್ತಮ ಬ್ರಾಹ್ಮಣ ಕುಲದಲ್ಲಿ ಹುಟ್ಟಿದ ಬ್ರಾಹ್ಮಣ ಚಂಡಾಲರ ಮನೆಯಲ್ಲಿ ವಾಸಿಸಿದಂತೆ. ಅಥವಾ ಶ್ರೀಮಂತನು ದೊಡ್ಡ ಪಟ್ಟಣದ ಬಡ ಜೋಪಡಿಯಲ್ಲಿ ವಾಸಿಸಿದಂತೆ.

೩೭೧. ಒಂದು ದಿನ ಒಬ್ಬ ಮನುಷ್ಯನು ತನ್ನ ಹುಡುಗ ಹರೀಶನು ದೊಡ್ಡವನಾದಮೇಲೆ, ಅವನಿಗೆ ಮದುವೆಮಾಡಿ, ಮನೆಯನ್ನು ಅವನ ಸ್ವಾಧೀನಕ್ಕೆ ಬಿಟ್ಟು, ಸಂಸಾರ ತ್ಯಾಗಮಾಡಿ ಯೋಗಾಭ್ಯಾಸದಲ್ಲಿ ನಿರತನಾಗುವೆನು ಎಂದನು. ಇದಕ್ಕೆ ಶ್ರೀ ರಾಮಕೃಷ್ಣರು "ದೇವರನ್ನು ಪ್ರಾರ್ಥಿಸುವುದಕ್ಕೆ ನಿನಗೆ ಸಮಯವೇ ಸಿಕ್ಕುವುದಿಲ್ಲ. ಇದಾದಮೇಲೆ ಹರೀಶ ಮತ್ತು ಗಿರೀಶ ಇವರುಗಳಿಗೆ ನನ್ನ ಕಂಡರೆ ಪ್ರಾಣ. ನಾನು ಮನೆಯನ್ನು ಬಿಟ್ಟರೆ ಅವರಿಗೆ ತುಂಬಾ ವ್ಯಾಕುಲವಾಗುವುದು, ಹರೀಶನಿಗೆ ತುಂಬಾ ವ್ಯಾಕುಲವಾಗುವುದು, ಹರೀಶನಿಗೆ ಮದುವೆ ಮಾಡೋಣ, ಅವನ ಮಗುವನ್ನು ನೋಡೋಣ ಎನ್ನುವಿ. ನಿನ್ನ ಆಸೆಗೆ ಕೊನೆಯೇ ಇಲ್ಲ" ಎಂದರು.

## ಗುಪ್ತಶಕ್ತಿಗಳ ಅಪಾಯ

೩೭೨. ಮಾಯ ಮಂತ್ರ ಮಾಡುವವರು ಮತ್ತು ಗುಪ್ತಶಕ್ತಿಯನ್ನು ಪ್ರದರ್ಶಿಸುವವರು ಅವರ ಹತ್ತಿರ ಹೋಗಬೇಡಿ. ಸತ್ಯದ ಹಾದಿಯಿಂದ ಇವರು ಅಡ್ಡಹೋದವರು. ಬ್ರಹ್ಮಸಾಕ್ಷಾತ್ಕಾರದ ಯಾತ್ರೆಯ ದಾರಿಯಲ್ಲಿ ಇರುವ ಮಾಯಾ ಬಲೆಗೆ ಈ ಜನರು ಸಿಕ್ಕಿಬಿದ್ದಿರುವರು. ಇಂತಹ ಶಕ್ತಿಯ ಹತ್ತಿರ ಬಹಳ ಜೋಪಾನವಾಗಿರಿ. ಎಂದಿಗೂ ಇವುಗಳನ್ನು ಇಚ್ಛಿಸಬೇಡಿ.

೩೭೩. ಹೀನಸ್ವಭಾವದವರು ಮಾತ್ರ ರೋಗಗಳನ್ನು ಗುಣ ಮಾಡುವುದು, ವ್ಯಾಜ್ಯವನ್ನು ಗೆಲ್ಲುವುದು, ನೀರಿನಮೇಲೆ ನಡೆಯುವುದು, ಇಂತಹ ಅದ್ಭುತ ವ್ಯಾಪಾರಗಳನ್ನು ಬಯಸುವರು. ನಿಜವಾದ ಭಕ್ತ ದೇವರ ಪಾದಕಮಲಗಳನ್ನಲ್ಲದೆ ಮತ್ತಾವುದನ್ನೂ ಬಯಸುವುದಿಲ್ಲ.

೩೭೪. ಒಮ್ಮೆ ಶ್ರೀಕೃಷ್ಣ ಅರ್ಜುನನಿಗೆ "ನೀನು ನನ್ನನು ಪಡೆಯಬೇಕಾದರೆ, ಅಷ್ಟಸಿದ್ಧಿಗಳಲ್ಲಿ ಒಂದನ್ನಾದರೂ ನೀನು ಎಲ್ಲಿಯ ವರೆವಿಗೂ ಪಡೆದಿರುವೆಯೋ ಅಲ್ಲಿಯವರೆವಿಗೂ ನಿನಗೆ ಅದು ಸಾಧ್ಯವಿಲ್ಲ" ಎಂದು ಹೇಳಿದನು. ಇಂತಹ ಮಾಯ ಮಂತ್ರದ ಶಕ್ತಿ ಒಬ್ಬನ ಅಹಂಕಾರವನ್ನು ಹೆಚ್ಚಿಸಿ ದೇವರನ್ನು ಮರೆಯುವಂತೆ ಮಾಡುವುದು.

೩೭೫. ಒಬ್ಬನು ನಿರ್ಜನಾರಣ್ಯದಲ್ಲಿ ಹದಿನಾಲ್ಕು ವರ್ಷಗಳು ಘೋರ ತಪಸ್ಸನ್ನು ಮಾಡಿದಮೇಲೆ ನೀರಿನಮೇಲೆ ನಡೆಯುವ ವರವನ್ನು ಪಡೆದನು. ಇದರಿಂದ ಅತ್ಯಾನಂದಿತನಾಗಿ ತನ್ನ ಗುರುವಿನ ಹತ್ತಿರ ಹೋಗಿ, "ಗುರುಗಳೇ, ನಾನು ನೀರಿನಮೇಲೆ ನಡೆಯುವ ಶಕ್ತಿಯನ್ನು ಗಳಿಸಿರುವೆನು" ಎಂದನು. ಅದಕ್ಕೆ ಗುರುಗಳು "ನೀನು ತಿಳಿಗೇಡಿ" ಎಂದು ಅವನನ್ನು ಅಲ್ಲಗಳೆದರು. "ಹದಿನಾಲ್ಕು ವರ್ಷಗಳು ಪಟ್ಟ ಕಷ್ಟದ ಪರಿಣಾಮವೇ ಇದು? ನೀನು ಏನನ್ನು ಪಡೆದಿರುವೆಯೋ ಅದು ಒಂದು ಕಾಸಿನ ಬೆಲೆಯದು. ಹದಿನಾಲ್ಕು ವರುಷಗಳು ನೀನು ಪಟ್ಟ ಕಷ್ಟದಿಂದ ಏನನ್ನು ಮಾಡಬಲ್ಲೆಯೋ ಅದನ್ನು ಸಾಧಾರಣ ಮನುಷ್ಯರು ದೋಣಿಯವನಿಗೆ ಒಂದುಕಾಸನ್ನು ಕೊಟ್ಟು ಮಾಡುವರು" ಎಂದು ನಿಂದಿಸಿದರು.

೩೭೬. ಸಿದ್ಧಿಯನ್ನು ನಾವು ಅನಿಷ್ಟದಂತೆ ತ್ಯಜಿಸಬೇಕು. ಸಾಧನೆ ಸಂಯಮ ಅಥವಾ ಇಂದ್ರಿಯನಿಗ್ರಹದ ಪರಿಣಾಮವಾಗಿ ಇವು ತಾವಾಗಿಯೇ ಬರುವುವು. ಆದರೆ ಯಾರು ಇಂತಹ ಸಿದ್ಧಿಗಳಲ್ಲಿ ಆಸಕ್ತ ರಾಗಿರುತ್ತಾರೆಯೋ ಅವರು ಅಲ್ಲಿಯೇ ನಿಂತುಕೊಳ್ಳಬೇಕಾಗುವುದು. ಮುಂದೆ ಹೋಗಲು ಸಾಧ್ಯವಿಲ್ಲ.

೩೭೭. ಚಂದ್ರನೆಂಬುವನೊಬ್ಬನು ಗುಟಿಕಾ ಸಿದ್ಧಿಯನ್ನು ಪಡೆದಿದ್ದನು. ಅವನು ಒಂದು ಯಂತ್ರವನ್ನು ಇಟ್ಟುಕೊಂಡು ಕಾಣದಂತೆ ಎಲ್ಲಿಬೇಕಾದರೂ ಅಲೆಯುತ್ತಿದ್ದನು. ಎಂತಹ ಸ್ಥಳಕ್ಕೆ ಬೇಕಾದರೂ ಹೋಗುತ್ತಿದನು. ಮೊದಲು ಅವನು ದೇವರ ಭಕ್ತನಾಗಿದ್ದನು. ಬಹಳ

ಸಿಯುವುದಿಂದ ಸಾಧನೆಮಾಡುತ್ತಿದ್ದನು. ಕ್ರಮೇಣ ಈ ಶಕ್ತಿ ಬಂದ ಮೇಲೆ ತನ್ನ ಹೀನ ಆಸೆಗಳನ್ನು ತೃಪ್ತಿಪಡಿಸಿಕೊಳ್ಳಲು ಮೊದಲುಮಾಡಿದನು. ಹೀಗೆ ಮಾಡದಂತೆ ನಾನು ಅವನನ್ನು ಎಚ್ಚರಿಸಿದೆನು. ಆದರೆ ಅವನು ಲಕ್ಷಿಸಲಿಲ್ಲ. ಅವನು ಕಾಣದಂತೆ ಒಬ್ಬ ಗೃಹಸ್ಥನ ಮನೆಗೆ ಹೋಗಿ ಅಲ್ಲಿ ಒಬ್ಬ ತರುಣಿಯೊಂದಿಗೆ ಸರಸಸಲ್ಲಾಪದಲ್ಲಿ ತೊಡಗಿದನು. ಇದರಿಂದ ಅವನ ಶಕ್ತಿಯೆಲ್ಲ ನಾಶವಾಗಿ ಭ್ರಷ್ಟಜೀವಿಯಾದನು.

೩೭೮. ಕೆಲವು ವೇಳೆ ಇಂತಹ ಶಕ್ತಿಯನ್ನು ಪಡೆಯುವುದು ಬಹಳ ಅಪಾಯಕರ. ನನಗೆ ತೋತಾಪುರಿ ಹೀಗೆ ಹೇಳಿದನು: "ಒಂದು ಸಲ ಪ್ರಖ್ಯಾತನಾದ ಸಿದ್ಧನೊಬ್ಬನು ಸಮುದ್ರದ ದಡದ ಮೇಲೆ ಕುಳಿತಿದ್ದನು. ಆಗ ದೊಡ್ಡ ಚಂಡಮಾರುತವೆದ್ದಿತು. ಇದರಿಂದ ಕುಪಿತನಾಗಿ ಚಂಡಮಾರುತ ನಿಲ್ಲಲಿ ಎಂದು ಸಿದ್ಧನು ಹೇಳಿದನು. ಅವನ ಮಾತು ಸಿದ್ಧಿಸಿತು. ಆಗತಾನೇ ಸಮುದ್ರದಲ್ಲಿ ಬೇರೆಡೆ ಒಂದು ಹಡಗು ಧ್ವಜವನ್ನೆಲ್ಲ ಹರಡಿಕೊಂಡು ಹೋಗುತ್ತಿತ್ತು. ಗಾಳಿ ತಕ್ಷಣ ನಿಂತೊಡನೆಯೆ ಹಡಗು ತಲೆಕೆಳಗಾಗಿ ಒಳಗಿದ್ದವರನ್ನೆಲ್ಲ ಮುಳುಗಿಸಿತು. ಇಷ್ಟೊಂದು ಜನರ ಸಾವಿಗೆ ಆ ಸಿದ್ಧನು ಕಾರಣನಾದನು. ಇದರಿಂದ ಅವನು ತನ್ನ ಶಕ್ತಿಯನ್ನೆಲ್ಲಾ ಕಳೆದುಕೊಂಡು ನರಕದಲ್ಲಿ ನರಳಬೇಕಾಯಿತು."

೩೭೯. ಪಂಚವಟಿಯ ಕೆಳಗೆ ನಾನು ಘೋರ ಸಾಧನೆಯಲ್ಲಿ ನಿರತನಾಗಿದ್ದಾಗ ಗಿರಿಜ ಎಂಬ ಹೆಸರಿನವನೊಬ್ಬನು ಅಲ್ಲಿಗೆ ಬಂದನು. ಅವನು ದೊಡ್ಡ ಯೋಗಿ. ಒಂದು ರಾತ್ರಿ ಕತ್ತಲಲ್ಲಿ ನನ್ನ ಕೋಣೆಗೆ ಹೋಗಬೇಕಾಗಿದ್ದಾಗ ಅವನು ತನ್ನ ಕೈಯ್ಯನ್ನು ಎತ್ತಿದನು. ಕೊಂಕಳಿನಿಂದ ಪ್ರಕಾಶಮಾನವಾದ ಜ್ಯೋತಿಯೊಂದು ಹೊರಟು ದಾರಿಯನ್ನೆಲ್ಲಾ ಬೆಳಗಿತು. ನನ್ನ ಬುದ್ಧಿವಾದದಿಂದ ಅವನು ಆ ಶಕ್ತಿಯ ಉಪಯೋಗವನ್ನು ಬಿಟ್ಟುಬಿಟ್ಟನು. ಪರಮ ಸತ್ಯದ ಸಾಕ್ಷಾತ್ಕಾರದ ಕಡೆಗೆ ತನ್ನ ಮನಸ್ಸನ್ನು ತಿರುಗಿಸಿದನು. ಕ್ರಮೇಣ ಅವನು ಆ ಶಕ್ತಿಯನ್ನೇನೋ ಕಳೆದುಕೊಂಡನು. ಆದರೆ ಧಾರ್ಮಿಕ ಜೀವನದಲ್ಲಿ ಮುಂದುವರಿದನು.

೩೮೦. ಭಿಕ್ಷುಕನೊಬ್ಬನು ಅರಮನೆಗೆ ಹೋಗಿ ಸೋರೆಯಕಾಯನ್ನು ಬೇಡಿದರೆ ಮೂರ್ಖನಾಗುತ್ತಾನೆ. ಇದರಂತೆಯೆ ಭಕ್ತನು ಸರ್ವೇಶ್ವರನಾದ ಪರಮಾತ್ಮನ ಮುಂದೆ ನಿಂತು ಅನರ್ಘ್ಯವಾದ

ಜ್ಞಾನಭಕ್ತಿಯನ್ನು ಬೇಡುವುದು ಬಿಟ್ಟು ಮಾಯಮಂತ್ರ ಶಕ್ತಿಯನ್ನು ಬೇಡಿದರೆ ಮೂರ್ಖನಾಗುತ್ತಾನೆ.

೩೮೧. ಒಂದು ಸಲ ಪರಮಹಂಸರೊಬ್ಬರ ತರುಣ ಶಿಷ್ಯ ಮತ್ತೊಬ್ಬರ ಆಲೋಚನೆಗಳನ್ನು ಓದುವುದನ್ನು ಕಲಿತನು. ಇದರಿಂದ ಅತ್ಯಾನಂದಿತನಾಗಿ ಈ ಸುದ್ದಿಯನ್ನು ಗುರುಗಳಿಗೆ ತಿಳಿಸಿದನು. ರಾಮಕೃಷ್ಣರು ಕೇಳಿ "ಮಗು ಎಂತಹ ನಾಚಿಕೆಕೇಡು, ಇಂತಹ ಕ್ಷುದ್ರ ವಿಷಯಗಳ ಮೇಲೆ ನಿನ್ನ ಶಕ್ತಿಯನ್ನು ವ್ಯರ್ಥಮಾಡಬೇಡ" ಎಂದು ಬುದ್ಧಿ ಹೇಳಿದರು.

೩೮೨. ಶಿಷ್ಯನೊಬ್ಬನು ಒಂದು ಸಲ ಶ್ರೀ ರಾಮಕೃಷ್ಣರಿಗೆ ತಾನು ಧ್ಯಾನದಲ್ಲಿದ್ದಾಗ ದೂರದಲ್ಲಿ ಏನಾಗುತ್ತಿದೆ ಎನ್ನುವುದನ್ನು ಮತ್ತು ಅದೇ ಕಾಲದಲ್ಲಿ ಇತರರು ಏನು ಮಾಡುತ್ತಿರುವರು ಎನ್ನುವುದನ್ನು ತಾನು ನೋಡಬಲ್ಲೆನೆಂದೂ, ನಂತರ ವಿಚಾರಿಸಿದಾಗ ಇಂತಹ ದೃಶ್ಯಗಳೆಲ್ಲಾ ನಿಜವಾಯಿತೆಂದೂ ಹೇಳಿದನು. ಶ್ರೀ ಗುರುದೇವರು: "ಮಗು ಕೆಲವು ದಿನಗಳು ಧ್ಯಾನಮಾಡಬೇಡ ಇವು ಆತ್ಮಸಾಕ್ಷಾತ್ಕಾರಕ್ಕೆ ಅಡಚಣೆ" ಎಂದರು.

## ದಾನಧರ್ಮ

೩೮೩. ಧಾರ್ಮಿಕ ಸಂತರ್ಪಣೆ ಕಾಲದಲ್ಲಿ ಏಕೆ ಜನರಿಗೆ ಅನ್ನ ಹಾಕುವರು? ಎಲ್ಲಾ ಜೀವರಾಶಿಗಳಲ್ಲಿಯೂ ಇರುವ ಚೇತನಸ್ವರೂಪನಾದಂತಹ ಪರಮಾತ್ಮನಿಗೆ ಮಾಡುವ ಹೋಮ ಇದು ಎಂದು ನೀವು ಭಾವಿಸುವುದಿಲ್ಲವೆ? ಇಂತಹ ಸಂತರ್ಪಣೆಯ ಸಮಯದಲ್ಲಿ ದುರ್ಜನರು ಅಧರ್ಮಿಗಳು, ಜಾರರು ಮುಂತಾದವರನ್ನು ಎಂದಿಗೂ ಸೇರಿಸಕೂಡದು. ಅವರು ಕುಳಿತ ನೆಲದ ಕೆಳಗೆ ಹಲವು ಮಾರು ಕಲುಷಿತವಾಗುವಷ್ಟು ಪಾಪದಿಂದ ತುಂಬಿರುವರು ಅವರು.

೩೮೪. ಕಟುಕನೊಬ್ಬನು ಹಸುವೊಂದನ್ನು ದೂರದಲ್ಲಿರುವ ಕಟುಕನ ಮನೆಗೆ ಅಟ್ಟಿಕೊಂಡು ಹೋಗುತ್ತಿದ್ದನು. ದಾರಿಯಲ್ಲಿ ಹೋಗುತ್ತಿದ್ದಾಗ ಅದನ್ನು ಹಿಂಸಿಸಿದುದರಿಂದ ಮುಂದಕ್ಕೆ ಹೊಡೆದುಕೊಂಡು ಹೋಗುವುದು ತುಂಬಾ ಕಷ್ಟವಾಯಿತು. ಹಲವು ಗಂಟೆಗಳಾದ ಮೇಲೆ ಮಧ್ಯಾಹ್ನದ ಸಮಯಕ್ಕೆ ಒಂದು ಹಳ್ಳಿಯನ್ನು ಸೇರಿ

ದನು. ತುಂಬಾ ನಡೆದು ದಣಿದಿದ್ದುದರಿಂದ ಹತ್ತಿರವಿದ್ದ ಒಂದು ಧರ್ಮ ಶಾಲೆಗೆ ಹೋಗಿ ಅಲ್ಲಿ ಉಚಿತವಾಗಿ ಕೊಡುತ್ತಿದ್ದ ಆಹಾರವನ್ನು ತೆಗೆದು ಕೊಂಡನು. ಚೆನ್ನಾಗಿ ಊಟ ಮಾಡಿ ಚೇತರಿಸಿಕೊಂಡಮೇಲೆ ಸುಲಭ ವಾಗಿ ಹಸುವನ್ನು ಕಟುಕನ ಮನೆಗೆ ತೆಗೆದುಕೊಂಡು ಹೋಗಲು ಸಾಧ್ಯವಾಯಿತು. ಗೋಹತ್ಯದ ಒಂದು ಭಾಗ ಧರ್ಮಶಾಲೆಯಲ್ಲಿ ಉಚಿತವಾಗಿ ಆಹಾರವನ್ನು ಕೊಡುವಂತೆ ಮಾಡಿರುವವನ ಪಾಲಿಗೆ ಬಂದಿತು. ಆಹಾರ ಮುಂತಾದುವುಗಳನ್ನು ದಾನ ಮಾಡುವಾಗ ಅದನ್ನು ಸ್ವೀಕರಿಸುವವರು ಅದನ್ನು ದುರುಪಯೋಗ ಮಾಡುವಂತಹ ನೀಚರೆ ಅಥವಾ ಅಲ್ಲವೆ ಎಂಬುದನ್ನು ವಿಚಾರ ಮಾಡಬೇಕು.

೩೮೫. ಹಿಂದೆ ಬೇಕಾದಷ್ಟು ದಾನಧರ್ಮಗಳನ್ನು ಮಾಡಿದವರು ಈ ಜನ್ಮದಲ್ಲಿ ಶ್ರೀಮಂತರಾಗಿ ಹುಟ್ಟುವರು ಎಂಬ ಧಾರ್ಮಿಕ ನಿಯಮ ಗಳೇನೋ ಇವೆ. ಆದರೆ ಈ ಸೃಷ್ಟಿ ಅವನ ಮಾಯೆ. ಮಾಯೆಯಲ್ಲಿ ಎಷ್ಟೋ ಅವ್ಯವಸ್ಥೆ ಇದೆ. ಅದನ್ನು ಯಾರೂ ತಿಳಿಯಲಾರರು.

## ಉಡುಪು ಮತ್ತು ಆಹಾರ

೩೮೬. ಸನ್ಯಾಸಿ ಕಾವಿಯ ಬಟ್ಟೆಯನ್ನು ಧರಿಸುವುದರಿಂದ ಏನು ಪ್ರಯೋಜನ? ಬಟ್ಟೆಯಲ್ಲಿ ಏನಿದೆ? ಕಾವಿಯ ಬಟ್ಟೆ ಅದಕ್ಕೆ ಸಂಬಂಧಪಟ್ಟ ಆಲೋಚನೆಯನ್ನು ತರುತ್ತದೆ. ಹಳೆಯ ಎಕ್ಕಡಗಳನ್ನು ಮತ್ತು ಹರಿದುಹೋದ ಬಟ್ಟೆಯನ್ನು ಹಾಕಿಕೊಳ್ಳುವುದರಿಂದ ಒಬ್ಬನ ದೈನ್ಯತೆಯನ್ನು ಮನಸ್ಸಿಗೆ ತರುತ್ತದೆ. ಷರಾಯಿ ಅಂಗಿ ಜೋಡುಗಳು ಇವುಗಳನ್ನು ಹಾಕಿಕೊಳ್ಳುವುದರಿಂದ ಸಾಧಾರಣವಾಗಿ ಒಬ್ಬನು ಅಹಂಕಾರದಿಂದ ಕೂಡಿದಂತೆ ಕಾಣುವುದು. ಮಲ್ಲಿನ ಕರಿಯಂಚಿನ ಪಂಚೆಯನ್ನುಟ್ಟುಕೊಂಡ ಮೇಲೆ ತಮಾಷೆಗಾಗಿ ಪ್ರೀತಿಯ ಹಾಡು ಗಳನ್ನು ಹೇಳುವಂತೆ ಆಗುವುದು. ಸನ್ಯಾಸಿಯ ಕಾವಿಯ ಬಟ್ಟೆ ಮನಸ್ಸಿನಲ್ಲಿ ಸಾಧಾರಣವಾಗಿ ಒಳ್ಳೆಯ ಆಲೋಚನೆಗಳು ಏಳುವಂತೆ ಮಾಡುವುದು. ಉಡುಪಿಗೇ ಯಾವ ವಿಧವಾದ ಪ್ರಾಮುಖ್ಯತೆ ಇಲ್ಲ ದಿದ್ದರೂ ಪ್ರತಿಯೊಂದು ವಿಧದ ಪೋಷಾಕಿಗೂ ಒಂದೊಂದು ಬಗೆಯ ಆಲೋಚನೆಯ ಸಂಬಂಧವಿದೆ.

೩೮೭. ಸಣ್ಣ ಸಸಿಗೆ ಒಂದು ಬೇಲಿಯನ್ನು ಹಾಕಿ ಯಾವಾ ಗಲೂ ದನ, ಕುರಿ ಮತ್ತು ತುಂಟ ಹುಡುಗರ ಹಾವಳಿಯಿಂದ ಕಾಪಾಡ

ಬೇಕು. ಅದು ಒಂದು ದೊಡ್ಡ ಮರವಾದ ಮೇಲೆ ಒಂದು ದನದ ಮಂದೆಯಾಗಲೀ, ಅಥವಾ ಕುರಿಯ ಮಂದೆಯಾಗಲೀ ಧಾರಾಳವಾಗಿ ಅದರ ನೆರಳಿನಲ್ಲಿ ನಿಲ್ಲಬಹುದು. ಮರದ ಎಲೆಯನ್ನು ಯಥೇಷ್ಟವಾಗಿ ಮೇಯಬಹುದು. ಇದರಂತೆಯೇ ನಿಮ್ಮ ಶ್ರದ್ಧೆಯೂ ಕೂಡ. ಇನ್ನೂ ಶೈಶವಾವಸ್ಥೆಯಲ್ಲಿರುವಾಗ ಪ್ರಾಪಂಚಿಕತೆ ಮತ್ತು ದುರ್ಜನಸಂಗ ಅವುಗಳ ಹಾವಳಿಯಿಂದ ಕಾಪಾಡಬೇಕು. ಆದರೆ ನಿನ್ನ ಶ್ರದ್ಧೆ ದೃಢವಾದ ಮೇಲೆ ಯಾವ ಪ್ರಾಪಂಚಿಕತೆಯಾಗಲೀ ಅಥವಾ ದುಸ್ಸಂಗವಾಗಲೀ ನಿನ್ನ ಹತ್ತಿರ ಬರಲಾರದು. ನಿನ್ನ ಸತ್ಸಂಗದಿಂದ ಅನೇಕ ದುರ್ಜನರು ಸಜ್ಜನರಾಗುವರು.

೩೮೮. ಒಮ್ಮೆ ಪರಮಹಂಸರನ್ನು ವಿದ್ಯಾರ್ಥಿಯೊಬ್ಬನು ಹೀಗೆ ಪ್ರಶ್ನಿಸಿದರು. "ಸ್ವಾಮಿ! ಪ್ರತಿಯೊಬ್ಬರಲ್ಲಿಯೂ, ಒಂದೇ ದೇವರಿರುವಾಗ ನಾವು ಯಾರ ಕೈಯಿಂದಲಾದರೂ ಊಟ ಮಾಡಿದರೆ ದೋಷವೇನು?" ಪರಮಹಂಸರು ಅವನನ್ನು ನೀನು ಬ್ರಾಹ್ಮಣನೇ ಎಂದು ಪ್ರಶ್ನಿಸಿದರು. ಆತನು ಹೌದು ಎಂದಾಗ ಪರಮಹಂಸರು ಹೀಗೆ ಹೇಳಿದರು: "ಅದಕ್ಕೇ ನನ್ನನ್ನು ಈ ಪ್ರಶ್ನೆ ಕೇಳುವುದು- ನೀನು ಒಂದು ದೀಪದಕಡ್ಡಿ ಗೀರಿ ಅದರ ಮೇಲೆ ಕಟ್ಟಿಗೆಯ ರಾಶಿಯನ್ನಿಟ್ಟರೆ ಬೆಂಕಿ ಏನಾಗುವುದು?" ಅದಕ್ಕೆ ವಿದ್ಯಾರ್ಥಿ, "ಕಟ್ಟಿಗೆಯ ರಾಶಿಗೆ ಗಾಳಿ ಬಾರದೆ ಬೆಂಕಿ ಆರಿ ಹೋಗುವುದು" ಎಂದನು. ಪರಮಹಂಸರು, "ಈಗ ಕಾಡುಕಿಚ್ಚು ಉರಿಯುತ್ತಿದೆ. ಅದರ ಮೇಲೆ ಹಸಿಯ ಬಾಳೆಯ ಮರವನ್ನು ಹಾಕಿದೆ ಎಂದಿಟ್ಟುಕೊಳ್ಳೋಣ. ಈ ಮರ ಏನಾಗುತ್ತದೆ?" ವಿದ್ಯಾರ್ಥಿ ಅದಕ್ಕೆ "ನಿಜವಾಗಿಯೂ ಅದು ನಿಮಿಷದಲ್ಲಿ ಭಸ್ಮೀಭೂತವಾಗಿಬಿಡುವುದು" ಎಂದನು. ಅದಕ್ಕೆ ರಾಮಕೃಷ್ಣರು "ಇದರಂತೆಯೆ ನಿನ್ನಲ್ಲಿ ಆಧ್ಯಾತ್ಮಿಕತೆ ಬಹಳ ಕಡಿಮೆಯಾಗಿದ್ದರೆ, ಸಿಕ್ಕಿದವರ ಕೈಯ್ಯಲ್ಲೆಲ್ಲಾ ಊಟಮಾಡುವುದರಿಂದ ಅದು ಆರಿಹೋಗುವ ಸಂಭವವಿದೆ. ಅದು ಬಲವಾಗಿದ್ದರೆ ಯಾವ ಆಹಾರ ತಿಂದರೂ ಏನೂ ದೋಷವಿಲ್ಲ."

೩೮೯. ಹಿಂದೆ ಒಂದು ಸಲ ಮುಸಲ್ಮಾನರ ಗುರು ಒಬ್ಬನು ನನಗೆ ಉಪದೇಶ ಮಾಡಿ ಅಲ್ಲಾನ ಹೆಸರನ್ನು ಉಚ್ಚರಿಸುವಂತೆ ಹೇಳಿದನು. ಹಲವು ದಿನಗಳು ನಾನು ಸ್ವಲ್ಪವೂ ಲೋಪವಿಲ್ಲದೆ ಅದರಂತೆಯೆ ಆಚರಿಸಿ, ಅವರ ಆಹಾರವನ್ನೇ ತಿಂದು ಅಲ್ಲಾನ ಹೆಸರನ್ನು ಉಚ್ಚರಿಸಿದೆ. ಆ ಕಾಲದಲ್ಲಿ ಕಾಳಿಕಾ ದೇವಾಲಯಕ್ಕೆ ಹೋಗುವುದಕ್ಕಾಗಲೀ

ಹಿಂದೂ ದೇವಿಯರ ಹೆಸರನ್ನು ಹೇಳುವುದಕ್ಕಾಗಲೀ ನನಗೆ ಸಾಧ್ಯವಾಗಲಿಲ್ಲ.

೩೯೦. ಶ್ರಾದ್ಧ ದಿನಗಳಲ್ಲಿ ಕೊಟ್ಟ ಊಟವನ್ನು ಉಣ್ಣಬೇಡ. ಅದು ಭಕ್ತಿ ಪ್ರೇಮಗಳನ್ನು ನಾಶಮಾಡುವುದು. ಮತ್ತೊಬ್ಬರಿಗೆ ವೈದಿಕ ಮುಂತಾದುವುಗಳನ್ನು ಮಾಡಿಸುವ ಪುರೋಹಿತರ ಮನೆಗಳಲ್ಲಿ ಊಟ ಮಾಡಬೇಡ.

೩೯೧. ಪ್ರಶ್ನೆ--ಊಟದ ವಿಷಯವಾಗಿ, ನನಗೆ ಏನು ಸಿಕ್ಕಿದರೆ ಅದನ್ನು ಊಟಮಾಡಬಹುದಲ್ಲವೇ ?

ಉತ್ತರ—ಅದು ಅವನ ಆಧ್ಯಾತ್ಮಿಕ ಸ್ವಭಾವದ ಮೇಲಿದೆ. ಜ್ಞಾನ ಮಾರ್ಗದಲ್ಲಿ ಇರುವುದರಿಂದ ಏನೂ ಅಪಾಯವಿಲ್ಲ. ಜ್ಞಾನಿಯು ಊಟ ಮಾಡುವಾಗ ಕುಂಡಲಿನಿಯ ಅಗ್ನಿಯಲ್ಲಿ ಅದನ್ನು ನೈವೇದ್ಯ ಮಾಡುವನು. ಆದರೆ ಭಕ್ತನ ವಿಷಯ ಬೇರೆ. ಭಕ್ತ ಶುದ್ಧವಾದ ಆಹಾರ ಮಾತ್ರ ಸೇವಿಸಬೇಕು. ತನ್ನ ಪ್ರಿಯತಮನಾದ ಪರಮಾತ್ಮನಿಗೆ ಯಾವುದನ್ನು ಕೊಡಬಹುದೋ ಅದನ್ನು ಮಾತ್ರ ಅವನು ಸೇವಿಸಬೇಕು. ಮಾಂಸಾಹಾರ ಭಕ್ತನಿಗಲ್ಲ. ಆದರೆ ಒಬ್ಬನು ಪರಮಾತ್ಮನನ್ನು ಪ್ರೀತಿಸಿದರೆ ಅವನು ಹಂದಿಯ ಮಾಂಸವನ್ನು ತಿಂದರೂ ಧನ್ಯನೇ ಆಗುವನು ಎಂಬುದನ್ನು ಕೂಡ ಹೇಳುತ್ತೇನೆ. ಆದರೆ ಯಾರು ಹಾಲು ಅನ್ನ ಅಥವಾ ಬರಿಯ ಹವಿಷ್ಯಾನ್ನ ತಿಂದರೂ ಅವನ ಮನಸ್ಸು ಕಾಮಿನೀ ಕಾಂಚನಗಳಲ್ಲಿ ಆಸಕ್ತವಾಗಿರುವುದೋ ಅವನು ನಿರ್ಭಾಗ್ಯನು.

೩೯೨. ಯಾರು ಶುದ್ಧವಾದ ಉದ್ರೇಕಗೊಳಿಸದ ಶಾಕಾಹಾರವನ್ನು ತಿಂದರೂ ದೇವರನ್ನು ಪಡೆಯಲು ಇಚ್ಛಿಸುವುದಿಲ್ಲವೋ ಅವನಿಗೆ ಆ ಶುದ್ಧ ಆಹಾರವೇ ಗೋಮಾಂಸದಷ್ಟು ಹಾನಿಕರ. ಆದರೆ ಯಾರು ಗೋಮಾಂಸವನ್ನು ತಿಂದರೂ ಪರಮಾತ್ಮನನ್ನು ಪಡೆಯಬೇಕೆಂದು ಇಚ್ಛಿಸುವನೋ ಅವನಿಗೆ ಗೋಮಾಂಸವೂ ಹವಿಷ್ಯಾನ್ನದಂತೆ.

೩೯೩. ಹಗಲಲ್ಲಿ ಮನಸ್ಸು ತೃಪ್ತಿಯಾಗುವ ತನಕ ಊಟ ಮಾಡಿ. ಆದರೆ ರಾತ್ರಿ ಅರ್ಧ ಮಿತವಾಗಿ ಸುಲಭವಾಗಿ ಜೀರ್ಣಿಸುವುದನ್ನು ಊಟಮಾಡಿ.

೩೯೪. ಯಾವ ಆಹಾರ ನಮ್ಮ ಶರೀರವನ್ನು ಉದ್ರೇಕಿಸುವುದಿಲ್ಲವೋ ಮತ್ತು ಮನಸ್ಸನ್ನು ಚಂಚಲಗೊಳಿಸುವುದಿಲ್ಲವೋ ಅದನ್ನು ಮಾತ್ರ ಭಕ್ತ ಸೇವಿಸಬೇಕು.

## ದೇಹದ ಕಡೆಗೆ ಲಕ್ಷ್ಯ

೩೯೫. ಪ್ರಶ್ನೆ—ದೇಹಾಭಿಮಾನವನ್ನು ಹೇಗೆ ಗೆಲ್ಲುವುದು.

ಉತ್ತರ—ಮಾನವದೇಹ ನಶಿಸಿ ಹೋಗುವ ವಸ್ತುಗಳಿಂದ ಆಗಿದೆ. ಮಾಂಸ, ರಕ್ತ, ಮೂಳೆ ಮುಂತಾದ ಕೊಳೆತು ನಾರುವ ವಸ್ತುಗಳ ಸಂಯೋಗ. ದೇಹವನ್ನು ಹೀಗೆ ಯಾವಾಗಲೂ ವಿಭಜನೆ ಮಾಡುವುದರಿಂದ ಅದರ ಮೇಲಿನ ಅಭಿಮಾನ ನಾಶವಾಗುವುದು.

೩೯೬. ಹಕ್ಕಿ ಹಾರಿ ಹೋದ ಮೇಲೆ ಇದ್ದ ಗೂಡನ್ನು ಯಾರೂ ಲೆಕ್ಕಿಸುವುದಿಲ್ಲ. ಪ್ರಾಣವೆಂಬ ಹಕ್ಕಿ ಹಾರಿಹೋದ ಮೇಲೆ ಹಿಂದೆ ಉಳಿದ ದೇಹವನ್ನು ಯಾರೂ ಲೆಕ್ಕಿಸುವುದಿಲ್ಲ.

೩೯೭. ದೇಹ ಕೆಲಸಕ್ಕೆ ಬಾರದ ಕ್ಷಣಿಕ ವಸ್ತುವಾದರೆ ಸಾಧುಗಳು ಮತ್ತು ಭಕ್ತರು ಅದನ್ನು ಏಕೆ ನೋಡಿಕೊಳ್ಳುತ್ತಾರೆ? ಬರಿ ಪೆಟ್ಟಿಗೆಯನ್ನು ಯಾರೂ ಕಾಯುವುದಿಲ್ಲ. ಅಂದರೆ ಅಮೂಲ್ಯವಾದ ಚಿನ್ನ ಬೆಳ್ಳಿಗಳಿರುವ ಪೆಟ್ಟಿಗೆಯನ್ನು ಎಲ್ಲರೂ ಜೋಪಾನವಾಗಿ ನೋಡಿಕೊಳ್ಳುತ್ತಾರೆ. ದೇವರು ದೇಹದಲ್ಲಿ ಇರುವುದರಿಂದ ಧರ್ಮಾತ್ಮರು ಅದನ್ನು ನೋಡಿಕೊಳ್ಳದೆ ವಿಧಿಯಿಲ್ಲ. ನಮ್ಮ ದೇಹಗಳೆಲ್ಲ ಭಗವಂತನು ಇರುವ ಖಜಾನೆ.

## ದುಃಖವನ್ನು ಹೇಗೆ ನೋಡಬೇಕು

೩೯೮. ಮನೆಯಲ್ಲಿರುವವನು ಮನೆಗೆ ಬಾಡಿಗೆ ಕೊಡುವಂತೆ ದೇಹವನ್ನು ಉಪಯೋಗಿಸಿಕೊಂಡಿರುವುದಕ್ಕೆ ವ್ಯಥೆಯೇ ನಾವು ಅದಕ್ಕೆ ಕೊಡುವ ಬಾಡಿಗೆ.

೩೯೯. ಕಬ್ಬಿಣ ಒಳ್ಳೆಯ ಉಕ್ಕಾಗುವುದಕ್ಕೆ ಮುಂಚೆ ಅದನ್ನು ಬಾರಿಬಾರಿಗೆ ಬೆಂಕಿಯಲ್ಲಿ ಕಾಯಿಸಿ ಹೊಡೆಯಬೇಕು. ಆಗ ಮಾತ್ರ ಅದರಿಂದ ಮೊನಚಾದ ಕತ್ತಿಯನ್ನು ಮಾಡಬಹುದು. ನಮ್ಮ ಇಚ್ಛೆ ಬಂದಂತೆ ಅದನ್ನು ಮಡಿಸಬಹುದು. ಇದರಂತೆಯೇ ಮನುಷ್ಯನೂ ಕೂಡ ಪರಿಶುದ್ಧನೂ ಮತ್ತು ವಿನಯವಂತನೂ ಆಗಿ ದೇವರ ಸಾನ್ನಿಧ್ಯವನ್ನು ಸೇರುವುದಕ್ಕೆ ಮುಂಚೆ ದುಃಖವೆಂಬ ಮೂಸೆಯಲ್ಲಿ ಹಲವುವೇಳೆ ಕಾಯಬೇಕು. ಪ್ರಪಂಚದ ಕಷ್ಟವೆಂಬ ಸುತ್ತಿಗೆಯ ಪೆಟ್ಟಿಗೆ ಸಿಕ್ಕಬೇಕು.

೪೦೦. ಕೇಶವಚಂದ್ರಸೇನನು ಒಮ್ಮೆ ರೋಗದಲ್ಲಿ ನರಳು

ತ್ತಿದ್ದಾಗ ಶ್ರೀ ರಾಮಕೃಷ್ಣರು ಹೀಗೆ ಹೇಳಿದರು: "ನೀನು ನರಳು ತ್ತಿರುವೆ. ಆದರೆ ನಿನ್ನ ರೋಗಕ್ಕೆ ಒಂದು ಗೂಢವಾದ ಅರ್ಥವಿದೆ. ಈ ದೇಹದಲ್ಲಿ ನೀನು ಹಲವು ಸ್ಥಿತಿಯ ಆಧ್ಯಾತ್ಮಿಕ ಅನುಭವಗಳನ್ನು ಪಡೆದಿರುವೆ. ದೇಹ ಈಗ ಅದರ ಪ್ರತಿಕ್ರಿಯೆಯಿಂದ ನರಳುತ್ತಿದೆ. ಆಧ್ಯಾತ್ಮಿಕ ತರಂತ ಎದ್ದಾಗ ದೇಹಾಭಿಮಾನ ಮಾಯವಾಗುವುದು. ಆದರೆ ಕೊನೆಗೆ ಅದು ದೇಹದ ಮೇಲೆ ಪರಿಣಾಮವನ್ನುಂಟುಮಾಡು ವುದು. ಗಂಗಾನದಿಯ ಮೇಲೆ ದೊಡ್ಡ ಹಡಗು ಹೋದರೆ ಅದು ಹೋಗಾದಮೇಲೆ ಕೆಲವು ಕಾಲ ಅಲೆಗಳು ಬಂದು ದಡಕ್ಕೆ ಹೊಡೆ ಯುತ್ತವೆ. ದೋಣಿ ದೊಡ್ಡದಾಗಿದ್ದಷ್ಟೂ ಅಲೆಗಳು ಎತ್ತರವಾಗಿರು ವುವು. ಕೆಲವುವೇಳೆ ಅವು ದಡವನ್ನು ಕೂಡ ಕುಸಿದುಬೀಳುವಂತೆ ಮಾಡುವುವು. ಆನೆ ಸಣ್ಣ ಜೋಪಡಿಯೊಳಗೆ ಹೋದರೆ ಅದು ಅದರಿ ನೆಲಕ್ಕೆ ಕುಸಿಯುವುದು. ಇದರಂತೆಯೆ ಆಧ್ಯಾತ್ಮಿಕ ಅನುಭವವೂ ಕೂಡ ಕೆಲವು ವೇಳೆ ಭಕ್ತನ ದೇಹವನ್ನು ನಶಿಸುವಂತೆ ಮಾಡುವುದು. ಅದರ ಪರಿಣಾಮವೇನು ನಿನಗೆ ಗೊತ್ತೆ? ಮನೆಗೆ ಬೆಂಕಿ ಬಿದ್ದರೆ ಅದ ರಲ್ಲಿರುವ ಕೆಲವು ವಸ್ತುಗಳು ನಾಶವಾಗುತ್ತವೆ. ಇದರಂತೆಯೆ ಜ್ಞಾನಾ ಗ್ನಿಯೂ ಕಾಮ ಕೋಪ ಮುಂತಾದ ಪಾಪಗಳನ್ನೆಲ್ಲಾ ಸುಟ್ಟು ಕೊನೆಗೆ ನಾನು ನನ್ನದು ಎಂಬ ಅಹಂಕಾರವನ್ನು ಕೂಡ ನಾಶಮಾಡುವುದು. ಆಗ ದೇಹಕ್ಕೆ ದೊಡ್ಡ ಆಘಾತವಾಗಿ ತತ್ತರಿಸುವುದು. ಇನ್ನೇನು ಎಲ್ಲವೂ ಮುಗಿಯಿತು ಎಂದು ನೀನು ತಿಳಿಯಬಹುದು. ಆದರೆ ಎಲ್ಲಿಯವರೆ ವಿಗೂ ನಿನ್ನ ಅಹಂಕಾರದ ಸುಳಿವು ಇರುವುದೋ ಅಲ್ಲಿಯವರೆಗೆ ನೀನು ಮುಕ್ತನಾಗಲಾರೆ, ವೈದ್ಯಶಾಲೆಯಲ್ಲಿ ನಿನ್ನನ್ನು ರೋಗಿಯಂತೆ ಸೇರಿಸಿ ದರೆ ಪೂರ್ಣ ಗುಣವಾಗುವವರೆಗೂ ನಿನ್ನನ್ನು ಹೊರಗೆ ಬಿಡುವುದಿಲ್ಲ."

೪೦೧. ಕೇಶವಸೇನನು ರೋಗದಿಂದ ನರಳುತ್ತಿದ್ದಾಗ ಶ್ರೀ ರಾಮಕೃಷ್ಣರು ಹೀಗೆ ಹೇಳಿದರು: "ಕೆಲವು ವೇಳೆ ತೋಟಗಾರನು ಗುಲಾಬಿಗಿಡದ ಬೇರುಗಳಿಗೆ ಹಿಮಬೀಳಲಿ ಎಂದು ಹೊರಗೆ ಕಾಣುವಂತೆ ಮಾಡುತ್ತಾನೆ. ಹೂವು ಅಗಲವಾಗಲಿ ಎಂದು ಕೆಲವುವೇಳೆ ಕೆಲವು ಬೇರು ಗಳನ್ನು ಕತ್ತರಿಸುವನು. ಬಹುಶಃ ಭಗವಂತನು ಇನ್ನೂ ಮಹತ್ತರವಾದ ಕೆಲಸವನ್ನು ನಿನ್ನಿಂದ ಮಾಡಿಸುವುದಕ್ಕಾಗಿ ಅಣಿಮಾಡುತ್ತಿರುವನು."

೪೦೨. ರೋಗದ ವಿಷಯದಲ್ಲಿ ತಮ್ಮ ಮನೋಭಾವನೆಯನ್ನು ವರ್ಣಿಸುತ್ತಾ ಶ್ರೀ ರಾಮಕೃಷ್ಣರು ಹೀಗೆ ಹೇಳಿದರು: "ರೋಗ ತನ್ನ

ಪಾಡಿಗೆ ತಾನಿರಲಿ. ದೇಹ ಅನುಭವಿಸಲಿ; ಎಲೆ ಮನವೆ, ನೀನು ಮಾತ್ರ ಯಾವಾಗಲೂ ಚಿದಾನಂದದಲ್ಲಿರು.''

೪೦೩. ಭಕ್ತನ ದೇಹ ಯಾವ ರೋಗದಲ್ಲಿ ನರಳುತ್ತಿದ್ದರೂ ಅವನಲ್ಲಿರುವ ಶ್ರದ್ಧೆ ಮತ್ತು ಜ್ಞಾನದ ಶಕ್ತಿ ಅವನನ್ನೆಂದಿಗೂ ಕೈಬಿಡುವುದಿಲ್ಲ. ಅವನ ಜ್ಞಾನ ಮತ್ತು ಶ್ರದ್ಧೆ ಎಂದಿಗೂ ಮಂಕಾಗುವುದಿಲ್ಲ. ನೋಡಿ! ಪಾಂಡವರಿಗೆ ಪ್ರಾಪ್ತವಾದ ಕಷ್ಟ ಎಷ್ಟು ಕಡುತರವಾಗಿತ್ತು. ಆದರೂ ಒಂದು ಕ್ಷಣವಾದರೂ ಅವರು ಜ್ಞಾನವನ್ನು ಕಳೆದುಕೊಳ್ಳಲಿಲ್ಲ.

## ಸಹಿಷ್ಣುತೆ

೪೦೪. ಬಂಗಾಳಿ ಲಿಪಿಯಲ್ಲಿ ಉಚ್ಚಾರಣೆ ಮಾಡುವಾಗ ಶ,ಷ,ಸ, ಮೂರು ಒಂದೆಯಾಗಿ ಕೇಳುವುದು. ಅದಕ್ಕೆಲ್ಲ ಸಹಿಷ್ಣುತೆ ಎಂದು ಅರ್ಥವಾಗುವುದು. ಬಾಲ್ಯದಿಂದಲೂ ನಾವು ಅಕ್ಷರದ ಮೂಲಕ ಸಹಿಸಬೇಕು ಎಂಬುದನ್ನು ಕಲಿಯಬೇಕೆಂದು ತೋರುವುದು.

೪೦೫. ಅಕ್ಕಸಾಲೆಯ ಅಡಿಗಲ್ಲನ್ನು ನೋಡಿ! ಅದು ಹೇಗೆ ಸುತ್ತಿಗೆಯಿಂದ ಪೆಟ್ಟು ತಿನ್ನುತ್ತದೆ. ಆದರೂ ಅದು ತನ್ನ ಸ್ಥಳದಿಂದ ಕದಲುವುದಿಲ್ಲ. ಮಾನವನು ಇದರಿಂದ ಸಹಿಷ್ಣುತೆ ಮತ್ತು ಸಹನೆಯನ್ನು ಕಲಿಯಲಿ,

೪೦೬. ನಿನ್ನ ಶ್ರದ್ಧೆ ಮತ್ತು ಭಾವನೆಯನ್ನು ನಿನ್ನಲ್ಲಿಯೇ ಇಟ್ಟುಕೊಂಡಿರು. ಅದನ್ನು ಯಾರಿಗೂ ಹೇಳಬೇಡ. ಹೇಳಿದರೆ ನಿನಗೆ ಬಹಳ ನಷ್ಟವಾಗುವುದು.

೪೦೭. ಒಬ್ಬನು ತನ್ನ ಸಾಧನೆಯನ್ನು ಎಷ್ಟು ಮತ್ತೊಬ್ಬರಿಂದ ಬಚ್ಚಿಟ್ಟರೆ ಅಷ್ಟು ಒಳ್ಳೆಯದು.

## ದೈನ್ಯತೆ ಮತ್ತು ಗೌರವ

೪೦೮. ನನ್ನ ಸಮಾನವಿಲ್ಲವೆಂದು ತಿಳಿಯುವುದು. ಬಹಳ ಹೀನಾಯ. ಕಾಗೆಯನ್ನು ನೋಡಿ, ತಾನು ಬುದ್ಧಿವಂತನೆಂದು ತಿಳಿದುಕೊಳ್ಳುವುದು! ಅದು ಯಾರ ಬಲೆಗೂ ಬೀಳುವುದಿಲ್ಲ. ಅಪಾಯದ ಸುಳಿವು ಕಂಡ ತಕ್ಷಣವೇ ಹಾರಿ ಹೋಗುವುದು. ಬಹಳ ಬುದ್ಧಿವಂತರ ಕೈಯಿಂದ ಆಹಾರವನ್ನು ಕದಿಯುವುದು. ಆದರೂ ಅದಕ್ಕೆ ಕಸವನ್ನು

ತಿನ್ನದೆ ವಿಧಿ ಇಲ್ಲ. ನನ್ನ ಸಮಾನವಿಲ್ಲ. ನಾನು ಬಹಳ ಬುದ್ಧಿವಂತ, ಎಂದು ತಿಳಿದುಕೊಂಡಿದ್ದುದರ ಪರಿಣಾಮವಿದು.

೪೦೯. ಮಹಾಪುರುಷನಾಗಬೇಕಾದರೆ ದೈನ್ಯತೆ ಇರಬೇಕು. ಟಿಟ್ಟಿಭ ಹಕ್ಕಿಯ ಗೂಡು ಇರುವುದು ನೆಲದಮೇಲೆ. ಆದರೆ ಅದು ಆಕಾಶದಲ್ಲಿ ಬಹಳ ಮೇಲಕ್ಕೆ ಹಾರುವುದು. ವ್ಯವಸಾಯಕ್ಕೆ ಎತ್ತರದ ಪ್ರದೇಶ ಯೋಗ್ಯವಲ್ಲ. ತಗ್ಗಾದ ಭೂಮಿ ಬೇಕು. ಆಗ ನೀರು ನಿಲ್ಲುವುದು.

೪೧೦. ಹಣ್ಣಿನಿಂದ ಕೂಡಿದ ಮರ ಯಾವಾಗಲೂ ಬಗ್ಗಿರುವುದು. ನೀನು ಉತ್ತಮನಾಗಬೇಕಾದರೆ ನಮ್ರನಾಗಿರು, ಸಾಧುವಾಗಿರು.

೪೧೧. ಉಳಿದವರು ಎಲ್ಲಿ ಸುಮ್ಮನೆ ಬಾಗುತ್ತಾರೆಯೋ ಅಲ್ಲಿ ನಾವು ನೆಲದ ಮೇಲೆ ಸಾಷ್ಟಾಂಗ ಮಾಡಿ ಪೂಜಿಸುವುದು ನಮ್ಮ ಕರ್ತವ್ಯ.

೪೧೨. ಉಪನ್ಯಾಸಕನಲ್ಲಿರುವ "ನಾನು ಉಪನ್ಯಾಸ ಮಾಡುತ್ತಿರುವೆನು ನೀವೆಲ್ಲರೂ ಕೇಳಿ" ಎಂಬ ಅಹಂಕಾರದ ಭಾವನೆ ಒಬ್ಬನಲ್ಲಿ ಬರಕೂಡದು. ಅಜ್ಞಾನದಲ್ಲಿ ಅಹಂಕಾರವಿರುವುದು. ಜ್ಞಾನದಲ್ಲಿ ಅಲ್ಲ. ಯಾರು ಅಹಂಕಾರದಿಂದ ಪಾರಾಗುವರೋ ಅವರಿಗೆ ಸತ್ಯ ಲಭಿಸುವುದು. ಮಳೆಯ ನೀರು ತಗ್ಗಿನ ಪ್ರದೇಶದಲ್ಲಿ ನಿಲ್ಲುವುದು. ಎತ್ತರ ಪ್ರದೇಶದಿಂದ ಹರಿದುಹೋಗುವುದು.

೪೧೩. ತಕ್ಕಡಿಯಲ್ಲಿ ಭಾರವಾಗಿರುವ ಭಾಗ ತಗ್ಗುವುದು. ಭಾರವಿಲ್ಲದ ಭಾಗ ಮೇಲೇಳುವುದು. ದಕ್ಷನೂ ಮತ್ತು ಕುಶಲಿಯಾಗಿರುವವನು ಯಾವಾಗಲೂ ಅತಿ ವಿನೀತ. ಆದರೆ ಮೂರ್ಖನಿಗಾದರೋ ಹಿಡಿಸಲಾರದಷ್ಟು ಅಹಂಕಾರ.

೪೧೪. ಗಾಳಿಗೆ ಸಿಕ್ಕಿದ ತರಗೆಲೆಯಂತೆ ನಿರಹಂಕಾರಿಯಾಗಿರು.

೪೧೫. ನೀನು ಸೂಜಿಗೆ ದಾರವನ್ನು ಪೋಣಿಸಬೇಕಾದರೆ ಅದನ್ನು ಮೊನಚಾಗಿ ಮಾಡಿ, ಚದರಿರುವ ದಾರಗಳನ್ನೆಲ್ಲಾ ತೆಗೆಯಬೇಕು. ಆಗ ಅದು ಸುಲಭವಾಗಿ ಸೂಜಿಯ ಕಣ್ಣಿನೊಳಗೆ ಹೋಗುವುದು. ಹಾಗೆಯೇ ನೀನು ಕೂಡ ದೇವರ ಮೇಲೆ ನಿನ್ನ ಮನಸ್ಸು ಮತ್ತು ಪ್ರಾಣವನ್ನೆಲ್ಲಾ ಏಕಾಗ್ರ ಮಾಡಬೇಕಾದರೆ ನಡೆನುಡಿಯಲ್ಲಿ ದೀನನಾಗಿರು, ವಿನಯನಾಗಿರು. ಆಸೆ ಎಂಬ ಚದುರಿರುವ ನಾರನ್ನೆಲ್ಲಾ ಕತ್ತರಿಸು.

೪೧೬. ಅನೇಕರು ತೋರಿಕೆಯ ವಿನಯಕ್ಕಾಗಿ ಮಣ್ಣಿನಲ್ಲಿ ಹರಿದಾಡುವ ಹುಳದಂತೆ ನಾನು ಎನ್ನುವರು. ಹೀಗೆಯೇ ಯಾವಾಗಲೂ ನಾವು ಕೀಟಗಳೆಂದು ತಿಳಿದುಕೊಂಡು ಕ್ರಮೇಣ ತಮ್ಮ ರೀತಿಯಲ್ಲಿಯೂ ಕೀಟಗಳಾಗುವರು. ಎಂದಿಗೂ ನಿರಾಶೆ ನಿನ್ನ ಹೃದಯವನ್ನು ಪ್ರವೇಶಿಸದಿರಲಿ. ಅಭ್ಯುದಯದ ಹಾದಿಯಲ್ಲಿ ನಿರಾಶೆ ಅತಿ ಪ್ರಬಲ ಶತ್ರು. ಮನುಷ್ಯ ತಾನು ಆಲೋಚಿಸಿದಂತೆ ಆಗುವನು.

೪೧೭. ಆತ್ಮಗೌರವವುಳ್ಳವನೇ ನಿಜವಾದ ಮನುಷ್ಯ. ಉಳಿದವರು ಹೆಸರಿಗೆ ಮಾತ್ರ ಮನುಷ್ಯರು.

೪೧೮. ಆತ್ಮತೇಜಸ್ಸನ್ನು ಹೊರಪಡಿಸುವ ಅಹಂಕಾರ ಅಹಂಕಾರವಲ್ಲ, ಆತ್ಮನನ್ನು ಅವಹೇಳನ ಮಾಡಿಕೊಳ್ಳುವ ದೈನ್ಯತೆ ನಿಜವಾದ ದೈನ್ಯತೆಯಲ್ಲ.

## ಸರಳತೆ

೪೧೯. ಮಗುವಿನಷ್ಟು ಸರಳವಾಗುವತನಕ ಪರಮಾತ್ಮ ಲಭಿಸುವುದಿಲ್ಲ. ನೀನು ಗಳಿಸಿದ ಪ್ರಾಪಂಚಿಕ ಜ್ಞಾನವನ್ನೆಲ್ಲಾ ಮರೆತು ಮಗುವಿನಂತೆ ಆಗು. ಆಗ ನಿನಗೆ ಸತ್ಯ ಲಭಿಸುವುದು.

೪೨೦. ಸರಳತೆ ಒಬ್ಬನನ್ನು ಸುಲಭವಾಗಿ ದೇವರ ಸಮೀಪಕ್ಕೆ ಒಯ್ಯುವುದು. ಮನುಷ್ಯನು ಸರಳಸ್ವಭಾವದವನಾಗಿದ್ದರೆ ಆಧ್ಯಾತ್ಮಿಕ ಬೋಧನೆ ಸುಲಭವಾಗಿ ಅವನಲ್ಲಿ ಫಲಕಾರಿಯಾಗುವುದು. ಇದು ಕಲ್ಲು ಇಲ್ಲದೆ ಚೆನ್ನಾಗಿ ಉತ್ತ ನೆಲದಲ್ಲಿ ಬಿತ್ತಿದ ಬೀಜ ಬೇಗ ಮೊಳೆತು ಫಲಕ್ಕೆ ಬರುವಂತೆ.

೪೨೧. ಶ್ರೀ ಪರಮಹಂಸರು ಹೀಗೆ ಹೇಳುತ್ತಿದ್ದರು: "ಜನರು ಬಹಳ ತಪಸ್ಸಿನ ಪರಿಣಾಮವಾಗಿ ಧಾರಾಳಿಗಳು ಮತ್ತು ಸರಳರೂ ಆಗುತ್ತಾರೆ. ಸರಳವಾದ ಮನಸ್ಸಿಲ್ಲದೆ ದೇವರನ್ನು ಪಡೆಯಲಾಗುವುದಿಲ್ಲ. ಸರಳಸ್ವಭಾವದವರಿಗೆ ಮಾತ್ರ ಅವನು ತನ್ನ ಮಹಿಮೆಯನ್ನು ತೋರುವನು." ಸರಳತೆ ಮತ್ತು ಸತ್ಯಸಂಧತೆಯ ನೆವದಲ್ಲಿ ಜನರು ದಡ್ಡರಾಗಬಾರದೆಂದು ಹೀಗೆ ಹೇಳುತ್ತಿದ್ದರು: "ನೀನು ದೇವರ ಭಕ್ತನಾಗಿರಬೇಕು. ಆದರೆ ಅದಕ್ಕಾಗಿ ಮೂಢನಾಗಬೇಡ. ಯಾವಾಗಲೂ ನಿನ್ನ ಮನಸ್ಸಿನಲ್ಲಿ ಸತ್ಯ ಯಾವುದು ಮಿಥ್ಯ ಯಾವುದು, ಶಾಶ್ವತವಾವುದು, ಅಶಾಶ್ವತವಾವುದು ಎಂದು ಆಲೋಚಿಸಿ ಅಶಾಶ್ವತ

ವಾದುದನ್ನು ತೊರೆದು ಶಾಶ್ವತವಾದ ವಸ್ತುವಿನ ಮೇಲೆ ಮಾತ್ರ ಮನಸ್ಸನ್ನು ಇಡಬೇಕು."

## ಆಸೆಯನ್ನು ಗೆಲ್ಲುವುದು

೪೨೨. ಯಾರು ಈ ಜನ್ಮದಲ್ಲೇ ಸತ್ತಿರುವರೋ ಅವರೇ ನಿಜವಾದ ಮನುಷ್ಯರು. ಅಂದರೆ ಸತ್ತ ದೇಹದಲ್ಲಿ ಹೇಗೆ ಆಸೆ ಮತ್ತು ಜಾತಿ ನಾಶವಾಗಿವೆಯೋ ಇವರು ಹಾಗೆಯೇ ಅವುಗಳನ್ನು ನಿಗ್ರಹಿಸಿರುವರು.

೪೨೩. ಎಲ್ಲಿಯವರೆವಿಗೂ ಹೃದಯಾಕಾಶ ಆಸೆ ಎಂಬ ಮಾರುತಕ್ಕೆ ಸಿಕ್ಕಿ ಚಂಚಲವಾಗಿರುವುದೋ ಅಲ್ಲಿಯವರೆವಿಗೆ ಪರಮಾತ್ಮನನ್ನು ಸಂದರ್ಶಿಸುವ ಅವಕಾಶ ಕಡಿಮೆ. ಯಾರ ಹೃದಯ ಶುದ್ಧವಾಗಿದೆಯೋ ಪರಮಾತ್ಮನ ಧ್ಯಾನದಲ್ಲಿ ನಿರತವಾಗಿದೆಯೋ ಅಲ್ಲಿ ಮಾತ್ರ ಅವನ ದರ್ಶನ ಉದಯಿಸುವುದು.

೪೨೪. ಎಲ್ಲಿಯವರೆವಿಗೂ ಆಸೆಯ ಮಲಿನತೆ ಸ್ವಲ್ಪವಾದರೂ ಹುದುಗಿರುವುದೋ ಅಲ್ಲಿಯವರೆವಿಗೂ ದೇವರು ಗೋಚರಿಸುವುದಿಲ್ಲ. ಆದಕಾರಣ ನಿನ್ನ ಸಣ್ಣ ಸಣ್ಣ ಬಯಕೆಗಳನ್ನು ತೃಪ್ತಿಪಡಿಸಿಕೊ. ಮುಖ್ಯವಾದ ಬಯಕೆಗಳನ್ನು ಯುಕ್ತಿ ಮತ್ತು ವಿಮರ್ಶೆಗಳ ಸಹಾಯದಿಂದ ತ್ಯಜಿಸು.

೪೨೫. ಆಳವಾದ ಭಾವಿಯ ಅಂಚಿನಲ್ಲಿ ನಿಂತುಕೊಂಡಿರುವವನು ತಾನು ಎಲ್ಲಿ ಅದರೊಳಗೆ ಬೀಳುತ್ತೇನೆಯೋ ಎಂದು ಯಾವಾಗಲೂ ಜಾಗರೂಕನಾಗಿರುವಂತೆ ಪ್ರಪಂಚದಲ್ಲಿರುವವನು ತಾನು ಎಲ್ಲಿ ಅವುಗಳ ಆಕರ್ಷಣೆಗೆ ಒಳಗಾಗುವೆನೋ ಎಂದು ಎಚ್ಚರದಲ್ಲಿರಬೇಕು.

೪೨೬. ಮಾನವನ ಶತ್ರುಗಳಾದ ಕಾಮಕ್ರೋಧ ಮುಂತಾದುವು ಎಂದು ನಾಶವಾಗುತ್ತವೆ ಎಂದು ಕೇಳಿದಾಗ, ಶ್ರೀ ಪರಮಹಂಸರು ಹೇಳಿದರು : " ಎಲ್ಲಿಯವರೆಗೂ ಇವನ್ನು ಪ್ರಪಂಚ ಮತ್ತು ಅದಕ್ಕೆ ಸಂಬಂಧಪಟ್ಟ ವಸ್ತುಗಳ ಮೇಲೆ ಬಿಡುತ್ತೇವೆಯೋ ಅಲ್ಲಿಯವರೆವಿಗೂ ಶತ್ರುಗಳಂತೆ ಇರುತ್ತವೆ. ಇದರೆ ಅವನ್ನು ದೇವರ ಕಡೆಗೆ ತಿರುಗಿಸಿದಾಗ ಒಬ್ಬನ ಆಪ್ತ ಮಿತ್ರರಾಗುವುವು ಪ್ರಾಪಂಚಿಕ ವಸ್ತುಗಳ ಮೇಲೆ ಇರುವ ಕಾಮವನ್ನು ದೇವರನ್ನು ಪಡೆಯಬೇಕೆಂಬ ಕಾತುರತೆಯನ್ನಾಗಿ ಮಾಡಬೇಕು. ಒಬ್ಬನು ಮತ್ತೊಬ್ಬರ ಮೇಲೆ ಪಡುವ ಕೋಪವನ್ನು ತನಗೆ ಅಷ್ಟು ದಿನವಾದರೂ ದೇವರು ಕಾಣಿಸಲಿಲ್ಲವಲ್ಲ

ಎಂದು ದೇವರ ಮೇಲೆ ತಿರುಗಿಸಬೇಕು. ಆಸೆಗಳನ್ನು ನಾಶಮಾಡ ಲಾಗುವುದಿಲ್ಲ. ಭವ್ಯ ಸ್ಥಿತಿಗೆ ಬರುವಂತೆ ಅವುಗಳಿಗೆ ಶಿಕ್ಷಣವನ್ನು ಕೊಡಬೇಕು."

೪೨೭. ಮಂಡೋದರಿ ತನ್ನ ಪತಿಯಾದ ರಾವಣನಿಗೆ ಹೀಗೆಂದಳು: "ನೀನು ಸೀತೆಯನ್ನು ನಿನ್ನ ರಾಣಿಯನ್ನಾಗಿ ಮಾಡಿಕೊಳ್ಳಬೇಕೆಂದು ಕಾತುರನಾಗಿದ್ದರೆ, ನೀನು ನಿನ್ನ ಮಂತ್ರಬಲದಿಂದ ರಾಮನಂತೆ ಏತಕ್ಕೆ ಸೀತೆಯ ಮುಂದೆ ಕಾಣಿಸಿಕೊಳ್ಳಬಾರದು?" ಅದಕ್ಕೆ ರಾವಣನು "ಅಯ್ಯೋ ಹುಚ್ಚಿ, ಯಾರ ರೂಪಿನ ಆಲೋಚನೆ ಮಾತ್ರವೇ ನನ್ನ ಹೃದಯವನ್ನು ವರ್ಣನಾತೀತವಾದ ಆನಂದದಲ್ಲಿ ಮುಳುಗಿಸುವುದೊ, ಯಾವುದರ ಮುಂದೆ ಅತ್ಯುತ್ತಮವಾದ ಸ್ವರ್ಗಸುಖವೂ ಕೂಡ ನನಗೆ ಕೆಲಸಕ್ಕೆ ಬಾರದಂತೆ ತೋರುವುದೊ, ಅಂತಹ ರಾಮನ ಪವಿತ್ರ ರೂಪನ್ನು ಧರಿಸಿದಾಗ ಇಂದ್ರಿಯ ಸುಖದ ಕಡೆಗೆ ಬಾಗುವುದು ಸಾಧ್ಯವೆ?" ಎಂದನು.

೪೨೮. ಆನೆಯನ್ನು ಬಿಟ್ಟರೆ ಅದು ಗಿಡಮರಗಳನ್ನು ಉರುಳಿಸುತ್ತಾ ಹೋಗುವುದು. ಆದರೆ ಮಾವಟಿಗ ಅದರ ನೆತ್ತಿಯ ಮೇಲೆ ಅಂಕುಶವನ್ನು ಪ್ರಯೋಗಿಸಿದ ತಕ್ಷಣವೇ ಸುಮ್ಮನಾಗುವುದು. ಹೀಗೆಯೇ ನಿಗ್ರಹಿಸದ ಮನಸ್ಸು ಕೆಲಸಕ್ಕೆ ಬಾರದ ಆಲೋಚನೆಯಲ್ಲಿ ಮಗ್ನವಾಗಿರುವುದು. ವಿವೇಕವೆಂಬ ಅಂಕುಶದಿಂದ ಎಳೆದಾಗ ಸುಮ್ಮನಾಗುವುದು.

೪೨೯. ಒಬ್ಬನು ಪ್ರಪಂಚದಲ್ಲಿ ಎಷ್ಟು ಆಸಕ್ತನಾಗಿದ್ದರೆ ಜ್ಞಾನವನ್ನು ಪಡೆಯುವುದು ಅಷ್ಟು ಕಡಿಮೆ. ಪ್ರಾಪಂಚಿಕ ವಸ್ತುಗಳ ಮೇಲೆ ಅನಾಸಕ್ತನಾದಷ್ಟೂ ಜ್ಞಾನವನ್ನು ಪಡೆಯುವ ಸಂಭವ ಹೆಚ್ಚು.

೪೩೦. ಮೊಸರನ್ನು ಕಡೆದು ಬೆಣ್ಣೆ ಮಾಡಿದ ಮೇಲೆ ಅದನ್ನು ಮಜ್ಜಿಗೆಯ ಪಾತ್ರೆಯಲ್ಲೇ ಬಿಡಬಾರದು. ಹಾಗೆ ಇಟ್ಟರೆ ಅದರ ಸವಿ ಕೆಡುವುದು. ಅದನ್ನು ಶುದ್ಧವಾದ ನೀರಿನಲ್ಲಿ ಬೇರೊಂದು ಪಾತ್ರೆಯಲ್ಲಿಡಬೇಕು. ಇದರಂತೆಯೆ ಪ್ರಪಂಚದಲ್ಲಿದ್ದು ಸ್ವಲ್ಪ ಜ್ಞಾನವನ್ನು ಪಡೆದ ಮೇಲೆ ಒಬ್ಬನು ಪ್ರಪಂಚದಲ್ಲಿ ವಿಷಯ ವಸ್ತುಗಳ ಮಧ್ಯದಲ್ಲಿದ್ದರೆ ಅವುಗಳಿಂದ ಮಲಿನನಾಗಬಹುದು. ಅವುಗಳಿಂದ ದೂರವಾಗಿದ್ದಲ್ಲಿ ಒಬ್ಬನು ಶುದ್ಧನಾಗಿರಬಹುದು.

೪೩೧. ಪ್ರಶ್ನೆ—ನಮ್ಮಲ್ಲಿರುವ ಹಳೆಯ ಮಾರನನ್ನು ಹೇಗೆ ಗೆಲ್ಲುವುದು?

ಉತ್ತರ—ಹೂವು ಕಾಯಾದರೆ ರೇಕುಗಳು ತಮಗೆ ತಾವೇ ಉದುರಿಹೋಗುತ್ತವೆ. ಇದರಂತೆಯೆ ನಿನ್ನಲ್ಲಿ ಪವಿತ್ರತೆ ಹೆಚ್ಚಿದರೆ, ಮಾನವಸ್ವಭಾವದ ದುರ್ಬಲತೆ ತನಗೆ ತಾನೇ ಮಾಯವಾಗುವುದು.

೪೩೨. ಒಮ್ಮೆ ತೀವ್ರ ವೈರಾಗ್ಯದಿಂದ ಒಬ್ಬನು ದೇವರನ್ನು ನೋಡಿದಾಗ ಕಾಮದಾಸೆ ಜಾರುವುದು. ಆಗ ತನ್ನ ಸತಿಯಿಂದಲೂ ಯಾವ ಅಪಾಯ ಇಲ್ಲ. ಒಂದು ಕಬ್ಬಿಣದ ಚೂರಿನ ಎರಡು ಪಕ್ಕದಲ್ಲಿಯೂ ಸಮದೂರದಲ್ಲಿ ಎರಡು ಸೂಜಿಕಲ್ಲಿದ್ದರೆ, ಯಾವ ಅಯಃಕಾಂತವು ಅದನ್ನು ತನ್ನ ಎಡೆಗೆ ಎಳೆದುಕೊಳ್ಳುವುದು ? ನಿಜವಾಗಿಯೂ ದೊಡ್ಡದಾದ ಅಯಃಕಾಂತ. ದೇವರು ನಿಜವಾಗಿಯೂ ಅಂತಹ ಅಯಃಕಾಂತ. ಕಾಮಿನಿ ಎಂಬ ಸಣ್ಣ ಅಯಃಕಾಂತವೇನು ಮಾಡಬಲ್ಲದು ?

೪೩೩. ಪ್ರಶ್ನೆ—ವಿಷಯ ಸುಖದ ಆಸಕ್ತಿ ಹೇಗೆ ನಾಶವಾಗುತ್ತದೆ ?

ಉತ್ತರ—ಎಲ್ಲಾ ಸುಖ ಮತ್ತು ಸಂತೋಷಗಳ ನೆಲೆವೀಡಾದ ಪರಮಾತ್ಮನಲ್ಲಿ ಲಯವಾಗುತ್ತದೆ. ಯಾರು ಅವನನ್ನು ಕಾಣುತ್ತಾರೆಯೋ ಅವರಿಗೆ ಪ್ರಪಂಚದ ಕೆಲಸಕ್ಕೆ ಬಾರದ ಕ್ಷುದ್ರ ವಸ್ತುಗಳ ಮೇಲೆ ಆಸೆ ಇರುವುದಿಲ್ಲ.

೪೩೪. ಹೇಲಂಚಿ ಎಂಬ (ಔಷಧಿಯ) ಬೇರನ್ನು ತೆಗೆದುಕೊಳ್ಳುವುದು ಮತ್ತು ಕೆಲಸಕ್ಕೆ ಬಾರದ ಮತ್ತಾವ ಬೇರನ್ನೊ ತೆಗೆದುಕೊಳ್ಳುವುದೂ ಒಂದೇ ಅಲ್ಲ. ಕಲ್ಲುಸಕ್ಕರೆಯನ್ನು ತೆಗೆದುಕೊಳ್ಳುವುದು ಸಾಧಾರಣ ಸಿಹಿಪದಾರ್ಥವನ್ನು ತೆಗೆದುಕೊಳ್ಳುವುದೂ ಒಂದೇ ಅಲ್ಲ. ಹೇಲಂಚಿ ಮತ್ತು ಸಕ್ಕರೆ ಒಬ್ಬನ ಆರೋಗ್ಯಕ್ಕೆ ಹಾನಿಕರವಲ್ಲ. ರೋಗಿ ಬೇಕಾದರೂ ಉಪಯೋಗಿಸಬಹುದು. ಪ್ರಣವ ಮಂತ್ರ ಕೂಡ ಬರಿಯ ಪದವಲ್ಲ. ಅದೊಂದು ಪವಿತ್ರತೆಯ ಭಾಷಾ ಚಿಹ್ನೆ. ಇದರಂತೆಯೇ ಭಕ್ತಿ ಮತ್ತು ಪವಿತ್ರತೆಗೆ ಇರುವ ಆಸೆಯನ್ನು ಸಾಧಾರಣ ಪ್ರಾಪಂಚಿಕ ಆಸೆಗಳೊಂದಿಗೆ ಹೋಲಿಸಲಾಗುವುದಿಲ್ಲ.

## ಸ್ತ್ರೀಯರನ್ನು ಯಾವ ದೃಷ್ಟಿಯಿಂದ ನೋಡಬೇಕು

**೪೩೫. ಸ್ತ್ರೀಯರೆಲ್ಲರೂ ಜಗನ್ಮಾಯಿಯ ಅಂಶಗಳು. ಆದಕಾರಣ ಎಲ್ಲರೂ ಅವರನ್ನು ತಾಯಿಯಂತೆ ಭಾವಿಸಬೇಕು.**

**೪೩೬. ಸ್ವಭಾವತಃ ಸ್ತ್ರೀಯರು ಒಳ್ಳೆಯವರಾಗಿರಲಿ ಅಥವಾ**

ಕೆಟ್ಟವರಾಗಿರಲಿ, ಪತಿವ್ರತೆಯರಾಗಿರಲಿ, ಇಲ್ಲದೆ ಇರಲಿ, ಅವರನ್ನು ಯಾವಾಗಲೂ ಜಗನ್ಮಾಯಿಯ ಪ್ರತಿಬಿಂಬಗಳಂತೆ ನೋಡಬೇಕು.

೪೩೭. ಪ್ರಶ್ನೆ—ನಾವು ಸ್ತ್ರೀಯರನ್ನು ಯಾವರೀತಿ ಕಾಣಬೇಕು?

ಉತ್ತರ—ಯಾರಿಗೆ ಸತ್ಯಸಾಕ್ಷಾತ್ಕಾರವಾಗಿದೆಯೊ, ದೇವರು ಪ್ರತ್ಯಕ್ಷನಾಗಿರುವನೊ, ಅವರು ಇವರನ್ನು ಕಂಡರೆ ಅಂಜುವುದಿಲ್ಲ. ಅವರನ್ನು ಅವರ ನಿಜಸ್ಥಿತಿಯಲ್ಲಿ ಅಂದರೆ ಜಗನ್ಮಾಯಿಯ ಅಂಶಗಳಂತೆ ಕಾಣುವರು. ಆದಕಾರಣ ಅವರು ಸ್ತ್ರೀಯರಿಗೆ ಭಕ್ತಿಗೌರವಗಳನ್ನೆಲ್ಲಾ ತೋರುವುದು ಮಾತ್ರವಲ್ಲ, ತಾಯಿಯನ್ನು ಪೂಜಿಸುವಂತೆ ನಿಜವಾಗಿ ಪೂಜಿಸುವರು.

೪೩೮. ಪ್ರಶ್ನೆ—ನಾವು ಕಾಮವನ್ನು ಹೇಗೆ ಜಯಿಸುವುದು ?

ಉತ್ತರ—ಎಲ್ಲಾ ಸ್ತ್ರೀಯರನ್ನೂ ನಿಮ್ಮ ಸ್ವಂತ ತಾಯಿಯಂತೆ ತಿಳಿಯಿರಿ. ಯಾವಾಗಲೂ ಹೆಂಗಸಿನ ಮುಖವನ್ನು ನೋಡಬೇಡಿ, ಆಕೆಯ ಪಾದಗಳ ಕಡೆ ನೋಡಿ. ಆಗ ಕೆಟ್ಟ ಆಲೋಚನೆಗಳೆಲ್ಲಾ ಓಡಿಹೋಗುವುವು.

೪೩೯. ಪತಿಯೊಂದಿಗೆ ಇರುವಾಗಲೂ ಯಾವ ಹೆಂಗಸು ಬ್ರಹ್ಮಚಾರಿಣಿಯಾಗಿರುವಳೊ ಆಕೆ ಸಾಕ್ಷಾತ್ ಜಗನ್ಮಾಯಿ.

೪೪೦. ಪ್ರಶ್ನೆ— ಮಹರಾಜ್ ! ತಂತ್ರಶಾಸ್ತ್ರದಲ್ಲಿ ಹೇಳಿರುವಂತೆ ಸ್ತ್ರೀಯೊಂದಿಗೆ ಮಾಡುವ ಸಾಧನೆಗೆ ನಿಮ್ಮ ಅಭಿಪ್ರಾಯವೇನು ?

ಉತ್ತರ—ಅದು ಸುಲಭವಾದ ಮಾರ್ಗವಲ್ಲ. ಬಹಳ ಕಷ್ಟ. ಅನೇಕ ವೇಳೆ ಜಾರುವನು. (ತಂತ್ರಶಾಸ್ತ್ರರೀತಿ) ಸಾಧನೆಮಾಡುವುದಕ್ಕೆ ಮೂರು ಮಾರ್ಗಗಳಿವೆ. ಒಬ್ಬನು ಜಗನ್ಮಾಯಿಯೊಂದಿಗೆ ನಾಯಕ, ಸಖಿ ಮತ್ತು ಸುತರ ಭಾವವನ್ನು ಅಭ್ಯಾಸಮಾಡಬಹುದು. ನನ್ನದು ಮಗುವಿನ ಸ್ವಭಾವ, ಒಬ್ಬನು ಜಗನ್ಮಾಯಿಯ ಸೇವಕನೆಂದು ತಿಳಿದುಕೊಳ್ಳುವುದೂ ಉತ್ತಮವೇ. ಆದರೆ ನಾಯಕನೆಂದು ತಿಳಿದುಕೊಳ್ಳುವ ರೀತಿ ಬಹಳ ಅಪಾಯಕರ. ಮಗುವಿನ ಭಾವ ಅತಿ ಪರಿಶುದ್ಧವಾದುದು.

೪೪೧. ದೇವರ ಅನುಗ್ರಹಕ್ಕಾಗಿ ನೀನು ಪ್ರಯತ್ನಿಸುವಿಯೇನು? ಹಾಗಾದರೆ ಮೂಲಶಕ್ತಿಯಾದ ಜಗನ್ಮಾಯಿಯನ್ನು ತೃಪ್ತಿಪಡಿಸು ಹೌದು ಆಕೆ ಮಹಾಮಾಯೆ. ಪ್ರಪಂಚವನ್ನೆಲ್ಲ ಭ್ರಾಂತಿಯಿಂದ ಆವರಿಸಿರುವಳು ಅವಳೇ. ಸೃಷ್ಟಿ, ಸ್ಥಿತಿ, ಪ್ರಳಯಗಳೆಂಬ ಈ ಮೂರು ಕಾರ್ಯಗಳ ಇಂದ್ರಜಾಲವನ್ನು ಮಾಡುತ್ತಿರುವವಳು ಅವಳೇ. ಎಲ್ಲರ

ಮೇಲೂ ಅಜ್ಞಾನದ ತೆರೆಯನ್ನು ಬೀಸಿರುವಳು. ಅವಳು ಬಾಗಿಲನ್ನು ತೆರೆದ ಹೊರತು ಅಂತಃಪುರಕ್ಕೆ ಯಾರಿಗೂ ಪ್ರವೇಶವಿಲ್ಲ. ಹೊರಗಿರುವ ತನಕ ಬಾಹ್ಯವಸ್ತುಗಳನ್ನು ನೋಡುತ್ತೇವೆ. ಆದರೆ ಅನಾದಿಯಾದ ಸಚ್ಚಿದಾನಂದ ಯಾವಾಗಲೂ ನಮ್ಮನ್ನು ಮೀರಿರುವುದು.

ಶಕ್ತಿಗೆ ವಿದ್ಯೆ ಮತ್ತು ಅವಿದ್ಯೆ ಎಂಬ ಎರಡು ಸ್ವಭಾವಗಳು ಇವೆ. ಅವಿದ್ಯೆ ಭ್ರಾಂತಿಗೊಳಿಸುವುದು. ಕಾಮ ಕಾಂಚನಕ್ಕೆ ಅದೇ ಮೂಲ. ನಮ್ಮನ್ನು ಬಂಧನದಲ್ಲಿ ಇಡುವುದು. ವಿದ್ಯೆ, ಭಕ್ತಿ ದಯೆ ಜ್ಞಾನ ಮತ್ತು ಪ್ರೀತಿಗಳಿಗೆ ಮೂಲ. ಇದು ನಮ್ಮನ್ನು ದೇವರ ಸಮೀಪಕ್ಕೆ ಕರೆದೊಯ್ಯುವುದು. ಅವಿದ್ಯೆಯನ್ನು ತೃಪ್ತಿಪಡಿಸಬೇಕಾಗಿದೆ. ಅದಕ್ಕಾಗಿಯೇ ಶಕ್ತಿಯ ಆರಾಧನೆ ಇರುವುದು. ಶಕ್ತಿಯನ್ನು ತೃಪ್ತಿಪಡಿಸುವುದಕ್ಕೆ ಹಲವು ವಿಧಗಳಿವೆ. ಸಖಿಯಂತೆ, ಪತಿಯಂತೆ ಮತ್ತು ಮಗುವಿನಂತೆ ಕಾಣಬಹುದು. ಶಕ್ತಿಸಾಧನ—ಅಷ್ಟು ಸುಲಭವಲ್ಲ. ಅದರಲ್ಲಿ ಹಲವು ಅಪಾಯಕರವಾದ ಮತ್ತು ಕಷ್ಟವಾದ ಸಾಧನೆಗಳಿವೆ. ನಾನು ಎರಡು ವರುಷ ಜಗನ್ಮಯಿಯ ಸಖಿಯಂತೆ ಮತ್ತು ಸ್ನೇಹಿತಳಂತೆ ಕಳೆದೆನು. ನನ್ನದು ಮಗುವಿನ ಸ್ವಭಾವ. ಯಾವ ಹೆಂಗಸಿನ ಸ್ಥನಗಳಾದರೂ ನನಗೆ ನನ್ನ ತಾಯಿಯ ಸ್ಥನಗಳಂತೆ ಕಾಣುತ್ತವೆ ಸ್ತ್ರೀಯೇ ಶಕ್ತಿಯ ಅನಂತರೂಪು. ನಮ್ಮ ಊರಿಗೆ ಪಶ್ಚಿಮದಲ್ಲಿ ವರನು ಮದುವೆ ಸಮಯದಲ್ಲಿ ತನ್ನ ಕೈಯಲ್ಲಿ ಚಾಕುವನ್ನು ಹಿಡಿದುಕೊಳ್ಳುವನು. ಬಂಗಾಳಾ ದೇಶದಲ್ಲಿ ಅಡಕೆ ಕತ್ತರಿಯನ್ನು ಹಿಡಿದುಕೊಳ್ಳುವನು. ಶಕ್ತಿಸ್ವರೂಪಳಾದಂತಹ ತನ್ನ ಸತಿಯ ಸಹಾಯದಿಂದ ಅವನು ಮಾಯೆಯನ್ನು ಕತ್ತರಿಸುವನು ಎಂದು ಇದರ ಭಾವ. ಇದು ವೀರಭಾವ. ಆದರೆ ನಾನು ಅದನ್ನು ಅಭ್ಯಾಸಮಾಡಲಿಲ್ಲ. ನನ್ನನು ಮಗುವಿನ ಸ್ವಭಾವ.

## ಭಕ್ತ ಮತ್ತು ಅವನ ಸಂಸಾರ

೪೪೨. ಪ್ರಶ್ನೆ—ಸಾಧನೆಯಲ್ಲಿ ನಿರತನಾದ ಗಂಡನಿಗೆ ಹೆಂಡತಿಯು ಒಂದುವೇಳೆ ನೀನು ನನ್ನನ್ನು ಸರಿಯಾಗಿ ನೋಡಿಕೊಳ್ಳದೆ ಇದ್ದರೆ ನಾನು ಆತ್ಮಹತ್ಯ ಮಾಡಿಕೊಳ್ಳುತ್ತೇನೆ ಎಂದರೆ ಏನು ಮಾಡಬೇಕು?

ಉತ್ತರ—ಒಬ್ಬನು ಅಂತಹ ಹೆಂಡತಿಯನ್ನು, ದೇವರ ಸಾಕ್ಷಾತ್ಕಾರಕ್ಕೆ ಅಡ್ಡಿಯಾಗಿರುವವಳನ್ನು, ತ್ಯಜಿಸಬೇಕು. ಅವಳು ಆತ್ಮಹತ್ಯ

ಮಾಡಿಕೊಂಡರೆ ಮಾಡಿಕೊಳ್ಳಲಿ, ಬಿಟ್ಟರೆ ಬಿಡಲಿ. ದೇವರ ಮಾರ್ಗಕ್ಕೆ ಅಡ್ಡಿ ತರುವವಳು ಅವಿದ್ಯಾಸ್ವರೂಪಳು. ಆದರೆ ನಿಜವಾಗಿ ದೇವರಲ್ಲಿ ಭಕ್ತಿ ಇರುವವನಿಗೆ ಎಲ್ಲವೂ ಅನುಕೂಲವಾಗಿ ಒದಗುವುವು.

ಒಬ್ಬನಿಗೆ ನಿಜವಾಗಿ ಭಕ್ತಿಯಿದ್ದರೆ ಅವನ ಹೆಂಡತಿಯ ಮನಸ್ಸು ಕೂಡ ಕ್ರಮೇಣ ದೇವರ ಮೇಲೆ ತಿರುಗುವುದು. ಒಬ್ಬನ ಸ್ವಭಾವ ಒಳ್ಳೆಯದಾಗಿದ್ದರೆ ದೇವರ ಕೃಪೆಯಿಂದ ಅವನ ಹೆಂಡತಿಯೂ ಒಳ್ಳೆಯವಳಾಗುವಳು.

೪೪೩. ಮನುಷ್ಯನಿಗೆ ಅವನ ತಂದೆತಾಯಿಗಳು ಬಹಳ ಮುಖ್ಯ. ಅವರು ತೃಪ್ತರಾಗುವವರೆಗೆ ನಮ್ಮ ಭಕ್ತಿಯಿಂದ ಏನೂ ಪ್ರಯೋಜನವಿಲ್ಲ. ಚೈತನ್ಯದೇವನನ್ನು ನೋಡಿ. ಅವನಿಗೆ ದೇವರಲ್ಲೇ ಹುಚ್ಚು ಹಿಡಿದಿದ್ದರೂ ತಾನು ಸನ್ಯಾಸ ತೆಗೆದುಕೊಳ್ಳುವುದಕ್ಕೆ ಮುಂಚೆ ತಾಯಿಯನ್ನು ಸಮಾಧಾನ ಮಾಡುವುದಕ್ಕೆ ತುಂಬಾ ಕಷ್ಟಪಟ್ಟನು. "ಅಮ್ಮ ನೀನು ವ್ಯಥೆಪಡಬೇಡ. ನಾನು ನಿನ್ನನ್ನು ನೋಡಲು ಆಗಿಂದಾಗ್ಯೆ ಬರುತ್ತೇನೆ" ಎಂದನು. ಒಬ್ಬನಿಗೆ, ದೇವಋಣ, ಋಷಿಋಣ, ಮಾತಾಪಿತೃಗಳಋಣ, ಸತಿಋಣ ಎಂಬ ಹಲವು ಋಣಗಳಿವೆ. ಮಾತಾಪಿತೃಋಣವನ್ನು ತೀರಿಸುವುದಕ್ಕೆ ಮುಂಚೆ ಯಾವ ಧರ್ಮಕಾರ್ಯವೂ ಜಯಪ್ರದವಾಗುವುದಿಲ್ಲ. ಹೆಂಡತಿಯ ಋಣವೂ ಒಂದಿದೆ. ಹರೀಶನು ಹೆಂಡತಿಯ ಋಣವನ್ನು ತೀರಿಸಿ ಇಲ್ಲಿ ವಾಸವಾಗಿರುವನು. ಹೆಂಡತಿಯ ಜೀವನೋಪಾಯಕ್ಕೆ ಸರಿಯಾದ ಅನುಕೂಲವನ್ನು ಮಾಡಿಕೊಡದೆ ಇದ್ದರೆ ಅವನನ್ನು ದುರ್ಜನನೆಂದು ಕರೆಯುತ್ತಿದ್ದೆ. ರಾಮಪ್ರಸನ್ನನು ಆ ಹಟಯೋಗಿಗಾಗಿ ಯಾವಾಗಲೂ ಹಾಲು ಮತ್ತು ಅಫೀಮಿಗೆ ಅಲೆಯುತ್ತಿರುವನು. ಸಾಧುಸೇವೆ ಮಾಡಬೇಕೆಂದು ಮನು ಹೇಳಿರುವನು ಎನ್ನುತ್ತಾನೆ. ಆದರೆ ನೆರೆಮನೆಯಲ್ಲಿ ಅವನ ತಾಯಿ ಉಪವಾಸದಿಂದ ನರಳುತ್ತಿರುವಾಗ ಅವಳೇ ಅಂಗಡಿಗೆ ಹೋಗಿ ಬರಬೇಕು. ಇದನ್ನು ನೋಡಿದರೆ ನನಗೆ ತುಂಬಾ ಕೋಪ ಬರುವುದು.

೪೪೪. ಆದರೆ ಇನ್ನೊಂದು ವಿಷಯವನ್ನು ಆಲೋಚಿಸಬೇಕಾಗಿದೆ. ಪ್ರೇಮೋನ್ಮತ್ತನಾಗಿ ಒಬ್ಬನು ದೇವರ ಮೇಲೆ ಹುಚ್ಚನಾದರೆ ಆಗ ತಂದೆಯಾರು, ತಾಯಿಯಾರು, ಹೆಂಡತಿಯಾರು. ಹುಚ್ಚನಾದ ಮೇಲೆ ಅವನು ದೇವರನ್ನು ಪ್ರೀತಿಸುವನು. ಅವನಿಗೆ ಯಾವ ಕರ್ತವ್ಯವೂ ಇಲ್ಲ. ಎಲ್ಲಾ ಋಣಗಳಿಂದ ಪಾರಾಗುವನು. ಮನುಷ್ಯನು

ಅಂತಹ ಸ್ಥಿತಿಗೆ ಹೋದರೆ ಪ್ರಪಂಚವನ್ನು ಅವನು ಮರೆಯುವನು. ಪ್ರತಿಯೊಬ್ಬರಿಗೂ ಅತ್ಯಂತ ಪ್ರಿಯವಾದ ದೇಹವನ್ನೇ ಅವನು ಮರೆಯುವನು.

೪೪೫. ಪ್ರಪಂಚದಲ್ಲಿ ಮಾತಾಪಿತೃಗಳು ಶ್ರೇಷ್ಠ ಗೌರವಕ್ಕೆ ಪಾತ್ರರು. ಅವರು ಬದುಕಿರುವ ಪರಿಯಂತರವೂ, ತನಗೆ ಸಾಧ್ಯ ವಾಗುವಷ್ಟು ಅವರ ಸೇವೆ ಮಾಡಬೇಕು. ಅವರ ಕಾಲಾನಂತರ ತನ್ನ ಕೈಲಾದಮಟ್ಟಿಗೆ ಅವರ ಉತ್ತರಕ್ರಿಯಾದಿಗಳನ್ನು ಮಾಡಬೇಕು. ಮಗನು ಅತ್ಯಂತ ದರಿದ್ರನಾದರೂ ಅವನ ತಂದೆತಾಯಿಗಳ ಉತ್ತರ ಕ್ರಿಯಾದಿಗಳನ್ನು ಮಾಡಲು ಅವನಿಗೆ ಸಾಧ್ಯವಿಲ್ಲದಿದ್ದರೂ ಅವನು ಕಾಡಿಗೆ ಹೋಗಿ, ತನಗೆ ಕ್ರಿಯಾದಿಗಳನ್ನು ಮಾಡಲು ಅಸಾಧ್ಯವಾಗಿರು ವುದನ್ನು ಕುರಿತು ದುಃಖಿಸಬೇಕು. ಆಗ ಮಾತ್ರ ಅವನು ಅವರ ಋಣ ದಿಂದ ಪಾರಾಗುವನು. ದೇವರಿಗೆ ಮಾತ್ರ ಒಬ್ಬನು ಪಾಪ ಮಾಡದೆ ತಂದೆತಾಯಿಗಳ ಮಾತನ್ನು ಮೀರಬಹುದು. ಉದಾಹರಣೆಗಾಗಿ ಪ್ರಹ್ಲಾದ ಅವನ ತಂದೆ ಎಷ್ಟು ಬೇಡವೆಂದು ಹೇಳಿದರೂ ಹರಿ ನಾಮೋಚ್ಚಾರಣೆಯನ್ನು ಬಿಡಲಿಲ್ಲ. ತಾಯಿ ಎಷ್ಟು ಬಲಾತ್ಕಾರ ಮಾಡಿದರೂ ಧ್ರುವನು ಕೇಳದೆ ತಪಸ್ಸಿಗಾಗಿ ಹೋದನು. ಇದರಲ್ಲಿ ಅವರು ಯಾವ ತಪ್ಪನ್ನೂ ಮಾಡಲಿಲ್ಲ.

## ಪ್ರಾರ್ಥನೆ ಮತ್ತು ಭಕ್ತಿ

೪೪೬. ಪ್ರಶ್ನೆ—ನಾವು ದೇವರಿಗೆ ಗಟ್ಟಿಯಾಗಿ ಪ್ರಾರ್ಥನೆ ಮಾಡಬಹುದೆ ?

ಉತ್ತರ—ನಿಮಗೆ ಇಚ್ಛೆಬಂದ ರೀತಿಯಲ್ಲಿ ಅವನನ್ನು ಪ್ರಾರ್ಥಿಸಿ. ನಿಮ್ಮ ಪ್ರಾರ್ಥನೆಯನ್ನು ಅವನು ಯಾವಾಗಲೂ ಕೇಳುವುದರಲ್ಲಿ ಸಂದೇಹವಿಲ್ಲ. ಅವನು ಒಂದು ಇರುವೆಯ ಕಾಲಿನ ಸಪ್ಪಳವನ್ನು ಕೂಡ ಕೇಳಬಲ್ಲ.

೪೪೭. ಪ್ರಶ್ನೆ—ಪ್ರಾರ್ಥನೆಯಲ್ಲಿ ಏನಾದರೂ ನಿಜವಾಗಿ ಪ್ರಯೋಜನವಿದೆಯೆ ?

ಉತ್ತರ--ಇದೆ. ಒಂದು ವಸ್ತುವನ್ನು ಬೇಡುವುದಕ್ಕಾಗಿ ಮನಸ್ಸು ಮತ್ತು ಮಾತುಗಳು ಒಂದುಗೂಡಿದರೆ, ಆ ಪ್ರಾರ್ಥನೆ ಫಲಕಾರಿಯಾಗು ವುದು. ಯಾರು ಬಾಯಲ್ಲಿ ಇದೆಲ್ಲವೂ ನಿನ್ನದು ದೇವರೇ ಎಂದು,

ಮನಸ್ಸಿನಲ್ಲಿ ಇದೆಲ್ಲವೂ ತನ್ನದು ಎಂದು ಭಾವಿಸಿರುವರೊ, ಅವರ ಪ್ರಾರ್ಥನೆಯಿಂದ ಏನೂ ಪ್ರಯೋಜನವಿಲ್ಲ.

೪೪೮. ಆತ್ಮವಂಚಕನಾಗಬೇಡ. ಸತ್ಯಸಂಧನಾಗಿರು. ನಿನ್ನ ಆಲೋಚನೆಯಂತೆ ಮಾಡು. ನೀನು ನಿಜವಾಗಿಯೂ ಮುಂದುವರಿಯುವೆ. ಸತ್ಯವಾಗಿಯೂ ಸರಳಹೃದಯದಿಂದ ದೇವರನ್ನು ಪ್ರಾರ್ಥಿಸು. ನಿನ್ನ ಪ್ರಾರ್ಥನೆ ದೇವರಿಗೆ ಕೇಳುವುದು.

೪೪೯. ನೀನು ಮನಸ್ಸಿನಲ್ಲಿ ಇರುವುದನ್ನು ಹೊರಗೆ ಮಾತನಾಡಬೇಕು. ಮಾತು ಮತ್ತು ಆಲೋಚನೆಗಳಲ್ಲಿ ಪರಸ್ಪರ ಹೊಂದಿಕೆ ಇರಲಿ. ಇಲ್ಲದೆ ಮಾತಿನಲ್ಲಿ ದೇವರೇ ನಿನ್ನ ಸರ್ವಸ್ವವೆಂದು ಹೇಳಿ ಮನಸ್ಸಿನಲ್ಲಿ ಪ್ರಪಂಚವೇ ನಿನ್ನ ಸರ್ವಸ್ವವೆಂದು ತಿಳಿದಿದ್ದರೆ ಏನೂ ಪ್ರಯೋಜನವಿಲ್ಲ.

೪೫೦. ಬಹಳ ದೊಡ್ಡ ಚಕ್ರವರ್ತಿಯ ಹತ್ತಿರ ಹೋಗಬೇಕಾದರೆ ಯಾರು ಬಾಗಿಲನ್ನು ಕಾಯುತ್ತಾರೆಯೋ ಮತ್ತು ಸಿಂಹಾಸನದ ಹತ್ತಿರ ಇರುತ್ತಾರೆಯೋ ಅವರೊಂದಿಗೆ ಸ್ನೇಹ ಮಾಡಿಕೊಳ್ಳಬೇಕು. ಇದರಂತೆಯೆ ದೇವಾಧಿದೇವನಾದ ಭಗವಂತನನ್ನು ಹೊಂದಬೇಕಾದರೆ, ಅವನ ಅನುಗ್ರಹವನ್ನು ಪಡೆಯಬೇಕಾದರೆ, ಬಹಳ ಸಾಧನೆ ಮಾಡಬೇಕು. ಅನೇಕ ಭಕ್ತರನ್ನು ಸೇವಿಸಬೇಕು. ಸಾಧುಸಂಘದಲ್ಲಿ ದೀರ್ಘಕಾಲ ಇರಬೇಕು.

೪೫೧. ಪ್ರಾಪಂಚಿಕ ಆಸೆ ಮತ್ತು ಆತಂಕಗಳು ನಿನ್ನ ಮನಸ್ಸನ್ನು ಚಲಿಸದೆ ಇರಲಿ. ಮಾಡಬೇಕಾದುದೆಲ್ಲವನ್ನು ಸಕಾಲದಲ್ಲಿ ಮಾಡು. ಮನಸ್ಸು ಮಾತ್ರ ಯಾವಾಗಲೂ ದೇವರಮೇಲಿರಲಿ.

೪೫೨. ಹಡಗಿನಲ್ಲಿರುವ ಉತ್ತರಮುಖಿ ಯಾವಾಗಲೂ ಉತ್ತರಕ್ಕೆ ತೋರುತ್ತಿರುವವರೆಗೆ ಅದು ದಾರಿತಪ್ಪಿ ಹೋಗುವ ಮತ್ತು ಅಪಾಯದಲ್ಲಿ ಬೀಳುವ ಸಂಭವ ಕಡಿಮೆ. ಇದರಂತೆಯೇ ಜೀವನದ ನಾವೆಯ ಉತ್ತರಮುಖಿಯಾದ ಮನಸ್ಸು ಕದಲದೆ ಯಾವಾಗಲೂ ದೇವರ ಕಡೆಗೆ ತಿರುಗುತ್ತಿದ್ದರೆ ಎಲ್ಲಾ ಅಪಾಯಗಳಿಂದಲೂ ಪಾರಾಗಬಹುದು.

೪೫೩. ನಾವು ಹೇಗೆ ಪ್ರಾರ್ಥಿಸಬೇಕು ಎಂಬುದೇ ಮುಂದಿನ ಪ್ರಶ್ನೆ. ಪ್ರಾಪಂಚಿಕ ವಸ್ತುಗಳಿಗೆ ನಾವು ಬೇಡದೆ ಇರೋಣ. ಆದರೆ ಭಕ್ತನಾರದನಂತೆ ಪ್ರಾರ್ಥಿಸುವ. ನಾರದನು ರಾಮಚಂದ್ರನನ್ನು ಕುರಿತು “ಹೇ ರಾಮಚಂದ್ರ! ನಿನ್ನ ಪಾದಕಮಲಗಳ ಮೇಲೆ ನನಗೆ

ಭಕ್ತಿಯನ್ನು ಅನುಗ್ರಹಿಸು" ಎಂದು ಕೇಳಿದನು. ಶ್ರೀರಾಮಚಂದ್ರನು ಹಾಗೆಯೇ ಆಗಲಿ ಎಂದನು. "ಆದರೆ ನಿನಗೆ ಇನ್ನು ಏನೂ ಬೇಡವೆ?" ಎಂದು ಕೇಳಿದನು. ಅದಕ್ಕೆ ನಾರದನು "ಭುವನವನ್ನೆಲ್ಲಾ ಮೋಹಿಸುವ ನಿನ್ನ ಮಾಯೆಯ ಬಲೆಗೆ ನಾನು ಬೀಳದಂತೆ ಅನುಗ್ರಹಿಸು" ಎಂದು ಕೇಳಿಕೊಂಡನು. ಶ್ರೀ ರಾಮಚಂದ್ರನು ಮತ್ತೊಮ್ಮೆ "ಹಾಗೆಯೇ ಆಗಲಿ, ಆದರೆ ನಿನಗೆ ಮತ್ತೇನೂ ಬೇಡವೇ?" ಎಂದನು. "ಭಗವಂತ! ನನಗಿನ್ನೇನೂ ಬೇಡ, ನಾನು ಪ್ರಾರ್ಥಿಸುವುದು ಇಷ್ಟೆ" ಎಂದನು.

೪೫೪. ದೇವರು ಸಾಕಾರನೋ ಅಥವಾ ನಿರಾಕಾರನೊ ಎಂದು ನಿರ್ಧಾರಕ್ಕೆ ಬಾರದಿದ್ದರೆ ಹೀಗೆ ಪ್ರಾರ್ಥಿಸು: "ಹೇ ಪರಮಾತ್ಮ ನಿನಗೆ ಆಕಾರವಿದೆಯೋ ಇಲ್ಲವೋ ನನಗೆ ಗೊತ್ತಿಲ್ಲ. ನೀನು ಏನಾದರೂ ಆಗಲಿ ನನ್ನನ್ನು ಅನುಗ್ರಹಿಸು. ನನಗೆ ಮೈದೋರು."

೪೫೫. ಒಬ್ಬನು ಸಮಾಜದಲ್ಲಿ ಕಲ್ಪನೆಗೆ ತಕ್ಕಂತೆ ದೇವರಿಗೆ ಹಲವು ರೂಪುಗಳನ್ನು ಮತ್ತು ಭಾವಗಳನ್ನು ಆರೋಪಿಸಬಹುದು. ಆದರೆ ಅವುಗಳಲ್ಲಿ ಅವನಿಗೆ ನಂಬಿಕೆಯಿಲ್ಲದೆ ಇರಬಹುದು. ಆದರೂ ಯಾರು ಪ್ರಪಂಚವನ್ನು ಸೃಷ್ಟಿಸಿರುವನೊ, ಕಾಪಾಡುತ್ತಿರುವನೊ ಅಂತಹ ಒಂದು ಶಕ್ತಿಯನ್ನು ನಂಬಿ ವ್ಯಾಕುಲದಿಂದ "ಪರಮಾತ್ಮ! ನನಗೆ ನಿನ್ನ ನಿಜವಾದ ಸ್ಥಿತಿ ತಿಳಿಯದು. ನಿನ್ನ ನೈಜಸ್ಥಿತಿಯಲ್ಲಿ ನನಗೆ ಮೈದೋರುವಂತೆ ಕರುಣಿಸು," ಎಂದು ಬೇಡಿದರೆ ಅಂತಹ ಭಕ್ತನನ್ನು ದೇವರು ಅನುಗ್ರಹಿಸುವನು.

೪೫೬. ನನ್ನ ಪ್ರಿಯ ಬಾಲಕರೆ! ಭಗವಂತ ಚಿರಜಾಗ್ರತನು. ನೀನು ಅವನನ್ನು ಪ್ರಾರ್ಥಿಸಿದಾಗಲೆಲ್ಲ ಅವನು ಇದನ್ನು ಕೇಳಿರುವನು. ಯಾವತ್ತಾದರೂ ಒಂದು ದಿನ, ಕೂನೆಗೆ, ನಿನ್ನ ಅವಸಾನ ಕಾಲದಲ್ಲಾದರೂ ಒಂದು ದಿನ ಅವನು ನಿಜವಾಗಿ ನಿನಗೆ ಕಾಣುವನು.

# ಅಧ್ಯಾಯ ೧೧

## ಎಲ್ಲ ಮತಗಳ ದೇವರೂ ಒಂದೆ

೪೫೭. ಒಂದೇ ನೀರನ್ನು ಬೇರೆ ಬೇರೆ ಜನರು ಬೇರೆ ಬೇರೆ ಮಾತಿನಲ್ಲಿ, ಕೆಲವರು ವಾಟರ್ ಎಂತಲೂ, ಕೆಲವರು ವಾರಿ ಎಂತಲೂ

ಕೆಲವರು ಪಾನಿ ಎಂತಲೂ, ಕೆಲವರು ಅಕ್ವ ಎಂತಲೂ ಕರೆಯುವಂತೆ, ಒಂದೇ ಸಚ್ಚಿದಾನಂದವನ್ನು ಕೆಲವರು ಅಲ್ಲನೆಂದೂ ಕೆಲವರು ಹರಿ ಎಂದೂ ಮತ್ತೆ ಕೆಲವರು ಬ್ರಹ್ಮನೆಂದೂ ಕರೆಯುವರು.

೪೫೮. ಕುಂಬಾರನ ಅಂಗಡಿಯಲ್ಲಿ ಮಡಿಕೆ, ಕುಡಿಕೆ, ತಟ್ಟೆ ಮೊದಲಾದ ಹಲವು ಆಕಾರದ ಹಲವು ಗಾತ್ರದ ಪಾತ್ರೆಗಳು ಇರುತ್ತವೆ. ಆದರೆ ಎಲ್ಲವೂ ಆಗಿರುವುದು ಒಂದೇ ಜೇಡಿಮಣ್ಣಿನಿಂದ. ಇದರಂತೆಯೇ ದೇವರೊಬ್ಬನೆ. ಬೇರೆ ಬೇರೆ ಕಾಲದಲ್ಲಿ ಮತ್ತೆ ಬೇರೆ ಬೇರೆ ದೇಶಗಳಲ್ಲಿ ಬೇರೆ ಬೇರೆ ಹೆಸರುಗಳಿಂದ ಅವನನ್ನು ಪೂಜಿಸುವರು.

೪೫೯. ಒಂದೇ ವಿಧದ ಸಕ್ಕರೆಯಿಂದ ಹಲವು ವಿಧದ ಹಕ್ಕಿಗಳು ಮತ್ತು ಪ್ರಾಣಿಗಳನ್ನು ಮಾಡುವಂತೆ—ಆನಂದಸ್ವರೂಪಳಾದ ಜಗನ್ಮಾಯಿಯನ್ನು ಬೇರೆ ಬೇರೆ ದೇಶದವರು ಬೇರೆ ಬೇರೆ ಕಾಲದಲ್ಲಿ ವಿವಿಧ ರೂಪಗಳಿಂದ ಆರಾಧಿಸುವರು.

೪೬೦. ಎಷ್ಟೋ ಒಡವೆಗಳು ಚಿನ್ನದಿಂದ ಆಗಿವೆ. ಎಲ್ಲವರಲ್ಲಿಯೂ ವಸ್ತುವೊಂದೇ ಆಗಿದ್ದರೂ, ಅದನ್ನು ಬೇರೆ ಬೇರೆ ಹೆಸರುಗಳಿಂದ ಕರೆಯುತ್ತಾರೆ. ಅದಕ್ಕೆ ಹಲವು ಆಕಾರಗಳಿವೆ. ಇದರಂತೆಯೇ ಒಂದೇ ದೇವರನ್ನು ಬೇರೆ ಬೇರೆ ದೇಶಗಳಲ್ಲಿ, ಬೇರೆ ಬೇರೆ ಕಾಲದಲ್ಲಿ, ಬೇರೆ ಬೇರೆ ಹೆಸರುಗಳಿಂದ ಪೂಜಿಸುವರು. ಬೇರೆ ಬೇರೆ ಭಾವಗಳಿಂದ ಅವನನ್ನು ಪೂಜಿಸಬಹುದು. ಕೆಲವರು ಅವನನ್ನು ತಂದೆ ಎನ್ನುವರು, ಕೆಲವರು ತಾಯಿ ಎನ್ನುವರು, ಕೆಲವರು ಸ್ನೇಹಿತನೆನ್ನುವರು, ಕೆಲವರು ಪ್ರಿಯತಮನೆನ್ನುವರು, ಕೆಲವರು ಅತ್ಯಂತ ಪವಿತ್ರವಾದ ತಮ್ಮ ಹೃದಯದಲ್ಲಿರುವ ಆಸ್ತಿ ಎನ್ನುವರು. ಮತ್ತೆ ಕೆಲವರು ಅವನನ್ನು ತಮ್ಮ ಮುದ್ದು ಕಂದನೆನ್ನುವರು. ಆದರೆ ಹಲವು ಭಾವವ್ಯತ್ಯಾಸದಿಂದ ಪೂಜೆಗೊಳ್ಳುತ್ತಿರುವ ವಸ್ತುಮಾತ್ರ ಒಂದೇ.

೪೬೧. ಒಂದುಸಲ ಬರ್ದವಾನ್ ಮಹಾರಾಜರ ಆಸ್ಥಾನದಲ್ಲಿ ಶಿವ ಮತ್ತು ವಿಷ್ಣುವಿನ ವಿಚಾರವಾಗಿ ಯಾರು ದೊಡ್ಡವರೆಂಬ ವಿವಾದವೆದ್ದಿತು. ಕೆಲವು ಆಸ್ಥಾನಿಕರು ಶಿವ ದೊಡ್ಡವನೆಂದೂ, ಕೆಲವರು ವಿಷ್ಣು ದೊಡ್ಡವನೆಂದೂ ವಾದಿಸಿದರು. ವಾದ ತುಂಬಾ ಬಿರುಸಾದ ಮೇಲೆ ಬುದ್ಧಿವಂತನಾದ ಪಂಡಿತನು "ಸ್ವಾಮಿ! ನಾನು ಶಿವನನ್ನೂ ಕಾಣೆ, ವಿಷ್ಣುವನ್ನೂ ಕಾಣೆ. ಇವರಿಬ್ಬರಲ್ಲಿ ಇಂತಹವರೆ ದೊಡ್ಡವರೆಂದು ನಾನು ಹೇಗೆ ಹೇಳಲಿ?" ಎಂದನು. ಇದರಂತೆಯೆ ಒಂದು

ದೇವರನ್ನು ಮತ್ತೊಂದು ದೇವರೊಂದಿಗೆ ಹೋಲಿಸಲು ಹೋಗಬೇಡಿ. ನೀವು ಅವುಗಳಲ್ಲಿ ಒಂದನ್ನಾದರೂ ನೋಡಿದಾಗ ಅವುಗಳೆಲ್ಲವೂ ಬ್ರಹ್ಮನ ಆವಿರ್ಭಾಗಗಳೆಂದು ಗೊತ್ತಾಗುವುದು.

## ಹಲವು ಧರ್ಮಗಳು ದೇವರೆಡೆಗೆ ಇರುವ ಹಲವು ದಾರಿಗಳು

೪೬೨. ಒಂದು ದೊಡ್ಡ ಸೋಪಾನಕ್ಕೆ ಹಲವು ಸ್ನಾನಘಟ್ಟಗಳಿರುತ್ತವೆ. ನೀರನ್ನು ತರುವುದಕ್ಕೆ ಅಥವಾ ಸ್ನಾನ ಮಾಡುವುದಕ್ಕೆ ಅವರವರು ತಮ್ಮ ಇಚ್ಛೆಬಂದ ಯಾವ ಘಟ್ಟಕ್ಕೆ ಹೋದರೂ ನೀರನ್ನು ತಲಪುವರು. ಒಂದು ಘಟ್ಟ ಮತ್ತೊಂದಕ್ಕಿಂತ ಮೇಲೆಂದು ಜಗಳ ಕಾಯುವುದು ವೃಥಾ ವ್ಯರ್ಥ. ಇದರಂತೆಯೆ ಸಚ್ಚಿದಾನಂದ ಸರೋವರಕ್ಕೆ ಇರುವ ಘಟ್ಟಗಳು ಹಲವು. ಪ್ರಪಂಚದಲ್ಲಿರುವ ಪ್ರತಿಯೊಂದು ಧರ್ಮವೂ ಅಂತಹ ಒಂದೊಂದು ಘಟ್ಟ. ಇವುಗಳಲ್ಲಿ ಯಾವುದಾದರೂ ಒಂದು ಘಟ್ಟಕ್ಕೆ ನೇರವಾಗಿ ಸರಳ ಮನಸ್ಸಿನಿಂದ ಶ್ರದ್ಧೆಯಿಂದ ಕೂಡಿ ಹೋಗಿ. ನಿಮಗೆ ಸಚ್ಚಿದಾನಂದ ಸಾಗರ ಸಿಕ್ಕುವುದು. ಆದರೆ ನನ್ನ ಧರ್ಮ ಮತ್ತೊಂದಕ್ಕಿಂತ ಉತ್ತಮವೆಂದು ಹೇಳಬೇಡಿ.

೪೬೩. ದೇವರಿಗೆ ಇರುವ ನಾಮಗಳು ಹಲವು. ಅವನನ್ನು ಕಾಣುವ ರೂಪುಗಳು ಅನಂತ. ನೀವು ಅವನನ್ನು ಯಾವ ಹೆಸರಿನ ಮೂಲಕವಾಗಿ ಆದರೂ, ಯಾವ ಆಕಾರದ ಮೂಲಕವಾಗಿ ಆದರೂ ಕಾಣುವಿರಿ.

೪೬೪. ಹಲವು ಮತಗಳು ಒಂದೇ ದೇವರನ್ನು ಸೇರುವುದಕ್ಕೆ ಹಲವು ದಾರಿಗಳು. ಕಲ್ಕತ್ತೆಯಲ್ಲಿರುವ ಕಾಳೀದೇವಾಲಯಕ್ಕೆ ದಾರಿಗಳು ಹಲವು ಇವೆ. ಇದರಂತೆಯೆ ಭಗವಂತನ ಸಾನ್ನಿಧ್ಯಕ್ಕೆ ಕರೆದೊಯ್ಯುವ ದಾರಿಗಳು ಹಲವು ಇವೆ. ಪ್ರತಿಯೊಂದು ಮತವೂ ಕೂಡ ಇಂತಹ ಮಾರ್ಗವೊಂದಲ್ಲದೆ ಮತ್ತೇನೂ ಅಲ್ಲ.

೪೬೫. ಕೆಲವು ವರ್ಷಗಳ ಹಿಂದೆ ಹಿಂದೂಗಳೂ ಮತ್ತು ಬ್ರಹ್ಮ ಸಮಾಜದವರೂ ತಮ್ಮ ತಮ್ಮ ಮತಗಳನ್ನು ಶ್ರದ್ಧೆ ಮತ್ತು ಉತ್ಸಾಹದಿಂದ ಪ್ರಚಾರಮಾಡುತ್ತಿದ್ದಾಗ ಶ್ರೀ ರಾಮಕೃಷ್ಣರನ್ನು ಯಾರೋ ಒಬ್ಬರು ಎರಡು ಮತಗಳ ಮೇಲೆ ತಮ್ಮ ಅಭಿಪ್ರಾಯವೇನೆಂದು ಕೇಳಿದರು. ಇದಕ್ಕೆ ಶ್ರೀರಾಮಕೃಷ್ಣರು, “ನನ್ನ ಜಗನ್ಮಯಿ ಅವರ

ಕೆಲಸಗಳನ್ನು ಇಬ್ಬರ ಮೂಲಕವಾಗಿಯೂ ಮಾಡಿಸುತ್ತಿರುವಳು" ಎಂದರು.

೪೬೬. ಶ್ರೀರಾಮಕೃಷ್ಣರನ್ನು ಆಚಾರಶೀಲರಾದ ಬ್ರಹ್ಮಸಮಾಜದವರು, ಹಿಂದೂಗಳಿಗೂ ಬ್ರಹ್ಮಸಮಾಜದವರಿಗೂ ಏನು ವ್ಯತ್ಯಾಸವೆಂದು ಕೇಳಿದಾಗ ಗುರುದೇವರು ಹೀಗೆಂದರು: "ಏಕ ಸ್ವರಕ್ಕೂ ಸ್ವರಸಮ್ಮೇಳನಕ್ಕೂ ಇರುವ ವ್ಯತ್ಯಾಸವೇ ಇವೆರಡರ ವ್ಯತ್ಯಾಸ. ಬ್ರಹ್ಮಸಮಾಜದವರು ಬ್ರಹ್ಮನೆಂಬ ಏಕಸ್ವರದಲ್ಲಿ ತೃಪ್ತರಾಗುವರು. ಆದರೆ ಹಿಂದೂ ಧರ್ಮವಾದರೋ ಇಂತಹ ಹಲವು ಸ್ವರಗಳ ಸಮ್ಮೇಳನವಾಗಿದೆ. ಇವುಗಳೆಲ್ಲ ಕಲೆತು ಒಂದು ಐಕ್ಯತೆಯನ್ನು ಕೊಡುತ್ತವೆ".

೪೬೭. ಒಬ್ಬನು ಮನೆಯ ಮೇಲಕ್ಕೆ ಏಣಿ, ಬೊಂಬು, ಮೆಟ್ಟಲು, ಹಗ್ಗ ಹೀಗೆ ಯಾವುದಾದರೊಂದರ ಮೂಲಕವಾಗಿ ಹತ್ತಿಹೋಗುವಂತೆ ದೇವರನ್ನು ಸೇರುವುದಕ್ಕೆ ಹಲವು ವಿಧಾನಗಳಿವೆ. ಪ್ರಪಂಚದಲ್ಲಿರುವ ಪ್ರತಿಯೊಂದು ಮತವೂ ಒಂದೊಂದು ದಾರಿಯನ್ನು ತೋರಿಸುತ್ತದೆ.

೪೬೮. ಅನಿಲ ಜ್ಯೋತಿಯ ಬೆಳಕು (Gas Light) ಊರಿನ ಹಲವು ಕಡೆ ಹಲವು ರೀತಿ ಹೆಚ್ಚು ಕಡಿಮೆ ಪ್ರಕಾಶಿಸುವುದು. ಆದರೆ ಈ ಬೆಳಕಿಗೆ ಮೂಲವಾದ ಅನಿಲ ಬರುವುದು ಒಂದೇ ಕಡೆಯಿಂದ. ಇದರಂತೆಯೆ ಎಲ್ಲಾ ದೇಶದ ಕಾಲದ ಧಾರ್ಮಿಕ ಗುರುಗಳೂ ಹಲವು ದೀಪಗಳಂತೆ. ಇವುಗಳಲ್ಲೆಲ್ಲಾ ಆತ್ಮನ ಬೆಳಕು ಒಂದೇ ಭಗವಂತನ ಮೂಲದಿಂದ ಅನವರತವೂ ಬಂದು ರಂಜಿಸುವುದು.

೪೬೯. ಎಲ್ಲಾ ನರಿಗಳ ಕೂಗು ಒಂದೇ. ಇದರಂತೆಯೆ ಎಲ್ಲಾ ಧರ್ಮಾತ್ಮರ ಉಪದೇಶವೂ ಒಂದೇ!

## ಮತಾಂಧತೆಗೆ ಕಾರಣ ಮತ್ತು ಚಿಕಿತ್ಸೆ

೪೭೦. ಅಜ್ಞಾನಿಯಾದ ಸಾಧಾರಣ ಮನುಷ್ಯ, ತನ್ನ ಧರ್ಮವೇ ಅತ್ಯುತ್ತಮವಾದುದೆಂದು ಬೇಕಾದಷ್ಟು ಕೂಗಾಡುವನು. ಆದರೆ ನಿಜವಾದ ಜ್ಞಾನ ಅವನ ಮನಸ್ಸಿಗೆ ಹೊಳೆದ ಮೇಲೆ, ಎಲ್ಲಾ ಮತೀಯ ವ್ಯಾಜ್ಯಗಳೂ ಕೊನೆಗಾಣುವುವು.

೪೭೧. ಇಬ್ಬರು ಊಸರವಳ್ಳಿಯ ಬಣ್ಣದ ವಿಚಾರವಾಗಿ ಚರ್ಚೆ ಮಾಡುತ್ತಿದ್ದರು. ಒಬ್ಬನು ಓಲೆಗಿಡದ ಮೇಲೆ ಇರುವ ಊಸರವಳ್ಳಿ

ಸುಂದರವಾದ ಕೆಂಪು ಬಣ್ಣದ್ದು ಎಂದನು. ಮತ್ತೊಬ್ಬನು, ಇಲ್ಲ ನೀನು ತಪ್ಪುತಿಳಿದುಕೊಂಡಿರುವೆ ; ಊಸರವಳ್ಳಿಯು ಕೆಂಪಲ್ಲ ನೀಲಿ, ಎಂದನು. ವಾದದಿಂದ ಒಂದು ನಿಶ್ಚಿತಕ್ಕೆ ಬರಲಾರದೆ ಯಾವಾಗಲೂ ಆ ಮರದ ಕೆಳಗೆ ವಾಸಮಾಡುತ್ತ ಅದನ್ನು ಎಲ್ಲಾ ಕಾಲದಲ್ಲಿಯೂ ನೋಡುತ್ತಿದ್ದ ಮನುಷ್ಯನ ಹತ್ತಿರ ಹೋದರು. ಒಬ್ಬನು "ಸ್ವಾಮಿ! ಆ ಮರದ ಮೇಲಿರುವ ಊಸರವಳ್ಳಿಯು ಕೆಂಪು ಬಣ್ಣದ್ದಲ್ಲವೆ?" ಎಂದನು. ಅದಕ್ಕೆ ಮನುಷ್ಯನು "ಹೌದು ಸ್ವಾಮಿ" ಎಂದನು. ಮತ್ತೊಬ್ಬನು "ನೀನು ಹೇಳುವುದೇನು, ಇದು ಹೇಗೆ ಸಾಧ್ಯ, ಅದು ನಿಜವಾಗಿಯೂ ಕೆಂಪಲ್ಲ ; ನೀಲಿ" ಎಂದನು. ಮನುಷ್ಯನು ಪುನಃ ವಿನಯದಿಂದ "ಹೌದು" ಎಂದನು. ಊಸರವಳ್ಳಿಯು ಯಾವಾಗಲೂ ಬಣ್ಣವನ್ನು ಬದಲಾಯಿಸುತ್ತದೆ ಎನ್ನುವುದು ಅವನಿಗೆ ಗೊತ್ತಿತ್ತು. ಅದಕ್ಕೆ ಅವನು ಪರಸ್ಪರ ವಿರೋಧವಾದ ಅಭಿಪ್ರಾಯಗಳಿಗೂ ಹೌದು ಎಂದನು. ಅದರಂತೆಯೆ ಸಚ್ಚಿದಾನಂದ ಸ್ವರೂಪನಾದಂತಹ ಭಗವಂತನಿಗೆ ಹಲವು ರೂಪಗಳಿವೆ. ದೇವರನ್ನು ಯಾವುದೋ ಒಂದು ದೃಷ್ಟಿಯಿಂದ ನೋಡಿದ ಭಕ್ತನಿಗೆ ಅದು ಮಾತ್ರ ತಿಳಿದಿರುವುದು. ಯಾರು ಎಲ್ಲಾ ವಿಧಗಳಲ್ಲಿಯೂ, ಅವನನ್ನು ನೋಡಿರುವನೋ ಅವನು ಮಾತ್ರ ಇದೆಲ್ಲವೂ ಅವನ ರೂಪು, ಅವನಿಗೆ ಅನಂತ ಆಕಾರಗಳಿವೆ ಎಂದು ಹೇಳಬಲ್ಲ. ಅವನು ಸಾಕಾರನೂ ಹೌದು, ನಿರಾಕಾರನೂ ಹೌದು ; ಯಾರಿಗೂ ತಿಳಿಯದ ಇನ್ನೂ ಹಲವು ರೂಪುಗಳೂ ಅವನಿಗೆ ಇವೆ.

೪೭೨. ಪಾಚಿ ಶುದ್ಧವಾದ ನೀರಿರುವ ದೊಡ್ಡ ಕೆರೆಗಳಲ್ಲಿ ಬೆಳೆಯುವುದಿಲ್ಲ. ಆಳವಿಲ್ಲದೆ ಹರಿಯದೆ ಇರುವ ಕೊಳೆಯ ನೀರಿನಲ್ಲೇ ಪಾಚಿ ಬೆಳೆಯುವುದು. ಇದರಂತೆಯೆ ಯಾರು ಶುದ್ಧವಾದ ಉದಾರ ಭಾವಗಳಿಂದ ಪ್ರೇರಿತರಾಗಿ ನಿಸ್ವಾರ್ಥರಾಗಿರುವರೋ ಅವರಲ್ಲಿ ಮತಾಂಧತೆ ಇರುವುದಿಲ್ಲ. ಯಾರು ಸ್ವಾರ್ಥರು ಮತ್ತು ಕಪಟಿಗಳಾಗಿರುವರೊ ಅವರಲ್ಲಿ ಮಾತ್ರ ಅದು ಬೆಳೆಯುವುದು.

೪೭೩. ಪಂಗಡಗಳನ್ನು ಉಂಟುಮಾಡುವುದು ಒಳ್ಳೆಯದೆ? ಬಂಗಾಳಿಯಲ್ಲಿ ದಾಲ್ ಎಂದರೆ ಪಂಗಡ ಮತ್ತು ಪಾಚಿ ಎಂದರ್ಥ. ಹರಿಯುವ ನೀರಿನಲ್ಲಿ ಪಾಚಿ ಬೆಳೆಯುವುದಿಲ್ಲ. ಹರಿಯದ ಹಳ್ಳದಲ್ಲಿ ಮಾತ್ರ ಅದು ಬೆಳೆಯುವುದು. ಯಾರ ಮನಸ್ಸು ಅನುಗಾಲವೂ ದೇವರ ಕಡೆಗೆ ಹರಿಯುತ್ತಿರುವುದೋ, ಅವನಿಗೆ ಉಳಿದ ವಿಷಯಗಳಿಗೆ ಕಾಲವೇ

ಇರುವುದಿಲ್ಲ. ಯಾರು ಕೀರ್ತಿ ಮತ್ತು ಗೌರವವನ್ನು ಗಳಿಸಬೇಕೆಂದು ಇರುವರೋ, ಅವರು ಪಂಗಡಗಳನ್ನು ಮಾಡುವರು.

೪೭೪. ಮನುಷ್ಯರು ಭೂಮಿಯನ್ನು ಅಳತೆಕಡ್ಡಿ ಮತ್ತು ಬಾಂದು ಗುಡ್ಡೆಗಳ ಮೂಲಕ ವಿಭಾಗಿಸಬಹುದು. ಆದರೆ ಸರ್ವವ್ಯಾಪಿ ಯಾದ ಆಕಾಶವನ್ನು ಯಾರೂ ವಿಭಾಗಿಸಲಾರರು, ಏಕವಾಗಿರುವ ಆಕಾಶ ಎಲ್ಲವನ್ನು ಆವರಿಸಿಕೊಂಡಿರುವುದು. ಇದರಂತೆಯೇ ಮಂದ ಮತಿಯು ಅಜ್ಞಾನದಿಂದ ತನ್ನ ಧರ್ಮವೊಂದೆ ಅತ್ಯುತ್ತಮ ಮತ್ತು ನಿಜ ವಾದ ಧರ್ಮ ಎನ್ನುವನು. ಆದರೆ ನಿಜವಾದ ಜ್ಞಾನ ಪ್ರಕಾಶವಾದ ಮೇಲೆ ಎಲ್ಲಾ ಪಂಗಡಗಳ ಕಲಹಗಳನ್ನೂ ಮೀರಿರುವ ಅಖಂಡ ಸಚ್ಚಿ ದಾನಂದವಿರುವುದು ಅವನಿಗೆ ಗೊತ್ತಾಗುವುದು.

## ಧಾರ್ಮಿಕ ಭಿನ್ನತೆಯನ್ನು ನಾವು ಹೇಗೆ ನೋಡಬೇಕು

೪೭೫. ಯಾರಾದರೂ ಆಗಲಿ ದೇವರಿರುವನು ಒಬ್ಬನೆ ಎಂದು ತಿಳಿದು ಶ್ರದ್ಧೆಯಿಂದ ಸಾಧನೆಮಾಡಿದರೆ ಅವನನ್ನು ಪಡೆಯುವುದರಲ್ಲಿ ಸಂದೇಹವಿಲ್ಲ. ಅವನನ್ನು ಯಾವರೀತಿಯಲ್ಲಾದರೂ ಆಗಲೀ, ಯಾವ ಭಾವದಲ್ಲಾಗಲಿ, ಯಾವ ಹೆಸರಿನ ಮೂಲಕವಾಗಲೀ ಭಜಿಸಿದರೂ ಚಿಂತೆ ಇಲ್ಲ.

೪೭೬. ನೀನು ಆತನನ್ನು ಹೇಗೆ ಬೇಕಾದರೂ ಧ್ಯಾನಿಸು. ಹೇಗೆ ಬೇಕಾದರೂ ಭಜಿಸು; ಮುಂದುವರಿಯುವೆ. ಕಲ್ಲುಸಕ್ಕರೆಯಿಂದ ಆದ ದೋಸೆಯನ್ನು ಹೇಗೆ ಹಿಡಿದು ತಿಂದರೂ ಅದು ಸಿಹಿಯಾಗಿಯೆ ಇರುತ್ತದೆ.

೪೭೭. ಪ್ರಶ್ನೆ:—ಎಲ್ಲಾ ಧರ್ಮಗಳ ದೇವರು ಒಂದೇ ಆದರೆ, ಒಂದೊಂದು ಧರ್ಮದವರೂ ಅವನನ್ನು ಒಂದೊಂದು ವಿಧವಾಗಿ ಏತಕ್ಕೆ ಚಿತ್ರಿಸಿರುವರು ?

ಉತ್ತರ :—ದೇವರೇನೋ ಒಬ್ಬನೆ. ಆದರೆ ಅವನನ್ನು ನೋಡುವ ದೃಷ್ಟಿ ಹಲವು ವಿಧವಾಗಿರುವುದು. ಮನೆಯ ಯಜಮಾನನು ಒಬ್ಬನಿಗೆ ತಂದೆ, ಮತ್ತೊಬ್ಬನಿಗೆ ಸಹೋದರ, ಇನ್ನೊಬ್ಬಳಿಗೆ ಪತಿ ಯಾಗಿರುವನು. ಆತನನ್ನು ಒಬ್ಬೊಬ್ಬರು ಒಂದೊಂದು ಹೆಸರಿನಿಂದ ಕರೆಯುವರು. ಇದರಂತೆಯೇ ದೇವರು ಒಬ್ಬನೇ. ಅವನನ್ನು ಪೂಜಿಸುವ ಭಕ್ತರ ಭಾವಕ್ಕೆ ಅನುಸಾರವಾಗಿ ಹಲವು ರೀತಿಯಿಂದ ವರ್ಣಿಸುವರು.

೪೭೮. ತಾಯಿ ಖಾಯಿಲೆ ಬಿದ್ದಿರುವ ತನ್ನ ಮಕ್ಕಳಿಗೆ ಆಹಾರ ವನ್ನು ಕೊಡುವಾಗ ಒಬ್ಬನಿಗೆ ಅನ್ನ ಮತ್ತು ಪಲ್ಯವನ್ನು ಕೊಡುವಳು. ಸೀಮೆಅಕ್ಕಿಯ ಗಂಜಿಯನ್ನೂ ಅರೋರೂಟಿನ ಗಂಜಿಯನೂ ಒಬ್ಬನಿಗೆ ಕೊಡುವಳು. ಮೂರನೆಯವನಿಗೆ ರೊಟ್ಟಿ ಮತ್ತು ಬೆಣ್ಣೆಯನ್ನು ಕೊಡುವಳು. ಇದರಂತೆಯೇ ಭಗವಂತ ಜನರ ಸಂಸ್ಕಾರಗಳಿಗೆ ಅನು ಸಾರವಾಗಿ ಹಲವು ಮಾರ್ಗವನ್ನು ತೋರಿರುವನು.

೪೭೯. ಶ್ರೀ ಶಂಕರಾಚಾರ್ಯರ ವೇದಾಂತವಿವರಣೆ ನಿಜವಾಗಿ ಸತ್ಯ; ಶ್ರೀ ರಾಮಾನುಜಾಚಾರ್ಯರ ವಿಶಿಷ್ಟಾದ್ವೈತ ವಿವರಣೆಯೂ ಕೂಡ ಸತ್ಯವೆ.

೪೮೦. ದಯೆಯಲ್ಲಿ ಮಾನವನು ಕ್ರಿಸ್ತನಂತೆ ಆಗಲಿ. ಬಾಹ್ಯ ಆಚಾರಗಳನ್ನು ಸರಿಯಾಗಿ ಅನುಸರಿಸುವುದರಲ್ಲಿ ಮಹಮ್ಮದೀಯನಂತೆ ಆಗಲಿ; ವಿಶ್ವದಲ್ಲಿ ಬದುಕಿರುವ ಜೀವಿಗಳಿಗೆಲ್ಲ ಅನುಕಂಪ ತೋರು ವುದರಲ್ಲಿ ಹಿಂದುವಂತೆ ಆಗಲಿ.

೪೮೧. ನೀನು ಹೊರಗೆ ಹೋಗಿ ಜನರೊಂದಿಗೆ ಕಲೆತಾಗ, ಅವರ ಮೇಲೆ ಪ್ರೀತಿ ಇರಬೇಕು. ಸರಿಯಾಗಿ ಅವರೊಂದಿಗೆ ಬೆರೆಯ ಬೇಕು. ಅವರಲ್ಲಿ ಒಂದಾಗಬೇಕು. "ಓ! ಅವರು ಸಾಕಾರದಲ್ಲಿ ನಂಬುವರು. ನಿರಾಕಾರದಲ್ಲಿ ನಂಬುವುದಿಲ್ಲ" ಅಥವಾ "ಅವರು ಕ್ರೈಸ್ತರು, ಮಹಮ್ಮದೀಯರು, ಹಿಂದೂಗಳು" ಎಂದು ಅಸಡ್ಡೆ ತೋರಬೇಡ. ದೇವರು ಅನುಗ್ರಹಿಸಿದಷ್ಟು ಮಾನವನು ಅವನ ವಿಚಾರ ವಾಗಿ ತಿಳಿಯಬಲ್ಲ.

ಮಾನವರು ಹಲವು ಸ್ವಭಾವದವರು ಎಂದು ತಿಳಿದು ಸಾಧ್ಯವಾದ ಮಟ್ಟಿಗೆ ನೀನು ಅವರೊಂದಿಗೆ ಬೆರೆಯಬೇಕು. ಅವರೆಲ್ಲರನ್ನೂ ಪ್ರೀತಿಸ ಬೇಕು. ಅನಂತರ ನೀನು ನಿನ್ನ ಹೃದಯದ ಸಮೀಪಕ್ಕೆ ಬಂದಾಗ ಶಾಂತಿ, ಆನಂದಗಳನ್ನು ಅನುಭವಿಸುವೆ. ಅಲ್ಲಿ ನೀನು ನಿನ್ನ ನಿಜವಾದ ಆತ್ಮನನ್ನು ಸಂದರ್ಶಿಸುವೆ.

೪೮೨. ಪ್ರತಿಯೊಬ್ಬನೂ ತನ್ನ ಧರ್ಮವನ್ನು ಅನುಸರಿಸಬೇಕು. ಕ್ರೈಸ್ತನು ಅವನ ಧರ್ಮವನ್ನು ಅನುಸರಿಸಬೇಕು. ಮಹಮ್ಮದೀಯನು ಅವನ ಮತವನ್ನು ಅನುಸರಿಸಬೇಕು. ಹಿಂದೂಗಳಿಗೆ ಆರ್ಯಋಷಿಗಳ ಸನಾತನಮಾರ್ಗವೇ ಒಳ್ಳೆಯದು,

೪೮೩. ನಿಜವಾದ ಧಾರ್ಮಿಕನು ಉಳಿದ ಧರ್ಮಗಳೂ ಕೂಡ ಪರಮಸತ್ಯಕ್ಕೆ ಕರೆದೊಯ್ಯುವ ಮಾರ್ಗಗಳು ಎಂದು ತಿಳಿಯಬೇಕು. ಉಳಿದ ಧರ್ಮಗಳನ್ನು ಯಾವಾಗಲೂ ಗೌರವದೃಷ್ಟಿಯಿಂದ ನೋಡಬೇಕು.

೪೮೪. ವಾದಿಸಬೇಡ. ನಿನ್ನ ಶ್ರದ್ಧೆ ಮತ್ತು ಅಭಿಪ್ರಾಯದ ಮೇಲೆ ನೀನು ಹೇಗೆ ಅಚಲನಾಗಿ ನಿಂತಿರುವೆಯೋ, ಉಳಿದವರಿಗೂ ಕೂಡ ಅವರ ಶ್ರದ್ಧೆ, ಮತ್ತು ಅಭಿಪ್ರಾಯಗಳಮೇಲೆ ನಿಲ್ಲುವ ಸ್ವಾತಂತ್ರ್ಯವನ್ನು ಕೊಡು. ಬರಿಯ ವಾದದಿಂದ ಮತ್ತೊಬ್ಬನ ತಪ್ಪುಗಳನ್ನು ಅವನಿಗೆ ತಿಳಿಯುವಂತೆ ಮಾಡಲಾರೆ. ದೇವರ ಅನುಗ್ರಹ ಲಭಿಸಿದರೆ ಪ್ರತಿಯೊಬ್ಬರೂ ತಮ್ಮ ತಪ್ಪನ್ನು ತಿಳಿದುಕೊಳ್ಳುವರು.

೪೮೫. ಶ್ರೀರಾಮಕೃಷ್ಣರು ಜಗನ್ಮಯಿಯೊಂದಿಗೆ ಭಾವಪರವಶರಾಗಿ ಮಾತನಾಡುತ್ತಿದ್ದುದು ಕೇಳಿಬಂದಿತು. “ಜಗನ್ಮಯಿ! ಪ್ರತಿಯೊಬ್ಬರು ಕೂಡ ತನ್ನ ಗಡಿಯಾರ ಸರಿಯಾದ ಕಾಲವನ್ನು ತೋರುತ್ತದೆ ಎನ್ನುವರು. ಹಿಂದೂಗಳು, ಕ್ರೈಸ್ತರು ಮತ್ತು ಮಹಮ್ಮದೀಯರು ನನ್ನದೇ ನಿಜವಾದ ಧರ್ಮ ಎನ್ನುವರು. ಜಗನ್ಮಯಿ, ಯಾವ ಗಡಿಯಾರವೂ ಸರಿಯಾಗಿಲ್ಲ. ಯಾರು ನಿಜವಾಗಿ ನಿನ್ನನ್ನು ತಿಳಿಯಬಲ್ಲರು? ಆದರೆ ವ್ಯಾಕುಲತೆಯಿಂದ ಹೃತ್ಪೂರ್ವಕವಾಗಿ ಯಾರಾದರೂ ನಿನ್ನನ್ನು ಬೇಡಿದರೆ ನಿನ್ನ ಅನುಗ್ರಹದಿಂದ ಯಾವ ದಾರಿಯಿಂದಲಾದರೂ, ಯಾವ ಧರ್ಮದ ಮೂಲಕವಾಗಿ ಆದರೂ ನಿನ್ನನ್ನು ಸೇರುವರು.”

## ರಹಸ್ಯಪಂಗಡದವರೊಡನೆ ನಮ್ಮ ಮನೋಭಾವ

೪೮೬. ಶ್ರೀಗುರುದೇವರ ಶಿಷ್ಯರಲ್ಲಿ ಕೆಲವು ನಿಷ್ಠರಾದ ನೀತಿವಂತರು, ಆಧ್ಯಾತ್ಮಿಕ ಜೀವನದಲ್ಲಿ ಮುಂದುವರಿದ ಕೆಲವರೊಂದಿಗೆ ತಪ್ಪನ್ನು ಕಂಡುಹಿಡಿಯುತ್ತಿದ್ದರು. ಏಕೆಂದರೆ ಅವರು ಅನುಸರಿಸುತ್ತಿದ್ದ ಕೆಲವು ಆಚಾರಗಳು, ಶಾಕ್ತ ಮತ್ತು ವೈಷ್ಣವರ ರಹಸ್ಯಮಾರ್ಗವಾದುದರಿಂದ ರೂಢಿಯಲ್ಲಿದ್ದ ನೀತಿಗೆ ವಿರೋಧವಾಗಿತ್ತು. ಅದಕ್ಕೆ ಶ್ರೀ ರಾಮಕೃಷ್ಣರು ಯಾವಾಗಲೂ ಹೀಗೆ ಉತ್ತರಕೊಡುತ್ತಿದ್ದರು: “ಇದಕ್ಕಾಗಿ ಅವರನ್ನು ದೂರಬೇಕಾಗಿಲ್ಲ. ತಾವು ಅನುಸರಿಸುತ್ತಿರುವ ಮಾರ್ಗದಿಂದ ಪರಮಾತ್ಮನ ಸಾಕ್ಷಾತ್ಕಾರವಾಗುವುದೆಂಬ ದೃಢನಂಬಿಕೆ

ಅವರಲ್ಲಿತ್ತು. ಯಾವುದನ್ನಾದರೂ ದೃಢವಾಗಿ ನಂಬಿ ಅದನ್ನು ಸಾಕ್ಷಾತ್ಕಾರಕ್ಕೆ ಸಾಧನವಾಗಿ ಮಾಡಿಕೊಂಡರೆ, ಅದರಲ್ಲಿ ತಪ್ಪನ್ನು ಕಂಡುಹಿಡಿಯಬಾರದು. ಯಾವ ದೃಷ್ಟಿಯಾದರೂ ಆಗಲಿ ಅದನ್ನು ಸತ್ಯವಾಗಿ ಅನುಸರಿಸಿದರೆ, ಎಲ್ಲಾ ದಾರಿಗಳ ಪರಮಗುರಿಯಾದ ದೇವರನ್ನು ಸೇರುವುದರಲ್ಲಿ ಸಂದೇಹವಿಲ್ಲ. ಪ್ರತಿಯೊಬ್ಬರೂ ಅವರವರ ರೀತಿಯಲ್ಲಿ ದೇವರನ್ನು ಪ್ರಾರ್ಥಿಸುತ್ತ ಹೋಗಲಿ: ಮತ್ತೊಬ್ಬರ ಮಾರ್ಗದಲ್ಲಿ ತಪ್ಪು ಕಂಡುಹಿಡಿಯಬೇಕಾಗಿಲ್ಲ, ಅಥವಾ ಅವರ ಮಾರ್ಗವನ್ನು ನಾವು ಅನುಸರಿಸಬೇಕಾಗಿಲ್ಲ."

೪೮೭. ಇಂತಹ ರಹಸ್ಯಪಂಗಡದವರ ಮೇಲೆ ಇದ್ದ ವಿರೋಧ ವನ್ನು ತಮ್ಮ ಶಿಷ್ಯರಲ್ಲಿ ಹೋಗಲಾಡಿಸುವುದಕ್ಕಾಗಿ ಅವರಿಗೆ ರಹಸ್ಯ ಪಂಗಡದವರೊಡನೆ ಇದ್ದ ತಮ್ಮ ಅಭಿಪ್ರಾಯವನ್ನು ಹೇಳುತ್ತಿದ್ದರು: "ಅವರೊಡನೆ ಏತಕ್ಕೆ ದ್ವೇಷವನ್ನು ಸಾಧಿಸಬೇಕು. ಅವುಗಳು ಮಲಿನ ವಾಗಿದ್ದರೂ ಕೂಡ ಒಂದು ಮಾರ್ಗವೆಂಬುದನ್ನು ತಿಳಿಯಿರಿ. ಒಂದು ಮನೆಗೆ ಹೋಗುವುದಕ್ಕೆ ಹಲವು ದಾರಿಗಳು ಇರಬಹುದು. ಮುಂದೆ ಬಾಗಿಲು, ಹಿಂದೆ ಬಾಗಿಲು, ಕಸ ಗುಡಿಸುವವನು ಬರುವುದಕ್ಕಾಗಿ ಇರುವ ಬಾಗಿಲು ಹೀಗೆ. ರಹಸ್ಯಪಂಗಡಗಳು ಇಂತಹ ಕೊನೆಯ ಬಾಗಿಲಿಗೆ ಸಮವೆಂದು ತಿಳಿಯಿರಿ. ಒಬ್ಬನು ಯಾವ ಬಾಗಿಲಿನ ಮೂಲಕವಾಗಿ ಬೇಕಾದರೂ ಬರಲಿ. ಒಂದುಸಲ ಮನೆಯೊಳಗೆ ಹೋದರೆ ಎಲ್ಲರೂ ಸೇರುವುದು ಒಂದೇ ಸ್ಥಳವನ್ನು. ಆದಕಾರಣ ನೀವು ಅಂತಹವರೊಂದಿಗೆ ಬೆರೆಯಬೇಕೆ? ಅಥವಾ ಅವರನ್ನು ಅನುಸರಿಸಬೇಕೆ? ನಿಜವಾಗಿಯೂ ಇಲ್ಲ. ಆದರೆ ಅವರನ್ನು ಯಾವ ವಿಧದಲ್ಲಿಯೂ ದ್ವೇಷಿಸಬೇಡಿ."

# ಅಧ್ಯಾಯ ೧೨

## ಆಧ್ಯಾತ್ಮಿಕ ಜೀವನದ ಸಾರ

## ಸಾಕ್ಷಾತ್ಕಾರಕ್ಕೆ ಬೇಕಾದ ಕೆಲವು ನಿಯಮ

೪೮೮. ದೆವ್ವದಿಂದ ಹಿಡಿಯಲ್ಪಟ್ಟವನಿಗೆ ನಾನು ದೆವ್ವದಿಂದ ಹಿಡಿಯಲ್ಪಟ್ಟವನು ಎಂದು ತಿಳಿದರೆ ದೆವ್ವ ಅವನನ್ನು ಬಿಟ್ಟು ಓಡು ವುದು. ಇದರಂತೆಯೇ ಮಾಯೆ ಎಂಬ ದೆವ್ವದಿಂದ ಹಿಡಿಯಲ್ಪಟ್ಟ

ಜೀವಕ್ಕೆ ತಾನು ಹಾಗೆ ಹಿಡಿಯಲ್ಪಟ್ಟಿರುವೆನು ಎಂದು ಗೊತ್ತಾದರೆ ತಕ್ಷಣವೇ ಅದರಿಂದ ಮುಕ್ತನಾಗುತ್ತಾನೆ.

೪೮೯. ಯಾರು ತನ್ನ ಮನಸ್ಸನ್ನು ತಾನು ವಂಚಿಸುವುದಿಲ್ಲವೊ ಅಂತಹವನು ಮಾತ್ರ ದೇವರ ಸನ್ನಿಧಿಯನ್ನು ಸೇರುವನು. ಅಂದರೆ ಸರಳ ಭಕ್ತಿ ಮತ್ತು ನಿಷ್ಕಾಪಟ್ಯ ಅವನನ್ನು ಸೇರುವುದಕ್ಕೆ ಮಾರ್ಗ.

೪೯೦. "ವಸ್ತುವಿನ ನಿಜವಾದ ಸ್ವಭಾವ ಎಂದಿಗೂ ಬದಲಾಯಿಸುವುದಿಲ್ಲ" ಎಂದು ಒಬ್ಬನು ಹೇಳಿದನು. ಮತ್ತೊಬ್ಬನು "ಬೆಂಕಿ ಇದ್ದಲನ್ನು ಹೊಕ್ಕರೆ ಅದರ ಒಳಗಿರುವ ಕಪ್ಪು ಸ್ವಭಾವವನ್ನು ನಾಶ ಮಾಡುವುದು. ಇದರಂತೆಯೇ ಜ್ಞಾನಾಗ್ನಿಯಿಂದ ಮನಸ್ಸು ಬೆಂದರೆ ಅದರ ಸ್ವಭಾವವೂ ಕೂಡ ನಾಶವಾಗಿ ನಮ್ಮನ್ನು ಬಾಧಿಸಲಾರದು" ಎಂದನು.

೪೯೧. ಮನಸ್ಸೆ ಸರ್ವಸ್ವ, ಮನಸ್ಸು ತನ್ನ ಸ್ವಾತಂತ್ರ್ಯವನ್ನು ಕಳೆದುಕೊಂಡರೆ ನೀನು ಸ್ವಾತಂತ್ರ್ಯವನ್ನು ಕಳೆದುಕೊಳ್ಳುವೆ. ಮನಸ್ಸು ಸ್ವತಂತ್ರವಾಗಿದ್ದರೆ ನೀನೂ ಸ್ವತಂತ್ರವಾಗಿರುವೆ. ಅಗಸನ ಮನೆಯಿಂದ ಬಂದ ಬಿಳಿಬಟ್ಟೆ ಯಾವ ಬಣ್ಣವನ್ನು ಬೇಕಾದರೂ ಹೊಂದುವಂತೆ ಮನಸ್ಸು ಯಾವ ರೂಪವನ್ನು ಬೇಕಾದರೂ ಧರಿಸಬಹುದು. ಇಂಗ್ಲಿಷನ್ನು ಕಲಿತರೆ ನೀನು ತಿಳಿಯದೆಯೇ ಸಂಭಾಷಣೆಯಲ್ಲಿಯೂ ಇಂಗ್ಲಿಷ್ ಪದಗಳನ್ನು ಉಪಯೋಗಿಸುವೆ. ಸಂಸ್ಕೃತವನ್ನು ಓದುವ ಪಂಡಿತನು ಶ್ಲೋಕವನ್ನು ಹೇಳಲೇಬೇಕು. ಮನಸ್ಸು ದುರ್ಜನರ ಸಂಗದಲ್ಲಿದ್ದರೆ ಅವರಹಾಗೆ ಸ್ವಭಾವವೂ ಆಗುವುದು ಅವರ ಮಾತು ಮತ್ತು ಆಲೋಚನೆಯೂ ದುರ್ಜನರ ಪ್ರಭಾವಕ್ಕೆ ಒಳಗಾಗುವುದು. ಭಕ್ತರ ಮಧ್ಯದಲ್ಲಿ ಇದ್ದರೆ ಅದು ದೇವರಮೇಲೆ ಮಾತ್ರ ಧ್ಯಾನಮಾಡುವುದೇ ನಿಜ. ಮನಸ್ಸು ತಾನಿರುವ ವಾತಾವರಣಕ್ಕೆ ತಕ್ಕಂತೆ ಹೊಂದಿಕೊಳ್ಳುವುದು.

೪೯೨. ಮನಸ್ಸೆ ಸರ್ವಸ್ವ. ಹೆಂಡತಿಯ ಮೇಲೆ ಇರುವ ಅಭಿಮಾನ ಒಂದು ವಿಧ. ಮಗುವಿನಮೇಲೆ ಇರುವುದು ಮತ್ತೊಂದು ವಿಧ. ಒಂದುಕಡೆ ಅವನ ಹೆಂಡತಿ ಇರುವಳು. ಮತ್ತೊಂದು ಕಡೆ ಅವನ ಮಗುವಿರುವುದು. ಒಬ್ಬನೇ ಇಬ್ಬರನ್ನೂ ಆಲಿಂಗಿಸುವನು. ಆದರೆ ಬೇರೆ ಬೇರೆ ಭಾವದಿಂದ ಪ್ರೇರಿತನಾಗುತ್ತಾನೆ.

೪೯೩. ಬಂಧನ ನಮ್ಮ ಮನಸ್ಸಿನಲ್ಲಿದೆ, ಮುಕ್ತಿಯೂ ನಮ್ಮ ಮನಸ್ಸಿನಲ್ಲಿದೆ. ನೀನು "ನಾನು ಮಹಾತ್ಮ, ನಾನು ದೇವರ ಮಗು!

ನನ್ನನ್ನು ಯಾರು ಬಂಧಿಸಬಲ್ಲರು" ಎಂದು ತಿಳಿದರೆ ನೀನು ಮುಕ್ತನಾಗುವೆ. ಒಬ್ಬನಿಗೆ ಒಂದು ಹಾವು ಕಚ್ಚಿದರೆ ಅವನು ಮನಃಪೂರ್ತಿಯಾಗಿ ಶ್ರದ್ಧೆಯಿಂದ "ಇದರಲ್ಲಿ ವಿಷವಿಲ್ಲ, ಇದರಲ್ಲಿ ವಿಷವಿಲ್ಲ" ಎಂದರೆ ಅವನು ನಿಜವಾಗಿಯೂ ವಿಷದಿಂದ ಪಾರಾಗುತ್ತಾನೆ.

೪೯೪. ಪ್ರಶ್ನೆ : ನಾನು ಎಂದು ಮುಕ್ತನಾಗುವುದು?

ಉತ್ತರ : ನಾನು ಎಂಬುದು ಮಾಯವಾದಾಗ. ನಾನು ನನ್ನದು ಎಂಬುದು ಅಜ್ಞಾನ. ನೀನು ನಿನ್ನದು ಎಂಬುದು ಜ್ಞಾನ.

೪೯೫ ಕೆಲವರ ಭಕ್ತಿ ಮತ್ತು ಶ್ರದ್ಧೆಯನ್ನು ಕುರುಡುನಂಬಿಕೆ ಎಂದು ಆಕ್ಷೇಪಣೆಮಾಡಿದ ಒಬ್ಬ ಶಿಷ್ಯನಿಗೆ ಶ್ರೀರಾಮಕೃಷ್ಣರು ಹೀಗೆ ಹೇಳಿದರು : "ಒಳ್ಳೆಯದು, ಕುರುಡುನಂಬಿಕೆ ಏನೆಂಬುದನ್ನು ನನಗೆ ವಿವರಿಸಬಲ್ಲೆಯ? ಶ್ರದ್ಧೆ ಸಂಪೂರ್ಣವಾಗಿ ಕುರುಡಲ್ಲವೆ? ಹಾಗಾದರೆ ಅದಕ್ಕೆ ಕಣ್ಣುಗಳಾವುವು? ಶ್ರದ್ಧೆ ಅಥವಾ ಜ್ಞಾನವೆನ್ನಬೇಕು. ಇಲ್ಲದೆ ಇದ್ದರೆ ಭಕ್ತಿಗೆ ಕೆಲವು ಸಮಯದಲ್ಲಿ ಕಣ್ಣು ಇಲ್ಲ, ಕೆಲವು ಸಮಯದಲ್ಲಿ ಕಣ್ಣು ಇದೆ ಎನ್ನುವ ವಿಚಿತ್ರ ಪ್ರಸಂಗವೆಂತಹುದು?

೪೯೬. ದೇವರಲ್ಲಿ ಶ್ರದ್ಧೆ ಇಲ್ಲದೆ ಮಾನವನು ವ್ಯಥೆಪಡುವನು.

೪೯೭. ಯಾರಲ್ಲಿ ಶ್ರದ್ಧೆ ಇರುವುದು ಯಾರಲ್ಲಿ ಶ್ರದ್ಧೆ ಇಲ್ಲ ಎಂದು ತೋರುವುದಕ್ಕೆ ಹಲವು ಚಿಹ್ನೆಗಳಿರುವುವು. ಬರೀಮೂಳೆಬಿಟ್ಟು ಕೊಂಡಿರುವವರು, ಒಳಗೆ ಕಣ್ಣು ಹೋಗಿರುವವರು, ಮೆಳ್ಳುಗಣ್ಣಿನವರು ಇವರಿಗೆ ಸಲಭವಾಗಿ ಶ್ರದ್ಧೆ ಬರುವುದಿಲ್ಲ.

೪೯೮. ಇನ್ನೊಬ್ಬರನ್ನು ಕೊಲ್ಲುವುದಕ್ಕೆ ಕತ್ತಿ, ಗುರಾಣಿಗಳು ಬೇಕು. ಆತ್ಮಹತ್ಯೆಮಾಡಿಕೊಳ್ಳಬೇಕಾದರೆ ಗುಂಡುಸೂಜಿಯೊಂದು ಸಾಕು. ಇದರಂತೆಯೇ ಇನ್ನೊಬ್ಬನಿಗೆ ಕಲಿಸಬೇಕಾದರೆ ಬೇಕಾದಷ್ಟು ಗ್ರಂಥ ಮತ್ತು ಶಾಸ್ತ್ರಗಳನ್ನು ಓದಬೇಕು. ಆದರೆ ತನಗೆ ಸಾಕ್ಷಾತ್ಕಾರ ಬೇಕಾದರೆ ಯಾವುದಾದರೊಂದರಲ್ಲಿ ದೃಢವಿಶ್ವಾಸ ಸಾಕು.

೪೯೯. ಹಿಂದೂಗಳಲ್ಲಿ ಎಷ್ಟೋ ಜಾತಿ ಮತ್ತು ಮತಗಳಿವೆ. ನಾವು ಯಾವುದನ್ನು ಅನುಸರಿಸಬೇಕು? ಒಂದುಸಲ ಪಾರ್ವತಿ ಮಹಾದೇವನನ್ನು ಹೀಗೆ ಕೇಳಿದಳಂತೆ : "ಹೇ ಪ್ರಭು, ಅನಂತವಾದ, ನಿತ್ಯವಾದ ಸರ್ವವ್ಯಾಪಿಯಾದ ಆನಂದಕ್ಕೆ ಮೂಲವಾವುದು?" ಅದಕ್ಕೆ ಮಹಾದೇವನು "ಶ್ರದ್ಧೆಯೇ ಮೂಲ" ಎಂದನು. ಆದಕಾರಣ ಜಾತಿ

ಮತಗಳ ಭಿನ್ನತೆ ಅಷ್ಟೇನು ಪ್ರಧಾನವಲ್ಲ. ಪ್ರತಿಯೊಬ್ಬರೂ ತಮ್ಮ ತಮ್ಮ ಮತದಲ್ಲಿ ಹೇಳಿರುವಂತೆ ದೇವರನ್ನು ಪ್ರಾರ್ಥಿಸಿ ಕರ್ತವ್ಯವನ್ನು ನೆರವೇರಿಸಲಿ.

೫೦೦, ಒಬ್ಬನಿಗೆ ಶ್ರದ್ಧೆ ಇದ್ದಷ್ಟು ದೇವರ ಜ್ಞಾನವೂಕೂಡ ಲಭಿಸುವುದು. ಎಲ್ಲಿ ಶ್ರದ್ಧೆ ಬಹಳ ಕಡಿಮೆ ಇದೆಯೋ ಅಲ್ಲಿ ಜ್ಞಾನವಿರಲಾರದು. ತಿನ್ನುವ ವಿಚಾರದಲ್ಲಿ ಬಹಳ ವಿಮರ್ಶೆಮಾಡುವ ಹಸು ಹಾಲನ್ನು ಬಹಳ ಕೊಡಲಾರದು. ಆದರೆ ಯಾವ ಹಸು ಎಲ್ಲಾ ವಿಧವಾದ ಆಹಾರವನ್ನೂ ಎಲೆ, ಹುಲ್ಲು, ಹೊಟ್ಟು, ಮುಂತಾದುವುಗಳನ್ನು ಸಾಕಾದಷ್ಟು ತಿನ್ನುತ್ತದೆಯೋ ಅದು ಬೇಕಾದಷ್ಟು ಹಾಲನ್ನು ಕೊಡುವುದು. ಅದರ ಮೊಲೆಯಿಂದ ಹಾಲು, ಪಾತ್ರೆಗೆ ಪ್ರವಾಹದಂತೆ ಬೀಳುವುದು.

೫೦೧. ಯಾರಿಗೆ ಶ್ರದ್ಧೆ ಇದೆಯೋ ಅವನಿಗೆ ಎಲ್ಲವೂ ಇದೆ, ಯಾರಿಗೆ ಶ್ರದ್ಧೆ ಇಲ್ಲವೋ ಅವನಿಗೆ ಯಾವುದೂ ಇಲ್ಲ

೫೦೨. ನೀನು ದೇವರನ್ನು ಕಾಣಬೇಕೆಂದಿದ್ದರೆ ಅಚಲವಾದ ಶ್ರದ್ಧೆಯಿಂದ ಅವನ ಹೆಸರನ್ನು ಭಜಿಸು, ಮತ್ತು ನಿತ್ಯ ಅನಿತ್ಯ ವಸ್ತುಗಳನ್ನು ವಿಮರ್ಶೆಮಾಡು.

೫೦೩. ಮಗುವಿನಂತೆ ಶ್ರದ್ಧೆ ಬರುವ ತನಕ ದೇವರನ್ನು ಪಡೆಯುವುದು ಬಹಳ ಕಷ್ಟ. ತಾಯಿ ತನ್ನ ಮಗುವಿಗೆ "ನೋಡು! ಅವನು ನಿನ್ನ ಅಣ್ಣ" ಎಂದರೆ, ಆ ಮಗು ಆತನನ್ನು ನಿಜವಾಗಿ ತನ್ನ ಅಣ್ಣನೆಂದು ನಂಬುವುದು. ತಾಯಿ ಮಗುವಿಗೆ "ಅಲ್ಲಿಗೆ ಹೋಗಬೇಡ ಅಲ್ಲಿ ದೆವ್ವ ಇದೆ" ಎಂದರೆ, ಅಲ್ಲಿ ದೆವ್ವವಿದೆ ಎಂದು ನಿರ್ಧಾರಕ್ಕೆ ಬರುವುದು. ಮನುಷ್ಯನಲ್ಲೂ ಇಂತಹ ಸರಳ ಶ್ರದ್ಧೆಯನ್ನು ದೇವರು ನೋಡಿದಾಗ ಅವನ ಮನಸ್ಸು ಕರಗುವುದು. ಲೆಕ್ಕಾಚಾರ ಹಾಕುವ ಬುದ್ಧಿಯುಳ್ಳ ಪ್ರಾಪಂಚಿಕರೆಂದಿಗೂ ದೇವರನ್ನು ನೋಡಲಾರರು.

೫೦೪. ಒಂದುದಿನ ಕೃಷ್ಣನು ಅರ್ಜುನನೊಂದಿಗೆ ರಥದಲ್ಲಿ ಹೋಗುತ್ತಿದ್ದಾಗ ಆಕಾಶದಕಡೆ ತಿರುಗಿ "ನೋಡು! ಎಷ್ಟು ಸುಂದರವಾದ ಪಾರಿವಾಳದ ಹಕ್ಕಿಗಳು ಹಾರುತ್ತಿವೆ" ಎಂದನು. ಅರ್ಜುನನು ತಕ್ಷಣವೇ ಆ ಕಡೆಗೆ ತಿರುಗಿ "ಮಿತ್ರನೆ, ನಿಜವಾಗಿಯೂ ಸುಂದರವಾದ ಪಾರಿವಾಳಗಳು" ಎಂದನು. ಪುನಃ ಶ್ರೀಕೃಷ್ಣನು ಅವುಗಳ ಕಡೆಗೆ ನೋಡಿ "ಮಿತ್ರನೆ, ಅವುಗಳು ಪಾರಿವಾಳದಂತೆ ಕಾಣುವುದಿಲ್ಲ"

ಎಂದನು. ಅರ್ಜುನನೂ ಕೂಡ ನೋಡಿ "ಅಹುದು ಅವು ಹಾಗೆ ಕಾಣುವುದಿಲ್ಲ" ಎಂದನು. ಈಗ ಇದರ ಅರ್ಥವನ್ನು ತಿಳಿಯುವುದಕ್ಕೆ ಯತ್ನಿಸಿ. ಸತ್ಯವನ್ನು ಯಾವಾಗಲೂ ಅನುಸರಿಸುತ್ತಿದ್ದ ಅರ್ಜುನನು ಕೃಷ್ಣನನ್ನು ಸುಮ್ಮನೆ ಹೊಗಳುವುದಕ್ಕಾಗಿ ಅವನು ಹೇಳಿದುದನ್ನೆಲ್ಲಾ ಒಪ್ಪುತ್ತಿರಲಿಲ್ಲ. ಆದರೆ ಶ್ರೀಕೃಷ್ಣನ ಮಾತಿನಲ್ಲಿ ಅವನಿಗೆ ಅಷ್ಟು ನಂಬಿಕೆ ಇತ್ತು. ಶ್ರೀಕೃಷ್ಣನು ಏನನ್ನು ಹೇಳಿದರೂ ಅದನ್ನು ತಥಾಸ್ತು ಎನ್ನುತ್ತಿದ್ದನು.

೫೦೫. ಉರಿಯುತ್ತಿರುವ ಬೆಂಕಿಯ ಮೇಲೆ ನಿಮ್ಮ ಪಾಕವನ್ನು ಕಾಯಿಸಿ. ಅದರಲ್ಲಿ ಕೊಳೆ ಇರುವ ತನಕ ಅದರಿಂದ ಹೊಗೆಬರುತ್ತ ಇರುತ್ತದೆ. ಶಬ್ದವಾಗುತ್ತ ಇರುತ್ತದೆ. ಅದರಲ್ಲಿರುವ ಕೊಳೆ ಮತ್ತು ಚರಟವನ್ನೆಲ್ಲಾ ತೆಗೆದು ಆದಮೇಲೆ ಅದರಲ್ಲಿ ಹೊಗೆ ಅಥವಾ ಶಬ್ದ ವಿರುವದಿಲ್ಲ. ಉಳಿದಿರುವುದು ರುಚಿಕರವಾದ ಸ್ಫಟಿಕದಂತೆ ಇರುವ ಶುದ್ಧವಾದ ಪಾಕ. ನಂತರ ಅದು ಗಟ್ಟಿಯಾಗಿರಲಿ, ಪಾಕವಾಗಲಿ, ದೇವತೆಗಳಿಗೆ ಅಥವಾ ಮಾನವರಿಗೆ ರುಚಿಕರವಾಗುತ್ತದೆ. ಶ್ರದ್ಧೆ ಇರುವ ಮನುಷ್ಯನ ಶೀಲ ಇಂತಹುದು.

೫೦೬. ಒಬ್ಬನು ಒಂದು ನದಿಯನ್ನು ದಾಟಬೇಕಾಗಿತ್ತು. ಒಬ್ಬ ಋಷಿ ಒಂದು ಯಂತ್ರವನ್ನು ಕೊಟ್ಟು "ಇದು ನಿನ್ನನ್ನು ಆ ಕಡೆಗೆ ಕರೆದುಕೊಂಡು ಹೋಗುತ್ತದೆ" ಎಂದನು. ಅದನ್ನು ತೆಗೆದು ಕೊಂಡು ಆ ಮನುಷ್ಯನು ನೀರಿನ ಮೇಲೆ ನಡೆಯಲು ಪ್ರಯತ್ನಮಾಡಿದನು. ಅರ್ಧ ದಾರಿ ಹೋಗುವುದಕ್ಕೆ ಮುಂಚೆ ಆ ಯಂತ್ರದಲ್ಲಿ ಏನಿದೆ ಎಂದು ಕುತೂಹಲಿಯಾದನು. ಅದನ್ನು ಬಿಚ್ಚಿ ನೋಡಲಾಗಿ ಒಂದು ಕಾಗದದ ಮೇಲೆ ರಾಮಚಂದ್ರನ ಹೆಸರು ಬರೆದಿತ್ತು. ಇದನ್ನು ನೋಡಿ ಮನುಷ್ಯನು ಅಸಮಾಧಾನದಿಂದ "ಇಷ್ಟೇ ಇದರ ರಹಸ್ಯ" ಎಂದನು. ಈ ಅನುಮಾನ ಮನಸ್ಸಿಗೆ ಬಂದೊಡನೆಯೇ ಅವನು ನೀರಿನಲ್ಲಿ ಮುಳುಗಿದನು. ಭಗವಂತನ ನಾಮದಲ್ಲಿ ಇರುವ ಶ್ರದ್ಧೆ ಅದ್ಭುತ ಕೆಲಸಗಳನ್ನು ಮಾಡುವುದು. ಶ್ರದ್ಧೆಯೇ ಜೀವನ, ಅಶ್ರದ್ಧೆಯೇ ಮರಣ.

೫೦೭. ತನ್ನ ಗುರುವಿನ ಅನಂತಶಕ್ತಿಯಲ್ಲಿ ಪೂರ್ಣನಂಬಿಕೆ ಇದ್ದ ಶಿಷ್ಯನೊಬ್ಬನು ಗುರುವಿನ ಹೆಸರನ್ನು ಹೇಳುತ್ತ ಒಂದು ನದಿಯ ಮೇಲೆ ನಡೆದನು. ಇದನ್ನು ನೋಡಿ ಗುರು "ಏನು ನನ್ನ ಹೆಸರಿನಲ್ಲಿ ಇಷ್ಟು ಶಕ್ತಿ ಇದೆಯೇ? ಹಾಗಾದರೆ ನಾನು ಎಷ್ಟು ಶಕ್ತನಾಗಿರಬೇಕು,

ಮತ್ತು ಮಹಾತ್ಮನಾಗಿರಬೇಕು ” ಎಂದು ಆಲೋಚಿಸಿದನು. ಮಾರನೆಯ ದಿನ ಗುರು ಕೂಡ ಆ ನದಿಯನ್ನು “ ನಾನು, ನಾನು, ನಾನು ” ಎಂದು ಹೇಳುತ್ತ, ದಾಟಲು ಯತ್ನಿಸಿದನು. ಆದರೆ ಆತನು ನೀರಿನ ಒಳಗೆ ಇಳಿದ ತಕ್ಷಣವೇ ಮುಳುಗಿದನು. ಪಾಪ, ಆತನಿಗೆ ಈಜುವುದಕ್ಕೆ ಬರುತ್ತಿರಲಿಲ್ಲ! ಶ್ರದ್ಧೆಯಿಂದ ಅದ್ಭುತ ಕಾರ್ಯವನ್ನು ಮಾಡಬಹುದು. ಆದರೆ ಅಹಂಕಾರದಿಂದ ಅವರು ನಾಶವಾಗುವರು.

೫೦೮. ಭಗವಂತನ ಅವತಾರವಾದ ರಾಮಚಂದ್ರನು ಲಂಕಾ ನಗರಿಗೆ ಹೋಗುವುದಕ್ಕೆ ಸಮುದ್ರವನ್ನು ದಾಟಲು ಸೇತುವೆಯನ್ನು ಕಟ್ಟಬೇಕಾಯಿತು. ಆದರೆ ಅವನ ಪರಮಭಕ್ತ ಭೃತ್ಯನಾದ ಹನುಮಂತ ರಾಮನಲ್ಲಿ ಅಚಲವಾದ ಭಕ್ತಿಯಿಂದ ಒಂದೇ ನೆಗತಕ್ಕೆ ಸಾಗರವನ್ನು ಹಾರಿದನು. ಇಲ್ಲಿ ಭಕ್ತಿಯಿಂದ ಸ್ವಾಮಿಗಿಂತ ಭೃತ್ಯನು ಸಾಹಸ ಕಾರ್ಯವನ್ನು ಮಾಡಿದನು.

೫೦೯. ರಾಜನೊಬ್ಬನು ಬ್ರಾಹ್ಮಣನನ್ನು ಕೊಂದ ಮಹಾಪಾಪವನ್ನು ಕಳೆದುಕೊಳ್ಳುವುದಕ್ಕಾಗಿ ಯಾವ ಪ್ರಾಯಶ್ಚಿತ್ತವನ್ನು ಮಾಡಿಕೊಳ್ಳಲಿ ಎಂದು ಕೇಳುವುದಕ್ಕಾಗಿ ಒಬ್ಬ ಋಷಿಯ ಪರ್ಣಶಾಲೆಗೆ ಹೋದನು. ಋಷಿ ಇರಲಿಲ್ಲ. ಅಲ್ಲಿ ಆತನ ಮಗನಿದ್ದನು. ರಾಜನ ಸಮಾಚಾರವನ್ನು ಕೇಳಿ ಆತನು “ ದೇವರ ಹೆಸರನ್ನು ಮೂರುಬಾರಿ ಉಚ್ಚರಿಸು. ನೀನು ಪಾಪದಿಂದ ವಿಮುಕ್ತನಾಗುವೆ ” ಎಂದನು. ಋಷಿ ಹಿಂತಿರುಗಿ ಬಂದಮೇಲೆ ಪ್ರಾಯಶ್ಚಿತ್ತಕ್ಕಾಗಿ ಹೇಳಿದ ಮಗನ ಚಿಕಿತ್ಸೆಯನ್ನು ಕೇಳಿ ಅಸಮಾಧಾನದಿಂದ ಹೀಗೆ ಹೇಳಿದನು : “ ಹಲವು ಜನ್ಮಾಂತರಗಳಿಂದ ಮಾಡಿದ ಪಾಪವೆಲ್ಲ ಒಂದುಸಲ ಭಗವಂತನ ನಾಮೋಚ್ಚಾರಣೆ ಮಾಡುವುದರಿಂದ ಪಲಾಯನವಾಗುವುದು. ಮೂರ್ಖನೆ! ನಿನ್ನ ಶ್ರದ್ಧೆ ಎಷ್ಟು ಕಡಿಮೆ. ಆತನ ಪವಿತ್ರನಾಮವನ್ನು ಮೂರುಸಲ ಅವನಿಗೆ ಹೇಳಿರುವೆಯಲ್ಲ ನಿನಗೆ ಅಷ್ಟು ಕಡಿಮೆ ಶ್ರದ್ಧೆ ಇರುವುದರಿಂದಲೇ ನೀನು ಪತಿತನಾಗುವೆ ”. ಈತನೆ ರಾಮಾಯಣದಲ್ಲಿ ಗುಹಕನಾಗುವುದು.

೫೧೦. ಕಲ್ಲು ನೀರಿನಲ್ಲಿ ಎಷ್ಟುಕಾಲವಾದರೂ ಮುಳುಗಿರಬಹುದು ; ಆದರೂ ನೀರು ಅದರೊಳಗೆ ಹೋಗಲಾರದು. ಆದರೆ ಮಣ್ಣು ನೀರನ್ನು ಮುಟ್ಟಿದೊಡನೆ ಕರಗುವುದು. ಇದರಂತೆ ಶ್ರದ್ಧಾವಂತರ ಧೈರ್ಯವು ಯಾರು ಎಷ್ಟೇ ಹಿಂಸಿಸಲಿ ಮತ್ತು ಪರೀಕ್ಷಿಸಲಿ

ಅವರು ನಿರಾಶರಾಗುವುದಿಲ್ಲ. ಆದರೆ ಶ್ರದ್ಧಾಹೀನನಿಗಾದರೊ ಒಂದು ಸಣ್ಣ ಕಷ್ಟಬಂದರೂ ಅವನ ಧೈರ್ಯ ಕುಸಿದುಬೀಳುವುದು.

೫೧೧. ಒಬ್ಬನು ತಾನು ಆಲೋಚಿಸಿದಂತೆ ಆಗುತ್ತಾನೆ. ಭ್ರಮರವನ್ನು ಯಾವಾಗಲೂ ಆಲೋಚಿಸುತ್ತಿರುವ ಕೀಟ ಕೊನೆಗೆ ತಾನು ಭ್ರಮರವಾಗುತ್ತದೆ, ಎನ್ನುತ್ತಾರೆ. ಇದರಂತೆಯೆ ಯಾರು ಸಚ್ಚಿದಾನಂದವನ್ನು ಯಾವಾಗಲೂ ಧ್ಯಾನಿಸುತ್ತಾರೆಯೊ ಅವರು ಸಚ್ಚಿದಾನಂದಮಯರಾಗುವರು.

೫೧೨. ಜೀವನವನ್ನೆಲ್ಲಾ ಏತಕ್ಕೆ ಪಾಪ, ನರಕವೆಂದು ಹಳಿಯುತ್ತ ಕಾಲ ಕಳೆಯುತ್ತೀರಿ? ಒಂದುಸಲ "ಹೇ! ಭಗವಂತ ನಾನು ಮಾಡಬಾರದ ಅನೇಕ ಕೆಲಸಗಳನ್ನು ಮಾಡಿರುವೆನು. ಮಾಡಬೇಕಾದ ಹಲವು ಕೆಲಸಗಳನ್ನು ಮಾಡಿಲ್ಲ. ನನ್ನನ್ನು ಕ್ಷಮಿಸು" ಎಂದು ಪ್ರಾರ್ಥಿಸಿ ಅವನನ್ನು ನಂಬಿ. ನೀವು ಎಲ್ಲಾ ಪಾಪಗಳಿಂದಲೂ ಪಾರಾಗುವಿರಿ.

೫೧೩. ಇಂಡಿಯಾದಲ್ಲಿ ನಂಬಿಕೆಯಿಂದ ರೋಗಗಳನ್ನು ಗುಣ ಮಾಡುವವರು ರೋಗಿಗೆ ತನಗೆ ಯಾವ ಕಾಯಿಲೆಯೂ ಇಲ್ಲವೆಂದು ಸಂಪೂರ್ಣ ಶ್ರದ್ಧೆಯಿಂದ ಹೇಳು ಎನ್ನುವರು. ರೋಗಿಗಳು ಇದನ್ನು ಹೇಳುತ್ತಾರೆ. ಈ ಮಾನಸಿಕ ಉಚ್ಚಾರಣೆ ರೋಗದಿಂದ ಪಾರಾಗುವುದಕ್ಕೆ ಸಹಾಯವಾಗುತ್ತದೆ. ಆದಕಾರಣವೆ ನೀವು ಪಾಪಿ ಎಂದು ಆಲೋಚಿಸಿದರೆ ಕಾಲಕ್ರಮದಲ್ಲಿ ಹಾಗೆಯೇ ಆಗುವಿರಿ. ನಿಮ್ಮಲ್ಲಿ ಅನಂತಶಕ್ತಿ ಇದೆ ಎಂದು ನಂಬಿ, ತಿಳಿಯಿರಿ. ಅನಂತಶಕ್ತಿ ಕೊನೆಗೆ ವ್ಯಕ್ತವಾಗುವುದು.

೫೧೪. ಯಾರು ತಾವು ಜೀವವೆಂದು ತಿಳಿಯುತ್ತಾರೆಯೋ ಅವರು ಜೀವವಾಗಿಯೇ ಉಳಿಯುವರು. ಆದರೆ ಯಾರು ತಾವು ದೇವನೆಂದು ನಂಬುತ್ತಾರೆಯೋ ಅವರು ದೇವರೇ ಆಗುವರು. ಒಬ್ಬನು ತಾನು ಆಲೋಚಿಸಿದಂತಾಗುತ್ತಾನೆ.

## ಶರಣಾಗತಿ

೫೧೫. ಸರಳಶ್ರದ್ಧೆ ಮತ್ತು ವಿಶ್ವಾಸದಿಂದ ಯಾರು ಭಗವಂತನಲ್ಲಿ ಶರಣಾಗುವರೋ ಅವರು ಬೇಗ ಅವನನ್ನು ಕಾಣುವರು.

೫೧೬. ಪ್ರಪಂಚದಲ್ಲಿರುವುದು, ಬಿಡುವುದು, ದೇವರ ಇಚ್ಛೆಯ

ಮೇಲೆ ಇರುವುದು. ಆದುದರಿಂದ ಎಲ್ಲವನ್ನೂ ಅವನ ವಶಕ್ಕೆ ಬಿಟ್ಟು ಕೆಲಸಮಾಡು. ನೀನು ಮತ್ತೇನು ಮಾಡಬಲ್ಲೆ ?

೫೧೭. ಬಯಲುಮಧ್ಯದಲ್ಲಿರುವ ಆಳವಿಲ್ಲದ ಕಟ್ಟೆಯ ನೀರನ್ನು ಯಾರೂ ಉಪಯೋಗಿಸಿ ಕಡಿಮೆಮಾಡದೆ ಇದ್ದರೂ, ಅದು ಬೇಗ ಒಣಗಿಹೋಗುವುದು ಇದರಂತೆಯೇ ಪಾಪಾತ್ಮನೊಬ್ಬನು ದೇವರ ಅನುಗ್ರಹದಲ್ಲಿ ಸಂಪೂರ್ಣವಾಗಿ ಶರಣಾಗತನಾಗುವುದರಿಂದ ಅವನು ಕೆಲವುವೇಳೆ ಪರಿಶುದ್ಧನಾಗುವನು.

೫೧೮. ಪ್ರಶ್ನೆ :—ನಾವು ಪ್ರಪಂಚದಲ್ಲಿರುವಾಗ ಏನು ಮಾಡಬೇಕು ?

ಉತ್ತರ :–ಎಲ್ಲವನ್ನೂ ಆತನಿಗೆ ಒಪ್ಪಿಸಬೇಕು. ಆತನಲ್ಲಿ ಶರಣಾಗತನಾಗಬೇಕು. ನಿನಗೆ ಇನ್ನೇನೂ ಕಷ್ಟವಿರುವುದಿಲ್ಲ. ಆಗ ಎಲ್ಲವೂ ಅವನ ಇಚ್ಛೆಯಂತೆ ನಡೆಯುವುದು ಎನ್ನುವುದು ನಿನಗೆ ಗೊತ್ತಾಗುತ್ತದೆ.

೫೧೯. ಇನ್ನೊಬ್ಬನಿಗೆ ನಮ್ಮ ಸ್ವಾಧೀನತೆಯನ್ನು ಕೊಡುವಷ್ಟು ಸುರಕ್ಷಿತವೂ ಮತ್ತು ಸುಲಭವೂ ಆದ ದಾರಿ ಮತ್ತೊಂದಿಲ್ಲ. ಸ್ವಾಧೀನತೆ ಕೊಡುವುದು ಎಂದರೆ ದೇವರಲ್ಲಿ ಶರಣಾಗತನಾಗುವುದು. ಯಾವ ವಿಧದಲ್ಲಿಯೂ ನನ್ನದು ಎಂಬ ಭಾವವಿಲ್ಲದೆ ಇರುವುದು.

೫೨೦. ಕೋತಿಯಮರಿ ಸಂಚರಿಸುವಾಗ ತನ್ನ ತಾಯಿಯನ್ನು ಬಿಗಿಯಾಗಿ ಅಪ್ಪಿಹಿಡಿಯುವುದು. ಬೆಕ್ಕಿನಮರಿಯಾದರೋ ಹಾಗೆ ಹಿಡಿದುಕೊಳ್ಳದೆ ಸುಮ್ಮನೆ ಕಿರಿಚಿಕೊಳ್ಳುವುದು. ತಾಯಿ ಅದರ ಕತ್ತನ್ನು ಹಿಡಿದುಕೊಳ್ಳುವುದು. ಕೋತಿಯಮರಿ ತನ್ನ ಹಿಡಿತವನ್ನು ಸಡಿಲಿಸಿದರೆ ಕೆಳಗೆ ಬಿದ್ದು ಗಾಯವನ್ನು ಹೊಂದುವುದು. ಇದಕ್ಕೆ ಕಾರಣ ಇದು ತನ್ನ ಶಕ್ತಿಯಮೇಲೆ ನಿಂತಿರುವುದು. ಆದರೆ ಬೆಕ್ಕಿನ ಮರಿಗೆ ಈ ಅಪಾಯವಿಲ್ಲ. ತನ್ನ ತಾಯಿ ಅದನ್ನು ಜಾಗದಿಂದ ಜಾಗಕ್ಕೆ ಕರೆದುಕೊಂಡು ಹೋಗುತ್ತದೆ. ಸ್ವಪ್ರಯತ್ನ ಮತ್ತು ದೇವರಲ್ಲಿ ಶರಣಾಗತನಾದವನಿಗೆ ಇರುವ ವ್ಯತ್ಯಾಸ ಇದು.

೫೨೧. ಒಂದುದಿನ ತಂದೆಯೊಬ್ಬನು ತನ್ನ ಇಬ್ಬರು ಮಕ್ಕಳೊಡನೆ ಹೊಲದಲ್ಲಿ ಹೋಗುತ್ತಿದ್ದನು. ಒಬ್ಬನನ್ನು ತಾನು ಎತ್ತಿಕೊಂಡಿದ್ದನು. ಇನ್ನೊಬ್ಬನನ್ನು ತನ್ನ ಕೈಯಲ್ಲಿ ಹಿಡಿದುಕೊಂಡು ಹೋಗುತ್ತಿದ್ದನು. ಒಂದುಪಟ ಹಾರುತ್ತಿದ್ದುದು ಕಾಣಬಂತು. ತಂದೆಯಕೈಯನ್ನು ಹಿಡಿದು

ಕೊಂಡಿದ್ದ ಮಗು ಕೈಯನ್ನು ಬಿಟ್ಟು ಚಪ್ಪಾಳೆ ಹೊಡೆಯುತ್ತ ಆನಂದ ದಿಂದ "ಅಪ್ಪ ನೋಡು, ಅಲ್ಲಿ ಒಂದು ಪಟ" ಎಂದನು. ತಕ್ಷಣವೇ ಕೆಳಗೆ ಬಿದ್ದು ಗಾಯಗೊಂಡನು. ತಂದೆಯು ಎತ್ತಿಕೊಂಡಿದ್ದ ಮಗು ಕೂಡ ಚಪ್ಪಾಳೆ ಹೊಡೆಯಿತು. ಆದರೆ ಬೀಳಲಿಲ್ಲ. ಏಕೆಂದರೆ ತಂದೆ ಅದನ್ನು ಎತ್ತಿಕೊಂಡಿದ್ದನು. ಮೊದಲನೆ ಹುಡುಗ ಆಧ್ಯಾತ್ಮಿಕಜೀವನ ದಲ್ಲಿ ಸ್ವಪ್ರಯತ್ನವನ್ನು ತೋರುವನು. ಎರಡನೆಯವನು ಶರಣಾಗತಿ ಯನ್ನು ತೋರುವನು.

೫೨೨. ಒಂದುಸಲ ರಾಧೆ ತನ್ನ ಪಾತಿವ್ರತ್ಯವನ್ನು ತೋರಬೇ ಕಾಯಿತು. ಅವಳಿಗೆ ಸಾವಿರ ತೂತುಗಳಿರುವ ಮಡಕೆಯಲ್ಲಿ ನೀರನ್ನು ತರುವ ಶಿಕ್ಷೆಯನ್ನು ವಿಧಿಸಿದರು. ಒಂದುತೊಟ್ಟು ನೀರೂ ಕೂಡ ಸೋರಿ ಹೋಗದಂತೆ ಅವಳು ನೀರನ್ನು ತಂದಳು. "ಇಂತಹ ಪತಿವ್ರತೆ ಹಿಂದೆ ಎಂದಿಗೂ ಇರಲಿಲ್ಲ. ಮುಂದೆ ಎಂದಿಗೂ ಇರುವುದಿಲ್ಲ" ಎಂದು ಶ್ಲಾಘಿಸಿದರು ಇದನ್ನು ರಾಧೆ ಕೇಳಿ "ನನ್ನನ್ನು ಏತಕ್ಕೆ ಹೊಗಳುತ್ತೀರಿ ಕೃಷ್ಣನಿಗೆ ಜಯವಾಗಲಿ, ಆತನಿಗೆ ಮಾತ್ರ ಜಯವಾಗಲಿ ಎನ್ನಿ. ನಾನು ಅವನ ಸೇವಕಿ ಮಾತ್ರ" ಎಂದಳು.

೫೨೩. ದೇವರಲ್ಲಿ ಸಂಪೂರ್ಣವಾಗಿ ಶರಣಾಗತನಾಗುವ ಸ್ವಭಾವವೆಂತಹುದು? ದಿನವೆಲ್ಲವೂ ಕಷ್ಟಪಟ್ಟು ಕೆಲಸಮಾಡಿ ದಿಂಬಿನ ಮೇಲೆ ತಲೆಯಿಟ್ಟು ವಿರಾಮವಾಗಿ ಹುಕ್ಕ ಸೇದುವಾಗ ಬರುವ ಮನಸ್ಸಿನ ವಿಶ್ರಾಂತಿಯಂತೆ ಎಲ್ಲಾ ಅಂಜಿಕೆ ಆತಂಕಗಳು ಆಗ ಮಾಯವಾಗುವುವು.

೫೨೪. ಊಟವಾದ ಮೇಲೆ ಆಚೆಗೆ ಎಸೆವ ಎಲೆಯಂತೆ ಇರು. ಅದು ಗಾಳಿಯ ಅಧೀನ. ಕೆಲವುವೇಳೆ ಇಲ್ಲಿ, ಕೆಲವು ವೇಳೆ ಅಲ್ಲಿ, ಹಾರಾಡುವುದು. ಕೆಲವುವೇಳೆ ಮನೆಯೊಳಗೆ ಕೆಲವುವೇಳೆ ಮನೆ ಕಸದಲ್ಲಿ ಬಿದ್ದಿರುವುದು. ಒಳ್ಳೆಯದು, ದೇವರು ನಿನ್ನನ್ನು ಇಲ್ಲಿ ಇಟ್ಟಿರುವನು, ಇಲ್ಲಿಯೇ ಇರು. ಅವನು ನಿನ್ನನ್ನು ಇಲ್ಲಿ ಬಿಡಿಸಿ ಬೇರೆ ಒಂದು ಒಳ್ಳೆ ಸ್ಥಳದಲ್ಲಿ ಇಟ್ಟಾಗಲೂ ಒಳ್ಳೆಯದು ಎಂದು ನಿಸ್ಸಂಗನಾ ಗಿರಬೇಕು. ವಿಷಯಗಳು ತಮ್ಮ ಪಾಡಿಗೆ ತಾವಿರಲಿ.

## ಇಷ್ಟದೇವತೆಯ ಆವಶ್ಯಕತೆ

೫೨೫. ಮನೆಯ ಕಿರಿಯ ಯಜಮಾನಿ ತನ್ನ ಮಾವ ಮತ್ತು ಅತ್ತೆಯವರನ್ನು ಪ್ರೀತಿಸುತ್ತಿದ್ದಳು. ಅವರಿಗೆ ಉಪಚಾರವನ್ನು ಮಾಡು

ವಳು. ಅವರ ಮಾತನ್ನು ಅಲ್ಲಗಳೆಯುವುದಿಲ್ಲ. ಅಥವಾ ಅಸಡ್ಡೆಯಿಂದ ನೋಡುವುದಿಲ್ಲ. ಆದರೂ ತನ್ನ ಯಜಮಾನನನ್ನು ಅತಿಶಯವಾಗಿ ಪ್ರೀತಿಸುವಳು. ಇದೇ ರೀತಿಯಲ್ಲಿ ನಿನ್ನ ಇಷ್ಟದೇವತೆಯ ಆರಾಧನೆ ಯಲ್ಲಿ ಅಚಲನಾಗಿರು. ಆದರೆ ಇತರ ದೇವರನ್ನು ತಾತ್ಸಾರದಿಂದ ಕಾಣಬೇಡ. ಅವುಗಳನ್ನು ಗೌರವಿಸು. ಏಕೆಂದರೆ ಅವುಗಳಲ್ಲೆಲ್ಲಾ ಕಾಣುವುದು ಒಂದೇ ಶಕ್ತಿ ಮತ್ತು ಪ್ರೇಮ.

೫೨೬. ಅಷ್ಟ-ಕಾಷ್ಟವೆಂಬ ಪಗಡೆಯ ಆಟದಲ್ಲಿ ಗುರಿಸೇರಿ ಹಣ್ಣಾಗಿ ಹಿಂತಿರುಗಿ ಬರದೆ ಇರುವುದಕ್ಕೆ ಮುಂಚೆ ಅವುಗಳು ಎಲ್ಲಾ ಕಡೆ ಘಟ್ಟಗಳನ್ನೂ ಹಾದುಹೋಗಬೇಕು. ಕಾಯಿ ಹಣ್ಣಾಗುವಕಡೆಗೆ ಸೇರುವುದಕ್ಕೆ ಮುಂಚೆ ಅದು ಹೊರಟ ಕಡೆಗೆ ಅನೇಕವೇಳೆ ಹಿಂತಿರುಗಿ ಪುನಃ ತನ್ನ ಕಷ್ಟದ ಪ್ರಯಾಣವನ್ನು ಮುಂದೆ ಸಾಗಿಸಬೇಕಾಗುವುದು. ಆದರೆ ಎರಡು ಕಾಯಿಗಳು ಜೋಡಿಯಲ್ಲಿ ಘಟ್ಟದಿಂದ ಘಟ್ಟಕ್ಕೆ ಹೊರಟರೆ ಗೆದ್ದವರೂ ಅದನ್ನು ಹಿಂದಕ್ಕೆ ಕಳುಹಿಸಲಾರರು. ಇದರಂತೆಯೇ ಯಾರು ತಮ್ಮ ಸಾಧನೆಯ ದಾರಿಯಲ್ಲಿ ಗುರು ಮತ್ತು ಇಷ್ಟದೊಂದಿಗೆ ಹೊರಡುವರೋ ಅವರಿಗೆ ಭಯವಿಲ್ಲ. ಯಾವ ಕಷ್ಟ ಮತ್ತು ಆತಂಕಗಳಿಲ್ಲದೆ ಅವರ ದಾರಿ ಸುಗಮವಾಗುವುದು.

೫೨೭. ಕಲ್ಕತ್ತೆಗೆ ಹಲವು ದಾರಿಗಳಿವೆ. ಒಂದು ದೂರದ ಹಳ್ಳಿಯಿಂದ ಸಂಶಯಾತ್ಮಕನೊಬ್ಬನು ಕಲ್ಕತ್ತೆಗೆ ಹೊರಟನು. ದಾರಿ ಯಲ್ಲಿ ಒಬ್ಬನನ್ನು ಕಲ್ಕತ್ತೆಗೆ ಬಹಳ ಹತ್ತಿರವಿರುವ ದಾರಿ ಯಾವುದೆಂದು ಕೇಳಿದನು. ಅವನು ಈ ರಸ್ತೆಯನ್ನು ಅನುಸರಿಸೆಂದನು. ಸ್ವಲ್ಪದೂರ ಹೋದಮೇಲೆ ಇನ್ನೊಬ್ಬನನ್ನು ಕಂಡನು. ಆಗ ಅವನನ್ನು ಇದು ಕಲ್ಕತ್ತೆಗೆ ನೇರವಾದ ರಸ್ತೆಯೇ, ಎಂದು ಕೇಳಿದನು. ಅದಕ್ಕೆ ಅವನು ಅಲ್ಲ, ನೀನು ಹಿಂತಿರುಗಿ ಬೇರೊಂದು ರಸ್ತೆಯಲ್ಲಿ ನಡೆಯ ಬೇಕೆಂದನು. ಪ್ರಯಾಣಿಕನು ಅದರಂತೆಯೇ ಮಾಡಿದನು. ಹೊಸ ರಸ್ತೆಯಲ್ಲಿ ಸ್ವಲ್ಪ ದೂರ ನಡೆದಮೇಲೆ ಮತ್ತೊಬ್ಬನನ್ನು ಕಂಡು ಕೇಳಿದನು. ಆತನು ಕಲ್ಕತ್ತೆಗೆ ಮತ್ತೊಂದು ರಸ್ತೆಯನ್ನು ತೋರಿಸಿ ದನು. ಹೀಗೆ ಸಂಶಯಾತ್ಮಕನು ಕಲ್ಕತ್ತೆಗೆ ಮುಂದುವರಿಯಲೇ ಇಲ್ಲ. ದಾರಿಗಳನ್ನು ಬದಲಾಯಿಸುವುದರಲ್ಲಿಯೇ ಕಾಲ ಕಳೆದನು. ಯಾರು ನಿಜವಾಗಿ ಕಲ್ಕತ್ತೆಯನ್ನು ಸೇರಬೇಕೆಂದಿರುವರೊ ಅವರು ಒಬ್ಬ ಪ್ರಯಾಣಿಕನು ತೋರಿದ ಹಾದಿಯನ್ನು ಅನುಸರಿಸಬೇಕು. ಇದ

ರಂತೆಯೆ ಯಾರು ದೇವನನ್ನು ಸೇರಬೇಕೆಂದಿರುವರೊ ಅವರು ಯಾರಾದರೂ ಒಬ್ಬರನ್ನು ಬಿಡದೆ ಅನುಸರಿಸಬೇಕು.

೫೨೮. ಒಬ್ಬನು ಒಂದು ಭಾವಿಯನ್ನು ತೋಡಲು ಮೊದಲು ಮಾಡಿದನು. ಇಪ್ಪತ್ತು ಮೊಳದಷ್ಟು ಅಗೆದಮೇಲೆ ಅಲ್ಲಿ ನೀರಿನ ಸುಳುವೇನೂ ಕಾಣಲಿಲ್ಲ. ಅವನು ಆ ಸ್ಥಳವನ್ನು ಬಿಟ್ಟು ಮತ್ತೊಂದು ಸ್ಥಳವನ್ನು ಆರಿಸಿದನು. ಅಲ್ಲಿ ಮೊದಲಿಗಿಂತ ಆಳವಾಗಿ ಅಗೆದನು. ಆದರೂ ನೀರು ಕಾಣಲಿಲ್ಲ. ಅದನ್ನು ಬಿಟ್ಟು ಬೇರೊಂದು ಜಾಗದಲ್ಲಿ ಅದಕ್ಕಿಂತ ಆಳವಾಗಿ ಅಗೆದನು. ಅಲ್ಲಿಯೂ ನೀರು ಬರಲಿಲ್ಲ. ಕೊನೆಗೆ ಬೇಜಾರಾಗಿ ಆ ಕೆಲಸವನ್ನೇ ಬಿಟ್ಟನು. ಈ ಮೂರು ಭಾವಿಗಳ ಒಟ್ಟು ಆಳ ನೂರು ಮೊಳಕ್ಕಿಂತ ಸ್ವಲ್ಪ ಕಡಿಮೆಯಾಗಿತ್ತು. ಪದೇ ಪದೇ ಬದಲಾಯಿಸದೆ ಒಟ್ಟು ಶ್ರಮದಲ್ಲಿ ಅರ್ಧವನ್ನಾದರೂ ಮೊದಲನೆಯ ಭಾವಿಯಮೇಲೆ ಉಪಯೋಗಿಸುವ ಸಹನೆ ಇದ್ದಿದ್ದರೆ, ನೀರನ್ನು ಪಡೆಯುವುದರಲ್ಲಿ ನಿಜವಾಗಿಯೂ ಜಯಶೀಲನಾಗುತ್ತಿದ್ದನು. ಪದೇ ಪದೇ ಇಷ್ಟದೇವತೆಗಳನ್ನು ಬದಲಾಯಿಸುವವನ ಗತಿಯೂ ಹೀಗಾಗುವುದು. ನಾವು ಜಯಶೀಲರಾಗಬೇಕಾದರೆ ಯಾವುದಾದರೂ ಒಂದು ದೇವರನ್ನು ಕೊನೆಯವರೆವಿಗೂ ಯಾವ ಸಂದೇಹವೂ ಇಲ್ಲದೆ ಮನಃಪೂರ್ವಕವಾಗಿ ಅನುಸರಿಸಬೇಕು.

೫೨೯. ಪತಿವ್ರತೆ ಹೇಗೆ ಪತಿಯ ಪ್ರಾಣಾನಂತರವೂ ಆತನ ಆತ್ಮದೊಂದಿಗೆ ಐಕ್ಯಳಾಗಿರುವಳೋ ಹಾಗೆ ತನ್ನ ಇಷ್ಟದೇವತೆಯನ್ನು ಯಾರು ಪ್ರೀತಿಸುತ್ತಿರುವರೋ ಅವರು ನಿಜವಾಗಿಯೂ ದೇವರಲ್ಲಿ ಐಕ್ಯತೆಯನ್ನು ಪಡೆಯುವರು.

೫೩೦. ಅಂತರಂಗದಲ್ಲಿ ಭಕ್ತಿ ಇರಲಿ, ಕುತಂತ್ರ ಮತ್ತು ವೇಷ ಇವುಗಳನ್ನು ತ್ಯಜಿಸಿ. ಯಾರು ಆಫೀಸಿನಲ್ಲಿ ಅಥವಾ ವ್ಯಾಪಾರದ ವ್ಯವಹಾರದಲ್ಲಿರುವರೋ ಅವರು ಕೂಡ ಸತ್ಯಸಂಧರಾಗಿರಬೇಕು. ಕಲಿಯುಗದಲ್ಲಿ ಸತ್ಯವೇ ತಪಸ್ಸು.

೫೩೧. ಒಬ್ಬನು ಯಾವಾಗಲೂ ಸತ್ಯವನ್ನು ಹೇಳದೇ ಇದ್ದರೆ ಸತ್ಯನಾರಾಯಣನಾದ ದೇವರನ್ನು ಪಡೆಯಲಾರನು.

೫೩೨. ಸತ್ಯವನ್ನು ಯಾವಾಗಲೂ ಹೇಳುವುದಕ್ಕೆ ಒಬ್ಬನು ನಿಷ್ಠನಾಗಿರಬೇಕು. ಸತ್ಯದ ಮೂಲಕ ದೇವರನ್ನು ಸಾಕ್ಷಾತ್ಕಾರ ಮಾಡಿಕೊಳ್ಳಬಹುದು.

೫೩೩. ಅಸತ್ಯ ಕೆಟ್ಟುದು. ತೋರಿಕೆಯ ಅಸತ್ಯವೂ ಕೂಡ ಕೆಟ್ಟುದು. ಹೊರಗಿನಂತೆ ನಿನ್ನ ಮನಸ್ಸು ಒಳಗೆ ಇಲ್ಲದಿದ್ದರೆ ನಿನಗೆ ಪ್ರಚಂಡ ಹಾನಿ ಸಂಭವಿಸುವುದು. ಹೀಗೆ ಇದ್ದರೆ ಒಬ್ಬನು ಕಪಟಿ ಯಾಗುವನು. ಇನ್ನೊಬ್ಬರಿಗೆ ಅಪಕಾರಮಾಡುವುದಕ್ಕೆ ಅಥವಾ ಸುಳ್ಳನ್ನು ಹೇಳುವುದಕ್ಕೆ ಅಂಜಿಕೆಯೆಲ್ಲ ಬಿಟ್ಟುಹೋಗುವುದು.

೫೩೪. ತುಂಬ ಸಾಲದಲ್ಲಿ ಬಿದ್ದವನೊಬ್ಬನು ಅದರಿಂದ ತಪ್ಪಿಸಿ ಕೊಳ್ಳುವುದಕ್ಕಾಗಿ ಹುಚ್ಚನಂತೆ ನಟಿಸಲು ಮೊದಲುಮಾಡಿದನು. ವೈದ್ಯರು ಇವನ ರೋಗವನ್ನು ಗುಣಮಾಡಲು ಆಗಲಿಲ್ಲ. ಔಷಧಿಯನ್ನು ಹೆಚ್ಚು ಕೊಟ್ಟಷ್ಟೂ ಅವನ ಹುಚ್ಚು ಹೆಚ್ಚಾಯಿತು. ಕೊನೆಗೆ ಒಬ್ಬ ಬುದ್ಧಿವಂತನಾದ ವೈದ್ಯನಿಗೆ ಗುಟ್ಟು ಗೊತ್ತಾಗಿ ರೋಗಿಯನ್ನು ಆಚೆಗೆ ಕರೆದುಕೊಂಡುಹೋಗಿ "ಅಯ್ಯಾ ನೀನು ಮಾಡುತ್ತಿರುವುದೇನು? ಹುಚ್ಚನಂತೆ ನಟಿಸಿ ಕೊನೆಗೆ ಹುಚ್ಚನಂತಾದೀಯೆ ಜೋಕೆ. ಆಗಲೇ ಹುಚ್ಚನ ಕೆಲವು ನಿಜವಾದ ಗುರುತುಗಳು ನಿನ್ನಲ್ಲಿ ಕಾಣುತ್ತಿವೆ." ಎಂದನು. ಈ ಬುದ್ಧಿವಾದ ಅವನನ್ನು ಭ್ರಾಂತಿಯಿಂದ ಎಚ್ಚರಿಸಿತು. ಅವನು ಹುಚ್ಚನಂತೆ ನಟಿಸುವುದನ್ನು ಬಿಟ್ಟನು. ನೀನು ಯಾವಾಗಲೂ ಹೇಗೆ ನಟಿಸುವೆಯೊ ಹಾಗೆಯೇ ಆಗುವೆ.

೫೩೫. ಒಂದುಕಡೆ ಪಾದರಸ ಹಚ್ಚಿರುವ ಕನ್ನಡಿಯೊಳಗೆ ಒಬ್ಬನು ತನ್ನ ಪ್ರತಿಬಿಂಬವನ್ನು ಕಾಣುವಂತೆ, ಭಗವಂತನ ದಿವ್ಯದರ್ಶನ, ಯಾರು ಬ್ರಹ್ಮಚರ್ಯವ್ರತದಿಂದ ತಮ್ಮ ಪವಿತ್ರತೆ ಮತ್ತು ಶಕ್ತಿಯನ್ನು ಕಾಪಾಡಿಕೊಂಡಿರುವರೋ ಅವರ ಮನಸ್ಸಿಗೆ ಗೋಚರಿಸುವುದು.

೫೩೬. ನೈಷ್ಠಿಕಬ್ರಹ್ಮಚರ್ಯವನ್ನು ಅಭ್ಯಾಸಮಾಡುವ ತನಕ ಸೂಕ್ಷ್ಮ ಆಧ್ಯಾತ್ಮಿಕ ತತ್ತ್ವಗಳನ್ನು ಅವನು ತಿಳಿದುಕೊಳ್ಳಲಾರ.

೫೩೭. ಶುಕದೇವನು ಊರ್ಧ್ವರೇತಸಿ (ನೈಷ್ಠಿಕಬ್ರಹ್ಮಚಾರಿ). ಅವನಿಗೆ ಇಂದ್ರಿಯಸ್ಖಲನವೆಂದಿಗೂ ಆಗಲಿಲ್ಲ. ಧೈರ್ಯವೇ ತಪಸ್ಸು ಎಂಬ ಮತ್ತೊಂದು ವರ್ಗದವರು ಇರುವರು. ಅವರಿಗೆ ಹಿಂದೆ ಇಂದ್ರಿಯ ಸ್ಖಲನವಾಗಿದ್ದರೂ ಕ್ರಮೇಣ ನೈಷ್ಠಿಕಬ್ರಹ್ಮಚರ್ಯವನ್ನು ಅಭ್ಯಾಸ ಮಾಡಿದವರು. ಒಬ್ಬನು ಒಂದೇ ಸಮನಾಗಿ ಹನ್ನೆರಡು ವರ್ಷಗಳು ಊರ್ಧ್ವರೇತಸಿಯಾದರೆ ಅವನಿಗೆ ಅಪೌರುಷೇಯಶಕ್ತಿ ಲಭಿಸುವುದು. ಅವರಲ್ಲಿ ಮೇಧಾನಿಧಿ ಎಂಬ ಮತ್ತೊಂದು ನರ ಹುಟ್ಟುವುದು. ಅವನು

ಆಗ ಎಲ್ಲವನ್ನೂ ಜ್ಞಾಪಕದಲ್ಲಿ ಇಟ್ಟುಕೊಳ್ಳಬಲ್ಲ. ಎಲ್ಲವನ್ನೂ ತಿಳಿಯಬಲ್ಲ.

೫೩೮. ಹನ್ನೆರಡು ವರ್ಷಗಳು ಒಬ್ಬನು ನಿಷ್ಠೆಯಿಂದ ಬ್ರಹ್ಮಚರ್ಯವನ್ನು ಅಭ್ಯಾಸಮಾಡಿದರೆ ಮೇಧಾನಿಧಿಯು ವಿಕಾಸವಾಗುವುದು. ಅತ್ಯಂತ ಸೂಕ್ಷ್ಮ ವಿಷಯಗಳನ್ನು ಕೂಡ ಒಳಹೊಕ್ಕು ತಿಳಿದುಕೊಳ್ಳುವುದಕ್ಕೆ ಅವನ ಬುದ್ಧಿಗೆ ಸಾಧ್ಯವಾಗುವುದು. ಇಂತಹ ಜ್ಞಾನದಿಂದ ಮನುಷ್ಯನು ದೇವರನ್ನು ತಿಳಿದುಕೊಳ್ಳಬಲ್ಲನು. ಇಂತಹ ಪರಿಶುದ್ಧವಾದ ಬುದ್ಧಿಯಿಂದ ಮಾತ್ರ ದೇವರನ್ನು ತಿಳಿಯುವುದಕ್ಕೆ ಸಾಧ್ಯ.

೫೩೯. ವೀರ್ಯನಾಶದಿಂದ ಶಕ್ತಿನಾಶ. ಅನೈಚ್ಛಿಕವಾದ ಇಂದ್ರಿಯಸ್ಖಲನದಿಂದಲೇನೋ ಅಷ್ಟು ಕೆಡಕಿಲ್ಲ. ಅದು ಆಹಾರಕ್ಕೆ ಸಂಬಂಧಪಟ್ಟಿರುವುದು. ಆದರೂ ಅವನಿಗೆ ಯಾವ ಹೆಂಗಸಿನ ಅನುಭವವೂ ಇರಕೂಡದು.

೫೪೦. ಯಾರು ಕಾಮವನ್ನು ತ್ಯಜಿಸುವರೋ ಅವರು ನಿಜವಾಗಿ ಪ್ರಪಂಚವನ್ನೆ ತ್ಯಜಿಸಿರುವರು! ದೇವರು ನಿಜವಾಗಿಯೂ ಅವನ ಸಮೀಪದಲ್ಲಿ ಇರುವನು.

## ವಿವೇಕ

೫೪೧. ವಿವೇಕವನ್ನು ಅಭ್ಯಾಸಮಾಡಿ. ಕಾಮಕಾಂಚನಗಳೆರಡೂ ಅಸತ್ಯ ದೇವರೊಬ್ಬನೇ ಸತ್ಯ. ದ್ರವ್ಯದಿಂದ ಪ್ರಯೋಜನವೇನು? ಏತಕ್ಕೆ, ಅದರಿಂದ ಅನ್ನ ಬಟ್ಟೆ ಮತ್ತು ವಾಸಕ್ಕೆ ಮನೆ ಸಿಕ್ಕುವುದು. ಇಷ್ಟೆ ಅದರ ಉಪಯೋಗ. ಇದಕ್ಕಿಂತ ಹೆಚ್ಚಿನದೇನೂ ಇಲ್ಲ. ಹಣವೇ ನಿಜವಾಗಿ ಜೀವನದ ಗುರಿಯಲ್ಲ. ಇದೇ ವಿಮರ್ಶೆಯ ರೀತಿ. ದ್ರವ್ಯ ಅಥವಾ ಹೆಂಗಸಿನ ರೂಪಿನಲ್ಲಿರುವುದೇನು? ನಿಮ್ಮ ವಿವೇಕವನ್ನು ಉಪಯೋಗಿಸಿದರೆ ಅತ್ಯಂತ ಸುಂದರಳಾದ ಹೆಂಗಸಿನ ದೇಹವೂ ಕೂಡ ಮಜ್ಜ, ಮಾಂಸ, ರಕ್ತ, ಚರ್ಮ, ಮೂಳೆ, ಕೊಬ್ಬು ಇವುಗಳಿಂದಾಗಿರುವುದು. ಎಲ್ಲಾ ಪ್ರಾಣಿಗಳಲ್ಲೂ ಇರುವಂತೆ ಕರಳು ಮಲಮೂತ್ರಗಳಿರುವುವು. ಆಶ್ಚರ್ಯವೇನೆಂದರೆ ಮನುಷ್ಯ ದೇವರನ್ನು ಮರೆತು ಸಂಪೂರ್ಣ ಇಂತಹವುಗಳನ್ನು ನೆನೆಯುವುದು.

೫೪೨. ವಿವೇಕ ಮತ್ತು ವೈರಾಗ್ಯ—ವಿವೇಕವೆಂದರೆ ನಿತ್ಯ ಮತ್ತು ಅನಿತ್ಯವಸ್ತು ವಿವೇಕ. ವೈರಾಗ್ಯವೆಂದರೆ ಪ್ರಪಂಚದ ವಸ್ತು

ಗಳಲ್ಲಿ ಅನಾಸಕ್ತಿ. ಅವುಗಳು ಇದ್ದಕ್ಕಿದ್ದಂತೆಯೆ ತಕ್ಷಣವೇ ಬರುವುದಿಲ್ಲ. ಪ್ರತಿದಿನವೂ ಅವುಗಳನ್ನು ಅಭ್ಯಾಸಮಾಡಬೇಕು. ದೈವೇಚ್ಛೆ ಇದ್ದರೆ ನಂತರ ಬಾಹ್ಯ ಮತ್ತು ಆಂತರಿಕವಾಗಿ ಅವುಗಳನ್ನು ತ್ಯಾಗ ಮಾಡಬೇಕು. ಅಭ್ಯಾಸದಿಂದ ಕ್ರಮೇಣ ಕಾಮಕಾಂಚನಗಳ ಮೇಲೆ ವೈರಾಗ್ಯ ಬರುವುದೆಂದು ಗೀತೆಯಲ್ಲಿ ಹೇಳಿರುವುದು. ನಿರಂತರ ಅಭ್ಯಾಸ ಮನಸ್ಸಿಗೆ ಅದ್ಭುತವಾದ ಶಕ್ತಿಯನ್ನು ಕೊಡುವುದು. ಆಗ ಇಂದ್ರಿಯ ಗಳನ್ನು ಗೆಲ್ಲುವುದಕ್ಕೆ ಯಾರಿಗೂ ಕಷ್ಟವಿಲ್ಲ. ಇದು ಒಂದು ಆಮೆಯಂತೆ, ಒಂದು ಸಲಿ ತನ್ನ ಅಂಗವನ್ನು ಚಿಪ್ಪಿನ ಒಳಗೆ ಸೆಳೆದುಕೊಂಡರೆ ಪುನಃ ಹೊರಗೆ ಬಿಡುವುದಿಲ್ಲ. ಅದನ್ನು ಚೂರುಚೂರಾಗಿ ಕತ್ತರಿಸಿದರೂ ಹೊರಗೆ ಬಿಡುವುದಿಲ್ಲ.

೫೪೩. ಪ್ರಶ್ನೆ—ಪ್ರಪಂಚ ಮಿಥ್ಯವೆ?

ಉತ್ತರ—ದೇವರು ನಿನಗೆ ಕಾಣುವವರೆಗೆ ಇದು ಮಿಥ್ಯ. ಏನೆಂದರೆ ನೀನು ಅವನನ್ನು ಎಲ್ಲಾ ಕಡೆಯಲ್ಲಿಯೂ ನೋಡುವುದಿಲ್ಲ. ಆದಕಾರಣ ನೀನು, "ನಾನು, ನನ್ನದು" ಎಂದು ಪ್ರಪಂಚಕ್ಕೆ ಬದ್ಧ ನಾಗುವೆ. ಹೀಗೆ ಅಜ್ಞಾನ ಮೋಹಿತನಾಗಿ ವಿಷಯೇಂದ್ರಿಯಗಳಲ್ಲಿ ಆಸಕ್ತನಾಗಿ ಮಾಯಾಜಾಲದಲ್ಲಿ ಬಂದಿಯಾಗಿರುವೆ. ಮಾಯೆಯು ಜನರನ್ನು ಕುರುಡರನ್ನಾಗಿ ಮಾಡುವುದು. ತಪ್ಪಿಸಿಕೊಳ್ಳುವುದಕ್ಕೆ ಎದುರಿಗೆ ದಾರಿ ಇದ್ದರೂ ಅವರು ತಪ್ಪಿಸಿಕೊಳ್ಳಲಾರರು. ಈ ಸಂಸಾರ ಎಷ್ಟು ಅನಿತ್ಯವೆಂಬುದು ನಿನಗೇ ಗೊತ್ತಿದೆ. ನೀನು ಇರುವ ಮನೆಯ ವಿಚಾರವಾಗಿ ಸ್ವಲ್ಪ ಯೋಚಿಸಿನೋಡು. ಎಷ್ಟು ಜನರು ಅಲ್ಲಿ ಹುಟ್ಟಿದರು, ಎಷ್ಟು ಜನರು ಅಲ್ಲಿ ಸತ್ತರು! ಪ್ರಾಪಂಚಿಕ ವಸ್ತುಗಳು ನಮ್ಮ ಕಣ್ಣಿಗೆ ಕ್ಷಣಕಾಲ ಕಂಡು ಮರುಕ್ಷಣವೇ ಮಾಯವಾಗುವುವು. ಯಾರನ್ನು ನೀನು ನನ್ನ ಸ್ವಂತವೆಂದು ತಿಳಿದಿರುವೆಯೋ ಅವರು ನೀನು ಸಾಯುವಾಗ ಕಣ್ಣು ಮುಚ್ಚಿದ ತಕ್ಷಣವೇ ನಿನ್ನ ಪಾಲಿಗೆ ಸೇರಿದವರಲ್ಲ. ಪ್ರಾಪಂಚಿಕನಮೇಲೆ ಆಸಕ್ತಿಯ ಹಿಡಿತ ಎಷ್ಟು ಇರುವುದು? ಮನೆಯಲ್ಲಿ ಯಾರೂ ಇವನನ್ನು ಲಕ್ಷಿಸುವುದಿಲ್ಲ. ಆದರೂ ತನ್ನ ಮೊಮ್ಮಗನ ಸಲುವಾಗಿ ಸಾಧನೆ—ಮಾಡುವುದಕ್ಕೆ ಕಾಶಿಗೆ ಹೋಗುವುದಿಲ್ಲ. "ನನ್ನ ಹರಿಯ ಗತಿ ಏನಾಗುವುದು" ಎಂಬ ಆಲೋಚನೆ ಅವನನ್ನು ಪ್ರಪಂಚದಲ್ಲಿ ಕಟ್ಟಿಹಾಕುವುದು. ಮೀನನ್ನು ಹಿಡಿಯುವ ಪಂಜರದಲ್ಲಿ ತಪ್ಪಿಸಿಕೊಂಡುಹೋಗುವುದಕ್ಕೆ ಯಾವಾಗಲೂ ದಾರಿ ತೆರೆದಿರುವುದು. ಆದರೂ

ಮೀನುಗಳು ತಪ್ಪಿಸಿಕೊಳ್ಳುವುದಿಲ್ಲ. ಹುಳು ತಾನು ಕಟ್ಟಿದ ಗೂಡಿನಲ್ಲಿ ಬಂದಿಯಾಗಿ ಸಾಯುವುದು. ಹೀಗಿರುವಾಗ ಈ ಪ್ರಪಂಚ ಅಸತ್ಯ ವಲ್ಲವೆ, ಕ್ಷಣಿಕವಲ್ಲವೆ?

೫೪೪. ಅಹಂಕಾರವನ್ನು ಹೇಗೆ ನಾಶಮಾಡುವುದು ನಿನಗೆ ಗೊತ್ತಿದೆಯೆ? ಧಾನ್ಯದ ಹೊಟ್ಟನ್ನು ತೆಗೆಯುವಾಗ ಮಧ್ಯೆ ಮಧ್ಯೆ ನಿಲ್ಲಿಸಿ ಸರಿಯಾಗಿ ಹೊಟ್ಟು ಹೋಗಿದೆಯೆ ಇಲ್ಲವೆ ಎಂದು ಪರೀಕ್ಷಿಸು ವರು. ಸೂಕ್ಷ್ಮವಾದ ತಕ್ಕಡಿಯಲ್ಲಿ ಯಾವುದಾದರೂ ಸಣ್ಣ ವಸ್ತು ಗಳನ್ನು ತೂಗುವಾಗ ಅನೇಕವೇಳೆ ನಿಲ್ಲಿಸಿ, ತಕ್ಕಡಿಯನ್ನು ಸರಿಯಾಗಿ ದೆಯೆ ಇಲ್ಲವೆ ಪರೀಕ್ಷಿಸುವರು. ಅದರಂತೆಯೇ ಅನೇಕವೇಳೆ ನನಗೆ ನಾನೆ ಬಹಳ ತೀಕ್ಷ್ಣವಾದ ಮಾತಿನಿಂದ ನಿಂದಿಸಿಕೊಳ್ಳುತ್ತಿದ್ದೆ. ಕೋಪ ನನ್ನಲ್ಲಿ ಏಳುತ್ತಿದೆಯೆ ಇಲ್ಲವೆ ಎನ್ನುವುದನ್ನು ಪರೀಕ್ಷಿಸುವುದಕ್ಕಾಗಿ ಕೆಲವುವೇಳೆ ನಾನು ದೇಹವನ್ನು ಕುರಿತು ಹೀಗೆ ಆಲೋಚಿಸುತ್ತಿದ್ದೆ: "ಈ ದೇಹವನ್ನು ನೋಡು ಮಾಂಸ ಮತ್ತು ಎಲುಬಿನ ಗೂಡಲ್ಲದೆ ಇನ್ನೇನು ಇದು! ರಕ್ತ, ಕೀವು ಮತ್ತು ಇನ್ನೂ ಇತರ ಮಲಿನ ವಸ್ತು ಗಳಲ್ಲದೆ ಇನ್ನೇನೂ ಇಲ್ಲ. ಈ ದೇಹವನ್ನು ಕುರಿತು ಇಷ್ಟು ಅಹಂಕಾರಿ ಯಾಗಿರುವುದು ಆಶ್ಚರ್ಯ?"

೫೪೫. ಪಾತ್ರೆಯಲ್ಲಿ ಅಕ್ಕಿ ಬೇಯುತ್ತಿದೆ ಎಂದು ತಿಳಿದುಕೊಳ್ಳಿ. ಅದು ಸರಿಯಾಗಿ ಬೆಂದಿದೆಯೇ ಇಲ್ಲವೆ ಎನ್ನುವುದಕ್ಕಾಗಿ ಒಂದು ಕಾಳನ್ನು ತೆಗೆದು ನಿಮ್ಮ ಬೆರಳಿನಿಂದ ಅದುಮಿನೋಡುವಿರಿ. ತಕ್ಷಣವೇ ಪಾತ್ರೆಯಲ್ಲಿರುವ ಅಕ್ಕಿ ಬೆಂದಿದೆಯೆ ಇಲ್ಲವೆ ಎನ್ನುವುದು ಗೊತ್ತಾಗು ವುದು. ನಿಜವಾಗಿಯೂ ನೀವು ಪ್ರತಿಯೊಂದು ಕಾಳನ್ನೂ ಹಿಸುಕಿ ನೋಡುವುದಿಲ್ಲ. ಒಂದೆರಡು ಕಾಳುಗಳನ್ನು ಪರೀಕ್ಷಿಸಿ ಪಾತ್ರೆಯಲ್ಲಿರುವ ಅಕ್ಕಿಯೆಲ್ಲಾ ಬೆಂದಿದೆ ಎಂದು ಹೇಗೆ ತಿಳಿಯುವಿರೊ, ಅದರಂತೆಯೆ ಪ್ರಪಂಚ ಸತ್ಯವೆ, ಮಿಥ್ಯವೆ, ಕ್ಷಣಿಕವೆ ಅಥವಾ ಶಾಶ್ವತವೆ ಎಂಬು ದನ್ನು ಅದರಲ್ಲಿರುವ ಎರಡು ಮೂರು ವಸ್ತುಗಳನ್ನು ಪರೀಕ್ಷಿಸುವುದ ರಿಂದ ತಿಳಿದುಕೊಳ್ಳಬಹುದು. ಮಾನವನು ಹುಟ್ಟುವನು, ಕೆಲವು ದಿನ ಬಾಳುವನು, ಕೊನೆಗೆ ಸಾಯುವನು. ಇದರಂತೆಯೆ ಪ್ರಾಣಿ ಮತ್ತು ಸಸ್ಯಗಳೂ ಕೂಡ. ಹೀಗೆ ವಿಚಾರಮಾಡಿದರೆ ನಾಮರೂಪಗಳಿಂದ ಕೂಡಿದ ವಸ್ತುಗಳ ಗತಿಯೆಲ್ಲ, ಅದು ಪೃಥ್ವಿಯಲ್ಲಿರಲಿ, ಸೂರ್ಯಚಂದ್ರ ರಲ್ಲಿರಲಿ, ಎಲ್ಲವೂ ಒಂದೇ ಎಂದು ಗೊತ್ತಾಗುವುದು. ಹೀಗೆ ವಿಶ್ವದಲ್ಲಿ

ರುವ ವಸ್ತುಗಳ ಸ್ವಭಾವವೆಲ್ಲ ನಿನಗೆ ತಿಳಿಯುವುದಿಲ್ಲವೆ? ಹೀಗೆ ಪ್ರಪಂಚ ಅಸತ್ಯವಾದುದು, ಕ್ಷಣಿಕವಾದುದು, ಎಂದು ತಿಳಿದಮೇಲೆ ಆದರಲ್ಲಿ ನಿನಗೆ ಇನ್ನು ಅಭಿಮಾನವಿರುವುದಿಲ್ಲ. ಮನಸ್ಸಿನಿಂದ ಅದನ್ನು ತ್ಯಜಿಸಿ ಎಲ್ಲಾ ಆಸೆಗಳಿಂದಲೂ ಮುಕ್ತನಾಗುವೆ. ಹೀಗೆ ತ್ಯಾಗದಲ್ಲಿ ನೀನು ಜಯಶೀಲನಾದರೆ ಜಗದ ಮೂಲಕಾರಣನಾದ ದೇವರು ನಿನಗೆ ತಿಳಿಯುವುದು. ಹೀಗೆ ಒಬ್ಬನು ಸಾಕ್ಷಾತ್ಕಾರ ಪಡೆದರೆ ಅವನು ಸರ್ವಜ್ಞನಲ್ಲದೆ ಮತ್ತೇನು?

## ವೈರಾಗ್ಯ

೩೪೬. ನಮ್ಮ ಎಲ್ಲಾ ಪ್ರಾಪಂಚಿಕ ಬಯಕೆಗಳೂ ಸಿದ್ಧಿಸಿ ಸತ್ಯವನ್ನು ಮರೆತಾಗಲೂ "ಇದನ್ನೆಲ್ಲಾ ಅನುಭವಿಸುವ ನಾನು ಯಾರು" ಎಂಬ ಪ್ರಶ್ನೆ ಏಳಬಹುದು. ಆಗಲೆ ಜಗದ ರಹಸ್ಯ ಗೋಚರಿಸುವ ಸಮಯ ಮೊದಲಾಗಬಹುದು.

೩೪೭. ಮುಳ್ಳು ಮತ್ತು ಪೊದೆಗಳಿಂದ ಕೂಡಿದ ಕಾಡಿನಲ್ಲಿ ಬರಿಯ ಕಾಲಿನಿಂದ ನಡೆಯುವುದು ಅಸಾಧ್ಯ. ಕಾಡಿನಲ್ಲೆಲ್ಲಾ ಚರ್ಮ ಹಾಸಿದ್ದರೆ ಅಥವಾ ಕಾಲಿಗೆ ಎಕ್ಕಡವಿದ್ದರೆ ಮಾತ್ರ ಸಾಧ್ಯ. ಕಾಡನ್ನೆಲ್ಲಾ ಚರ್ಮದಿಂದ ಹೊದಿಸುವುದು ಅಸಾಧ್ಯ. ಆದಕಾರಣ ಕಾಲನ್ನು ಎಕ್ಕಡದಿಂದ ರಕ್ಷಿಸುವುದು ಒಳ್ಳೆಯದು. ಇದರಂತೆಯೆ ಮನುಷ್ಯನು ಜಗದಲ್ಲಿ ಅನೇಕ ಬಯಕೆಗಳಿಂದ ಪೀಡಿಸಲ್ಪಡುವನು. ಅವುಗಳಿಂದ ಪಾರಾಗಲು ಎರಡು ಮಾರ್ಗಗಳಿರುವುವು. ಒಂದು ಬಯಕೆಗಳನ್ನೆಲ್ಲಾ ಈಡೇರಿಸಿಕೊಳ್ಳುವುದು ಅಥವಾ ಬಯಕೆಯನ್ನು ತೊರೆಯುವುದು. ಮಾನವನ ಬಯಕೆಗಳನ್ನೆಲ್ಲಾ ಈಡೇರಿಸಿಕೊಳ್ಳುವುದು ಬಹಳ ಕಷ್ಟ. ಅವುಗಳನ್ನು ಈಡೇರಿಸಿಕೊಳ್ಳುವುದಕ್ಕೆ ಪ್ರಯತ್ನಿಸಿದಾಗಲೆಲ್ಲಾ ಹೊಸ ಬಯಕೆಗಳು ಹುಟ್ಟುವುವು. ತೃಪ್ತಿ ಮತ್ತು ಸತ್ಯಜ್ಞಾನದ ಮೂಲಕವಾಗಿ ನಮ್ಮ ಆಸೆಗಳನ್ನು ತಗ್ಗಿಸುವುದು ಒಳ್ಳೆಯದು.

೩೪೮. ಹುಳುಕಡ್ಡಿಯನ್ನು ಕೆರೆಯುವಾಗ ತುಂಬಾ ಆನಂದ. ಆದರೆ ನಂತರ ಅದರಿಂದ ಆಗುವ ವ್ಯಥೆ ಸಹಿಸಲಸಾಧ್ಯ. ಇದರಂತೆಯೆ ಪ್ರಪಂಚದ ಭೋಗಗಳು ಮೊದಲಿನಲ್ಲಿ ಅತ್ಯಾನಂದಕರ. ಆದರೆ ಅದರ ಪರಿಣಾಮವನ್ನು ಕುರಿತು ಯೋಚಿಸಿದರೆ ಭಯಂಕರ.

೩೪೯. ಬಾಯಿಯಲ್ಲಿ ಒಂದು ಮೀನನ್ನು ಹಿಡಿದುಕೊಂಡು

ಹೋಗುತ್ತಿದ್ದ ಒಂದು ಹದ್ದನ್ನು ಹಲವು ಹದ್ದುಗಳು ಮತ್ತು ಕಾಗೆಗಳು ಕುಕ್ಕುತ್ತ ಅಟ್ಟಿಸಿಕೊಂಡು ಹೋಗುತ್ತಿದ್ದವು. ಇದರಿಂದ ಬೇಜಾರಾಗಿ ತಾನು ಹಿಡಿದುಕೊಂಡಿದ್ದ ಮೀನನ್ನು ಬಿಟ್ಟುಬಿಟ್ಟಿತು. ಇದನ್ನು ಮತ್ತೊಂದು ಹದ್ದು ಹಿಡಿದುಕೊಂಡಿತು. ತಕ್ಷಣವೇ ಉಳಿದ ಹದ್ದುಗಳು ಮತ್ತು ಕಾಗೆಗಳು ಹೊಸದಾಗಿ ಮೀನನ್ನು ಹಿಡಿದುಕೊಂಡ ಹದ್ದಿನ ಕಡೆಗೆ ತಿರುಗಿದವು. ಮೊದಲನೆ ಹದ್ದನ್ನು ಬಿಟ್ಟವು. ಅದು ಬಂದು ಶಾಂತವಾಗಿ ಒಂದು ಮರದ ಮೇಲೆ ಕುಳಿತುಕೊಂಡಿತು. ಶಾಂತವಾಗಿ ಸಮಾಧಾನಸ್ಥಿತಿಯಲ್ಲಿ ಕುಳಿತ ಹದ್ದನ್ನು ನೋಡಿ ಅವಧೂತನು ನಮಸ್ಕರಿಸಿ ಹೀಗೆ ಹೇಳಿದನು: "ಎಲೆ ಹದ್ದೆ, ನೀನು ನನಗೆ ಗುರು. ಎಲ್ಲಿಯವರೆಗೆ ಮನುಷ್ಯನು ಪ್ರಾಪಂಚಿಕ ಆಸೆಯನ್ನು ತೊರೆಯುವುದಿಲ್ಲವೊ ಅಲ್ಲಿಯವರೆವಿಗೂ ಅವನು ಪ್ರಪಂಚದ ತೊಂದರೆಗಳಿಂದ ಪಾರಾಗಲಾರ, ಮತ್ತು ತನ್ನಲ್ಲಿ ಸಮಾಧಾನ ಹೊಂದಲಾರ, ಎಂಬುದನ್ನು ನನಗೆ ಕಲಿಸಿದೆ."

೫೫೦. ಕಣ್ಣನ್ನು ಎರಡು ಕಡೆಗಳಲ್ಲಿಯೂ ಕಟ್ಟದೆ ಇರುವ ಬೆದರುತ್ತಿರುವ ಕುದುರೆ ನೇರವಾಗಿ ನಡೆಯಲಾರದು. ಇದರಂತೆಯೆ ಸುತ್ತಲೂ ಇರುವ ಪ್ರಪಂಚದ ಭೋಗಗಳನ್ನು ನೋಡದಂತೆ ವಿವೇಕ ವೈರಾಗ್ಯಗಳ ಪಟ್ಟಿಯಿಂದ ಕೂಡಿರುವವನು ಜಾರುವುದಿಲ್ಲ ಅಥವಾ ಕೆಟ್ಟ ಹಾದಿಗೆ ಹೋಗುವುದಿಲ್ಲ.

೫೫೧. ಕಾಗದಕ್ಕೆ ಎಣ್ಣೆ ಸೋಕಿದರೆ ಅದರ ಮೇಲೆ ಬರೆಯುವುದಕ್ಕೆ ಆಗುವುದಿಲ್ಲ. ಇದರಂತೆಯೆ ದುರ್ನಡತೆ ಮತ್ತು ಭೋಗಗಳೆಂಬ ಎಣ್ಣೆಯಿಂದ ಯಾರ ಮನಸ್ಸು ಸೋಕಿರುವುದೋ ಅವರ ಮನಸ್ಸು ಆಧ್ಯಾತ್ಮಿಕ ಸಾಧನೆಗೆ ಅರ್ಹವಲ್ಲ. ಆದರೆ ಎಣ್ಣೆ ಸೋಕಿದ ಕಾಗದದ ಮೇಲೆ ಸುಣ್ಣವನ್ನು ಸವರಿದರೆ ಅದರ ಮೇಲೆ ಬರೆಯಬಹುದು. ಇದರಂತೆಯೆ ಅಂತಹ ಮನಸ್ಸಿನ ಮೇಲೆ ತ್ಯಾಗವೆಂಬ ಸುಣ್ಣವನ್ನು ಬಳಿದರೆ ಆಮೇಲೆ ಬರೆಯಬಹುದು.

೫೫೨. ಒಂದು ವಿಧವಾದ ವಿಷಪೂರಿತ ಜೇಡರ ಹುಳುವಿದೆ. ಅದು ಕಚ್ಚಿದರೆ ಆದರ ವಿಷವನ್ನು ಆರಿಸಿನದ ಬೇರಿನಿಂದ ಉಜ್ಜುವವರೆಗೆ ಯಾವ ಔಷಧವೂ ಗುಣ ಮಾಡಲಾರದು. ಮೊದಲು ಗಾಯವನ್ನು ಹೀಗೆ ಚಿಕಿತ್ಸೆ ಮಾಡಿದರೆ ನಂತರ ಉಳಿದ ಔಷಧಗಳು ಫಲಕಾರಿಯಾಗುವುವು. ಹೀಗೆಯೇ ಕಾಮ ಮತ್ತು ಭೋಗವೆಂಬ ಕೀಟದ ವಿಷದಿಂದ ಪೀಡಿತ

ನಾಗಿರುವವನು ಉಳಿದ ಔಷಧಿಗಳನ್ನು ಸೇವಿಸುವುದಕ್ಕೆ ಮುಂಚೆ ತ್ಯಾಗವೆಂಬ ಮೂಲಿಕೆಯ ಸೇವನೆಯಿಂದ ಚಿಕಿತ್ಸೆಯನ್ನು ಹೊಂದಬೇಕು.

೫೫೩. ಬಗ್ಗಡದ ನೀರಿರುವ ಒಂದು ಗಡಿಗೆಗೆ, ನೀರನ್ನು ಶುದ್ಧ ಮಾಡುವ ಪಟಿಕವನ್ನು ಹಾಕಿದರೆ, ಅಡಿಯಲ್ಲಿ ಕೊಳೆಯೆಲ್ಲಾ ತಂಗಿ ನೀರು ನಿರ್ಮಲವಾಗುವುದು. ವಿವೇಕ ಮತ್ತು ವೈರಾಗ್ಯಗಳೆರಡು ಶುದ್ಧ ಮಾಡುವ ವಸ್ತುಗಳು. ಇವುಗಳ ಮೂಲಕ ಪ್ರಾಪಂಚಿಕನು ತನ್ನ ಪ್ರಾಪಂಚಿಕತೆಯನ್ನು ಕಳೆದುಕೊಂಡು ಪರಿಶುದ್ಧನಾಗುವನು.

೫೫೪. ಹುಳು ತನ್ನ ಗೂಡಿನಲ್ಲೆ ಬಂದಿಯಾಗುವುದು. ಇದರಂತೆ ಪ್ರಾಪಂಚಿಕನು ತನ್ನ ಆಸೆ ಎಂಬ ಗೂಡಿನಲ್ಲಿಯೇ ಸಿಕ್ಕಿ ಬೀಳುವನು. ಆದರೆ ಆ ಕೀಟ ಸುಂದರವಾದ ಚಿಟ್ಟೆಯಾದಮೇಲೆ ಗೂಡನ್ನು ಭೇದಿಸಿ ಕೊಂಡು ಗಾಳಿ ಬೆಳಕನ್ನು ಅನುಭವಿಸಲು ಹಾರುವುದು ಇದರಂತೆಯೆ ಮಾಯಾಪಾಶನಲ್ಲಿ ಸಿಕ್ಕಿಬಿದ್ದಿರುವ ಜೀವಿಯು ಕೂಡ ವಿವೇಕ ವೈರಾಗ್ಯಗಳೆಂಬ ರೆಕ್ಕೆ ಮೂಲಕ ಹಾರಿಹೋಗಬಹುದು.

೫೫೫. ದೇವರಿರುವ ಕೋಣೆಯು ಬೀಗ ತೆಗೆಯಬೇಕಾದರೆ ಬೀಗದಕ್ಕೆ ಹಿಂದಿನಿಂದ ತಿರುಗಬೇಕು. ಅವನನ್ನು ಸೇರಬೇಕಾದರೆ ಪ್ರಪಂಚ ಮತ್ತು ಅದಕ್ಕೆ ಸೇರಿದ ಎಲ್ಲಾ ವಸ್ತುಗಳನ್ನು ತ್ಯಜಿಸಬೇಕು.

೫೫೬. ಒಬ್ಬನ ಹೃದಯದಲ್ಲಿ ವಿವೇಕ ಮತ್ತು ವೈರಾಗ್ಯವಿಲ್ಲದೆ ಇದ್ದರೆ ಎಷ್ಟು ಶಾಸ್ತ್ರ ಓದಿದರೂ ಪ್ರಯೋಜನವಿಲ್ಲ. ಇವು ಇಲ್ಲದೇ ಇದ್ದರೆ ಅಧ್ಯಾತ್ಮಿಕ ಪುರೋಗಮನ ಸಾಧ್ಯವಿಲ್ಲ.

೫೫೭. ಒಬ್ಬನು ದೇವರನ್ನು ಹೇಗೆ ಪಡೆಯಬಲ್ಲನು? ಅವನಿಗಾಗಿ ದೇಹ, ಮನಸ್ಸು ಮತ್ತು ಐಶ್ವರ್ಯವನ್ನು ತ್ಯಜಿಸಬೇಕು.

೫೫೮. ಮುಕ್ತನಾಗಲಿಚ್ಛಿಸುವುದಕ್ಕೆ ಮುಂಚೆ ಇರುವ ಬದ್ಧ ಜೀವಿಯ ಮನಸ್ಸಿನ ಸ್ಥಿತಿಯೆಂತಹುದು? ದೇವರ ಅನುರಾಗದಿಂದ ಅವನಿಗೆ ಪ್ರಾಪಂಚಿಕ ವಸ್ತುಗಳ ಮೇಲೆ ವೈರಾಗ್ಯ ಬಂದರೆ ಆಗ ಮಾತ್ರ ಅವನು ಕಾಮಕಾಂಚನಗಳ ಪಾಶದಿಂದ ಪಾರಾಗುವನು. ತೀವ್ರ ವೈರಾಗ್ಯ, ಉತ್ಕಟ ಅನಾಸಕ್ತಿ ಎಂತಹುದು? ನಾನು ಕ್ರಮೇಣ ದೇವರನ್ನು ಕಾಣುತ್ತೇನೆ ಎಂಬುದು ಮಂದ ವೈರಾಗ್ಯ ಸ್ವಭಾವ. ಆದರೆ ಯಾರ ವೈರಾಗ್ಯ ತೀವ್ರವಾಗಿ ಉತ್ಕಟವಾಗಿರುವುದೊ ಆತನು ತಾಯಿ ಹೇಗೆ ತನ್ನ ಮಗುವಿಗಾಗಿ ಹಂಬಲಿಸುತ್ತಿರುವಳೊ ಹಾಗೆ ದೇವರಿಗಾಗಿ ತೀವ್ರ ವ್ಯಾಕುಲಪಡುವನು. ಅವನು ದೇವರಲ್ಲದೆ ಬೇರಾವುದನ್ನೂ

ಆಶಿಸನು. ಅವನಿಗೆ ಪ್ರಪಂಚವೆಂದರೆ ಒಂದು ದೊಡ್ಡ ಬಾವಿಯಂತೆ. ಅದರಲ್ಲಿ ತಾನು ಯಾವ ಕ್ಷಣದಲ್ಲಿ ಮುಳುಗಿಹೋಗುವೆನೊ ಎಂದು ಅಂಜುವನು. ಆಗ ಅವನಿಗೆ ಆತನ ನೆಂಟರಿಷ್ಟರು ಸರ್ಪದಂತೆ ತೋರುವರು. ಅವರಿಂದ ಪಾರಾಗಲು ಯತ್ನಿಸುವನು. ಅವನು ಮೊದಲು ದೇವರನ್ನು ಕಾಣುವುದಕ್ಕೆ ಮುಂಚೆ ಮನೆವಾರ್ತೆಗಳನ್ನು ಇತ್ಯರ್ಥ ಮಾಡಲು ಇಚ್ಛಿಸುವುದಿಲ್ಲ. ಆತನ ಮನೋನಿಶ್ಚಯದ ಶಕ್ತಿ ಇಂತಹುದು.

೫೫೯. ದೇವರ ಭಕ್ತನು ಅವನಿಗಾಗಿ ಎಲ್ಲವನ್ನೂ ಏತಕ್ಕೆ ತ್ಯಜಿಸುವನು? ಬೆಳಕನ್ನು ಕಂಡ ಪತಂಗ ಕತ್ತಲೆಗೆ ಹೋಗಲಿಚ್ಛಿಸುವುದಿಲ್ಲ. ಇದರಂತೆಯೆ ಭಕ್ತನು ಕೂಡ ಪರಮಾತ್ಮನನ್ನು ಪಡೆಯುವುದಕ್ಕಾಗಿ ಆನಂದದಿಂದ ಎಲ್ಲವನ್ನೂ ತ್ಯಜಿಸುವನು. ಅವನು ಬೇರಾವುದನ್ನೂ ಲಕ್ಷಿಸುವುದಿಲ್ಲ.

೫೬೦. ಜೀವನದಲ್ಲಿ ಎಲ್ಲಾ ಸ್ಥಿತಿಗಳನ್ನು, ದೀನನಾದ ಕಸಗುಡಿಸುವವನಿಂದ ಹಿಡಿದು ದೊರೆಯ ಉಚ್ಚಪದವಿಯವರೆಗೆ ಪ್ರತ್ಯಕ್ಷ, ಅನುಮಾನ, ಪ್ರಮಾಣಗಳ ಮೂಲಕ ವಿಮರ್ಶಿಸಿ, ಎಲ್ಲಾ ಸುಖಭೋಗಗಳ ಕ್ಷಣ ಭಂಗುರತೆಯನ್ನು ಮನಗಂಡಾಗ ಮಾತ್ರ, ಒಬ್ಬನು ನಿಜವಾದ ಜ್ಞಾನಿಯಾಗುತ್ತಾನೆ, ಪರಮಹಂಸನಾಗುತ್ತಾನೆ.

೫೬೧. ಕಾಮ ಮತ್ತು ಲೋಭಗಳನ್ನು ತೊರೆಯುವವರೆಗೆ ಜ್ಞಾನ ಬರುವುದಿಲ್ಲ. ತ್ಯಾಗ ಉದಿಸಿದಾಗ ಅವಿದ್ಯೆಯೆಲ್ಲಾ ನಾಶವಾಗುವುದು. ಸೂರ್ಯನ ರಶ್ಮಿ ನೇರವಾಗಿ ಬೀಳುವಂತೆ ಹಿಡಿದು ಭೂತಕನ್ನಡಿಯ ಮೂಲಕ ನಾವು ಹಲವು ವಸ್ತುಗಳನ್ನು ಸುಡಬಹುದು. ಆದರೆ ನೆರಳಿರುವ ಕೋಣೆಯಲ್ಲಿ ಹಾಗೆ ಮಾಡಲು ಆಗುವುದಿಲ್ಲ. ಇದರಂತೆಯೆ ಮನಸ್ಸನ್ನು ಕೂಡ ಈ ಪ್ರಪಂಚವೆಂಬ ಗುಹೆಯಿಂದ ಹೊರಗೆ ತೆಗೆದುಕೊಂಡು ಹೋಗಿ ಸ್ವಯಂ ಜ್ಯೋತಿಯಿಂದ ಬೆಳಗುತ್ತಿರುವ ಪರಮಾತ್ಮನ ಪೂರ್ಣಪ್ರಕಾಶದಲ್ಲಿ ಅದನ್ನು ಬಿಡಬೇಕು. ಆಗ ಮಾತ್ರ ನಿಜವಾದ ವೈರಾಗ್ಯ ಬರುವುದು. ಅದರಿಂದ ಅಜ್ಞಾನವೆಲ್ಲಾ ನಾಶವಾಗುವುದು.

೫೬೨. ಜ್ಞಾನವನ್ನು ತಕ್ಷಣವೇ ಬೋಧಿಸುವುದಕ್ಕಾಗುವುದಿಲ್ಲ. ಕಾಲಕ್ರಮೇಣ ಅದನ್ನು ಪಡೆಯಬೇಕು. ಜ್ವರ ಬಹಳ ದಾರುಣಾವಸ್ಥೆಯಲ್ಲಿದೆ ಎಂದು ಇಟ್ಟುಕೊಳ್ಳೋಣ. ವೈದ್ಯನು ಆಗ ಕೈನಾಡಿಯನ್ನು ನೋಡಲಾರ. ಅದರಿಂದ ಉಪಯೋಗವಿಲ್ಲವೆಂದು ಗೊತ್ತಾಗುತ್ತದೆ. ಮೊದಲು ಜ್ವರ ಬಿಡಬೇಕು. ಅದಕ್ಕೆ ಕಾಲಬೇಕಾಗುವುದು. ನಂತರ

ಕ್ವಿನೈನ್ ಅಥವಾ ಇನ್ನಾವುದಾದರೂ ಔಷಧಿಯನ್ನು ಕೊಡುವನು. ಜ್ಞಾನವನ್ನು ಪಡೆಯುವವನ ಸ್ಥಿತಿಯೂ ಕೂಡ ಹೀಗೆ. ಸಂಸಾರದಲ್ಲಿ ಮುಳುಗಿರುವ ತನಕ ಉಪದೇಶದಿಂದ ಅನೇಕವೇಳೆ ಪ್ರಯೋಜನವಾಗುವುದಿಲ್ಲ. ಮನುಷ್ಯನು ಕೆಲವು ಕಾಲ ಪ್ರಪಂಚವನ್ನು ಅನುಭವಿಸುವುದಕ್ಕೆ ಮೊದಲು ಅವಕಾಶವನ್ನು ಕೊಡಿ. ಪ್ರಪಂಚದ ಮೇಲಣ ಆಸಕ್ತಿ ಅವನಲ್ಲಿ ತಗ್ಗಿದ ಮೇಲೆ ಉಪದೇಶದಿಂದ ಫಲಕಾರಿಯಾಗುವ ಸಮಯ ಬರಬಹುದು. ಅಲ್ಲಿಯವರೆಗೂ ಇಂತಹ ಉಪದೇಶಗಳೆಲ್ಲವೂ ವ್ಯರ್ಥವಾಗಬಹುದು.

೫೭೩. ತಾಯಿಂದ ದೂರವಾಗಿರುವ ಕೋಣೆಯಲ್ಲಿ ಮಕ್ಕಳು ತಮ್ಮ ಪಾಡಿಗೆ ತಾವು ಬೊಂಬೆಯೊಂದಿಗೆ ಆಟವಾಡುತ್ತಿರುವುವು. ಆದರೆ ತಾಯಿ ಬಂದೊಡನೆಯೇ "ಅಮ್ಮ! ಅಮ್ಮ" ಎಂದು ಬೊಂಬೆಯನ್ನು ಆಚೆಗೆ ಎಸೆದು ತಾಯಿಯ ಬಳಿಗೆ ಓಡಿಹೋಗುವುವು. ನೀವು ಕೂಡ ಈಗ ಪ್ರಪಂಚದಲ್ಲಿ ಯಾವುದನ್ನೂ ಲೆಕ್ಕಿಸದೆ, ಐಶ್ವರ್ಯ, ಗೌರವ, ಕೀರ್ತಿ ಮುಂತಾದ ಬೊಂಬೆಗಳೊಂದಿಗೆ ಆಟವಾಡುವಿರಿ. ಆದರೆ ಒಂದು ಸಾರಿ ನೀವು ನಿಮ್ಮಲ್ಲಿ ಜಗನ್ಮಯಿಯನ್ನು ಕಂಡರೆ ಐಶ್ವರ್ಯವಾಗಲಿ. ಕೀರ್ತಿಯಾಗಲಿ, ಗೌರವವಾಗಲಿ, ಅವುಗಳ ಮೇಲೆ ನಿಮಗೆ ಆಸಕ್ತಿಯಾಗುವುದಿಲ್ಲ. ಎಲ್ಲವನ್ನು ಬಿಟ್ಟು ನೀವು ಆಕೆಯ ಬಳಿಗೆ ಓಡುವಿರಿ.

೫೭೪. ವೈರಾಗ್ಯದಲ್ಲಿ ಹಲವು ವಿಧಗಳಿವೆ. ಒಂದು ಪ್ರಪಂಚ ಕಷ್ಟದಿಂದ ಸಹಿಸಲಸದಳವಾದ ವ್ಯಥೆಯಿಂದ ಬರಬಹುದು. ಆದರೆ ಉತ್ತಮವಾದ ವೈರಾಗ್ಯ ಬರುವುದು, ಪ್ರಪಂಚದ ಎಲ್ಲಾ ಸುಖ ಭೋಗಗಳು ಒಬ್ಬನ ಸ್ವಾಧೀನದಲ್ಲಿದ್ದರೂ ಅವುಗಳೆಲ್ಲಾ ಕ್ಷಣಿಕ, ಅನುಭವಿಸಲು ಅವುಗಳು ಯೋಗ್ಯವಲ್ಲ ಎಂಬ ಭಾವದಿಂದ. ಎಲ್ಲಾ ಅವನಿಗೆ ಇದ್ದರೂ ಯಾವುದೂ ಇಲ್ಲ.

೫೭೫. ವೈರಾಗ್ಯದಲ್ಲಿ ಎಷ್ಟು ಬಗೆಗಳಿವೆ? ಸಾಧಾರಣವಾಗಿ ಎರಡು ಬಗೆಗಳಿವೆ. ಒಂದು ತೀವ್ರ ಮತ್ತೊಂದು ಸಾಧಾರಣ. ಒಂದೇ ರಾತ್ರಿಯಲ್ಲಿ ನೀರು ಬಂದು ತುಂಬುವವರೆಗೆ ಅಗೆದು ದೊಡ್ಡ ಕೊಳವನ್ನು ತೋಡುವಂತೆ ತೀವ್ರ ವೈರಾಗ್ಯ. ಸಾಧಾರಣ ವೈರಾಗ್ಯ ನಿಧಾನವಾಗಿ ಬೆಳೆಯುವುದು. ಅದು ಆಲಸ್ಯವಾಗಿರುವುದು. ಅದು ಯಾವಾಗ ಪೂರ್ಣವಾಗುವುದೋ ತಿಳಿಯದು.

೫೬೬. ಒಬ್ಬನು ಸ್ನಾನಕ್ಕಾಗಿ ನದಿಗೆ ಹೋಗುತ್ತಿದ್ದನು. ಆಗ ಯಾವನೊ ಒಬ್ಬನು ಹಲವು ದಿನಗಳಿಂದ ಪ್ರಪಂಚವನ್ನು ತ್ಯಜಿಸಿ, ಸನ್ಯಾಸಿಯಾಗಲು ಹವಣಿಸುತ್ತಿರುವನು ಎಂಬುದನ್ನು ಕೇಳಿದನು. ಆತನ ಮನಸ್ಸಿನಲ್ಲಿ ಸನ್ಯಾಸವೇ ಅತ್ಯುತ್ತಮ ಜೀವನವೆಂಬ ಭಾವ ವನ್ನು ದೃಢಪಡಿಸಿತು. ಅವನು ತಕ್ಷಣವೆ ತಾನು ಸನ್ಯಾಸಿಯಾಗಲು ನಿರ್ಧರಿಸಿ ಮನೆಗೆ ಹಿಂತಿರುಗದೆ ಅರ್ಧನಗ್ನಾವಸ್ಥೆಯಲ್ಲಿಯೇ ಹೊರಟು ಹೋದನು. ಇದು ತೀವ್ರ ವೈರಾಗ್ಯವನ್ನು ಉದಹರಿಸುವುದು.

೫೬೭. ಸಚ್ಚಿದಾನಂದ ಕಡಲಿನ ಒಳಗೆ ಮುಳುಗು. ಲೋಭ ಮತ್ತು ಕ್ರೋಧವೆಂಬ ಸಮುದ್ರದ ಮೊಸಳೆಗಳಿಗೆ ಅಂಜಬೇಡ. ವಿವೇಕ ಮತ್ತು ವೈರಾಗ್ಯವೆಂಬ ಅರಿಶಿನವನ್ನು ದೇಹಕ್ಕೆ ಚೆನ್ನಾಗಿ ಲೇಪಿಸಿಕೊ. ಈ ಮೊಸಳೆಗಳು ನಿನ್ನ ಸಮೀಪಕ್ಕೆ ಬರುವುದಿಲ್ಲ. ಅವು ಅರಿಶಿನ ಗಂಧವನ್ನು ಸಹಿಸುವುದಿಲ್ಲ.

## ದೀರ್ಘ ಪ್ರಯತ್ನ

೫೬೮. ರೈತರು ದನಗಳನ್ನು ಹೇಗೆ ಕೊಳ್ಳುವರು ಗೊತ್ತೆ? ಇಂತಹ ವಿಷಯಗಳಲ್ಲಿ ಅವರು ತುಂಬಾ ನಿಪುಣರು. ಒಳ್ಳೆಯದಾವುದು ಕೆಟ್ಟುದಾವುದು ಎಂಬುದನ್ನು ಪರೀಕ್ಷಿಸಬಲ್ಲರು. ಅವರು ಸುಮ್ಮನೆ ಬಾಲವನ್ನು ಮುಟ್ಟುವರು ಅವರ ಪರೀಕ್ಷೆ ಅತಿ ವಿಚಿತ್ರವಾದುದು. ಸತ್ತ್ವವಿಲ್ಲದ ಪ್ರಾಣಿಗಳು ನೆಗೆದಾಡುವುದಿಲ್ಲ. ತಾವು ನಿದ್ದೆಗೆ ಹೋಗು ವಂತೆ ನೆಲದ ಮೇಲೆ ಸುಮ್ಮನೆ ಮಲಗಿರುವುವು. ಆದರೆ ಸತ್ತ್ವವಿರುವ ಪ್ರಾಣಿಗಳು ತಮ್ಮನ್ನು ಹಾಗೆ ಮುಟ್ಟಿದರೆ ಸಾಕು, ನೆಗೆದಾಡುವುವು. ರೈತರು ಇಂತಹ ದನಗಳನ್ನು ಆರಿಸುತ್ತಾರೆ.

ಜೀವನದಲ್ಲಿ ಯಶಸ್ವಿಯಾಗಬೇಕಾದರೆ ಒಬ್ಬನಲ್ಲಿ ನಿಜವಾದ ಪುರುಷತ್ವವಿರಬೇಕು. ಆದರೆ ಸ್ವಲ್ಪವೂ ಸತ್ತ್ವವಿಲ್ಲದ ಹಲವು ಜನ ಇರುವರು. ಹಾಲಿನಲ್ಲಿ ನೆನೆದ ಅರಳಿನಂತೆ ಯಾವಾಗಲೂ ಮೃದು. ಇನ್ನೊಬ್ಬನನ್ನು ಬೇಡುವರು, ಒಳಗೆ ಪೌರುಷವಿಲ್ಲ, ದೀರ್ಘಪ್ರಯತ್ನ ಮಾಡುವುದಕ್ಕೆ ಶಕ್ತಿಯಿಲ್ಲ. ಅವರು ಜೀವನದಲ್ಲಿ ಸೋತವರು.

೫೬೯. ಬೆಸ್ತನು ದೊಡ್ಡ ಮೀನುಗಳನ್ನು ಹಿಡಿಯುವುದಕ್ಕಾಗಿ ಗಾಳವನ್ನು ನೀರಿಗೆ ಎಸೆದು ಬಹಳ ಹೊತ್ತು ಕಾಯುವನು. ಇದ

ರಂತೆಯೆ ತನ್ನ ಸಾಧನೆಯಲ್ಲಿ ಮುಂದುವರಿಯುವ ಭಕ್ತನು ಕೊನೆಗೆ ದೇವರನ್ನು ನೋಡುವುದರಲ್ಲಿ ಸಂದೇಹವಿಲ್ಲ.

೫೭೦. ವಂಶಾನುಗತವಾಗಿ ಬಂದ ರೈತನು ಹನ್ನೆಡುವರ್ಷ ಮಳೆ ಇಲ್ಲದೆ ಇದ್ದರೂ ಹೊಲ ಉಳುವುದನ್ನು ಬಿಡುವುದಿಲ್ಲ. ಆದರೆ ಆಗ ತಾನೆ ಬೇಸಾಯಕ್ಕೆ ತಿರುಗಿದ ವರ್ತಕನಾದರೋ ಒಂದು ಸಲಿ ಮಳೆ ಬೀಳದೆ ಇದ್ದರೆ ನಿರಾಶನಾಗುವನು. ನಿಜವಾದ ಭಕ್ತ ಜೀವನವೆಲ್ಲ ಸಾಧನೆ ಮಾಡಿ ದೇವರನ್ನು ಕಾಣದೆ ಇದ್ದರೂ ನಿರಾಶನಾಗುವುದಿಲ್ಲ.

೫೭೧. ಈಜನ್ನು ಕಲಿಯುವವನು ಕೆಲವುದಿನ ಅಭ್ಯಾಸ ಮಾಡಬೇಕು. ಒಂದು ದಿನ ಅಭ್ಯಾಸಮಾಡಿ ಯಾರೂ ಸಮುದ್ರದಲ್ಲಿ ಈಜುವುದಕ್ಕೆ ಸಾಹಸ ಮಾಡುವುದಿಲ್ಲ. ಸಚ್ಚಿದಾನಂದ ಸಾಗರದಲ್ಲಿ ನೀನು ಜಯಪ್ರದವಾಗಿ ಈಜಬೇಕಾದರೆ ಅದಕ್ಕೆ ಮುಂಚೆ ಎಷ್ಟೋ ಪ್ರಯತ್ನಗಳನ್ನು ಮಾಡಬೇಕು.

೫೭೨. ಹೊಸದಾಗಿ ಹುಟ್ಟಿದ ಕರು ನೇರವಾಗಿ ನಡೆಯಬೇಕಾದರೆ ಅದು ಮುಂಚೆ ಎಷ್ಟೋ ಸಾರಿ ತಾರಾಡಿ ಬೀಳುವುದು. ಇದರಂತೆಯೆ ಭಕ್ತಿಮಾರ್ಗದಲ್ಲಿ ಕೂಡ, ಕೊನೆಗೆ ಜಯ ಸಿಗುವವರೆಗೆ ಅನೇಕ ವೇಳೆ ಎಡವಬೇಕಾಗುವುದು.

೫೭೩. ಇಬ್ಬರು ಜೊತೆಯಾಗಿ ಶವಸಾಧನವೆಂಬ ಘೋರ ಸಾಧನೆಯ ಮೂಲಕ ಕಾಳಿಕಾದೇವಿಯನ್ನು ಪ್ರತ್ಯಕ್ಷ ಮಾಡಿಕೊಳ್ಳಲು ಯತ್ನಿಸಿದರು. ರಾತ್ರಿಯ ಮೊದಲನೆ ಝಾವದಲ್ಲಿ ಕಂಡ ಘೋರ ದೃಶ್ಯಗಳಿಂದ ಒಬ್ಬನು ಅಂಜಿ ಹುಚ್ಚನಾದನು. ಮತ್ತೊಬ್ಬನಿಗೆ ರಾತ್ರಿಯ ಕೊನೆಯಲ್ಲಿ ಜಗನ್ಮಾಯಿಯು ಪ್ರತ್ಯಕ್ಷಳಾದಳು. ಈತನು ಜಗನ್ಮಾಯಿಯನ್ನು ಕುರಿತು “ ತಾಯಿ ಅವನು ಏತಕ್ಕೆ ಹುಚ್ಚನಾದ? ” ಎಂದು ಕೇಳಿದನು. ಅದಕ್ಕೆ ಜಗನ್ಮಾಯಿ “ ಮಗು ನೀನು ಹಿಂದಿನ ಜನ್ಮದಲ್ಲಿ ಹಲವು ಬಾರಿ ಹುಚ್ಚನಾಗಿದ್ದೆ. ಕೊನೆಗೆ ನೀನು ನನ್ನನ್ನು ಕಂಡೆ ” ಎಂದಳು.

೫೭೪. ಪ್ರಶ್ನೆ–ಅಪರೂಪವಾಗಿ ಶಾಂತಿ ನಮಗೆ ದೊರಕುವುದು. ಆದರೆ ಅದು ಬಹಳ ಕಾಲ ನಿಲ್ಲುವುದಿಲ್ಲ. ಇದೇತಕ್ಕೆ?

ಉತ್ತರ–ಗಳುವನ್ನು ಉರಿಸಿ ಮಾಡಿದ ಬೆಂಕಿಯನ್ನು ಸದಾ ಊದದೇ ಇದ್ದರೆ ಬೆಂಕಿ ಆರಿಹೋಗುವುದು. ಆಧ್ಯಾತ್ಮಿಕವೆಂಬ ಅಗ್ನಿಯು ಆರದೆ ಇರಬೇಕಾದರೆ ಸತತವಾದ ಸಾಧನೆ ಅತ್ಯಾವಶ್ಯಕ.

೫೭೫. ಒಂದು ಮಣ್ಣಿನ ಮಡಕೆಯಲ್ಲಿ ನೀರನ್ನು ತುಂಬಿ ಗೂಡಿನಲ್ಲಿಟ್ಟರೆ ಕೆಲವು ದಿನಗಳಲ್ಲಿ ನೀರೆಲ್ಲಾ ಆವಿಯಾಗಿ ಹೋಗುವುದು. ಆದರೆ ಅದನ್ನು ನೀರಿನಲ್ಲಿ ಮುಳುಗಿಸಿಟ್ಟರೆ ನೀರಿನಲ್ಲಿ ಇರುವತನಕ ಭರ್ತಿಯಾಗಿರುವುದು. ನಿಮ್ಮ ಭಕ್ತಿಯೂ ಕೂಡ ಇದರಂತೆಯೇ. ಕೆಲವು ಕಾಲ ದೇವರನ್ನು ಪ್ರೀತಿಸಿ ನಂತರ ಆತನನ್ನು ಮರೆತು ಉಳಿದ ಕೆಲಸಗಳಲ್ಲಿ ನಿರತರಾದರೆ, ಹಿಂದೆ ಇದ್ದ ಪ್ರೀತಿ ಮಾಯವಾಗುವುದು ನಿನಗೆ ಕಾಣುವುದು. ಆದರೆ ಯಾವಾಗಲೂ ನಿನ್ನ ಮನಸ್ಸನ್ನು ದಿವ್ಯಪ್ರೇಮ ಮತ್ತು ಭಕ್ತಿಯಲ್ಲಿ ಮುಳುಗಿಸಿದ್ದರೆ ಯಾವಾಗಲೂ ನಿನ್ನ ಹೃದಯ ಅಂತಹ ಭಕ್ತಿಯಿಂದ ಪೂರಿತವಾಗಿರುವುದು.

೫೭೬. ಪಾತ್ರೆಯ ಕೆಳಗೆ ಬೆಂಕಿ ಇರುವವರೆಗೆ ಅದರಲ್ಲಿರುವ ಹಾಲು ಕುದಿಯುತ್ತಿರುತ್ತದೆ. ಬೆಂಕಿಯನ್ನು ತೆಗೆದರೆ ಹಾಲು ಸುಮ್ಮನಾಗುವುದು. ಇದರಂತೆಯೆ ಸಾಧಕನು ಸಾಧನೆಯಲ್ಲಿ ನಿರತನಾಗಿರುವವರೆಗೆ ಅವನಲ್ಲಿ ಸ್ಫೂರ್ತಿ ಉಕ್ಕುವುದು.

೫೭೭. ಮನುಷ್ಯನಲ್ಲಿ ದಿವ್ಯಭಾವ ಎಷ್ಟುಕಾಲ ನಿಲ್ಲುವುದು? ಕಬ್ಬಿಣ ಬೆಂಕಿಯಲ್ಲಿ ಇರುವವರೆಗೆ ಕೆಂಪಾಗಿರುವುದು. ಅದನ್ನು ಬೆಂಕಿಯಿಂದ ತೆಗೆದ ತಕ್ಷಣವೆ ಕಪ್ಪಾಗುವುದು. ಇದರಂತೆಯೆ ಮಾನವನು ದೇವರನ್ನು ಧ್ಯಾನಮಾಡುವವರೆಗೆ ಅವನಿಂದ ಆವೃತನಾಗಿರುವನು.

೫೭೮. ಮನಸ್ಸು ನೀಗ್ರೋ ಮನುಷ್ಯನ ಡೊಂಕು ಕೂದಲಿನಂತೆ. ಎಷ್ಟು ಸಲ ಬೇಕಾದರೂ ನೀವು ಅದನ್ನು ಎಳೆಯಿರಿ. ಅದನ್ನು ಬಿಟ್ಟ ತಕ್ಷಣವೇ ಅದು ಡೊಂಕಾಗುವುದು. ಮನಸ್ಸನ್ನು ಬಲಾತ್ಕಾರದಿಂದ ನೇರವಾಗಿ ಇಟ್ಟಿರುವ ತನಕ ಅದು ಹೇಳಿದಂತೆ ಕೇಳುವುದು. ಅದರಿಂದ ಪ್ರಯೋಜನವಾಗುವುದು. ನಿಮ್ಮ ಹಿಡಿತವನ್ನು ಸಡಿಲ ಮಾಡಿದ ತಕ್ಷಣವೆ ಅದು ತನ್ನ ಗುರಿಯಿಂದ ಹಿಂತಿರುಗುವುದು.

೫೭೯. ಹಿತ್ತಾಳೆಪಾತ್ರೆಯನ್ನು ಪ್ರತಿದಿನ ಉಜ್ಜದೆ ಇದ್ದರೆ ಅದು ಮಂಕಾಗುವುದು. ಇದರಂತೆಯೆ ಒಬ್ಬನು ಪ್ರತಿದಿನವೂ ದೇವರನ್ನು ಧ್ಯಾನಮಾಡದೆ ಇದ್ದರೆ ಅವನ ಮನಸ್ಸು ಶುದ್ಧವಾಗುವುದಿಲ್ಲ ಎಂದು ತೋತಾಪುರಿ ಹೇಳುತ್ತಿದ್ದನು. ಅದಕ್ಕೆ ಶ್ರೀ ಗುರುದೇವರು ಚಿನ್ನದ ಪಾತ್ರೆಯನ್ನು ಪ್ರತಿದಿನವೂ ತಿಕ್ಕಬೇಕಾಗಿಲ್ಲ ಎಂದು ಹೇಳಿದ್ದರು. ಯಾರು ದೇವರನ್ನು ಸೇರಿರುವರೋ ಅವನಿಗೆ ಪ್ರಾರ್ಥನೆ ಮತ್ತು ತಪಸ್ಸು ಬೇಕಾಗಿಲ್ಲ.

## ಸಾಧನೆ

೫೮೦. ಆಳವಿಲ್ಲದ ಕೊಳದಲ್ಲಿ ಶುದ್ಧವಾದ ನೀರನ್ನು ಕುಡಿಯಬೇಕಾದರೆ ಮೇಲಿರುವ ನೀರನ್ನು ಸ್ವಲ್ಪವೂ ಕದಡದೆ ಕುಡಿಯಬೇಕು. ಅದನ್ನು ಕಲಕಿದರೆ ಬಗ್ಗಡ ಮೇಲೆದ್ದು ನೀರನ್ನೆಲ್ಲಾ ಕದಡುವುದು. ನೀನು ಪರಿಶುದ್ಧನಾಗಿರಬೇಕೆಂದು ಆಶಿಸಿದರೆ ಅಚಲವಾದ ಶ್ರದ್ಧೆಯಿರಲಿ. ಕೆಲಸಕ್ಕೆಬಾರದ ವಾದವಿವಾದಗಳಲ್ಲಿ ಕಾಲಹರಣಮಾಡದೆ, ಕ್ರಮೇಣ ಸಾಧನೆಮಾಡುತ್ತಾ ಹೋಗು. ಇಲ್ಲದೆ ಇದ್ದರೆ ನಿನ್ನ ಮೊದಳು ಕೆಡುವುದು.

೪೮೧. ಜದುನಾಥಮಲ್ಲಿಕ ಮುಂತಾದ ಕಲ್ಕತ್ತೆಯ ಶ್ರೀಮಂತರ ಮನೆ ಆಸ್ತಿಯನ್ನು ಹಲವರು ವಿಚಾರಿಸುವರು. ಆದರೆ ಅವರನ್ನು ನೋಡಿ ಸ್ನೇಹ ಬೆಳಸಲಿಚ್ಛಿಸುವವರು ಅಪರೂಪ. ಇದರಂತೆಯೆ ಶಾಸ್ತ್ರವನ್ನು ಓದಿ ಧಾರ್ಮಿಕ ವಿಷಯಗಳನ್ನು ಮಾತನಾಡುವವರು ಬಹಳ. ಆದರೆ ದೇವರ ಹತ್ತಿರ ಹೋಗಲಿಚ್ಛಿಸುವವರು ಅಪರೂಪ.

೫೮೨. ನೀನು ಸೇರಬೇಕೆಂದಿರುವ ಗುರಿಗೆ ಸರಿಯಾಗಿ ಸನ್ನಾಹ ಮಾಡಿಕೊ. ಹಾಲಿನಲ್ಲಿ ಬೆಣ್ಣೆ ಇದೆ ಎಂದು ಸುಮ್ಮನೆ ಅರಚಿದರೆ ಬೆಣ್ಣೆ ಬರುವುದಿಲ್ಲ. ನಿನಗೆ ಬೆಣ್ಣೆ ಬೇಕಾದರೆ ಹಾಲನ್ನು ಮೊಸರು ಮಾಡಿ ಅದನ್ನು ಕಡೆಯಬೇಕು ನೀನು ದೇವರನ್ನು ನೋಡಬೇಕಾದರೆ ಸಾಧನೆಗೆ ಕೈಹಾಕು. "ಹೇ ಭಗವಂತ, ಹೇ ಭಗವಂತ!" ಎಂದು ಸುಮ್ಮನೆ ಕೂಗುವುದರಿಂದೇನು ಪ್ರಯೋಜನ?

೫೮೩. ಅರಮನೆಯಲ್ಲಿ ರಾಜನನ್ನು ನೋಡಬೇಕಾದರೆ ಅವನು ಅರಮನೆಯ ಹತ್ತಿರ ಹೋಗಿ ಎಲ್ಲಾ ಬಾಗಿಲುಗಳನ್ನು ದಾಟಿಹೋಗಬೇಕು. ಆದರೆ ಮೊದಲನೆಯ ಬಾಗಿಲನ್ನು ದಾಟಿದೊಡನೆಯೆ ದೊರೆ ಎಲ್ಲಿ? ಎಂದು ಕೇಳಿದರೆ ಅವನು ಕಾಣುವುದಿಲ್ಲ. ಏಳುಬಾಗಿಲುಗಳನ್ನು ದಾಟಿಹೋದರೆ ಆಗಮಾತ್ರ ಅವನನ್ನು ಕಾಣಬಹುದು.

೫೮೪. ಸಾಕ್ಷಾತ್ಕಾರಕ್ಕೆ ಪ್ರಯತ್ನ ಆವಶ್ಯಕ. ನಾನು ಒಂದು ದಿನ ಭಾವಸಮಾಧಿಯಲ್ಲಿ ಹಲಧಾರಪುಕುರವನ್ನು ನೋಡಿದೆನು. ಅಲ್ಲಿ ಒಬ್ಬ ಹಳ್ಳಿಯವನು ನೀರನ್ನು ತೆಗೆದುಕೊಳ್ಳುತ್ತಿದ್ದನು. ನೀರಿನ ಮೇಲಿದ್ದ ಪಾಚಿಯನ್ನು ತೆಗೆದುಕೊಂಡು ಪರೀಕ್ಷಿಸುತ್ತಿದ್ದನು. ಪಾಚಿಯನ್ನು ತೆಗೆಯದೆ ನೀರು ಹೇಗೆ ಸಿಕ್ಕುವುದಿಲ್ಲವೋ ಹಾಗೆಯೆ ಪರಮಾ

ತ್ಮನ ಮೇಲೆ ಭಕ್ತಿ ಮತ್ತು ಆತನ ಸಾಕ್ಷಾತ್ಕಾರ, ಅದಕ್ಕೆ ಪ್ರಯತ್ನ ಪಟ್ಟಿಲ್ಲದೆ ಸಿಕ್ಕುವುದಿಲ್ಲ. ಧ್ಯಾನ, ಜಪ, ಕೀರ್ತನೆ, ಧರ್ಮ, ಪೂಜೆ ಮುಂತಾದ ಪುಣ್ಯ ಕೆಲಸಗಳೆ ಅವನನ್ನು ಸೇರುವುದಕ್ಕೆ ಮಾರ್ಗ.

೫೮೫. ರಾಧಾಯಂತ್ರದ ಪೂಜೆ ಸಂದರ್ಭದಲ್ಲಿ ಶ್ರೀಕೃಷ್ಣನು ಕೂಡ ಅತಿ ಕಠಿಣ ಸಾಧನೆಯನ್ನು ಮಾಡಬೇಕಾಯಿತು. ಯಂತ್ರವೇ ಬ್ರಹ್ಮಯೋನಿ. ಅದರ ಪೂಜೆ ಮತ್ತು ಧ್ಯಾನವೇ ಸಾಧನೆ. ಈ ಬ್ರಹ್ಮ ಯೋನಿಯಿಂದ ಸಹಸ್ರಾರು ಲೋಕಗಳು ಹುಟ್ಟುವುವು.

೫೮೬. ಸಾಧನೆಯಲ್ಲಿ ಮೂರು ವಿಧಗಳಿರುವುವು. (೧) ಹಕ್ಕಿಯ ರೀತಿ (೨) ಕಪಿಯ ರೀತಿ (೩) ಇರುವೆಯ ರೀತಿ.

(೧) ಹಕ್ಕಿಯು ಹಣ್ಣನ್ನು ಕುಕ್ಕುತ್ತದೆ. ಅದು ಕೆಲವುವೇಳೆ ನೆಲದ ಮೇಲೆ ಬಿದ್ದು ತಿನ್ನುವುದಕ್ಕೆ ಹಕ್ಕಿಗೆ ಸಿಕ್ಕದಿರಬಹುದು. ಇದರಂತೆಯೆ ಕೆಲವು ಭಕ್ತರು ಬಹಳ ಅವಸರದಿಂದ ಸಾಧನೆಯನ್ನು ಮಾಡ ಬಯಸುವರು. ಆದು ಅನೇಕವೇಳೆ ತಮ್ಮ ಉದ್ದೇಶವನ್ನು ಹಾಳು ಮಾಡುವುದು.

(೨) ಬಾಯಲ್ಲಿ ಹಣ್ಣನ್ನು ಹಿಡಿದುಕೊಂಡು ಕೊಂಬೆಯಿಂದ ಕೊಂಬೆಗೆ ಹಾರುವುದು ಕಪಿಯ ಸ್ವಭಾವ. ಹಾರುವಾಗ ಅನೇಕವೇಳೆ ಅದು ಬಾಯಿಂದ ಜಾರುವುದು. ಇದರಂತೆಯೇ ಅನೇಕ ವೇಳೆ ಜೀವನದ ಬದಲಾವಣೆಯಿಂದ ದೃಶ್ಯ ಬದಲಾಯಿಸಿ ಸರಿಯಾದ ಹಿಡಿತವಿಲ್ಲದೆ ಇದ್ದರೆ ಅವನು ದಾರಿಯನ್ನು ತಪ್ಪುವನು.

(೩) ಇರುವೆ ಧಾನ್ಯದ ಕಾಳು ಇರುವ ಕಡೆಗೆ ನಿಧಾನವಾಗಿ ತಪ್ಪದೆ ಸಂಚರಿಸುತ್ತದೆ. ಅದನ್ನು ಗೂಡಿಗೆ ತಂದು ಸಾವಧಾನವಾಗಿ ತಿನ್ನುವುದು. ಇರುವೆಯಂತೆ ಇರುವ ಸಾಧನೆ ಅತ್ಯುತ್ತಮವಾದುದು. ಫಲವನ್ನು ಪಡೆಯುವ ಮತ್ತು ಆನಂದಿಸುವ ಒಂದು ನಿಶ್ಚಯ ಅದರಲ್ಲಿದೆ.

೫೮೭. ಮೀನು ಹಿಡಿಯಬೇಕೆಂದಿರುವವನು ಯಾವ ಕಟ್ಟೆ ಯಲ್ಲಿ ಮೀನು ಇದೆ ಎಂಬುದನ್ನು ತಿಳಿದುಕೊಳ್ಳಲು ಯತ್ನಿಸುವನು. ಆಗಲೆ ಆದರಲ್ಲಿ ಮೀನು ಹಿಡಿದಿರುವವರ ಹತ್ತಿರ ಹೋಗಿ ಕುತೂಹಲ ದಿಂದ “ ಈ ಕಟ್ಟೆಯಲ್ಲಿ ದೊಡ್ಡ ಮೀನುಗಳಿವೆಯೆ? ಅವುಗಳನ್ನು ಹಿಡಿಯಬೇಕಾದರೆ ಯಾವುದು ಒಳ್ಳೆಯ ಗಾಳದ ಹುಳ ” ಎಂದು

ಕೇಳುವನು. ಅವರಿಂದ ಬೇಕಾದ ಸಮಾಚಾರವನ್ನೆಲ್ಲಾ ತಿಳಿದುಕೊಂಡ ಮೇಲೆ ತನ್ನ ಗಾಳವನ್ನು ತೆಗೆದುಕೊಂಡು ಹೋಗಿ, ಅದನ್ನು ನೀರಿಗೆ ಎಸೆದು, ಬಹಳ ಉಪಾಯದಿಂದ ಮೀನನ್ನು ಆಕರ್ಷಿಸುವನು. ಕೊನೆಗೆ ಚೆನ್ನಾಗಿರುವ ದೊಡ್ಡ ಮೀನನ್ನು ಹಿಡಿಯುವನು. ಇದರಂತೆಯೆ ಮಹಾತ್ಮರ ಉಪದೇಶದಲ್ಲಿ ಸಂಪೂರ್ಣ ಶ್ರದ್ಧೆಯಿಟ್ಟು ಮನಸ್ಸೆಂಬ ಗಾಳಕ್ಕೆ ಭಕ್ತಿಯೆಂಬ ಹುಳುವನ್ನು ಸಿಕ್ಕಿಸಿ ಒಬ್ಬನು ಹೃದಯದಲ್ಲಿ ಪರಮಾತ್ಮನನ್ನು ಹಿಡಿಯಲು ಪ್ರಯತ್ನಿಸಬೇಕು. ಕಾಲ ಬರುವವರೆಗೆ ಸ್ವಲ್ಪವೂ ಬಿಡದೆ ಸಾಧನೆ ಮಾಡುತ್ತಿರಬೇಕು. ಆಗ ಮಾತ್ರ ಒಬ್ಬನು ಭಗವಂತನೆಂಬ ಮೀನನ್ನು ಹಿಡಿಯಬಲ್ಲನು.

೫೮೮. "ನಾನು ನಿಮಗೆ ಮಾಡಿದ ಅಪ್ಪಣೆಯನ್ನು ಚೂರೂ ಬಿಡದೆ ಮಾಡಲು ಸಾಧ್ಯವೆ? ನಿಜವಾಗಿ ನಾನು ನಿಮಗೆ ಹೇಳುತ್ತೇನೆ ಕೇಳಿ; ನಾನು ಹೇಳಿದುದರಲ್ಲಿ ಹದಿನಾರನೆ ಒಂದು ಭಾಗವನ್ನು ಅನುಷ್ಠಾನ ಮಾಡಿದರೂ ನಿಮಗೆ ಮುಕ್ತಿ ಸಿಕ್ಕುವುದರಲ್ಲಿ ಸಂದೇಹವಿಲ್ಲ" ಎಂದು ಶ್ರೀ ಗುರುದೇವರು ಹೇಳುತ್ತಿದ್ದರು.

೫೮೯. ಆತ್ಮಜ್ಞಾನಲಾಭಕ್ಕೆ ಸಾಧನೆ ಅತ್ಯಾವಶ್ಯಕ. ಆದರೆ ಸಂಪೂರ್ಣ ಶ್ರದ್ಧೆಯಿದ್ದರೆ ಸ್ವಲ್ಪ ಸಾಧನೆಯೆ ಸಾಕು.

೫೯೦. ಭಗವಂತನ ನಾಮದ ಶಕ್ತಿಯಲ್ಲಿ ಯಾರು ಒಮ್ಮೆ ನಂಬಿ ಅನವರತವೂ ಅದನ್ನು ಉಚ್ಚರಿಸುವುದಕ್ಕೆ ಬಯಸುವನೋ ಆಗ ವಿವೇಕ ಮತ್ತು ಇತರ ಯಾವ ಭಕ್ತಿಸಾಧನೆಯೂ ಅವನಿಗೆ ಅವಶ್ಯಕವಿಲ್ಲ. ಸಂಶಯಗಳೆಲ್ಲ ನಿವಾರಣೆಯಾಗುವುವು; ಮನಸ್ಸು ಶುದ್ಧವಾಗುವುದು. ಅವನ ನಾಮದ ಬಲದಿಂದ ಭಗವಂತನನ್ನು ಪಡೆಯಬಹುದು.

೫೯೧. ವೇದ ಮತ್ತು ಪುರಾಣಗಳನ್ನು ಓದಬೇಕು ಮತ್ತು ಕೇಳಬೇಕು. ಆದರೆ ತಂತ್ರದ ಬೋಧನೆಯಂತೆ ಆಚರಿಸಬೇಕು. ಹರಿನಾಮವನ್ನು ನೀವು ಬಾಯಿನಲ್ಲಿ ಉಚ್ಚಾರ ಮಾಡಬೇಕು. ಕಿವಿಯಲ್ಲಿ ಕೇಳಬೇಕು. ಕೆಲವು ರೋಗಕ್ಕೆ ಔಷಧಿ ಲೇಪಿಸುವುದು ಮಾತ್ರವಲ್ಲ. ಒಳಗೂ ಸೇವಿಸಬೇಕು.

೫೯೨. ಎರಡು ಬಗೆಯ ಸಿದ್ಧ ಪುರುಷರಿರುವರು. ಸಾಧನಸಿದ್ಧರು ಮತ್ತು ಕೃಪಾಸಿದ್ಧರು. ಒಳ್ಳೆಯ ಬೆಳೆಯನ್ನು ತೆಗೆಯಬೇಕಾದರೆ ಕೆಲವರು ತುಂಬಾ ಶ್ರಮಪಟ್ಟು ಕಾಲುವೆ ತೋಡಿ ನೀರನ್ನು ಹಾಯಿಸಬೇಕು. ಮತ್ತೆ ಕೆಲವರು ಅದೃಷ್ಟವಂತರು. ಈ ಕಷ್ಟವನ್ನು

ಪಡಬೇಕಾಗಿಲ್ಲ. ಏಕೆಂದರೆ ಮಳೆ ಬಂದು ಹೊಲವನ್ನು ನೀರಿನಿಂದ ತುಂಬುವುದು. ಮಾಯಾ ಬಂಧನದಿಂದ ತಪ್ಪಿಸಿಕೊಳ್ಳಬೇಕಾದರೆ ಮುಕ್ಕಾಲು ಪಾಲು ಜನರೆಲ್ಲಾ ಸತತ ಸಾಧನೆ ಮಾಡಬೇಕು. ಆದರೆ ಕೃಪಾಸಿದ್ಧರಿಗೆ ಆ ಕಷ್ಟವಿಲ್ಲ. ದೇವರ ಅನುಗ್ರಹದಿಂದ ಅವರು ಮುಕ್ತಿಯನ್ನು ಪಡೆಯುವರು. ಆದರೆ ಅಂತಹವರು ಅತಿ ವಿರಳ.

## ಏಕಾಗ್ರತೆ ಮತ್ತು ಧ್ಯಾನ

೫೯೩. ಯಾವಾಗಲೂ ಧ್ಯಾನ ಮತ್ತು ಮನನವನ್ನು ಬಿಡಬಾರದು.

೫೯೪. ಎಲ್ಲಾ ಕೆಲಸ ಬಿಟ್ಟು ಸಂಜೆಯ ಹೊತ್ತು ಧ್ಯಾನದಲ್ಲಿ ನಿರತರಾಗಬೇಕು. ಸ್ವಭಾವತಃ ದೇವರ ಆಲೋಚನೆ ಸಂಜೆಯ ಹೊತ್ತು ಮನಸ್ಸಿಗೆ ಬರುವುದು. ಸ್ವಲ್ಪ ಹೊತ್ತಿನ ಹಿಂದೆ ಎಲ್ಲಾ ಕಾಣುತ್ತಿತ್ತು. ಆದರೆ ಈಗ ಎಲ್ಲಾ ಕತ್ತಲೆಯಲ್ಲಿ ಅಡಗಿರುವುದು. ಇದನ್ನು ಮಾಡಿದವರು ಯಾರು? ಇಂತಹ ಆಲೋಚನೆ ಮನಸ್ಸಿಗೆ ಬರುವುದು. ಮಹಮ್ಮದೀಯರು ತಮ್ಮ ಕೆಲಸವನ್ನೆಲ್ಲ ಬಿಟ್ಟು ಸಂಜೆಯಹೊತ್ತು ಪ್ರಾರ್ಥನೆಗೆ ಕುಳಿತುಕೊಳ್ಳುವುದನ್ನು ನೋಡಿಲ್ಲವೆ?

೫೯೫. ಗಂಟು ಬಿಚ್ಚಿ ಚೆಲ್ಲಿಹೋದ ಸಾಸುವೆ ಕಾಳನ್ನು ಒಂದುಗೂಡಿಸುವುದು ಎಷ್ಟು ಕಷ್ಟವೋ, ಅದರಂತೆಯೆ, ಪ್ರಾಪಂಚಿಕ ವಸ್ತುಗಳನ್ನು ಕುರಿತು ಹಲವು ದಿಕ್ಕಿನಲ್ಲಿ ಹೋಗುವ ಮನಸ್ಸನ್ನು ಒಂದುಗೂಡಿಸುವುದು ಸುಲಭವಲ್ಲ.

೫೯೬. ಯಾರೂ ಅರಿಯದ ಸ್ಥಳದಲ್ಲಿಯೋ, ಕಾಡಿನ ನಿರ್ಜನ ಪ್ರದೇಶದಲ್ಲಿಯೋ, ಅಥವಾ ಮನಸ್ಸಿನ ಅಂತರಾಳದಲ್ಲಿಯೋ ದೇವರನ್ನು ಧ್ಯಾನಿಸಿ.

೫೯೭. ಮೊದಲು ಯಾವಾಗಲೂ ಏಕಾಂತ ಸ್ಥಳದಲ್ಲಿ ಮನಸ್ಸನ್ನು ಏಕಾಗ್ರ ಮಾಡಲು ಯತ್ನಿಸಬೇಕು. ಇಲ್ಲದೆ ಇದ್ದರೆ ಹಲವು ವಸ್ತುಗಳು ಅವನ ಮನಸ್ಸನ್ನು ಚದುರಿಸಬಹುದು. ನಾವು ನೀರು ಮತ್ತು ಹಾಲನ್ನು ಒಟ್ಟಿಗೆ ಸೇರಿಸಿದರೆ ಅದು ಬೆರೆತು ಹೋಗುವುದರಲ್ಲಿ ಸಂದೇಹವಿಲ್ಲ. ಆದರೆ ಹಾಲನ್ನು ಮೊಸರು ಮಾಡಿ ಅದರಿಂದ ಬೆಣ್ಣೆಯನ್ನು ತೆಗೆದು ಅದನ್ನು ನೀರಿನಲ್ಲಿ ಹಾಕಿದರೆ, ಅದರಲ್ಲಿ ಬೆರೆಯುವ ಬದಲು ಅದರ ಮೇಲೆ ತೇಲುವುದು. ಇದರಂತೆಯೆ ಸತತ ಅಭ್ಯಾಸ

ದಿಂದ ಮಾನಸಿಕ ಏಕಾಗ್ರತೆಯನ್ನು ಪಡೆದ ಮೇಲೆ, ಮನಸ್ಸು ಯಾವಾಗಲೂ ಬಾಹ್ಯ ವಿಷಯಗಳನ್ನು ಮೀರಿ ಅದು ಎಲ್ಲಾದರೂ ಇರಲಿ ದೇವರಲ್ಲಿ ನೆಲಸುವುದು.

೫೯೮. ಶ್ರೀ ಗುರುದೇವರು ಕೆಲವು ವೇಳೆ ತಮ್ಮ ಶಿಷ್ಯರಿಗೆ ಹೀಗೆ ಉಪದೇಶಿಸುತ್ತಿದ್ದರು : "ನೀನು ಧ್ಯಾನಮಾಡುವುದಕ್ಕೆ ಮುಂಚೆ ಕೆಲವು ಕಾಲ ನನ್ನನ್ನು ಕುರಿತು ಯೋಚಿಸು. ನಾನು ಏತಕ್ಕೆ ಹೀಗೆ ಹೇಳುತ್ತೇನೆ ಗೊತ್ತಿದೆಯೆ? ನಿಮಗೆ ನನ್ನ ಮೇಲೆ ಇರುವ ಶ್ರದ್ಧೆಗಾಗಿ. ನನ್ನ ಮೇಲೆ ನಿಮ್ಮ ಮನಸ್ಸು ಏಕಾಗ್ರವಾದರೆ ತಕ್ಷಣವೆ ದೇವರ ಕಡೆ ತಿರುಗುವುದು. ದನದ ಮಂದೆಯನ್ನು ನೋಡಿದಾಗ ದನ ಕಾಯುವವನ ನೆನಪು, ಮಗುವನ್ನು ನೋಡಿದಾಗ ತಂದೆಯ ನೆನಪು, ವಕೀಲನನ್ನು ನೋಡಿದಾಗ ನ್ಯಾಯಸ್ಥಾನದ ನೆನಪು ಆಗುವಂತೆ, ನಾವಿರಾರು ವಿಷಯಗಳಲ್ಲಿ ನಿರತವಾದ ಮನಸ್ಸು, ನನ್ನನ್ನು ಕುರಿತು ಆಲೋಚಿಸಿದಾಗ ಏಕಾಗ್ರವಾಗುವುದು. ಹಾಗೆ ಏಕಾಗ್ರವಾದ ಮನಸ್ಸನ್ನು ದೇವರ ಕಡೆಗೆ ತಿರುಗಿಸಿದರೆ, ನಿಜವಾದ ಧ್ಯಾನ ಸಾಧ್ಯವಾಗುವುದು.

೫೯೯. ಸುಲಭವಾಗಿ ಮನಸ್ಸನ್ನು ಏಕಾಗ್ರಗೊಳಿಸುವುದಕ್ಕೆ ಮಾರ್ಗವೆ, ಮೇಣದ ಬತ್ತಿಯ ದೀಪದ ಮೇಲೆ ಮನಸ್ಸನ್ನು ನಿಲ್ಲಿಸುವುದು. ಅದರ ಮಧ್ಯದಲ್ಲಿರುವ ನೀಲಿಯ ಭಾಗವೆ ಕಾರಣಶರೀರವನ್ನು ಹೋಲುವುದು. ಮನಸ್ಸನ್ನು ಅದರ ಮೇಲೆ ನಿಲ್ಲಿಸುವುದರಿಂದ ಏಕಾಗ್ರತೆಯನ್ನು ಸುಲಭವಾಗಿ ಪಡೆಯಬಹುದು. ನೀಲಿಯ ಜ್ಯೋತಿಯನ್ನು ಆವರಿಸಿರುವ ಪ್ರಕಾಶಮಾನವಾದ ಭಾಗವೆ ಸೂಕ್ಷ್ಮಶರೀರ. ಅದರ ಹೊರಗೆ ಇರುವುದೆ ಸ್ಥೂಲಶರೀರಕ್ಕೆ ಅನ್ವಯಿಸುವುದು.

೬೦೦. ತಮ್ಮ ಸಾಧನೆಯ ದಿನಗಳನ್ನು ಕುರಿತು ಅವರು ತಮ್ಮ ಶಿಷ್ಯರಿಗೆ ಹೀಗೆ ಹೇಳುತ್ತಿದ್ದರು : "ನನ್ನ ಹುಡುಗರೆ! ಕೇಳಿ, ಆಗ ದೇವರನ್ನು ಧ್ಯಾನಿಸುವುದಕ್ಕೆ ಮುಂಚೆ ನನ್ನ ಮನಸ್ಸಿನಲ್ಲಿರುವ ಕಲ್ಮಷಗಳನ್ನೆಲ್ಲಾ ತೊಳೆದಂತೆ ಕಲ್ಪಿಸಿಕೊಂಡು ಅಲ್ಲಿ ಇಷ್ಟದೇವತೆಯನ್ನು ಸ್ಥಾಪಿಸುತ್ತಿದ್ದೆ. ಇದರಂತೆ ಮಾಡಿ."

೬೦೧. ಧ್ಯಾನ ಮಾಡುವಾಗ, ನಿಮ್ಮ ಮನಸ್ಸನ್ನು, ಭಗವಂತನ ಪಾದ ಪದ್ಮಗಳೊಂದಿಗೆ ಒಂದು ರೇಷ್ಮೆ ದಾರದಿಂದ ಕಟ್ಟಿಹಾಕುತ್ತಿರುವೆನೆಂದು ಭಾವಿಸಬೇಕು. ಆದರೆ ನೂಲು ಏತಕ್ಕೆ ರೇಷ್ಮೆಯದಾಗಬೇಕು?

ಅವನ ಪಾದಪದ್ಮಗಳು ಅಷ್ಟು ಮೃದುವಾಗಿರುವುದರಿಂದ ಉಳಿದ ಯಾವ ದಾರವೆ ಆಗಲಿ ಅವನಿಗೆ ನೋವನ್ನುಂಟುಮಾಡುವುದು.

೬೦೨. ಪ್ರಾರಂಭಿಕರು ಧ್ಯಾನಮಾಡುವಾಗ ಕೆಲವು ವೇಳೆ ಯೋಗನಿದ್ರೆಯೆಂಬ ಒಂದು ನಿದ್ರೆಗೆ ವಶರಾಗುವರು. ಅಂತಹ ಸಮಯ ದಲ್ಲಿ ಅನೇಕ ವೇಳೆ ದಿವ್ಯದರ್ಶನಗಳನ್ನು ಕಾಣುವರು.

೬೦೩. ಸಾತ್ತ್ವಿಕ ಸ್ವಭಾವದವನು ಹೇಗೆ ಧ್ಯಾನ ಮಾಡು ತ್ತಾನೆ ಗೊತ್ತಿದೆಯೆ? ಅರ್ಧ ರಾತ್ರಿಯಲ್ಲಿ ಹಾಸಿಗೆ ಮೇಲೆ ಸೊಳ್ಳೆ ಪರದೆಯ ಒಳಗಡೆ ಯಾರಿಗೂ ಕಾಣದಂತೆ ಧ್ಯಾನ ಮಾಡುವನು.

೬೦೪. ಕಚ್ಚಾ ಔಷಧಿಯು ಸಾರಾಯಿಯೊಂದಿಗೆ ಬೆರೆತಿರು ವಂತೆ ನಿಮ್ಮ ಮನಸ್ಸು ದೇವರಲ್ಲಿ ಬೆರೆತಿರಲಿ.

೬೦೫. ಮನಸ್ಸಿನ ಚಂಚಲತೆಯೆಲ್ಲ ನಿಂತ ಮೇಲೆ ಕುಂಭಕ ಪ್ರಾಪ್ತಿಯಾಗುವುದು. ಕುಂಭಕ ಭಕ್ತಿಯೋಗದ ಮೂಲಕವೂ ಬರು ವುದು. ತೀವ್ರ ಭಗವತ್ಪ್ರೇಮದಿಂದಲೂ ಶ್ವಾಸ ನಿಲ್ಲುವುದು.

೬೦೬. ದೀರ್ಘ ಧ್ಯಾನ ಧ್ಯೇಯ ವಸ್ತುವಿನ ನಿಜವಾದ ಸ್ವಭಾವ ವನ್ನು ಪ್ರಕಟಗೊಳಿಸಿ ಧ್ಯಾನಿಸುವವನ ಆತ್ಮದ ಮೇಲೆ ಪರಿಣಾಮ ವನ್ನುಂಟುಮಾಡುವುದು.

೬೦೭. ಅವಧೂತನೊಬ್ಬನು ಒಂದು ಹುಲ್ಲುಗಾವಲಿನ ಹತ್ತಿರ ಮದುವೆಯ ಮೆರವಣಿಗೆಯೊಂದು ತಮ್ಮಟೆ ವಾಲಗಗಳೊಂದಿಗೆ ಅತಿ ವಿಜೃಂಭಣೆಯಿಂದ ಹೋಗುತ್ತಿದ್ದುದನ್ನು ನೋಡಿದನು. ಮೆರವಣಿಗೆಯು ಹೋಗುತ್ತಿದ್ದ ದಾರಿಯ ಸಮೀಪದಲ್ಲಿಯೇ ಬೇಡನೊಬ್ಬನು, ಹತ್ತಿರ ಹೋಗುತ್ತಿದ್ದ ಮೆರವಣಿಗೆಯನ್ನು ಒಂದು ಸಾರಿಯೂ ನೋಡದಷ್ಟು ಒಂದು ಹಕ್ಕಿಗೆ ಗುರಿಯಿಡುವುದರಲ್ಲಿ ನಿರತನಾಗಿದ್ದನು. ಅವಧೂತನು ಆ ಬೇಡನಿಗೆ ನಮಸ್ಕಾರ ಮಾಡುತ್ತ "ಸ್ವಾಮಿ ನೀವು ನನ್ನ ಗುರು ಗಳು. ನಾನು ಧ್ಯಾನಕ್ಕೆ ಕುಳಿತಾಗ ನನ್ನ ಮನಸ್ಸು ಧ್ಯಾನಿಸುವ ವಸ್ತುವಿನ ಮೇಲೆ, ಈಗ ನಿಮ್ಮ ಮನಸ್ಸು ಹಕ್ಕಿಯ ಮೇಲೆ ನಿರತ ವಾಗಿರುವಂತೆ ಇರಲಿ." ಎಂದನು.

೬೦೮. ಬೆಸ್ತರವನೊಬ್ಬನು ಒಂದು ಕೊಳದಲ್ಲಿ ಮೀನನ್ನು ಹಿಡಿ ಯುತ್ತಿದ್ದನು. ಅವಧೂತನು ಅವನ ಹತ್ತಿರ ಬಂದು "ಸಹೋದರನೆ ಕಾಶಿಗೆ ದಾರಿಯಾವುದು?" ಎಂದು ಕೇಳಿದನು. ಆ ಸಮಯದಲ್ಲಿ

ಮನುಷ್ಯನ ಮನಸ್ಸೆಲ್ಲಾ ಗಾಳದಮೇಲಿದ್ದಿತು. ದಾರಕ್ಕೆ ಕಟ್ಟಿದ್ದ ಬೆಂಡು, ಇನ್ನೇನು ಮೀನು ಹುಳುವನ್ನು ನುಂಗುವುದೆಂದು ತೋರುತ್ತಿದ್ದಿತು. ಆದಕ್ಕೆ ಅವನು ಏನೂ ಉತ್ತರಕೊಡಲಿಲ್ಲ. ಮೀನನ್ನು ಹಿಡಿದಾದ ಮೇಲೆ ಅವನು ತಿರುಗಿ "ಸ್ವಾಮಿ, ನೀವು ಹೇಳುತ್ತಿದ್ದುದು ಏನು?" ಎಂದು ಕೇಳಿದನು. ಅವಧೂತನು ಅವನಿಗೆ ನಮಸ್ಕರಿಸಿ, "ಸ್ವಾಮಿ ನೀವು ನನಗೆ ಗುರುಗಳು. ನಾನು ಪರಮಾತ್ಮನನ್ನು ಧ್ಯಾನಿಸುವುದಕ್ಕೆ ಕುಳಿತಾಗ ನಾನು ನಿಮ್ಮ ಮೇಲ್ಪಂಗ್ತಿಯನ್ನು ಅನುಸರಿಸುವೆನು. ಧ್ಯಾನ ಪೂರೈಸುವುದಕ್ಕೆ ಮುಂಚೆ ಮತ್ತಾವುದರಲ್ಲಿಯೂ ಆಸಕ್ತನಾಗದೆ ಇರುವೆನು" ಎಂದನು.

೬೦೯. ಬಕಪಕ್ಷಿಯು ಒಂದುದಿನ ಮೀನನ್ನು ಹಿಡಿಯುವುದಕ್ಕಾಗಿ ಕೊಳದ ತಡಿಯಲ್ಲಿ ನಡೆಯುತ್ತಿತ್ತು. ಅದರ ಹಿಂದೆ ಬೇಡನೊಬ್ಬನು ಬಾಣದಿಂದ ಅದಕ್ಕೆ ಗುರಿ ಕಟ್ಟುತ್ತಿದ್ದನು. ಆದರೆ ಪಕ್ಷಿಗೆ ಇದು ಸ್ವಲ್ಪವೂ ತಿಳಿಯಲಿಲ್ಲ. ಅವಧೂತನು ಬಕಪಕ್ಷಿಗೆ ನಮಸ್ಕರಿಸುತ್ತಾ "ನಾನು ಧ್ಯಾನಕ್ಕೆ ಕುಳಿತಾಗ ನಿನ್ನನ್ನು ಅನುಸರಿಸೋಣ. ನನ್ನ ಹಿಂದೆ ಏನು ಇದೆ ಎನ್ನುವುದನ್ನು ತಿರುಗಿ ನೋಡದಿರುವೆ" ಎಂದನು.

೬೧೦. ಯಾರು ಧ್ಯಾನಸಿದ್ಧರೋ ಅವರಿಗೆ ಮುಕ್ತಿ ಸಮೀಪದಲ್ಲಿಯೇ ಇದೆ ಎಂಬುದು ಹಿಂದಿನ ನಾಣ್ನುಡಿ. ಒಬ್ಬನು ಯಾವಾಗ ಧ್ಯಾನಸಿದ್ಧನಾಗುತ್ತಾನೆ ನಿನಗೆ ಗೊತ್ತಿದೆಯೆ? ಧ್ಯಾನಕ್ಕೆ ಕುಳಿತ ತಕ್ಷಣವೆ ಪರಂಜ್ಯೋತಿಯಿಂದ ಆವೃತ್ತನಾಗಿ ಅವನಾತ್ಮ ಭಗವಂತನೊಂದಿಗೆ ವಿಹರಿಸುವುದು.

೬೧೧. ಧ್ಯಾನಕ್ಕೆ ಕುಳಿತಾಗ ಮತ್ತಾವುದನ್ನು ಕೇಳಲಾರೆವೊ ಮತ್ತು ನೋಡಲಾರೆವೊ ಆಗ ತೀವ್ರ ಏಕಾಗ್ರತೆ ಲಭಿಸುವುದು. ಆಗ ಇಂದ್ರಿಯಗ್ರಹಣ ಮತ್ತು ಭಾವನೆಗಳು ಮಾಯವಾಗುವುವು. ಒಂದು ಹಾವು ದೇಹದ ಮೇಲೆ ಹರಿದಾಡಬಹುದು. ಆದರೂ ಅವನಿಗೆ ತಿಳಿಯುವುದಿಲ್ಲ. ಧ್ಯಾನಿಸುವವನು ಅಥವಾ ಹಾವು ಇವೆರಡಕ್ಕೂ ಇದು ತಿಳಿಯುವುದಿಲ್ಲ.

೬೧೨. ಧ್ಯಾನಮಾಡುವಾಗ ಯಾರಿಗೆ ಹಕ್ಕಿಗಳು ತನ್ನ ತಲೆಯ ಮೇಲೆ ಕುಳಿತುಕೊಂಡಿವೆ ಎನ್ನುವುದೂ ಕೂಡ ಮರೆಯುವಷ್ಟು ಬಾಹ್ಯ

ಪ್ರಜ್ಞೆ ಶೂನ್ಯವಾಗುವುದೋ ಅವನಿಗೆ ನಿಜವಾಗಿಯೂ ಪೂರ್ಣ ಧ್ಯಾನಶಕ್ತಿ ಹಸ್ತಗತವಾಗಿದೆ.

೬೧೩. ದೀರ್ಘಧ್ಯಾನದಲ್ಲಿ ಇಂದ್ರಿಯಗಳ ವ್ಯಾಪಾರವೆಲ್ಲವೂ ನಿಗ್ರಹಿಸಲ್ಪಡುವುವು. ಮನಸ್ಸಿನ ಬಾಹ್ಯಚಲನೆ ಸಂಪೂರ್ಣ ನಿಲ್ಲವುದು. ಹೋಗುವ ಬಾಗಿಲನ್ನು ಹಾಕಿದಂತಾಗುವುದು. ಪಂಚೇಂದ್ರಿಯಗಳ ವಿಷಯಗಳೆಲ್ಲಾ ಹೊರಗೆ ಕಾಣದಂತೆ ಬಿದ್ದಿರುವುವು. ಮೊದಲು ಧ್ಯಾನ ಮಾಡುವಾಗ ಇಂದ್ರಿಯ ವಸ್ತುಗಳು ಕಣ್ಣಿಗೆ ಕಾಣುವುವು. ಆದರೆ ಧ್ಯಾನ ದೀರ್ಘವಾದಾಗ ಅವುಗಳು ಏಳುವುದಿಲ್ಲ. ಒಳಗೆ ಪ್ರವೇಶಕ್ಕೆ ಅಪ್ಪಣೆಯಿಲ್ಲದಂತೆ ಅವು ಹೊರಗೆ ಬಿದ್ದಿರುವುವು.

೬೧೪. ಇದರ ರಹಸ್ಯವೇನೆಂದರೆ ನೀವು ಯಾವ ಮಾರ್ಗವನ್ನಾದರೂ ಸಾಕ್ಷಾತ್ಕಾರಕ್ಕೆ ಅನುಸರಿಸಬಹುದು. ಮನಸ್ಸು ಸಂಪೂರ್ಣವಾಗಿ ಶಾಂತವಾಗುವವರೆಗೆ ಐಕ್ಯತೆ ಲಭಿಸುವುದಿಲ್ಲ. ಮನಸ್ಸು ಯಾವಾಗಲೂ ಯೋಗಿಯ ಅಧೀನದಲ್ಲಿರುವುದು, ಯೋಗಿಯು ಮನಸ್ಸಿನ ಅಧೀನದಲ್ಲಿಲ್ಲ.

# ಅಧ್ಯಾಯ ೧೩

## ದೇವರಿಗಾಗಿ ಹಂಬಲ

### ದೇವರಿಗಾಗಿ ಹುಚ್ಚನಾಗು

೬೧೫. ನೀನು ಹುಚ್ಚನಾಗಬೇಕಾದರೆ ವಿಷಯವಸ್ತುಗಳಿಗಾಗಿ ಆಗಬೇಡ. ಭಗವಂತನ ಮೇಲಿನ ಪ್ರೇಮದಿಂದ ಹುಚ್ಚನಾಗು.

೬೧೬. ಕೆಲವರು ತಮಗೆ ಮಕ್ಕಳಾಗಲಿಲ್ಲವೆಂದು ಕಣ್ಣೀರಿನ ಕೋಡಿಯನ್ನು ಸುರಿಸುವರು. ಮತ್ತೆ ಕೆಲವರು ತಮಗೆ ಐಶ್ವರ್ಯಪ್ರಾಪ್ತಿಯಾಗಲಿಲ್ಲವೆಂದು ಕೊರಗಿ ಸಾಯುತ್ತಾರೆ. ಅಯ್ಯೋ, ಆದರೆ ದೇವರನ್ನು ನಾನು ಕಂಡಿಲ್ಲವೆಂದು ಎಷ್ಟು ಜನರು ವ್ಯಥೆಪಡುವರು? ನಿಜವಾಗಿಯೂ ಕೆಲವು ಜನ ಮಾತ್ರ. ಯಾರು ಅವನನ್ನು ಹುಡುಕುತ್ತಾರೆಯೊ ಅವನಿಗಾಗಿ ಹಂಬಲಿಸುತ್ತಾರೆಯೊ ಅವರು ನಿಜವಾಗಿಯೂ ಅವನನ್ನು ಹೊಂದುವರು.

೬೧೭. ಯಾರು ದೇವರಿಗಾಗಿ ಹಂಬಲಿಸುತ್ತಿರುವರೋ ಅವರು ಅನ್ನ ನೀರನ್ನು ಬಿಟ್ಟು, ಕೆಲಸಕ್ಕೆ ಬಾರದ ವಸ್ತುಗಳ ಕಡೆಗೆ ಮನಸ್ಸನ್ನು ಕೊಡಲಾರರು.

೬೧೮. ಯಾರಿಗೆ ಬಾಯಾರಿಕೆಯಾಗಿರುವುದೋ ಅವರು ನದಿಯ ನೀರನ್ನು ಬಗ್ಗಡವೆಂದು ತಿರಸ್ಕರಿಸುವುದಿಲ್ಲ. ಅಥವಾ ತಿಳಿ ನೀರನ್ನು ಪಡೆಯಲು ಒಂದು ಭಾವಿಯನ್ನು ತೋಡಲೆತ್ನಿಸುವುದಿಲ್ಲ. ಇದರಂತೆಯೆ ಯಾರಿಗೆ ನಿಜವಾದ ಆಧ್ಯಾತ್ಮಿಕ ಬಾಯಾರಿಕೆಯಾಗಿದೆಯೊ ಅವರು ಹತ್ತಿರವಿರುವ ಧರ್ಮವನ್ನು ಅಲ್ಲಗಳೆಯುವುದಿಲ್ಲ. ಅಥವಾ ತಮಗಾಗಿ ಬೇರೊಂದು ಧರ್ಮವನ್ನು ಸ್ಥಾಪಿಸುವುದಿಲ್ಲ. ನಿಜವಾದ ಬಾಯಾರಿಕೆಯಾದವನಿಗೆ ಯೋಚಿಸುವುದಕ್ಕೆ ಕಾಲವೆ ಇರುವುದಿಲ್ಲ. ನಿಜವಾದ ವ್ಯಾಕುಲತೆಯ ಸ್ವಭಾವ ಇದು.

೬೧೯. ಕೃಪಣ ಹಣಕ್ಕಾಗಿ ಆಶಿಸುವಂತೆ ನಿನ್ನ ಹೃದಯ ದೇವರಿಗಾಗಿ ಕಾತರಿಸಲಿ.

೬೨೦. ನೀರಿನಲ್ಲಿ ಮುಳುಗಿರುವವನು ಉಸಿರಾಡುವುದಕ್ಕೆ ಆಶಿಸುವಂತೆ ಒಬ್ಬನು ದೇವರನ್ನು ಕಾಣುವುದಕ್ಕೆ ಹಂಬಲಿಸಬೇಕು.

೬೨೧. ದೇವರನ್ನು ಪಡೆಯಬೇಕಾದರೆ ಎಂತಹ ಪ್ರೇಮ ಬೇಕು ಗೊತ್ತಿದೆಯೆ? ತಲೆಗೆ ಗಾಯವಾದ ನಾಯಿ ಭಯದಿಂದ ಓಡುವಂತೆ ಭಗವಂತನಿಗಾಗಿ ಒಬ್ಬನು ವ್ಯಥೆ ಪಡಬೇಕು.

೬೨೨. ಎಲೆ ಮನಸ್ಸೆ, ಜಗನ್ಮಯಿಯನ್ನು ಧೃಡವಿಶ್ವಾಸದಿಂದ ಪ್ರಾರ್ಥಿಸು. ಅವಳು ಎಷ್ಟುಬೇಗ ನಿನ್ನೆಡೆಗೆ ಓಡಿಬರುವಳೆಂಬುದನ್ನು ನೋಡುವೆ. ಒಬ್ಬನು ಹೃತ್ಪೂರ್ವಕವಾಗಿ ದೇವರನ್ನು ಬೇಡಿದರೆ ಅವನು ಬರದೆ ಇರಲಾರ.

೬೨೩. ನಮ್ಮ ಭಗವತ್‌ಭಕ್ತಿ ಎಷ್ಟು ಧೃಢವಾಗಿರಬೇಕು ಗೊತ್ತಿದೆಯೆ? ಪತಿವ್ರತೆಗೆ ತನ್ನ ಪ್ರಿಯತಮನ ಮೇಲೆ ವಿಶ್ವಾಸ, ಜಿಪುಣನಿಗೆ ತನ್ನ ಹಣದ ಮೇಲಿರುವ ಆಸಕ್ತಿ, ಪ್ರಾಪಂಚಿಕರಿಗೆ ವಿಷಯ ವಸ್ತುಗಳ ಮೇಲಿರುವ ಆಸಕ್ತಿ, ಇಂತಹ ಆಸಕ್ತಿಗಳ ಹತ್ತರಷ್ಟು ನಿಮಗೆ ದೇವರ ಮೇಲೆ ಇರುವ ಪ್ರೇಮವಾದರೆ, ಆಗ ನೀನು ಅವನನ್ನು ಪಡೆಯುವೆ.

೬೨೪. ಏಸುಕ್ರಿಸ್ತನು ಒಂದು ದಿನ ಕೆರೆಯ ದಡದ ಮೇಲೆ ಹೋಗುತ್ತಿದ್ದನು. ಭಕ್ತನೊಬ್ಬನು ಅವನನ್ನು ಸಮೀಪಿಸಿ, "ಹೇ

ಸ್ವಾಮಿ, ದೇವರನ್ನು ಹೇಗೆ ಪಡೆಯಬಹುದು'' ಎಂದು ಕೇಳಿದನು. ತಕ್ಷಣವೆ ಕ್ರೈಸ್ತನು ಆತನನ್ನು ಸಮುದ್ರದ ನೀರಿನಲ್ಲಿ ಮುಳುಗಿಸಿದನು. ಕೆಲವು ಕ್ಷಣದಮೇಲೆ ಅವನನ್ನು ಮೇಲಕ್ಕೆ ಬಿಟ್ಟನು. ಕೈಗಳಿಂದ ಅವನನ್ನು ಎಚ್ಚರಿಸಿ, "ಹೇಗಿತ್ತು" ಎಂದನು. ಭಕ್ತನು "ನನ್ನ ಕೊನೆಗಾಲ ಬಂದಂತೆ ಇತ್ತು, ಅವಸ್ಥೆ ತುಂಬಾ ದಾರುಣವಾಗಿತ್ತು" ಎಂದನು. ಆಗ ಕ್ರೈಸ್ತನು "ನೀನು ಕ್ಷಣಕಾಲ ಉಸಿರಾಡುವುದಕ್ಕೆ ಹೇಗೆ ಹಂಬಲಿಸುತ್ತಿದ್ದಯೊ ಅದರಂತೆ ದೇವರಿಗಾಗಿ ಹಂಬಲಿಸಿದರೆ ದೇವರನ್ನು ಕಾಣುವೆ" ಎಂದನು.

೬೨೫. ನಾನು ಈ ಜನ್ಮದಲ್ಲಿಯೇ ದೇವರನ್ನು ಕಾಣಬೇಕು. ಹೌದು ಇನ್ನು ಮೂರುದಿನಗಳಲ್ಲಿ ದೇವರನ್ನು ಕಾಣಬೇಕು. ಇಲ್ಲ ಒಂದುಸಲಿ ಅವನ ನಾಮೋಚ್ಚಾರದಲ್ಲಿಯೇ ಅವನನ್ನು ಕಾಣಬೇಕು. ಇಂತಹ ತೀವ್ರ ಪ್ರೇಮದಿಂದ ಭಕ್ತನು ದೇವರ ಲಕ್ಷ್ಯವನ್ನು ತನ್ನೆಡೆಗೆ ಸೆಳೆಯಬಹುದು. ಬೇಗ ಅವನನ್ನು ಪಡೆಯಬಹುದು. ಆದರೆ ತಮ್ಮ ಪ್ರೇಮದಲ್ಲಿ ಮಂದಗಾಮಿಗಳಾದ ಭಕ್ತರು ನಿಜವಾಗಿಯೂ ಅವನನ್ನು ಕಾಣಬೇಕಾದರೆ ಯುಗಾಂತರಗಳಾಗುವುವು.

೬೨೬. ಮೋಕ್ಷವು ಈ ಜನ್ಮದಲ್ಲಿಲ್ಲದಿದ್ದರೆ ಇನ್ನೊಂದು ಜನ್ಮದಲ್ಲಿ ಸಿಕ್ಕುವುದು ಎಂಬ ಸೋಮಾರಿತನವೇಕೆ? ಭಕ್ತಿಯಲ್ಲಿ ಇಂತಹ ಸೋಮಾರಿತನವಿರಬಾರದು. ಈ ಜನ್ಮದಲ್ಲಿಯೆ ಇದೇ ಕ್ಷಣದಲ್ಲಿಯೆ ನಾನು ಅವನನ್ನು ಕಾಣಬೇಕೆಂದು ದೃಢಪ್ರತಿಜ್ಞೆ ಮಾಡುವವಗರೆಗೂ ಗುರಿಯನ್ನು ಮುಟ್ಟಲಾರೆವು. ಹಳ್ಳಿಯ ಕಡೆ ರೈತರು ದನಗಳನ್ನು ಕೊಳ್ಳುವುದಕ್ಕೆ ಹೋಗುವಾಗ ಮೊದಲು ಅದರ ಬಾಲವನ್ನು ಮುಟ್ಟುವರು. ಕೆಲವು ಎತ್ತುಗಳು ಇದನ್ನು ಗಮನಕ್ಕೆ ತಂದುಕೊಳ್ಳುವುದಿಲ್ಲ. ತಮ್ಮ ದೇಹವನ್ನು ಅಲುಗಾಡಿಸದೆ ನೆಲದಮೇಲೆಯೇ ಮಲಗಿರುವುವು. ಇವು ಕೆಲಸಕ್ಕೆ ಬರುವುದಿಲ್ಲವೆಂದು ಅವನಿಗೆ ಗೊತ್ತಾಗುತ್ತದೆ. ಆದರೆ ಮತ್ತೆ ಕೆಲವು ದನಗಳು ಬಾಲವನ್ನು ಮುಟ್ಟಿದೊಡನೆಯೆ ನೆಗೆದಾಡುವುದಕ್ಕೆ ಪ್ರಾರಂಭಿಸುವುವು. ಇಂತಹ ದನ ಒಳ್ಳೆಯುವೆಂದು ಅವರಿಗೆ ಗೊತ್ತಾಗುತ್ತದೆ. ಇಂತಹವುಗಳನ್ನು ಅವರು ಕೊಳ್ಳುವರೇ ಹೊರತು ಸೋಮಾರಿದನಗಳನ್ನು ಕೊಳ್ಳುವುದಿಲ್ಲ. ಶಕ್ತಿಯನ್ನು ಸಂಗ್ರಹಿಸಿ ಧೃಢವಾದ ವಿಶ್ವಾಸದಿಂದ ಈ ಕ್ಷಣವೇ ನಾನು ದೇವರನ್ನು ಕಾಣುತ್ತೇವೆಂದು ಹೇಳಿ. ಆಗ ಮಾತ್ರ ನೀವು ಜಯಶೀಲರಾಗುವಿರಿ.

## ದೇವರನ್ನು ಪಡೆಯುವುದಕ್ಕೆ ಮುಖ್ಯವಾದ ನಿಯಮಗಳು

೬೨೭. ಮಾಯಾಬಂಧನದಿಂದ ಪಾರಾಗಬೇಕಾದರೆ ನಾವು ಏನನ್ನು ಅನುಸರಿಸಬೇಕು? ಅದರಿಂದ ಪಾರಾಗಬೇಕೆಂದು ವ್ಯಾಕುಲ ಪಡುವವರಿಗೆ ದೇವರು ತಾನೇ ದಾರಿ ತೋರುವನು. ನಿರಂತರವಾದ ವ್ಯಾಕುಲ ಒಂದೇ ಬೇಕಾಗಿರುವುದು.

೬೨೮. "ಯಾವುದರ ಮೂಲಕ ನಾವು ಅವನನ್ನು ಕಾಣ ಬಹುದು?" ಎಂದು ಭಕ್ತನೊಬ್ಬನು ಶ್ರೀ ಗುರುದೇವರನ್ನು ಕೇಳಿದನು. ಅದಕ್ಕೆ ಅವರು ಹೀಗೆಂದರು: "ಅತಿ ತೀವ್ರ ವ್ಯಾಕುಲತೆಯಿಂದ ನೀನು ಅವನಿಗಾಗಿ ಅಳಬಲ್ಲೆಯ? ಮನುಷ್ಯರು, ಮಕ್ಕಳು ಹೆಂಡತಿ ಐಶ್ವರ್ಯ ಮುಂತಾದುವುಗಳಿಗಾಗಿ ಕೊಡದಲ್ಲಿ ತುಂಬುವಷ್ಟು ಕಣ್ಣೀರನ್ನು ಕರೆ ಯುವರು. ಆದರೆ ದೇವರಿಗಾಗಿ ಯಾರು ಅಳುವರು? ಮಗು ಆಟದ ಸಾಮಾನಿನಲ್ಲಿ ಮಗ್ನವಾಗಿರುವತನಕ ತಾಯಿ ಅಡಿಗೆ ಮುಂತಾದ ಮನೆ ಗೆಲಸದಲ್ಲಿ ನಿರತಳಾಗಿರುವಳು. ಆದರೆ ಮಗುವಿಗೆ ಆಟದ ಸಾಮಾನಿನಲ್ಲಿ ಬೇಸರವಾದಾಗ ಅದನ್ನು ಎಸೆದು ಜೋರಾಗಿ ತಾಯಿಗಾಗಿ ಕೂಗಿಕೊ ಳ್ಳುವುದು. ಆಗ ತಾಯಿಯು ಹೆಚ್ಚುಕಾಲ ಅಡಿಗೆ ಮನೆಯಲ್ಲಿರಲಾ ರಳು. ಒಲೆಯ ಮೇಲಿನಿಂದ ಅನ್ನದ ಪಾತ್ರೆಯನ್ನೂ ಕೂಡ ಬಹುಶಃ ಕೆಳಗಿಟ್ಟು ಓಡಿಬಂದು ಮಗುವನ್ನು ಎತ್ತಿಕೊಳ್ಳುವಳು."

೬೨೯. ಯಾರ ಏಕಾಗ್ರತೆ ಮತ್ತು ವ್ಯಾಕುಲತೆ ಅತಿ ತೀವ್ರ ವಾಗಿರುವುದೊ ಅವರು ದೇವರನ್ನು ಬೇಗ ಕಾಣುವರು.

೬೩೦. ಈ ಕಲಿಯುಗದಲ್ಲಿ ದೇವರನ್ನು ನೋಡಬೇಕೆಂದು ಮೂರು ದಿನಗಳು ತೀವ್ರ ವ್ಯಾಕುಲಪಟ್ಟರೆ ಆತನ ಅನುಗ್ರಹವನ್ನು ಪಡೆಯಬಹುದು.

೬೩೧. ಚಂದ್ರ ಮಾವನು ಎಲ್ಲಾ ಮಕ್ಕಳಿಗೂ ಮಾವ. ಇದ ರಂತೆಯೆ ದೇವರು ಎಲ್ಲರಿಗೂ ಸೇರಿದವನು. ಎಲ್ಲರಿಗೂ ದೇವರನ್ನು ಪ್ರಾರ್ಥಿಸುವುದಕ್ಕೆ ಅಧಿಕಾರವಿದೆ ಯಾರು ಅವನನ್ನು ಪ್ರಾರ್ಥಿಸು ವರೋ ಅವರು ಅವನನ್ನು ನೋಡಿ ಧನ್ಯರಾಗುವರು ನೀನು ಅವನನ್ನು ಪ್ರಾರ್ಥಿಸಿದರೆ ನೀನೂ ಕೂಡ ಅವನನ್ನು ನೋಡುವೆ.

೬೩೨. ನಾನು ನಿಜವಾಗಿ ನಿಮಗೆ ಹೇಳುತ್ತೇನೆ ಕೇಳಿ: ಯಾರಿಗೆ ದೇವರು ಬೇಕೋ ಅವರಿಗೆ ಅವನು ಸಿಕ್ಕುತ್ತಾನೆ. ನಿಜವಾದ

ಉತ್ಸಾಹದಿಂದ ಮೂರು ದಿನಗಳು ಪ್ರಯತ್ನಪಡಿ. ನೀವು ಖಂಡಿತವಾಗಿ ಮುಂದುವರಿಯುವಿರಿ.

೬೩೩. ಅಚಲವಾದ ಭಕ್ತಿ, ವಜ್ರೋಪಮ ಶ್ರದ್ಧೆಯನ್ನು ದಯ ಪಾಲಿಸೆಂದು ಜಗನ್ಮಾತೆಯನ್ನು ಪ್ರಾರ್ಥಿಸಿ.

೬೩೪. ಸಾಧಕನ ಶಕ್ತಿ ಇರುವುದೆಲ್ಲಿ? ಅವನು ದೇವರ ಮಗು, ಕಂಬನಿಯೆ ಅವನ ಪರಮ ಶಕ್ತಿ. ಅತ್ತು ಬೇಡುವ ಮಗುವಿನ ಆಶೆಗ ಳನ್ನು ತಾಯಿ ತೃಪ್ತಿಮಾಡುವಂತೆ ಭಗವಂತನು ಯಾವುದಕ್ಕಾಗಿ ತನ್ನ ಭಕ್ತನು ಅಳುತ್ತಿರುವನೋ ಅದನ್ನು ಈಡೇರಿಸುವನು.

೬೩೫. ಒಂದು ದಿನ ಒಬ್ಬ ಮನುಷ್ಯನು ಶ್ರೀಗುರುದೇವರಿಗೆ ಹೀಗೆ ಹೇಳಿದನು: "ನನಗೆ ಈಗ ಐವತ್ತೈದು ವರುಷ. ಹದಿ ನಾಲ್ಕು ವರುಷಗಳಿಂದ ಅವನನ್ನು ಹುಡುಕುವುದರಲ್ಲಿ ನಿರತನಾಗಿರು ವೆನು. ನನ್ನ ಗುರುಗಳ ಬುದ್ಧಿವಾದವನ್ನು ಅನುಸರಿಸಿದೆನು. ಎಲ್ಲಾ ತೀರ್ಥಯಾತ್ರೆಗಳನ್ನೂ ಮಾಡಿದೆನು. ಎಷ್ಟೋ ಜನ ಸಾಧುಸಂತರನ್ನು ನೋಡಿಯೂ ಆಯಿತು. ಆದರೂ ನನಗೆ ಏನೂ ಲಭಿಸಲಿಲ್ಲ." ಇವನ್ನು ಕೇಳಿ ಶ್ರೀರಾಮಕೃಷ್ಣರು ಹೀಗೆ ಹೇಳಿದರು: "ನಾನು ನಿನಗೆ ಭರವಸೆ ಕೊಡುತ್ತೇನೆ. ಯಾರು ಅವನಿಗಾಗಿ ಕಾತುರರಾಗಿರುವರೋ ಅವರು ಅವನನ್ನು ಪಡೆಯುತ್ತಾರೆ. ನನ್ನನ್ನು ನೋಡಿ ಧೈರ್ಯತಾಳು."

೬೩೬. ಮಗು, ತಾಯಿಗೆ, "ಅಮ್ಮಾ ನನಗೆ ಹಸಿವಾದಾಗ ಎಬ್ಬಿಸು" ಎಂದಿತು. ಅದಕ್ಕೆ ತಾಯಿ "ಮಗು, ಹಸಿವೇ ನಿನ್ನನ್ನು ಎಬ್ಬಿಸುವುದು" ಎಂದಳು.

೬೩೭. ಮಗು ಆಟದ ಸಾಮಾನಿಗೆ ಮತ್ತು ಕಾಸಿಗೆ ತಾಯಿ ಯನ್ನು ಬೇಡಿ ಕಾಡುವಂತೆ, ಯಾರು ಏನನ್ನೂ ಅರಿಯದ ಎಳೆಯ ಮಗುವಿನಂತೆ, ದೇವರನ್ನು ಆತನು ತನ್ನ ಅತಿನಿಕಟ ಬಂಧುವೆಂದು, ಅತಿ ಪ್ರೀತಿಪಾತ್ರನೆಂದು ತಿಳಿದು, ಆತನಿಗಾಗಿ ಅಂತರಂಗದಲ್ಲಿ ಅತಿ ತೀವ್ರವಾಗಿ ವ್ಯಾಕುಲಪಡುವರೋ ಅವರಿಗೆ, ಕೊನೆಗೆ ಅವನು ಪ್ರತ್ಯಕ್ಷನಾಗುವನು.

೬೩೮. ಕೃಷ್ಣನ ಜೀವನವನ್ನು ವಿವರಿಸುವ ಜಾತ್ರೆಯ ಆಟ ಮದ್ದಲೆ ಹೊಡೆಯುತ್ತಾ "ಹೆ, ಕೃಷ್ಣ ಬಾ! ನನ್ನ ಪ್ರಿಯನೆ ಬಾ!" ಎಂಬ ಹಾಡಿನಿಂದ ಮೊದಲಾಗುವುದು. ಆದರೆ ಕೃಷ್ಣನ ಪಾತ್ರವನ್ನು ಹಾಕುವವನು ಇದನ್ನು ಲೆಕ್ಕಿಸುವುದೇ ಇಲ್ಲ. ರಂಗಭೂಮಿಯ ಹಿಂದೆ

ಇರುವ ನೇಪಥ್ಯ ಮಂದಿರದಲ್ಲಿ ಗುಡಿಗುಡಿ ಕುಡಿಯುತ್ತ ಹರಟೆಯನ್ನು ಹೊಡೆಯುತ್ತಿರುವನು. ಈ ಶಬ್ದ ನಿಂತು ಭಕ್ತ ನಾರದನು ಪ್ರೇಮೋನ್ಮತ್ತನಾಗಿ ಮಧುರವಾಗಿ ಮೃದುಸ್ವರದಲ್ಲಿ ಕೃಷ್ಣನನ್ನು ಮೈದೋರಬೇಕೆಂದು ಪ್ರಾರ್ಥಿಸುವಾಗ, ಕೃಷ್ಣನು ಇದನ್ನು ಕೇಳಿ ಸುಮ್ಮನಿರುವುದಕ್ಕಾಗುವುದಿಲ್ಲ. ಅವಸರದಿಂದವನು ರಂಗಭೂಮಿಯನ್ನು ಪ್ರವೇಶಿಸುವನು. ಸಾಧಕನು ಎಲ್ಲಿಯವರೆಗೆ ಸುಮ್ಮನೆ ಬಾಯಿಯ ಮಾತಿನಲ್ಲಿ "ದೇವರೆ ಬಾ" ಎಂದು ಕರೆಯುತ್ತಿರುವನೊ ಅಲ್ಲಿಯವರೆವಿಗೂ ದೇವರು ಕಾಣುವುದಿಲ್ಲ. ದೇವರು ಬಂದಮೇಲೆ ಭಕ್ತನ ಹೃದಯ ಪ್ರೇಮರಸದಲ್ಲಿ ಕರಗಿಹೋಗುವುದು. ಎಲ್ಲವೂ ಒಂದೇಸಾರಿ ನಿಂತುಹೋಗುವುದು. ಭಕ್ತನು ಹೃದಯಾಂತರಾಳದಿಂದ ಪ್ರೇಮೋನ್ಮತ್ತನಾಗಿ ದೇವರನ್ನು ಪ್ರಾರ್ಥಿಸಿದರೆ ಅವನು ಬೇಗ ಬರದೆ ಇರಲಾರ.

# ಭಾಗ ೩

# ಅಧ್ಯಾಯ ೧೫

## ಮಾನವ ಮತ್ತು ದೇವರು

### ಭಗವಂತನು ಏತಕ್ಕೆ ಕಾಣುವುದಿಲ್ಲ

೬೩೯. ಸೂರ್ಯನು ಭೂಮಿಗಿಂತ ಎಷ್ಟೋ ದೊಡ್ಡವನು. ಆದರೆ ದೂರ ಅವನನ್ನು ಸಣ್ಣಗೆ ಕಾಣುವಂತೆ ಮಾಡುವುದು. ಇದರಂತೆ ದೇವರು ನಮಗಿಂತ ಎಷ್ಟೋ ದೊಡ್ಡವನು ಆದರೆ ನಾವು ಅವನಿಂದ ಬಹಳ ದೂರದಲ್ಲಿರುವುದರಿಂದ ಅವನ ನೈಜಸ್ಥಿತಿಯನ್ನು ತಿಳಿಯಲಾರೆವು.

೬೪೦. ಕೊಳದ ನೀರಿನ ಮೇಲೆ ಪಾಚಿ ಮತ್ತು ಜೊಂಡು ಬೆಳೆದುಕೊಂಡಿರುವುದರಿಂದ ಅದರಲ್ಲಿ ಆಡುತ್ತಿರುವ ಮೀನು ನಮಗೆ ಕಾಣುವುದಿಲ್ಲ. ಇದರಂತೆಯೆ ದೇವರು ಮನುಷ್ಯನಿಗೆ ಕಾಣದಂತೆ ಮಧ್ಯದಲ್ಲಿ ಮಾಯೆಯ ತೆರೆ ಇರುವುದರಿಂದ, ದೇವರು ನಮ್ಮ ಹೃದಯದಲ್ಲಿ ಆಡುತ್ತಿರುವುದು ನಮಗೆ ಕಾಣುವುದಿಲ್ಲ.

೬೪೧. ನಮಗೆ ಜಗನ್ಮಾಯಿ ಏತಕ್ಕೆ ಕಾಣುವುದಿಲ್ಲ? ಆಕೆ ಗೋಪ್ಯದಲ್ಲಿ ತನ್ನ ಕೆಲಸವನ್ನೆಲ್ಲಾ ಮಾಡುವ ಒಬ್ಬ ಶ್ರೀಮಂತ ಗೃಹಿಣಿಯಂತೆ ತಾನು ಎಲ್ಲರನ್ನೂ ನೋಡುವಳು. ಆದರೆ ಯಾರೂ ಅವಳನ್ನು ನೋಡಲಾರರು. ಅವಳ ಪ್ರೀತಿಗೆ ಪಾತ್ರರಾದ ಮಕ್ಕಳು ಮಾತ್ರ ಮಾಯೆಯ ತೆರೆಹಿಂದೆ ಹೋಗಿ ಅವಳನ್ನು ನೋಡುವರು.

೬೪೨. ನಗರ ರಕ್ಷಕನು ತನ್ನ ದೀಪದ ಬೆಳಕನ್ನು ಯಾರ ಮೇಲೆ ತಿರುಗಿಸಿದರೆ ಅವರನ್ನು ನೋಡಬಲ್ಲನು. ಆದರೆ ಆ ಬೆಳಕನ್ನು ತನ್ನ ಮುಖದ ಕಡೆಗೆ ತಿರುಗಿಸಿಕೊಳ್ಳುವತನಕ ಇತರರು ಯಾರೂ ಅವನನ್ನು ನೋಡಲಾರರು. ಇದರಂತೆಯೆ ದೇವರು ಎಲ್ಲರನ್ನೂ ನೋಡುವನು. ಆದರೆ ಅವನೇ ಕೃಪೆತೋರಿ ಇನ್ನೊಬ್ಬರಿಗೆ ಕಾಣಿಸಿಕೊಂಡ ಹೊರತು ಇತರರು ಅವನನ್ನು ನೋಡಲಾರರು.

# ಭಗವಂತ ಮತ್ತು ಆತನ ಭಕ್ತರು

೬೪೩. ಜಮೀನುದಾರನು ಬಹಳ ಶ್ರೀಮಂತನಾಗಿರಬಹುದು. ಆದರೆ ಬಡ ರೈತನೊಬ್ಬನು, ಪ್ರೀತಿಯಿಂದ ಸಾಮಾನ್ಯವಾದ ಬಹು ಮಾನಗಳನ್ನು ತಂದರೂ, ಅವನ್ನು ಅತ್ಯಂತ ಸಂತೋಷದಿಂದ ಸ್ವೀಕರಿಸುವನು. ಇದರಂತೆಯೆ ಸರ್ವಶಕ್ತನಾದ ಭಗವಂತ ಎಷ್ಟೇ ಮಹಿಮಾವಂತನಾಗಿರಲಿ ಭಕ್ತನು ಹೃತ್ಪೂರ್ವಕ ಕೊಡುವ ಕಾಣಿಕೆಯನ್ನು ಅತಿ ಸಂತೋಷದಿಂದಲೂ ಮತ್ತು ತೃಪ್ತಿಯಿಂದಲೂ ಸ್ವೀಕರಿಸುವನು.

೬೪೪. ನಾನು ದೇವರನ್ನು ನೋಡಿದರೆ ಸಾಕು ; ನನಗೆ ಸಂಸ್ಕೃತ ಗೊತ್ತಿಲ್ಲದೆ ಇದ್ದರೆ ಏನು ? ಭಗವಂತನು ಅವನನ್ನು ನೋಡಬೇಕೆಂದು ಬಯಸುವ ತನ್ನ ಎಲ್ಲಾ ಮಕ್ಕಳ ಮೇಲೂ ಅವರು ಪಂಡಿತರಾಗಲಿ, ಪಾಮರರಾಗಲಿ ಎಲ್ಲರ ಮೇಲೂ ಒಂದೇ ಸಮನಾಗಿ ತನ್ನ ಅನುಗ್ರಹವನ್ನು ಬೀರುವನು. ತಂದೆಗೆ ಐದಾರು ಮಕ್ಕಳಿರುವರೆಂದು ತಿಳಿಯೋಣ. ಕೆಲವರು ಅವನನ್ನು ' ಪ ' ಎಂತಲೋ ' ಬಾ ' ಎಂತಲೋ ಕರೆಯುವರು. ಪೂರ್ತಿ ಉಚ್ಚರಿಸುವುದಕ್ಕೆ ಅವರಿಗೆ ಬರುವುದಿಲ್ಲ. ಆದರೆ ತಂದೆ ಇವರನ್ನು ಮೊದಲನೆಯವನಿಗಿಂತ ಕಡಿಮೆ ಪ್ರೀತಿಸುವನೆ ? ಮಕ್ಕಳಿಗೆ ಸರಿಯಾಗಿ ಅಪ್ಪ ಎಂದು ಕರೆಯುವುದಕ್ಕೆ ಬರುವುದಿಲ್ಲ ಎಂದು ಅವನಿಗೆ ಗೊತ್ತಿದೆ. ತಂದೆ ಎಲ್ಲರನ್ನೂ ಒಂದೇ ಸಮನಾಗಿ ಪ್ರೀತಿಸುವನು.

೬೪೫. ಕೆಸರು ಮತ್ತು ಧೂಳಿನಿಂದ ಕೊಳೆ ಮಾಡಿಕೊಳ್ಳುವುದು ಮಗುವಿನ ಸ್ವಭಾವ. ಆದರೆ ತಾಯಿ ಮಗು ಕೊಳೆಯಿಂದ ಇರುವುದಕ್ಕೆ ಅವಕಾಶ ಕೊಡುವುದಿಲ್ಲ. ಆಗಿಂದಾಗ್ಗೆ ಅದನ್ನು ತೊಳೆಯುತ್ತಿರುವಳು. ಇದರಂತೆಯೆ ತಪ್ಪನ್ನು ಮಾಡುವುದು ಮನುಷ್ಯನ ಸ್ವಭಾವ. ಮನುಷ್ಯನು ತಪ್ಪು ಮಾಡುವ ಸ್ವಭಾವದವನಾಗಿದ್ದರೆ ನಿಜವಾಗಿ ದೇವರು ಅವನಿಗೆ ಎರಡರಷ್ಟು ಆದರದಿಂದ ಪಾರಾಗುವುದಕ್ಕೆ ಮಾರ್ಗವನ್ನೂ ತೋರುವುದರಲ್ಲಿ ಸಂದೇಹವಿಲ್ಲ.

೬೪೬. ಒಂದೇ ಮೀನಿನಿಂದ ಸಾರು, ಪಲ್ಯ ಮತ್ತು ಬೋಂಡ ಮುಂತಾದುವುಗಳನ್ನು ಮಾಡುವಂತೆ ಮತ್ತು ಪ್ರತಿಯೊಬ್ಬರಿಗೂ ಅವರಲ್ಲಿ ಯಾವುದಾದರೊಂದು ಇಷ್ಟವಿರುವಂತೆ, ದೇವರು ಒಬ್ಬನೇ ಆದರೂ ಆತನು ಭಕ್ತರ ಭಾವಕ್ಕೆ ತಕ್ಕಂತೆ ಹಲವು ರೂಪಗಳನ್ನು ಧರಿಸುವನು. ಪ್ರತಿಯೊಬ್ಬರಿಗೂ ತಾವು ಅತಿ ಪ್ರೀತಿಯಿಂದ ಕಾಣುವ

ರೂಪೊಂದು ಇರುವುದು. ಅವನು ದಯಾಳುವಾದ ಸ್ವಾಮಿ, ಅಥವಾ ಪ್ರಿಯ ಸ್ನೇಹಿತನಂತೆ ಇರುವನು. ಮತ್ತೆ ಕೆಲವರಿಗೆ ತಾಯಿ ತಂದೆಯಂತಿರುವನು. ಇನ್ನು ಕೆಲವರಿಗೆ ಶ್ರೀಮಂತನಾದ ಪ್ರಿಯತಮ ಅಥವಾ ಏಕನಿಷ್ಟನಾದ ಮಗನಂತೆಯೂ ಇರುವನು.

೬೪೭. ಮೀನು ಬಹಳ ದೂರದಲ್ಲಿರಬಹುದು. ಆದರೂ ರುಚಿಕರವಾದ ಆಕರ್ಷಣೀಯವಾದ ಗಾಳದ ಹುಳುವನ್ನೆಸೆದರೆ ಎಲ್ಲಾ ಕಡೆಗಳಿಂದಲೂ ಅದರ ಸಮೀಪಕ್ಕೆ ಬರುವುದು. ಇದರಂತೆಯೆ ಯಾವ ಭಕ್ತನ ಹೃದಯ ಶ್ರದ್ಧಾಭಕ್ತಿಗಳಿಂದ ತುಂಬಿ ತುಳುಕಾಡುತ್ತಿರುವುದೊ ಅವನೆಡೆಗೆ ದೇವರು ಬೇಗ ಬರುವನು.

೬೪೮. ದೇವಋಷಿಗಳು ಪರಮಾತ್ಮನ ಅಂತರಂಗಕ್ಕೆ ಸೇರಿದ ಬಹಳಹತ್ತಿರದ ಸಂಬಂಧದವರಂತೆ. ಅವರು ಭಗವಂತನ ಸ್ನೇಹಿತರು, ನೆಂಟರು ಮತ್ತು ಜತೆಗಾರರು. ಸಾಧಾರಣ ಜೀವಿಗಳೆಲ್ಲಾ ಬಹಿರಂಗಕ್ಕೆ ಸೇರಿದವರು. ಅವರೆಲ್ಲರೂ ಕೇವಲ ಭಗವಂತನಿಂದ ಸೃಷ್ಟಿಸಲ್ಪಟ್ಟವರು.

೬೪೯. ಸೂರ್ಯನ ಬೆಳಕು ಎಲ್ಲಿ ಬಿದ್ದರೂ ಒಂದೇ. ಆದರೆ ನೀರು ಕನ್ನಡಿ ಮತ್ತು ನಯ ಮಾಡಿದ ಲೋಹಗಳ ಪ್ರಕಾಶಮಾನವಾದ ಹೊರಭಾಗ ಮಾತ್ರ ಸೂರ್ಯರಶ್ಮಿಯನ್ನು ಪೂರ್ಣವಾಗಿ ಪ್ರತಿಬಿಂಬಿಸುವುದು. ಇದರಂತೆಯೆ ಭಗವಂತನ ಜ್ಯೋತಿ ಪವಿತ್ರವಾದುದು. ಇದು ಎಲ್ಲರ ಮೇಲೂ ಒಂದೇ ಸಮನಾಗಿ ಹೆಚ್ಚು ಕಡಿಮೆ ಇಲ್ಲದೆ ಬೀಳುವುದು. ಆದರೆ ಶುದ್ಧ ಹೃದಯದಿಂದ ಕೂಡಿದ ಸಾಧು ಸಂತರು ಮಾತ್ರ ಆ ಪ್ರಕಾಶವನ್ನು ಚೆನ್ನಾಗಿ ಸ್ವೀಕರಿಸಿ ಪ್ರತಿಬಿಂಬಿಸುವರು.

೬೫೦. ದೀಪದ ಸ್ವಭಾವ ಬೆಳಕನ್ನು ಕೊಡುವುದು. ಇದರ ಸಹಾಯದಿಂದ ಕೆಲವರು ಅಡಿಗೆ ಮಾಡಬಹುದು. ಕೆಲವರು ಸುಳ್ಳು ಅರ್ಜಿಯನ್ನು ಬರೆಯಬಹುದು. ಮತ್ತೆ ಕೆಲವರು ಭಗವನ್ನಾಮದ ಸಹಾಯದಿಂದ ಮೋಕ್ಷವನ್ನು ಪಡೆಯಲು ಯತ್ನಿಸುವರು. ಮತ್ತೆ ಕೆಲವರು ತಮ್ಮ ದುರುದ್ದೇಶಗಳನ್ನು ಈಡೇರಿಸಿಕೊಳ್ಳಲು ಯತ್ನಿಸುವರು. ಆದರೆ ಅವನ ಪವಿತ್ರ ನಾಮವಾದರೋ ಇವುಗಳಾವುದರಿಂದಲೂ ಕಳಂಕವಾಗದೆ ಇರುವುದು.

೬೫೧. ಭಗವಾನ್, ಭಾಗವತ ಮತ್ತು ಭಕ್ತರೆಲ್ಲ ಒಂದೆ.

೬೫೨. ನಿಜವಾದ ಭಕ್ತನು ದೇವರನ್ನು ಹೇಗೆ ಕಾಣುತ್ತಾನೆ? ಆತನು ದೇವರನ್ನು ಅತ್ಯಂತ ಸಮೀಪದ ಪರಮ ಪ್ರೀತಿಪಾತ್ರನಾದ

ಬಂಧುವಂತೆ ಕಾಣುತ್ತಾನೆ. ಬೃಂದಾವನದ ಗೋಪಿಯರು ಶ್ರೀ ಕೃಷ್ಣ ನಲ್ಲಿ ಜಗನ್ನಾಥನನ್ನು ಕಾಣಲಿಲ್ಲ. ತಮ್ಮ ಪ್ರಿಯತಮನಾದ ಗೋಪಿ ನಾಥನನ್ನು ಕಂಡರು

೬೫೩ ಭಕ್ತ ತನ್ನ ಇಷ್ಟದೇವತೆಯನ್ನು ತಾಯಿಯೆಂದು ಕರೆಯು ವುದರಿಂದ ಏತಕ್ಕೆ ಅಷ್ಟೊಂದು ಭಾವೋನ್ಮಾದವನ್ನು ಪಡೆಯುವನು? ಏಕೆಂದರೆ, ಮಗುವಿಗೆ ಎಲ್ಲರಿಗಿಂತ ಹೆಚ್ಚಾಗಿ ತಾಯಿಯಲ್ಲಿ ಸಲಿಗೆ. ಆದಕಾರಣವೇ ಅವಳು ಎಲ್ಲರಿಗಿಂತಲೂ ಸಮೀಪದವಳು.

೬೫೪. ಬಹಳ ಜ್ವರದಿಂದ ನರಳುತ್ತಾ ಅತಿ ಬಾಯಾರಿದ ರೋಗಿಯು ತಾನು ಸಮುದ್ರವನ್ನೆ ಕುಡಿದು ಬಿಡುವೆನೆಂದು ಭ್ರಮಿಸು ತ್ತಾನೆ. ಆದರೆ ಜ್ವರ ನಿಂತು ಸಾಧಾರಣ ಸ್ಥಿತಿಗೆ ಬಂದಮೇಲೆ ಒಂದೇ ಲೋಟ ನೀರನ್ನು ಕೂಡ ಕುಡಿಯಲಾರ. ಅದರಲ್ಲಿ ಕೆಲವು ಗುಟುಕಿ ನಿಂದಲೇ ಅವನ ಬಾಯಾರಿಕೆ ಶಮನವಾಗುತ್ತದೆ. ಇದರಂತೆಯೆ ಮಾನ ವನು ಮಾಯಾ ಭ್ರಮೆಯಲ್ಲಿ ಸಿಕ್ಕಿ ತನ್ನ ಅಲ್ಪತೆಯನ್ನು ಮರೆತು ಸರ್ವಾಂತರ್ಯಾಮಿಯಾದ ಪರಮಾತ್ಮನನ್ನು ತನ್ನ ಹೃದಯದಲ್ಲಿ ಅಡಗಿಸ ಬಲ್ಲೆನೆಂದು ಭ್ರಮಿಸುವನು. ಆದರೆ ಮಾಯಾ ಮೋಹ ಹೋದಮೇಲೆ ಪರಂಜ್ಯೋತಿಯ ಕಿರಣವೊಂದು ಅವನನ್ನು ಸಚ್ಚಿದಾನಂದದಲ್ಲಿ ಮುಳು ಗಿಸಲು ಸಾಕಾಗುವುದು.

೬೫೫. ಕೆಲವರಿಗೆ ಸಣ್ಣದೊಂದು ಸಾರಾಯಿ ಸೀಸೆಯಿಂದಲೇ ತಲೆತಿರುಗುವುದು. ಮತ್ತೆ ಕೆಲವರಿಗೆ ಅಮಲು ಹಿಡಿಯುವುದಕ್ಕೆ ಎರಡು ಮೂರು ಸೀಸೆಗಳು ಬೇಕು. ಆದರೆ ಇಬ್ಬರಿಗೂ ಒಂದೇ ಅಮಲಿನ ಆನಂದವಾಗುವುದು. ಇದರಂತೆಯೆ ಕೆಲವು ಭಕ್ತರಿಗೆ ಭಾವೋನ್ಮತ್ತ ರಾಗಲು ಭಗವಂತನ ಅನಂತ ಮಹಿಮೆಯ ಕಿರಣವೊಂದು ಸಾಕು. ಮತ್ತೆ ಕೆಲವರು ಅವನನ್ನು ಪ್ರತ್ಯಕ್ಷ ಸಂದರ್ಶಿಸಿದಾಗ ಮಾತ್ರ ಆನಂದ ಪಡುವರು. ಆದರೆ ಇಬ್ಬರೂ ಕೂಡ ಅದೃಷ್ಟವಂತರು. ಏಕೆಂದರೆ ಇಬ್ಬರೂ ಕೂಡ ಪರಮಾತ್ಮನ ಆನಂದದಲ್ಲಿ ಮಗ್ನರಾಗುವರು.

೬೫೬. ದೇವರು ಒಂದು ಸಕ್ಕರೆಯ ಬೆಟ್ಟದಂತೆ. ಸಣ್ಣ ಇರುವೆ ಅದರಿಂದ ಒಂದು ಸಣ್ಣ ಸಕ್ಕರೆಯ ಕಾಳನ್ನು ತರುವುದು. ದೊಡ್ಡದು ದೊಡ್ಡ ಕಾಳನ್ನು ತರುವುದು. ಆದರೆ ಬೆಟ್ಟ ವ್ಯವಹಾರಿಕ ದೃಷ್ಟಿಯಿಂದ ಹಿಂದೆ ಇದ್ದಷ್ಟೆ ಇರುವುದು. ಇದರಂತೆ ಭಗವಂತನ ಭಕ್ತರೂ ಕೂಡ, ಭಗವಂತನ ಯಾವುದಾದರೊಂದು ದೇವಾಂಶದಿಂದಲೆ

ಭಾವೋನ್ಮತ್ತರಾಗುವರು. ಅವನಲ್ಲಿರುವ ಅನಂತ ಗುಣಗಳನ್ನು ಮತ್ತು ಮಹಿಮೆಯನ್ನು ಯಾರೂ ತಮ್ಮಲ್ಲಿ ಅಡಗಿಸಲಾರರು.

೬೫೭. ಸಚ್ಚಿದಾನಂದ ಸಾಗರದ ಮೇಲಿಂದ ಬರುವ ತಂಗಾಳಿ ಯಾರ ಮೇಲೆ ಬೀಸುವುದೋ ಅವರನ್ನೆಲ್ಲ ಪರಿವರ್ತನೆ ಗೊಳಿಸುವುದು. ಹಿಂದಿನ ಮಹಾ ಋಷಿಗಳಾದ ಸನಕ ಸನಾತನ ಮುಂತಾದವರು ಈ ತಂಗಾಳಿಯಿಂದ ಮೃದುಹೃದಯರಾದರು. ದೇವೋನ್ಮತ್ತನಾದ ನಾರದನು ದೂರದಿಂದ ಆ ಸಚ್ಚಿದಾನಂದ ಸಾಗರವನ್ನು ಒಮ್ಮೆ ನಿಜವಾಗಿ ನೋಡಿದನು. ಅಂದಿನಿಂದ ತನ್ನನ್ನೇ ಮರೆತು, ಯಾವಾಗಲೂ ಹರಿ ನಾಮೋಚ್ಚಾರಣೆ ಮಾಡುತ್ತ ಉನ್ಮತ್ತನಂತೆ ಜಗತ್ತಿನಲ್ಲಿ ಸಂಚಾರ ಮಾಡುತ್ತಿರುವನು. ಆಜನ್ಮಯೋಗಿಯಾದ ಶುಕದೇವನು ಆ ಸಚ್ಚಿದಾನಂದ ಸಾಗರವನ್ನು ಮೂರು ವೇಳೆ ಮುಟ್ಟಿರುವನು. ಅಂದಿನಿಂದಲೂ ದೇವೋನ್ಮತ್ತನಾಗಿ ಮಗುವಿನಂತೆ ಹೊರಳಾಡುತ್ತಿರುವನು. ಜಗದ ಮಹಾ ಗುರುವಾದ ಮಹಾದೇವನಾದರೋ ಆ ಸಾಗರದಿಂದ ಮೂರು ಬಗಸೆ ನೀರನ್ನು ಕುಡಿದಿರುವನು. ಅಂದಿನಿಂದಲೂ ಆ ಸಚ್ಚಿದಾನಂದ ನಲ್ಲಿ ಉನ್ಮತ್ತನಾಗಿ ಹೆಣದಂತೆ ಅಚಲನಾಗಿ ನೆಲದ ಮೇಲೆ ಬಿದ್ದಿರುವನು. ಈ ಸಾಗರದ ಆಳವನ್ನು ಯಾರು ಅಳೆಯಬಲ್ಲರು? ಇದರ ಅದ್ಭುತಗಳನ್ನು ಯಾರು ತಿಳಿಯಬಲ್ಲರು?

೬೫೮. ಶ್ರೀ ಗುರುದೇವರು ಕೇಶವ್‌ಚಂದ್ರನಿಗೆ ಹೀಗೆ ಹೇಳಿದರು: "ಬ್ರಹ್ಮಸಮಾಜದವರು ಭಗವಂತನ ಸೃಷ್ಟಿವೈಚಿತ್ರ್ಯವನ್ನು ಕುರಿತು, 'ಹೇ ಭಗವಂತ ನೀನು ಸೂರ್ಯ ಚಂದ್ರ ತಾರೆಗಳನ್ನು ಸೃಷ್ಟಿಸಿರುವೆ" ಎಂದು ಹೊಗಳುತ್ತಾರೆ. ತೋಟದ ಸೌಂದರ್ಯ, ಹೂವಿನ ವೈಚಿತ್ರ್ಯ ಮತ್ತು ಅದರ ಸುವಾಸನೆಗೆ ಒಲಿದವರು ಹಲವರು; ಆದರೆ ತೋಟದ ಒಡೆಯನನ್ನು ನೋಡಲು ಬಯಸುವರು ಎಲ್ಲೋ ಕೆಲವರು. ಎರಡರಲ್ಲಿ ಯಾವುದು ದೊಡ್ಡದು. ತೋಟವೆ ಅಥವಾ ತೋಟದ ಮಾಲೀಕನೆ? ನಿಜವಾಗಿಯೂ ನಾವು ಜಗದಲ್ಲಿರುವತನಕ ಆ ತೋಟ ಅಸತ್ಯ. ಆದರೆ ತೋಟದ ಮಾಲೀಕ ಒಬ್ಬನೇ ಸತ್ಯ.

ಮದ್ಯದ ಅಂಗಡಿಯಲ್ಲಿ ಒಂದೆರಡು ಶೀಶೆಗಳನ್ನು ಕುಡಿದ ಮೇಲೆ ಅಲ್ಲಿರುವ ಪೀಪಾಯಿಯಲ್ಲಿ ಎಷ್ಟೆಷ್ಟು ಮದ್ಯವಿದೆ ಎಂದು ತಿಳಿದುಕೊಳ್ಳುವುದು ಯಾರಿಗೆ ಬೇಕು; ಒಂದು ಬುಡ್ಡಿ ಸಾಕು ಒಬ್ಬನಿಗೆ.

ನರೇಂದ್ರನನ್ನು ನೋಡಿದಾಗ ನಾನು ಆನಂದಪರವಶನಾಗು

ವೆನು. ನಿನ್ನ ತಂದೆ ಯಾರು? ನಿನಗೆ ಎಷ್ಟು ಮನೆಗಳಿವೆ? ಎಂದು ನಾನು ಎಂದೂ ಅವನನ್ನು ಕೇಳಲಿಲ್ಲ.

ಮಾನವರಿಗೆ ತಮ್ಮ ವಸ್ತುಗಳನ್ನು ಕಂಡರೆ ಇಷ್ಟ. ಹಣ ಮನೆ ಪಾತ್ರೆ ಪದಾರ್ಥಗಳನ್ನು ಆಶಿಸುವರು. ಹಾಗೆಯೆ ದೇವರೂ ಕೂಡ ತನಗೆ ಸೇರಿದ ಸೂರ್ಯ ಚಂದ್ರ ನಕ್ಷತ್ರಗಳನ್ನು ನೋಡುತ್ತಾನೆ ಎಂದು ತಿಳಿಯುವರು. ಅವನಿಗೆ ಸಂಬಂಧಪಟ್ಟ ವಸ್ತುಗಳನ್ನು ಹೊಗಳಿದರೆ ದೇವರು ಬಹಳ ಮೆಚ್ಚುವನು ಎಂದು ಭಾವಿಸುವರು.

೬೫೯. ಮಗುವಿನ ಸರಳತೆ ಎಷ್ಟು ಮಧುರ! ಪ್ರಪಂಚದ ಐಶ್ವರ್ಯಕ್ಕೆ ಬದಲು ಒಂದು ಬೊಂಬೆಯನ್ನು ಆಶಿಸುವುದು. ಇದರಂತೆ ಶ್ರದ್ಧಾವಂತನಾದ ಭಕ್ತನುಕೂಡ. ಐಶ್ವರ್ಯ ಕೀರ್ತಿಗಳನ್ನೆಲ್ಲ ತಿರಸ್ಕರಿಸಿ ದೇವರಲ್ಲಿ ಐಕ್ಯನಾಗಬೇಕಾದರೆ ಮತ್ತಾರಿಗೂ ಸಾಧ್ಯವಿಲ್ಲ.

೬೬೦. ನಿಜವಾದ ಭಕ್ತನು ತನ್ನ ಮನಸ್ಸಿನ ಮುಕ್ಕಾಲು ಪಾಲನ್ನು ದೇವರಿಗೆ ಕೊಡುವನು. ಉಳಿದ ಕಾಲುಭಾಗವನ್ನು ಮಾತ್ರ ಪ್ರಪಂಚದ ಕಡೆಗೆ ಕೊಡುವನು. ದೇವರಿಗೆ ಸಂಬಂಧಪಟ್ಟ ವಿಷಯ ಗಳಲ್ಲಿ ಅವನು ಬಹಳ ಜೋಪಾನವಾಗಿರುವನು. ಬಾಲವನ್ನು ತುಳಿದ ಹಾವು ರೇಗಿ ಬರುವಂತೆ; ಎಲ್ಲಾ ಕಡೆಗಿಂತಲೂ ಹೆಚ್ಚಾಗಿ ಬಾಲದಲ್ಲಿ ತನ್ನ ಗೌರವ ಹಾವಿಗೆ ಇರುವಂತೆ ತೋರುವುದು.

೬೬೧. ಶ್ರೀರಾಮಕೃಷ್ಣರ ವಿಚಾರವಾಗಿ ಮಾತನಾಡುತ್ತಿದ್ದಾಗ ಒಂದು ಸಾರಿ ಪ್ರಖ್ಯಾತರಾದ ಬ್ರಹ್ಮಸಮಾಜದವರು ಅವರನ್ನು ಒಬ್ಬ ಹುಚ್ಚು ಮನುಷ್ಯರೆಂದೂ ಒಂದೇ ವಸ್ತುವನ್ನು ಆಲೋಚಿಸಿ, ಆಲೋಚಿಸಿ ಐರೋಪ್ಯ ದೇಶದ ತಾತ್ತ್ವಿಕರಂತೆ ಆಗಿರುವರೆಂದು ಹೇಳಿದರು. ನಂತರ ಆ ಪ್ರಚಾರಕರನ್ನು ಕುರಿತು ಶ್ರೀರಾಮಕೃಷ್ಣರು ಹೀಗೆಂದರು: "ಐರೋಪ್ಯ ದೇಶದಲ್ಲಿ ಕೂಡ ಒಂದೇ ವಸ್ತುವನ್ನು ಕುರಿತು ಯೋಚಿಸಿ ಮನುಷ್ಯರು ಹುಚ್ಚರಾಗಿರುವರೆಂದು ಹೇಳುವಿರಿ. ಅವರು ಆಲೋಚಿಸುವ ವಿಷಯ ಜಡವೆ ಅಥವಾ ಚೇತನವೆ? ಅದು ಜಡವೆಂದರೆ ಅದನ್ನು ಕುರಿತು ಯೋಚಿಸಿ ಹುಚ್ಚನಾದರೆ ಆಶ್ಚರ್ಯವೇನಿದೆ? ಆದರೆ ಯಾರ ಚೇತನದಿಂದ ವಿಶ್ವವೇ ಬೆಳಗುವುದೋ ಅಂತಹವನನ್ನು ಕುರಿತು ಧ್ಯಾನಿಸಿದರೆ ಹೇಗೆ ಹುಚ್ಚನಾಗುವನು? ಇದನ್ನೆ ನಿಮ್ಮ ಶಾಸ್ತ್ರ ಬೋಧಿಸುವುದು?"

೬೬೨. ಪರಮಪ್ರೇಮವೆಂಬ ಸಾಗರದ ಆಳಕ್ಕೆ ಮುಳುಗು, ಅಂಜಬೇಡ. ಅದು ಅಮೃತಸಾಗರ. ನಾನು ಒಮ್ಮೆ ನರೇಂದ್ರನಿಗೆ "ದೇವರು ಅಮೃತಸಾಗರದಂತೆ. ನೀನು ಅದರೊಳಗೆ ಮುಳುಗಲು ಇಚ್ಛಿಸುವೆಯಾ? ಮಗು, ಒಂದು ಅಗಲವಾದ ಬಟ್ಟಲಲ್ಲಿ ಸಕ್ಕರೆಯ ಪಾಕವಿದೆ. ನೀನು ಅದನ್ನು ಕುಡಿಯಲು ಕಾತುರವಾಗಿರುವ ನೊಣದಂತೆ ಎಂದು ಭಾವಿಸೋಣ. ನೀನು ಎಲ್ಲಿ ಕುಳಿತುಕೊಂಡು ಕುಡಿಯಲಿಚ್ಛಿಸುವೆ?" ಎಂದು ಕೇಳಿದೆನು. ತಾನು ಒಂದು ಅಂಚಿನಲ್ಲಿ ಕುಳಿತುಕೊಂಡು ಕುಡಿಯಲು ಇಚ್ಛಿಸುವೆನೆಂದು, ಏಕೆಂದರೆ ಅದರ ಒಳಗೆ ಬಿದ್ದರೆ ಮುಳುಗಿ ಹೋಗುವ ಸಂಭವವಿದೆಯೆಂದು ನರೇಂದ್ರನು ಹೇಳಿದನು. ಅದಕ್ಕೆ ನಾನು ಹೇಳಿದೆ: "ಮಗು ನೀನು ಅಮೃತಸಾಗರದಲ್ಲಿ ಮುಳುಗುತ್ತಿರುವೆ ಎಂಬುದನ್ನು ಮರೆತಿರುವೆ ಅಲ್ಲಿ ಅಪಾಯಕ್ಕೆ ಸಾವಿಗೆ ನೀನು ಅಂಜಬೇಕಾಗಿಲ್ಲ. ಸಚ್ಚಿದಾನಂದಸಾಗರ ಅಮೃತ ಸಾಗರ. ಅಮೃತತ್ವವೆ ಅಲ್ಲಿರುವ ನೀರು. ಕೆಲವು ಮೂಢರಂತೆ ಭಕ್ತಿಯಲ್ಲಿ ಎಲ್ಲಿ ಮಿತಿಮೀರುವೆನೋ ಎಂದು ಅಂಜಬೇಡ."

## ಭಕ್ತರ ಪ್ರಾಪಂಚಿಕ ಸ್ಥಿತಿ

೬೬೩. ಬಂಧನದಲ್ಲಿದ್ದಾಗ ದೇವಕಿಗೆ ಶ್ರೀಕೃಷ್ಣಪರಮಾತ್ಮನನ್ನು ನೋಡುವ ಸುಯೋಗ ಒದಗಿದ್ದರೂ ಅದು ಅವಳನ್ನು ಬಂಧನದಿಂದ ಪಾರುಮಾಡಲಿಲ್ಲ.

೬೬೪. ಒಂದುಸಲ ಕುರುಡನೊಬ್ಬನು ಪವಿತ್ರ ಗಂಗಾನದಿಯಲ್ಲಿ ಸ್ನಾನಮಾಡಿ ಎಲ್ಲಾ ಪಾಪಗಳಿಂದಲೂ ಪಾರಾದನು. ಆದರೂ ಅವನ ಕುರುಡುತನ ಬಿಡಲಿಲ್ಲ.

೬೬೫. ಒಂದುಸಲ ಭಕ್ತನಾದ ಸೌದೆಯೊಡೆಯುವನೊಬ್ಬನಿಗೆ ಜಗನ್ಮಾಯಿ ಪ್ರತ್ಯಕ್ಷಳಾಗಿ ಅವನು ಅವಳ ಅನುಗ್ರಹಕ್ಕೆ ಪಾತ್ರನಾದನು. ಆದರೂ ಸೌದೆಯೊಡೆಯುವ ಕೆಲಸ ನಿಲ್ಲಲಿಲ್ಲ. ಆದರೂ ಆ ದೀನನು ಹಿಂದಿನಂತೆಯೆ ಕಷ್ಟಪಟ್ಟು ಸೌದೆಯೊಡೆದು ತನ್ನ ಜೀವನವನ್ನು ಸಾಗಿಸಬೇಕಾಗಿತ್ತು.

೬೬೬. ಶರಪಂಜರದಮೇಲೆ ಮರಣೋನ್ಮುಖನಾದ ಭೀಷ್ಮನ ಕಣ್ಣಿನಿಂದ ನೀರು ಬರುವುದು ಕಂಡಿತು. ಶ್ರೀಕೃಷ್ಣ ಮತ್ತು ಪಾಂಡವರು ಹತ್ತಿರದಲ್ಲಿಯೆ ನಿಂತಿದ್ದರು. ಅರ್ಜುನನು ಕೃಷ್ಣನಿಗೆ "ಎಷ್ಟು ಆಶ್ಚರ್ಯ

ಸಹೋದರನೆ! ನಮ್ಮ ಪಿತಾಮಹರಾದ ಭೀಷ್ಮರು ಅಷ್ಟು ಧರ್ಮಾತ್ಮರು ಸತ್ಯನಿಷ್ಠರು, ಜಿತೇಂದ್ರಿಯರು, ಅಷ್ಟವಸುಗಳಲ್ಲಿ ಒಬ್ಬರಾಗಿದ್ದರೂ ಅವರೂ ಕೂಡ ಕೊನೆಗಾಲದಲ್ಲಿ ಮಾಯಾಪಾಶಕ್ಕೆ ಸಿಕ್ಕಿ ಕಣ್ಣೀರು ಕರೆಯುತ್ತಿರುವರು'' ಎಂದನು. ಭೀಷ್ಮನಿಗೆ ಇದನ್ನು ತಿಳಿಸಿದಮೇಲೆ ಅವನು ಹೀಗೆ ಹೇಳಿದನು: "ಹೇ ಕೃಷ್ಣ, ನಿನಗೆ ಚೆನ್ನಾಗಿ ಗೊತ್ತಿದೆ ನಾನು ಅದಕ್ಕಾಗಿ ಅಳುತ್ತಿಲ್ಲ ಎಂಬುದು. ಯಾವ ಪಾಂಡವರಿಗೆ ಭಗವಂತನೇ ಸಾರಥಿಯಾಗಿ ಕೆಲಸ ಮಾಡುತ್ತಿರುವನೋ ಅವರೆ ಅನಂತ ಕಷ್ಟ ಮತ್ತು ದುಃಖಗಳನ್ನು ಅನುಭವಿಸಬೇಕಾಯಿತು ಎಂಬುದನ್ನು ಕುರಿತು ಆಲೋಚನೆ ಮಾಡಿದಾಗ ಭಗವಂತನ ಲೀಲೆಯನ್ನು ಎಳ್ಳಷ್ಟೂ ತಿಳಿಯಲಿಲ್ಲವಲ್ಲ ಎಂದು ನನಗೆ ಕಣ್ಣೀರು ತಡೆಯಲಾಗಲಿಲ್ಲ.''

## ಭಗವಂತನು ಹೇಗೆ ತೋರುವನು

೬೬೭. ಒಂದು ಕತ್ತಲೆಯ ಕೋಣೆ ಇದೆ. ಅಲ್ಲಿಗೆ ಬೆಳಕಿನ ಕಿರಣಗಳು ಒಂದು ಸಣ್ಣ ಬಿರುಕಿನ ಮೂಲಕ ಬರುತ್ತಿವೆ. ಒಳಗಿನ ಮನುಷ್ಯನಿಗೆ ಸಿಕ್ಕುವ ಬೆಳಕು ಹೊರಗಿನಿಂದ ತೂರಿಬರುವ ಕಿರಣಗಳ ಮೇಲೆ ಇದೆ. ಬಾಗಿಲು ಮತ್ತು ಕಿಟಕಿಗಳಲ್ಲಿ ಹೆಚ್ಚು ಸಂದಿ ಇದ್ದರೆ, ಒಳಗಿರುವ ಮನುಷ್ಯನು ಹೆಚ್ಚು ಬೆಳಕನ್ನು ಕಾಣುವನು. ಬಾಗಿಲು ಮತ್ತು ಕಿಟಕಿಗಳನ್ನು ತೆರೆದರೆ ಇನ್ನೂ ಹೆಚ್ಚು ಬೆಳಕು ಬರುವುದು. ಆದರೆ ಯಾರು ಬೈಲುಪ್ರದೇಶದಲ್ಲಿ ನಿಂತಿರುವರೋ ಅವರಿಗೆ ಮಾತ್ರ ಅತಿ ಹೆಚ್ಚು ಬೆಳಕು ಸಿಕ್ಕುವುದು. ಇದರಂತೆಯೇ ಭಕ್ತರ ಯೋಗ್ಯತೆ ಮತ್ತು ಅವರ ಸ್ವಭಾವಕ್ಕೆ ಅನುಸಾರವಾಗಿ ದೇವರು ಕೂಡ ಅವರಿಗೆ ತೋರುವನು.

೬೬೮. ಪರಮಾತ್ಮನನ್ನು ಒಬ್ಬನು ಹೆಚ್ಚು ಹೆಚ್ಚು ಸಮೀಪಿಸಿದಂತೆಲ್ಲಾ ಆತನ ಅನಂತ ಮಹಾತ್ಮೆಯು ಹೊಸ ಹೊಸದಾಗಿ ಹೆಚ್ಚು ಹೆಚ್ಚಾಗಿ ಕಾಣುವುದು. ಕೊನೆಗೆ ಜ್ಞಾನಸಿದ್ಧನಾಗಿ ಆತನಲ್ಲಿ ಐಕ್ಯನಾಗುವನು.

## ಭಗವಂತನು ಐಶ್ವರ್ಯವನ್ನು ಲಕ್ಷಿಸುವುದಿಲ್ಲ

೬೬೯. ಭಗವಂತನು, ಒಬ್ಬನು ಆತನಿಗಾಗಿ ಕೊಡುವ ಐಶ್ವರ್ಯವನ್ನೆಲ್ಲಾ ಲಕ್ಷಿಸುವನೇನು? ಎಂದಿಗೂ ಇಲ್ಲ. ಯಾರು ಭಕ್ತಿ ಮತ್ತು

ಪ್ರೇಮವನ್ನು ಅವನಿಗೆ ಅರ್ಪಿಸುವರೊ ಅವರ ಮೇಲೆ ಆತನ ಅನುಗ್ರಹ. ತನಗಾಗಿ ಇರುವ ಭಕ್ತಿ ಮತ್ತು ಪ್ರೀತಿ, ವಿವೇಕ ಮತ್ತು ವೈರಾಗ್ಯವನ್ನು ಆತನು ಸ್ವೀಕರಿಸುವುದು.

೬೭೦. ಶಂಭುಮಲ್ಲಿಕನು, ಒಂದುಸಾರಿ ನನಗೆ "ನನ್ನ ಐಶ್ವರ್ಯವನ್ನೆಲ್ಲಾ ಜಗನ್ಮಾಯಿಯ ಪಾದಾರವಿಂದಗಳಲ್ಲಿ ಬಿಟ್ಟುಹೋಗುವಂತೆ, ನನಗೆ ಹರಸಿ" ಎಂದು ಕೇಳಿಕೊಂಡನು. ಅದಕ್ಕೆ ನಾನು, "ನೀನು ಹೇಳುವುದೇನು? ಇದೆಲ್ಲಾ ನಿನಗೆ ಐಶ್ವರ್ಯ, ಆದರೆ ಜಗನ್ಮಾಯಿಯ ಪಾಲಿಗೆ ಅದು ನೀನು ಕಾಲಿನಿಂದ ತುಳಿಯುವ ಧೂಳಿಗಿಂತ ಮೇಲಲ್ಲ" ಎಂದೆನು.

೬೭೧. ಒಂದುಸಲ ರಾಣಿ ರಾಸ್ಮಣಿಯ ದಕ್ಷಿಣೇಶ್ವರ ದೇವಾಲಯದಲ್ಲಿ ಕಳುವು ನಡೆಯಿತು. ವಿಷ್ಣುಮಂದಿರದಲ್ಲಿ ವಿಗ್ರಹಗಳಿಗೆ ಹಾಕಿದ್ದ ಒಡವೆಗಳೆಲ್ಲಾ ಕಳುವಾದವು ಮಥುರನಾಥ ಮತ್ತು ಶ್ರೀರಾಮಕೃಷ್ಣರು ಸಮಾಚಾರವೇನೆಂದು ನೋಡುವುದಕ್ಕೆ ಹೋದರು. ಮಥುರನಾಥನು, "ದೇವರೇ! ನೀನು ಕೆಲಸಕ್ಕೆ ಬಾರದವನು. ಕಳ್ಳರು ನಿನ್ನ ಒಡವೆಗಳನ್ನೆಲ್ಲಾ ಕಸಿದುಕೊಂಡು ಹೋದರು. ಆದರೂ ನೀನು ಅವರನ್ನು ತಡೆಯಲಾರದೆ ಹೋದೆ" ಎಂದನು. ಇದನ್ನು ಕೇಳಿ, ಶ್ರೀರಾಮಕೃಷ್ಣರು ಕಟುವಾಗಿ ಹೀಗೆ ಉತ್ತರ ಕೊಟ್ಟರು: "ಹೀಗೆ ಮಾತನಾಡುವುದಕ್ಕೆ ನೀನು ಎಂತಹ ಹುಚ್ಚ. ನೀನು ಹೇಳುವ ಒಡವೆ, ನೀನು ವಿಗ್ರಹದಲ್ಲಿ ಆರಾಧಿಸುವ ಜಗನ್ಮಾಯಿಗೆ ಮಣ್ಣಿಗೆ ಸಮ. ಭಾಗ್ಯದೇವತೆಯಾದ ಲಕ್ಷ್ಮಿಯೇ ತನ್ನ ಐಶ್ವರ್ಯವನ್ನು ಪಡೆಯುವುದು ಅವಳಿಂದ ಎಂಬುವುದನ್ನು ಜ್ಞಾಪಕದಲ್ಲಿಡು."

## ದೈವಾನುಗ್ರಹ ಮತ್ತು ಸ್ವಪ್ರಯತ್ನ

೬೭೨. ದೇವರು ನಮಗೆ ಊಟಕ್ಕೆ ಕೊಡುತ್ತಾನೆ ಎಂದು ಅವನನ್ನು ದಯಾಪರನೆಂದು ಹೇಳುವುದಕ್ಕೆ ಆಗುವುದಿಲ್ಲ. ಏಕೆಂದರೆ ಪ್ರತಿಯೊಬ್ಬ ತಂದೆಯೂ ತನ್ನ ಮಕ್ಕಳನ್ನು ಕಾಪಾಡಬೇಕು. ಆದರೆ ಅಡ್ಡದಾರಿಗೆ ಬೀಳದಂತೆ ನಮ್ಮನ್ನು ಪ್ರಲೋಭನೆಗಳಿಂದ ಕಾಪಾಡಿದರೆ ಅವನನ್ನು ನಿಜವಾಗಿಯೂ ದಯಾಮಯನೆನ್ನಬಹುದು.

೬೭೩. ಪ್ರಶ್ನೆ: ಯಾವ ಕರ್ಮದ ಮೂಲಕ ನಾವು ದೇವರನ್ನು ಹೊಂದಬಹುದು?

ಉತ್ತರ: ಕರ್ಮದಲ್ಲಿ ಏನೂ ವ್ಯತ್ಯಾಸವಿಲ್ಲ. ಈ ಕರ್ಮದೇವರ ಸಮೀಪಕ್ಕೆ ಕರೆದೊಯ್ಯುವುದು, ಆ ಕರ್ಮದೇವರ ಸಮೀಪಕ್ಕೆ ಕರೆದೊಯ್ಯುವುದಿಲ್ಲವೆಂದು ತಿಳಿಯಬೇಡಿ.

ಎಲ್ಲವೂ ಅವನ ಅನುಗ್ರಹದ ಮೇಲಿರುವುದು. ಅವನ ಅನುಗ್ರಹವನ್ನು ಪಡೆಯಬೇಕಾದರೆ ನೀವು ಮಾಡುವ ಕೆಲಸವನ್ನೆಲ್ಲಾ ನಿಸ್ಪೃಹತೆಯಿಂದ ಮತ್ತು ಅವನನ್ನು ನೋಡಬೇಕೆಂಬ ಆಸೆಯಿಂದ ಮಾಡಿ. ಅವನ ದಯೆಯಿಂದ ವಾತಾವರಣವು ಅನುಕೂಲವಾಗುವುದು. ಅವನನ್ನು ಪಡೆಯುವ ಮಾರ್ಗವೂ ಸುಗಮವಾಗುವುದು. ನೀನು ಪ್ರಪಂಚವನ್ನು ತ್ಯಾಗಮಾಡಬೇಕೆಂದು ಇಚ್ಛಿಸಿದರೆ, ಸಂಸಾರ ನಿನ್ನ ಮೇಲೆ ನಿಂತಿದ್ದರೆ ಬಹುಶಃ ನಿನ್ನ ಸಹೋದರನು ಅದನ್ನು ವಹಿಸಿಕೊಳ್ಳಬಹುದು. ನಿನ್ನ ಸಾಧನೆಯ ಮಾರ್ಗದಲ್ಲಿ ಹೆಂಡತಿ ಅಡ್ಡ ಬರದೆ ನಿನಗೆ ಸಹಾಯ ಮಾಡಬಹುದು. ಅಥವಾ ನೀನು ಮದುವೆಯಾಗದೆ ಯಾವ ವಿಧವಾದ ಬಂಧನಕ್ಕೂ ಬೀಳದೆ ಇರಬಹುದು.

೬೭೪. ಕೋಣೆಗೆ ದೀಪವನ್ನು ತಂದೊಡನೆಯೆ ಶತಮಾನಗಳಿಂದ ಇದ್ದ ಕತ್ತಲೆ ಪಲಾಯನವಾಗುವುದು. ಹಲವು ಜನ್ಮಾಂತರಗಳಿಂದ ಸಂಚಿತವಾದ ಪಾಪವೆಲ್ಲ ಒಮ್ಮೆ ಆತನ ಕರುಣಾಕಟಾಕ್ಷದಿಂದ ಮಾಯವಾಗುವುದು.

೬೭೫. ಕೆಲವು ಮೀನುಗಳಿಗೆ ಹಲವು ಜತೆ ಮೂಳೆಗಳಿವೆ. ಮತ್ತೆ ಕೆಲವಕ್ಕೆ ಒಂದೇ ಜತೆ ಮೂಳೆ ಇದೆ. ಮೀನನ್ನು ತಿನ್ನುವವರು ಅದು ಒಂದೇ ಆಗಲಿ ಅಥವಾ ಹಲವಾಗಲಿ ಎಲ್ಲವನ್ನೂ ತೆಗೆದುಹಾಕುವರು. ಇದೇ ರೀತಿಯಲ್ಲಿ ಕೆಲವರಿಗೆ ಹೆಚ್ಚು ಪಾಪಗಳಿವೆ. ಮತ್ತೆ ಕೆಲವರಿಗೆ ಕಡಿಮೆ ಇವೆ. ಆದರೆ ಜೀವಿಗಳನ್ನು ಉದ್ಧಾರಮಾಡುವ ಭಗವಂತನ ಅನುಗ್ರಹ ಎಲ್ಲರನ್ನು ಒಂದೇ ರೀತಿ ಪಾವನರನ್ನಾಗಿ ಮಾಡುವುದು.

೬೭೬. ಮಲೆಯಮಾರುತ ಬೀಸಿದಾಗ ಸತ್ತ್ವವಿದ್ದ ಗಿಡಗಳೆಲ್ಲ ಗಂಧದ ಮರಗಳಾಗುವುವು ಎಂಬ ನಾಣ್ನುಡಿ ಇದೆ. ಆದರೆ ಸತ್ತ್ವವಿಲ್ಲದ ಬೊಂಬು, ಪರಂಗಿ ಮತ್ತು ಬಾಳೆಗಿಡಗಳು ಹಾಗೆಯೆ ಉಳಿಯುವುವು. ಇದರಂತೆಯೆ ದೈವಾನುಗ್ರಹ ಮನುಷ್ಯನ ಮೇಲೆ ಬಿದ್ದರೆ ಯಾರಲ್ಲಿ ಭಕ್ತಿ, ಧರ್ಮ ಇವುಗಳ ಅಂಕುರವು ಇರುವುವೊ ಅವರು ಉತ್ತಮರಾಗಿ ಪವಿತ್ರತೆಯಿಂದ ಪೂರಿತರಾಗುವರು. ಆದರೆ ಯಾರು

ಕೆಲಸಕ್ಕೆಬಾರದ ಸಂಸಾರದಲ್ಲಿ ಮಗ್ನರಾಗಿರುವರೋ ಅವರು ಹಿಂದಿನಂತೆಯೇ ಇರುವರು.

೬೭೭. ಭಕ್ತನೊಬ್ಬನು ಯಾವಾಗಲೂ ದೇವರ ಹೆಸರನ್ನು ಹೇಳುತ್ತಾ ಜಪವನ್ನು ಮಾಡುತ್ತಿದ್ದನು. ಶ್ರೀರಾಮಕೃಷ್ಣರು ಅವನಿಗೆ ಒಂದೇ ಸ್ಥಳದಲ್ಲಿ ಏತಕ್ಕೆ ನಿಂತಿರುವೆ, ಮುಂದೆ ಹೊರಡು" ಎಂದರು. ಅದಕ್ಕೆ ಭಕ್ತನು "ಅವನ ಅನುಗ್ರಹವಿಲ್ಲದೆ ಅದು ಸಾಧ್ಯವಿಲ್ಲ" ಎಂದನು. ಶ್ರೀರಾಮಕೃಷ್ಣರು "ಅವನ ದಯೆ ಎಂಬ ತಂಗಾಳಿ ಸರ್ವದಾ ನಿನ್ನ ಮೇಲೆ ಬೀಸುತ್ತಿರುವುದು. ಸಂಸಾರಸಾಗರದಲ್ಲಿ ನೀನು ಬೇಗ ಮುಂದುವರಿಯ ಬೇಕಾದರೆ ಮನಸ್ಸೆಂಬ ದೋಣಿಯ ಪಟವನ್ನು ಹರಡು" ಎಂದರು.

೬೭೮. ಭಗವಂತನ ಅನುಗ್ರಹವೆಂಬ ತಂಗಾಳಿ ಸರ್ವದಾ ಬೀಸುತ್ತಿರುವುದು. ಸಂಸಾರ ಸಾಗರದಮೇಲೆ ಇರುವ ಸೋಮಾರಿಗಳಾದ ನಾವಿಕರು ಇದರಿಂದ ಉಪಯೋಗವನ್ನು ಪಡೆಯುವುದಿಲ್ಲ. ಆದರೆ ಜಾಗ್ರತರಾದ ಬಲಶಾಲಿಗಳಾದ ನಾವಿಕರು ಯಾವಾಗಲೂ ತಮ್ಮ ಮನಸ್ಸೆಂಬ ಪಟವನ್ನು ಹರಡಿ ಗುರಿಯನ್ನು ಬೇಗ ಸೇರುವರು.

೬೭೯. ಪ್ರಶ್ನೆ : ಇದ್ದಕ್ಕೆ ಇದ್ದಂತೆ ಏನೂ ಸಾಧ್ಯವಾಗುವುದಿಲ್ಲವೆ ?

ಉತ್ತರ : ಸಾಧಾರಣವಾಗಿ ಒಬ್ಬನು ಸಿದ್ಧನಾಗುವುದಕ್ಕೆ ಮುಂಚೆ ಬಹಳ ಸಾಧನೆಮಾಡಬೇಕು. ಬಾಬು ದ್ವಾರಕನಾಥ್ ಮಿತ್ರನನ್ನು ಒಂದು ದಿವಸದಲ್ಲಿ ಪ್ರಮುಖ ನ್ಯಾಯಾಸ್ಥಾನದ ನ್ಯಾಯಪತಿಯನ್ನಾಗಿ ಮಾಡಲಿಲ್ಲ. ಅವನು ಕಷ್ಟಪಟ್ಟು ಕೆಲಸಮಾಡಬೇಕಾಗಿತ್ತು. ಬೇಕಾದಷ್ಟು ಓದಬೇಕಾಗಿತ್ತು. ಯಾರಿಗೆ ಕಷ್ಟಪಡುವುದಕ್ಕೆ ಇಚ್ಛೆ ಇಲ್ಲವೊ ಅವರು ವರಮಾನವಿಲ್ಲದ ವಕೀಲರಾಗಿ ಬಿದ್ದಿರಬೇಕು. ಆದರೆ ದೈವಾನುಗ್ರಹದಿಂದ ಆಗಿಂದಾಗ್ಗೆ ಕೆಲವು ಅದ್ಭುತ ಘಟನೆಗಳು ನಡೆಯುವುವು. ಹಳ್ಳಿಯವನಂತಿದ್ದ ಕಾಳಿದಾಸನು ಸರಸ್ವತಿಯ ಅನುಗ್ರಹದಿಂದ ಭರತಖಂಡದ ಪ್ರಖ್ಯಾತ ಕವಿಯಾದಂತೆ.

೬೮೦. ಒಬ್ಬ ಗೃಹಸ್ಥ ಭಕ್ತ : ಸ್ವಾಮಿ ನೀವು ದೇವರನ್ನು ನೋಡಿರುವಿರೆಂದು ಕೇಳಿರುವೆನು. ನೀವು ನಮಗೂ ಕೂಡ ಆತನನ್ನು ನೋಡುವುದಕ್ಕೆ ಸಹಾಯಮಾಡಿ. ಭಗವಂತನ ನಿಜವಾದ ಸ್ಥಿತಿಯನ್ನು ಒಬ್ಬನು ಹೇಗೆ ಪಡೆಯಬಹುದು ?

ಶ್ರೀಗುರುದೇವರು : ಎಲ್ಲವೂ ಭಗವಂತನ ಅನುಗ್ರಹದ ಮೇಲಿದೆ. ದೇವರ ಸಾಕ್ಷಾತ್ಕಾರಕ್ಕೆ ಸತತ ದೀರ್ಘಪ್ರಯತ್ನ ಅವಶ್ಯಕ. ಒಂದು ಕೊಳದ ದಡದಲ್ಲಿ ಕುಳಿತುಕೊಂಡು "ಇದರಲ್ಲಿ ಮೀನುಗಳಿವೆ" ಎಂದು ಹೇಳಿದರೆ ಮೀನು ಸಿಕ್ಕುತ್ತವೆಯೆ? ಮೀನನ್ನು ಹಿಡಿಯುವುದಕ್ಕೆ ಬೇಕಾದ ವಸ್ತುಗಳನ್ನು ತೆಗೆದುಕೊಂಡುಬಾ. ಕೋಲು, ದಾರ, ಗಾಳ ಮೊದಲಾದುವುಗಳನ್ನು ತಾ. ಮೀನನ್ನು ಆಕರ್ಷಿಸುವುದಕ್ಕೆ ನೀರಿಗೆ ಏನಾದರೂ ತಿಂಡಿಯನ್ನು ಹಾಕು. ಆಗ ಆಳದಿಂದ ಮೀನು ಮೇಲೆದ್ದು ಹತ್ತಿರ ಬರುವುದು. ಆಗ ನೀನು ಅವುಗಳನ್ನು ನೋಡಿ ಹಿಡಿಯಬಹುದು. ನೀವು ಸುಮ್ಮನೆ ಕುಳಿತುಕೊಂಡು, ಸ್ವಲ್ಪವೂ ಪ್ರಯತ್ನ ಪಡದೆ ನಮಗೆ ದೇವರನ್ನು ತೋರಿಸಬೇಕು ಎನ್ನುತ್ತೀರಲ್ಲ. ನೀವು ನನ್ನನ್ನು ಹಾಲು ಹೆಪ್ಪುಹಾಕಿ, ಕಡೆದು, ಬೆಣ್ಣೆಮಾಡಿ ಬಾಯಿಗೆ ಇಡಿ ಎನ್ನುವಿರಿ. ಮೀನನ್ನು ಹಿಡಿದು ನಮ್ಮ ಕೈಗೆ ಕೊಡಿ ಎನ್ನುವಿರಿ. ನಿಮ್ಮ ಬೇಡಿಕೆ ಎಷ್ಟು ಅಸಂಬದ್ಧವಾಗಿರುವುದು.

೬೮೧ ಸಾಗರದ ಮಧ್ಯದಲ್ಲಿ ಪಟಸ್ತಂಬದಮೇಲೆ ಕುಳಿತ ಹಕ್ಕಿ ಒಂದೇ ಕಡೆ ಕುಳಿತು ಸಾಕಾಗಿ ವಿಶ್ರಾಂತಿಗಾಗಿ ಬೇರೆಯಾವುದಾದರೂ ಸ್ಥಳವನ್ನು ಹುಡುಕಲು ಹಾರಿಹೋಗುವುದು. ಆದರೆ ಬೇರೆ ಎಲ್ಲೂ ಸ್ಥಳವಿಲ್ಲದೆ ಕೊನೆಗೆ ತಾನು ಮೊದಲಿದ್ದ ಸ್ಥಳಕ್ಕೇ ಬರುವುದು. ಇದರಂತೆಯೆ ಪೂರ್ಣ ಅನುಭವವುಳ್ಳ ಮತ್ತು ಶಿಷ್ಯನ ಹಿತವನ್ನು ಕೋರುವ ಗುರುವಿನ ಶಿಸ್ತು ಮತ್ತು ಆತನು ವಿಧಿಸುವ ಕಾರ್ಯಗಳಿಗೆ ಸಾಧಾರಣ ಶಿಷ್ಯನು ಬೇಸರಪಡುವನು. ಗುರುವಿನಲ್ಲಿ ಭಕ್ತಿ ಮತ್ತು ಶ್ರದ್ಧೆಯನ್ನೆಲ್ಲ ಕಳೆದುಕೊಂಡು ಸ್ವಪ್ರಯತ್ನದಿಂದಲೇ ದೇವರನ್ನು ಸಾಧಿಸುವೆನೆಂದು ಹೋಗುವನು. ಆದರೆ ಬೇಕಾದಷ್ಟು ನಿಷ್ಪ್ರಯೋಜನ ವಾಗಿ ಪ್ರಯತ್ನಪಟ್ಟ ಮೇಲೆ ಕೊನೆಗೆ ಅವನು ಅದೇ ಗುರುವಿನ ಆಶೀರ್ವಾದ ಮತ್ತು ಅನುಗ್ರಹವನ್ನು ಪಡೆಯಲು ಬಂದೇ ಬರುವನು.

೬೮೨. ಗಾಳಿ ಬೀಸದೆ ಇರುವ ತನಕ ಸೆಕೆಯಿಂದ ಪಾರಾಗಲು ನಾವು ಬೀಸಣಿಗೆಯಿಂದ ಬೀಸಿಕೊಳ್ಳುತ್ತೇವೆ ಆದರೆ ಶ್ರೀಮಂತರು ಮತ್ತು ಬಡವರಿಗೆ ವಿಶ್ರಾಂತಿಯನ್ನು ಕೊಡುವ ತಂಗಾಳಿ ಬೀಸಲು ಮೊದಲಾದಾಗ ನಾವು ಬೀಸಣಿಗೆಯನ್ನು ಬಿಡುತ್ತೇವೆ. ದೇವರ ಅನುಗ್ರಹ ದೊರಕದೆ ಇರುವ ತನಕ ನಮ್ಮ ಪರಮಗುರಿಯನ್ನು ಸೇರಲು ನಾವೆ ಪ್ರಯತ್ನಿಸಬೇಕು. ದೇವರ ಅನುಗ್ರಹದಿಂದ ಆ ಸಹಾಯ

ಒದಗಿದರೆ ಒಬ್ಬನು ಕಷ್ಟಪಡುವುದನ್ನು ನಿಲ್ಲಿಸಬಹುದು. ಇಲ್ಲದೆ ಇದ್ದರೆ ಪ್ರಯತ್ನಿಸಬೇಕು.

೬೮೩. ತಂಗಾಳಿ ಬೀಸುತ್ತಿರುವಾಗ ಬೀಸಣಿಗೆ ಪ್ರಯೋಜನವಿಲ್ಲ. ದೇವರ ಅನುಗ್ರಹವನ್ನು ಪಡೆದಮೇಲೆ ಪ್ರಾರ್ಥನೆ ಮತ್ತು ತಪಸ್ಸುಗಳನ್ನು ಬಿಡಬಹುದು.

೬೮೪. "ಒಬ್ಬನಿಗೆ ದೇವರ ಅನುಗ್ರಹ, ಗುರುವಿನ ಅನುಗ್ರಹ ಮತ್ತು ಭಕ್ತರ ಅನುಗ್ರಹವೆಲ್ಲ ದೊರಕಿದರೂ ನಾಲ್ಕನೆಯದಾದ ಆತ್ಮಾನುಗ್ರಹವಿಲ್ಲದೆ ಇದ್ದರೆ ಅವನು ನಾಶವಾಗುವನು. ಮೊದಲನೆಯ ಮೂರು ಅನುಗ್ರಹಗಳನ್ನೆಲ್ಲ ಒಬ್ಬನು ಪಡೆಯುವಷ್ಟು ಅದೃಷ್ಟಶಾಲಿಯಾಗಿರಬಹುದು. ಆದರೆ ಒಬ್ಬನ ಮನಸ್ಸೆ ಅದರ ಮೇಲೆ ಇಲ್ಲದಿದ್ದರೆ, ಬಂಧನದಿಂದ ಪಾರಾಗಲು ಅವನಿಗೇ ಇಚ್ಛೆ ಇಲ್ಲದಿದ್ದರೆ, ಉಳಿದವುಗಳಿಂದ ಏನೂ ಪ್ರಯೋಜನವಿಲ್ಲ.

೬೮೫. ನೀನು ಎಷ್ಟು ಪ್ರಯತ್ನಪಟ್ಟರೂ ದೇವರ ಅನುಗ್ರಹವಿಲ್ಲದೆ ಇದ್ದರೆ ಏನನ್ನೂ ಪಡೆಯಲಾರೆ ದೇವರ ಅನುಗ್ರಹವಿಲ್ಲದೆ ನಾವು ಅವನನ್ನು ನೋಡಲಾರೆವು. ಆದರೆ ದೇವರ ಅನುಗ್ರಹ ಬಹಳ ಸುಲಭವಾಗಿ ಸಿಕ್ಕುವುದಿಲ್ಲ. ನಿನ್ನ ಮನಸ್ಸಿನ ಅಹಂಕಾರವನ್ನು ಸಂಪೂರ್ಣ ಹೊರಗೆ ಅಟ್ಟಬೇಕು "ನಾನು ಮಾಡುತ್ತಿರುವೆನು" ಎಂಬ ಅಹಂಕಾರವಿದ್ದರೆ ನೀನು ಎಂದಿಗೂ ದೇವರನ್ನು ನೋಡಲಾರೆ. ಉಗ್ರಾಣದಲ್ಲಿ ಯಾರೋ ಒಬ್ಬರು ಆಗಲೆ ಇದ್ದರೆ, ಉಗ್ರಾಣದಿಂದ ಮನೆಯ ಯಜಮಾನನಿಗೆ ಯಾವುದಾದರೂ ಸಾಮಾನನ್ನು ತೆಗೆದುಕೊಂಡುಬಾ ಎಂದು ಹೇಳಿದರೆ, ಅವನು "ಆಗಲೆ ಉಗ್ರಾಣದಲ್ಲಿ ಯಾರೋ ಇರುವರು. ಅವನಿಗೆ ತರುವುದಕ್ಕೆ ಹೇಳಿ ನಾನು ಅಲ್ಲಿಗೆ ಹೋಗುವ ಅವಶ್ಯಕವಿಲ್ಲ" ಎಂದು ಹೇಳುವನು. ನಾನೆ ಮಾಡುತ್ತಿರುವೆನು ಎಂದು ಯಾರು ತಿಳಿಯುವರೊ ಅವರ ಹೃದಯದಲ್ಲಿ ದೇವರೆಂದಿಗೂ ಕಾಣುವುದಿಲ್ಲ.

೬೮೬. ಅವನ ದಯೆಯಿಂದ ಅವನು ಕಾಣಿಸಿಕೊಳ್ಳುತ್ತಾನೆ. ಅವನು ಜ್ಞಾನಭಾಸ್ಕರ. ಅವನ ಕಿರಣ ಜಗತ್ತಿಗೆ ವಿವೇಕದ ಶಕ್ತಿಯನ್ನು ತಂದಿದೆ. ಆದರಿಂದ ನಾವು ಪರಸ್ಪರ ತಿಳಿಯುವುದಕ್ಕೆ ಮತ್ತು ಹಲವು ಬಗೆಯ ವಿದ್ಯೆಯನ್ನು ಕಲಿಯುವುದಕ್ಕೆ ಸಾಧ್ಯವಾಗಿದೆ. ಅವನೇ ತನ್ನ

ಮುಖದ ಮೇಲೆ ತನ್ನ ಜ್ಯೋತಿಯನ್ನು ತಿರುಗಿಸಿಕೊಂಡಾಗ ಮಾತ್ರ ನಾವು ಅವನನ್ನು ನೋಡಬಹುದು.

# ಅಧ್ಯಾಯ ೧೫

## ಸಾಧನೆಗೆ ಸಹಾಯಕರು

## ಗುರು

### ಗುರುವಿನ ಭಾವನೆ

೬೮೭. ಯಾರು ಯಾರಿಗೆ ಗುರು? ಭಗವಂತನೊಬ್ಬನೆ ಜಗದ್ಗುರು ಅವನೊಬ್ಬನೆ ಮಾರ್ಗದರ್ಶಕ

೬೮೮. ಯಾರು ತನ್ನ ಗುರುವನ್ನು ಕೇವಲ ಮನುಷ್ಯನೆಂದು ಭಾವಿಸುತ್ತಾರೆಯೊ ಅವನ ಭಕ್ತಿ ಮತ್ತು ಪ್ರಾರ್ಥನೆಗಳಿಂದ ಅವನಿಗೆ ಏನೂ ಪ್ರಯೋಜನ ಸಿಕ್ಕುವುದಿಲ್ಲ. ನಾವು ನಮ್ಮ ಗುರುವನ್ನು ಸಾಧಾರಣ ಮನುಷ್ಯನೆಂದು ಭಾವಿಸಬಾರದು. ಶಿಷ್ಯನು ಇಷ್ಟದೇವತೆಯನ್ನು ಕಾಣುವುದಕ್ಕೆ ಮುಂಚೆ ಗುರುವೆ ವಿಚಿತ್ರ ಪರಿಣಾಮಹೊಂದಿ ದೇವರನ್ನು ತೋರುವನು. ಆಗ ಶಿಷ್ಯನಿಗೆ ಗುರು ಮತ್ತು ಇಷ್ಟದೇವತೆ ಒಂದಾಗಿ ಕಾಣುವುದು. ಯಾವ ವರವನ್ನು ಕೇಳಿದರೂ ದೇವತ್ವವನ್ನು ಪಡೆದಿರುವ ಗುರುವು ಶಿಷ್ಯನಿಗೆ ಕೊಡುವನು. ಗುರು ಶಿಷ್ಯನನ್ನು ನಿರ್ವಾಣದ ಪರಮಪದದವರೆವಿಗೂ ಕರೆದೊಯ್ಯುವನು. ಅಥವಾ ಶಿಷ್ಯನು ಇಚ್ಛೆ ಪಟ್ಟರೆ, ಪೂಜ್ಯ, ಪೂಜಕ ಭಾವದಿಂದ ದ್ವೈತರಂಗದಲ್ಲಿ ಬೇಕಾದರೂ ಇರಬಹುದು. ಅವನು ಏನು ಪ್ರಾರ್ಥಿಸಿದರೂ ಗುರು ಅದನ್ನು ಕರುಣಿಸುವನು.

೬೮೯. ಮಾನವ ಗುರು ಮಂತ್ರವನ್ನು ಕಿವಿಗೆ ಹೇಳುವನು. ದೇವಗುರು ಶಿಷ್ಯನ ಜೀವಕ್ಕೆ ಮಂತ್ರವನ್ನು ಧಾರೆ ಎರೆಯುವನು.

೬೯೦. ಗುರು ಮಧ್ಯಸ್ಥಗಾರ. ಅವನು ದೇವರು ಮತ್ತು ಮಾನವನನ್ನು ಒಟ್ಟಿಗೆ ತರುವನು. ಮದುವೆ ಮಾಡುವವನು ಗಂಡು ಹೆಣ್ಣನ್ನು ಒಟ್ಟಿಗೆ ತರುವಂತೆ.

೬೯೧. ಗುರು ದೊಡ್ಡ ಗಂಗಾನದಿಯಂತೆ. ಮನುಷ್ಯರು ಕಸವನ್ನೆಲ್ಲಾ ಗಂಗಾನದಿಗೆ ಎಸೆಯುವರು. ಆದರೆ ಇದರಿಂದ ಅದರ

ಪಾವನತೆ ಕಡಿಮೆಯಾಗುವುದಿಲ್ಲ. ಇದರಂತೆಯೇ ಗುರು ಎಲ್ಲಾ ವಿಧದ ನೀಚ ಅಪಮಾನ ಮತ್ತು ನಿಂದೆಗಳಿಂದ ಮೇಲಿರುವನು.

೬೯೨. ಮೂರುಜನ ವೈದ್ಯರಿರುವಂತೆ ಮೂರು ಬಗೆಯ ಗುರುಗಳಿರುವರು. ಒಂದು ಬಗೆಯ ವೈದ್ಯನನ್ನು ಕರೆದಾಗ ರೋಗಿಯನ್ನು ನೋಡಿ, ಅವನ ನಾಡಿಯನ್ನು ಪರೀಕ್ಷಿಸಿ, ಅದಕ್ಕೆ ಬೇಕಾದ ಔಷಧಿಯನ್ನು ತೆಗೆದುಕೊಳ್ಳುವಂತೆ ಹೇಳುವನು. ರೋಗಿ ತೆಗೆದುಕೊಳ್ಳದೆ ಇದ್ದರೆ ಇದರ ವಿಚಾರವಾಗಿ ಹೆಚ್ಚು ತೊಂದರೆ ತೆಗೆದುಕೊಳ್ಳದೆ ಹೊರಟುಹೋಗುವನು. ಇಂತಹವರು ಬಹಳ ಕೊನೆಯ ತರಗತಿಯ ವೈದ್ಯರು. ಇದರಂತೆಯೆ ಕೆಲವು ಗುರುಗಳು ಇರುವರು. ಶಿಷ್ಯರು ತಮ್ಮ ಉಪದೇಶಕ್ಕೆ ಏನಾದರೂ ಗಮನಕೊಡುವರೆ ಅದನ್ನು ಆಚರಣೆಗೆ ತರುವರೆ, ಎಂದು ನೋಡಿಕೊಳ್ಳುವ ತೊಂದರೆ ತೆಗೆದುಕೊಳ್ಳುವುದಿಲ್ಲ. ಎರಡನೆಯ ವಿಧದ ವೈದ್ಯರು ರೋಗಿಗೆ ಔಷಧಿಯನ್ನು ತೆಗೆದುಕೊಳ್ಳುವಂತೆ ಮಾತ್ರ ಹೇಳುವುದಿಲ್ಲ. ಇನ್ನೂ ಮುಂದೆ ಹೋಗುವರು. ಅವರು ಔಷಧಿ ತೆಗೆದುಕೊಳ್ಳಲು ಅನುಮಾನಿಸಿದರೆ ಅದನ್ನು ತೆಗೆದುಕೊಳ್ಳುವಂತೆ ಬುದ್ಧಿ ಹೇಳುವರು. ಹೀಗೆಯೇ ಗುರು. ಜನರನ್ನು. ಧರ್ಮ, ಭಕ್ತಿ ಮತ್ತು ಸತ್ಯದ ಮಾರ್ಗದಲ್ಲಿ ಹೇಗಾದರೂ ನಡೆಯುವಂತೆ ಸಾಧ್ಯವಾದುದನ್ನೆಲ್ಲಾ ಮಾಡುವವರು ಎರಡನೆಯ ದರ್ಜೆಗೆ ಸೇರಿದವರು. ಅತ್ಯುತ್ತಮ ಮೂರನೆ ವರ್ಗಕ್ಕೆ ಸೇರಿದ ವೈದ್ಯರು ತಮ್ಮ ಬುದ್ಧಿವಾದದಿಂದ ಪ್ರಯೋಜನವಿಲ್ಲದೆ ಇದ್ದರೆ ಒಲಪ್ರಯೋಗ ಮಾಡುವುದಕ್ಕೂ ಹಿಂದೆಗೆಯುವುದಿಲ್ಲ. ಅವರು ರೋಗಿಯ ಎದೆಯ ಮೇಲೆ ಕಾಲನ್ನಿಟ್ಟು ಗಂಟಲಿನೊಳಗೆ ಔಷಧಿಯನ್ನು ಬಲಾತ್ಕಾರವಾಗಿ ಹೋಗುವ ಹಾಗೆ ಮಾಡುವುದಕ್ಕೂ ಹಿಂದೆಗೆಯುವುದಿಲ್ಲ. ಇದರಂತೆಯೆ ಧರ್ಮಮಾರ್ಗದಲ್ಲಿ ನಡೆಯುವಂತೆ ತಮ್ಮ ಶಿಷ್ಯರ ಮೇಲೆ ಆವಶ್ಯಕತೆ ಇದ್ದರೆ ಬಲಾತ್ಕಾರವನ್ನೂ ಮಾಡುವರು. ಇವರು ಅತ್ಯುತ್ತಮ ವರ್ಗಕ್ಕೆ ಸೇರಿದವರು.

## ಗುರುವಿನ ಆವಶ್ಯಕತೆ

೬೯೩. ನಮಗೆ ಯಾವುದನ್ನಾದರೂ ಕಲಿಸುವ ಎಲ್ಲರನ್ನೂ ಗುರುಗಳೆಂದು ಕರೆಯುವುದಕ್ಕೆ ಬದಲಾಗಿ ಯಾರೋ ಒಬ್ಬರನ್ನು ಮಾತ್ರ ಗುರುಗಳೆಂದು ಏತಕ್ಕೆ ಕರೆಯಬೇಕು? ಒಂದು ಹೊಸದೇಶಕ್ಕೆ ಹೋದಾಗ ದಾರಿತೋರಿಸುವವನು ಹೇಳಿದಂತೆ ಕೇಳಬೇಕು. ಎಲ್ಲರ

ಬುದ್ಧಿವಾದವನ್ನು ಕೇಳಿದರೆ ಕೊನೆಗೆ ವ್ಯವಸ್ಥೆ ಕೆಡುವುದು ಆದಕಾರಣ ದೇವರ ಹತ್ತಿರ ಹೋಗುವಾಗ ಅದಕ್ಕೆ ದಾರಿ ಗೊತ್ತಿರುವ ಒಬ್ಬ ಗುರುವಿನ ಮಾತನ್ನು ಮಾತ್ರ ಪೂರ್ಣವಾಗಿ ಕೇಳಬೇಕು.

೬೯೪. ಚದುರಂಗದ ಆಟದಲ್ಲಿ ಸುಮ್ಮನೆ ನೋಡುವವರು, ಹೇಗೆ ಹೋದರೆ ಸರಿ ಎಂಬುದನ್ನು ಆಡುವವರಿಗಿಂತ ಚೆನ್ನಾಗಿ ಬಲ್ಲರು. ಪ್ರಾಪಂಚಿಕರು ತಾವು ಬಹಳ ಬುದ್ಧಿವಂತರೆಂದು ತಿಳಿದುಕೊಳ್ಳುವರು. ಆದರೆ ಅವರು ಹಣ ಕೀರ್ತಿ ಇಂದ್ರಿಯ ಸುಖಾಭಿಲಾಷೆಗಳಲ್ಲಿ ಆಸಕ್ತರಾಗಿರುವರು. ನಿಜವಾಗಿಯೂ ಅವರು ಆಟದಲ್ಲಿ ಮಗ್ನರಾಗಿರುವುದರಿಂದ ಸರಿಯಾಗಿ ನಡೆಸುವುದು ಬಹಳ ಕಷ್ಟ. ಪ್ರಪಂಚವನ್ನು ತೊರೆದ ಮಹಾತ್ಮರು ವಿಷಯವಸ್ತುಗಳಲ್ಲಿ ಆಸಕ್ತರಾಗಿಲ್ಲ. ಚದುರಂಗವಾಡುವಾಗ ಅವರು ಪ್ರೇಕ್ಷಕರಂತೆ. ಅವರು ವಸ್ತುವಿನ ನಿಜಸ್ಥಿತಿಯನ್ನು ತಿಳಿಯಬಲ್ಲರು. ಪ್ರಾಪಂಚಿಕರಿಗಿಂತ ಅವರು ವಸ್ತುವನ್ನು ಚೆನ್ನಾಗಿ ಪರೀಕ್ಷಿಸಬಲ್ಲರು. ಆದಕಾರಣವೆ ನಾವು ಧಾರ್ಮಿಕ ಜೀವನವನ್ನು ನಡೆಸುವಾಗ ಯಾರು ದೇವರನ್ನು ಧ್ಯಾನಿಸುತ್ತಾರೆಯೊ ಮತ್ತು ಆತನನ್ನು ಸಾಕ್ಷಾತ್ಕಾರಮಾಡಿಕೊಂಡಿರುವರೊ ಅವರ ಮಾತನ್ನು ಮಾತ್ರ ನಂಬಬೇಕು. ನಾವು ನ್ಯಾಯಕ್ಕೆ ಸಂಬಂಧಪಟ್ಟ ಬುದ್ಧಿವಾದವನ್ನು ಕೇಳುವಾಗ ಅದೇ ವೃತ್ತಿಯಲ್ಲಿರುವ ವಕೀಲರ ಅಭಿಪ್ರಾಯವನ್ನು ಕೇಳುವುದಿಲ್ಲವೆ ?

೬೯೫. ದೇವರಿಗೆ ಸಂಬಂಧಪಟ್ಟ ರಹಸ್ಯವನ್ನು ತಿಳಿಯಬೇಕೆಂದು ನೀನು ಅತಿ ಕಾತುರನಾಗಿದ್ದರೆ, ಅವನು ನಿನಗೆ ಸದ್ಗುರುವನ್ನು ಕಳುಹಿಸುತ್ತಾನೆ. ಗುರುವನ್ನು ಹುಡುಕುವುದಕ್ಕೆ ನೀನು ತೊಂದರೆ ತೆಗೆದುಕೊಳ್ಳಬೇಕಾಗಿಲ್ಲ.

೬೯೬. ಯಾರು ಸತ್ಯವಾಗಿ ಹೃತ್ಪೂರ್ವಕ ಪ್ರಾರ್ಥನೆ ಮತ್ತು ಅತಿನಿಕಟವಾದ ವ್ಯಾಕುಲದಿಂದ ದೇವರ ಹತ್ತಿರ ತಾವೇ ಹೋಗಬಲ್ಲರೊ ಅವರಿಗೆ ಯಾವ ಗುರುಗಳೂ ಬೇಕಾಗಿಲ್ಲ ಆದರೆ ಮಾನವನಲ್ಲಿ ಅಂತಹ ಅತಿನಿಕಟ ವ್ಯಾಕುಲತೆ ಬಹಳ ಅಪರೂಪ. ಆದಕಾರಣವೆ ಗುರುವಿನ ಆವಶ್ಯಕತೆ. ಗುರು ಒಬ್ಬನೆ, ಆದರೆ ಉಪಗುರುಗಳು ಹಲವರಿರುವರು. ಯಾರಿಂದ ನಾವು ಯಾವುದಾದರೊಂದು ವಿಷಯವನ್ನು ಕಲಿತುಕೊಳ್ಳುವೆವೋ ಅವರು ಉಪಗುರುಗಳು. (ಭಾಗವತದಲ್ಲಿ ಬರುವ) ಪ್ರಖ್ಯಾತನಾದ ಅವಧೂತನಿಗೆ ಇಪ್ಪತ್ತುನಾಲ್ಕು ಅಂತಹ ಗುರುಗಳು ಇದ್ದರು.

# ಗುರು ಶಿಷ್ಯರ ಸಂಬಂಧ

೬೯೭. ಕಥೆಯಲ್ಲಿ ಬರುವ ಮುತ್ತಿನಚಿಪ್ಪಿನಕಪ್ಪೆ, ಸಮುದ್ರದ ತಳದಲ್ಲಿ ವಾಸಮಾಡುವುದು. ಸ್ವಾತೀನಕ್ಷತ್ರದಲ್ಲಿ ಬರುವ ಮಳೆಯ ಹನಿಯನ್ನು ಹಿಡಿದುಕೊಳ್ಳುವುದಕ್ಕಾಗಿ ಅದು ಸಮುದ್ರದ ಮೇಲೆ ಬರುವುದು ಚಿಪ್ಪನ್ನು ತೆರೆದು ಸಮುದ್ರದ ಮೇಲೆ ಬೀಳುವ ವಿಶೇಷ ಸ್ವಾತೀ ಮಳೆಯ ಹನಿಗಾಗಿ ಕಾಯುತ್ತ ತೇಲುತ್ತಿರುವುದು. ಅದು ಬಿದ್ದನಂತರ ಸಮುದ್ರದೊಳಗೆ ಮುಳುಗಿ ಹನಿಯನ್ನು ಸುಂದರವಾದ ಮುತ್ತನ್ನಾಗಿ ಮಾಡುವ ತನಕ ಅಲ್ಲಿರುವುದು. ಇದರಂತೆಯೆ ಕೆಲವು ಉತ್ಸಾಹಪೂರಿತರಾದ ಸಾಧಕರು ಸಚ್ಚಿದಾನಂದದಲ್ಲಿ ಬಾಗಿಲನ್ನು ತೆಗೆಯುವ, ಜೀವಿಗಳನ್ನು ಉದ್ಧಾರಮಾಡುವ ಮಂತ್ರವನ್ನು ಸದ್ಗುರುವಿನಿಂದ ಪಡೆಯುವುದಕ್ಕೆ ಸ್ಥಳದಿಂದ ಸ್ಥಳಕ್ಕೆ ಹೋಗುವರು. ಕಷ್ಟಪಟ್ಟು ಹೀಗೆ ಹುಡುಕಾಡುವಾಗ ಅಂತಹ ಸದ್ಗುರು ಸಿಕ್ಕಿ ಅವನಿಂದ ಬಂಧನಗಳನ್ನು ನಿರ್ಮೂಲ ಮಾಡುವ ಮಂತ್ರವನ್ನು ಪಡೆಯುವಷ್ಟು ಅದೃಷ್ಟಶಾಲಿಯಾಗಿದ್ದರೆ, ಅವನು ತಕ್ಷಣವೆ ಸಮಾಜವನ್ನು ತೊರೆದು, ತನ್ನ ಅಂತರಂಗದ ಆಳಕ್ಕೆ ಹೋಗಿ, ಪರಮಶಾಂತಿ ಸಿಕ್ಕುವತನಕ ಅಲ್ಲಿರುವನು.

೬೯೮. ಅಂತಹ ಗುರು, ಶಾಸ್ತ್ರ ಮುಂತಾದ ಗ್ರಂಥ ಪಾಂಡಿತ್ಯವಿಲ್ಲದವನಂತೆ ತೋರಿದರೆ ಅಂಜಬೇಕಾಗಿಲ್ಲ. ಅವರು ಪಂಡಿತರಲ್ಲವೆಂದು ಭಯಪಡಬೇಡಿ. ಜೀವನದ ಧಾರ್ಮಿಕ ವಿಚಾರಗಳಲ್ಲಿ ಕೊರತೆ ಎಂದಿಗೂ ಅವರಲ್ಲಿ ಕಂಡು ಬರುವುದಿಲ್ಲ. ಶಾಸ್ತ್ರಗಳಲ್ಲಿರುವ ಜ್ಞಾನಗಳಿಗಿಂತ ಅತ್ಯುತ್ತಮವಾದ ಪ್ರತ್ಯಕ್ಷ ಅನುಭವದ ಪರಂಪರೆ ಅವರಿಗೆ ಎಂದಿಗೂ ಬತ್ತದಂತೆ ಬರುತ್ತಿರುವುದು.

೬೯೯. ಒಬ್ಬನು ತನ್ನ ಗುರುವಿನ ಶೀಲದ ವಿಚಾರವಾಗಿ ಅನುಮಾನಿಸುತ್ತಿದ್ದನು. ಅದಕ್ಕೆ ಶ್ರೀ ರಾಮಕೃಷ್ಣರು "ಸುಮ್ಮನೆ ಅನುಮಾನದಲ್ಲಿ ಏತಕ್ಕೆ ಕಾಲವನ್ನು ಕಳೆಯುತ್ತಿರುವೆ? ಮುತ್ತನ್ನು ತೆಗೆದುಕೊಂಡು ಚಿಪ್ಪನ್ನು ಬಿಸಾಡಿ. ಗುರು ನಿನಗೆ ಕೊಟ್ಟಿರುವ ಮಂತ್ರದ ಮೇಲೆ ಧ್ಯಾನಮಾಡು. ಗುರುವಿನ ಮಾನವ ಸಹಜವಾದ ತಪ್ಪುಗಳನ್ನು ಲೆಕ್ಕಿಸಬೇಡ" ಎಂದರು.

೭೦೦. ನಿನ್ನ ಗುರುವನ್ನು ನಿಂದಿಸುವ ಯಾರ ಮಾತಿಗೂ ಕಿವಿಗೊಡಬೇಡ. ಆತನು ನಿಮ್ಮ ತಾಯಿ ತಂದೆಗಳಿಗಿಂತಲೂ ಶ್ರೇಷ್ಠ-

ನಿನ್ನೆದುರಿಗೆ ಯಾರಾದರೂ ನಿಮ್ಮ ತಾಯಿ ತಂದೆಗಳನ್ನು ನಿಂದಿಸಿದರೆ ನೀನು ಸುಮ್ಮನೆ ಇರುವೆಯ ? ಸಾಧ್ಯವಾದರೆ ಹೋರಾಡಲೇ ಬೇಕು. ಹಾಗೆಯೆ ಗುರುವಿನ ಗೌರವವನ್ನೂ ಕಾಪಾಡಬೇಕು.

೭೦೧. ಶಿಷ್ಯ ಗುರುವನ್ನು ಎಂದಿಗೂ ನಿಂದಿಸಬಾರದು. ಗುರು ಹೇಳಿದುದನ್ನು ಮರುಮಾತಿಲ್ಲದೆ ಪಾಲಿಸಬೇಕು. ಬಂಗಾಳಿಯ ಗಾದೆ ಯೊಂದು ಹೀಗೆ ಹೇಳುತ್ತದೆ: "ನನ್ನ ಗುರು ಹೆಂಡದ ಅಂಗಡಿಗೆ ಹೋದರೂ ಅವನು ಪವಿತ್ರ ನಿತ್ಯಾನಂದ—ನನ್ನ ಗುರು ಹೆಂಡಗುಡುಕರು ಮತ್ತು ಪಾಪಿಗಳ ಮನೆಗೆ ಹೋದರೂ ಅವನು ನನ್ನ ಭಾಗಕ್ಕೆ ಪರಿಶುದ್ಧ ಅಕಳಂಕ ಗುರು"

೭೦೨. ಭಕ್ತಿ ಸಹಜವಾಗಿದ್ದರೆ ಸಾಧಾರಣ ವಸ್ತುವಾದರೂ ಅದು ಭಕ್ತನಿಗೆ ದೇವರನ್ನು ನೆನೆಯುವಂತೆ ಮಾಡಿ ಆತನಲ್ಲಿ ಐಕ್ಯವಾಗು ವಂತೆ ಮಾಡುವುದು. ಹೇಗೆ ಭಗವಾನ್ ಶ್ರೀಕೃಷ್ಣಚೈತನ್ಯನು "ಮದ್ದ ಲೆಯನ್ನು ಮಾಡಿದ ಮಣ್ಣಿದು" ಎಂಬ ಯೋಚನೆಯಿಂದ ಸಮಾಧಿ ಮಗ್ನನಾದುದನ್ನು ನೀವು ಕೇಳಿಲ್ಲವೆ? ಒಂದು ಸಾರಿ ಶ್ರೀ ಚೈತನ್ಯನು ಒಂದು ಹಳ್ಳಿಗೆ ಹೋಗುತ್ತಿದ್ದಾಗ ಅಲ್ಲಿಯ ಜನರು ಮದ್ದಲೆಯನ್ನು ಮಾಡುತ್ತಿದ್ದರೆಂದು ಗೊತ್ತಾಯಿತು. ಇದು ಮದ್ದಲೆಯನ್ನು ಮಾಡುವ ಮಣ್ಣು ಎಂದು ಕೇಳಿದ ತಕ್ಷಣವೆ ಬಾಹ್ಯ ಪ್ರಜ್ಞಾಶೂನ್ಯನಾದನು. ಏಕೆಂಗರೆ ಆ ಮಣ್ಣಿನಿಂದ ಮದ್ದಲೆಗಳಾಗಿ ಅವು ಭಜನೆಯ ಸಮಯದಲ್ಲಿ ಉಪಯೋಗಿಸಲ್ಪಡುತ್ತಿದ್ದವು. ಭಜನೆ ನಮ್ಮ ಅಂತರ್ಯಾಮಿಯಾದ ಸೌಂದರ್ಯ ನಿಧಿಯಾದ ಭಗವಂತನ ಸ್ತೋತ್ರಕ್ಕೆ ಸಂಬಂಧಪಟ್ಟದ್ದು. ಈ ರೀತಿ ಭಾವಗಳ ಪರಂಪರೆ ಅವನ ಮನಸ್ಸಿಗೆ ತೋರಿ ತಕ್ಷಣವೆ ಅವನ ಮನಸ್ಸು ದೇವರಲ್ಲಿ ನೆಲೆಸಿತು. ಇದರಂತೆಯೆ ಒಬ್ಬನಿಗೆ ತನ್ನ ಗುರುವಿನಲ್ಲಿ ನಿಜವಾದ ಭಕ್ತಿಯಿದ್ದರೆ ಅವನ ನೆಂಟರನ್ನು ನೋಡಿ ದಾಗಲೂ ಗುರುವಿನ ನೆನಪಾಗುವುದು. ಇದು ಮಾತ್ರವಲ್ಲ. ತನ್ನ ಗುರುವಿನ ಹಳ್ಳಿಯಿಂದ ಬಂದ ಜನರನ್ನು ನೋಡಿದಾಗಲೂ ಅವನ ಮನಸ್ಸು ಗುರುವಿನ ಸಮೀಪಕ್ಕೆ ಹೋಗುವುದು. ಪದೇಪದೇ ಅವರಿಗೆ ನಮಸ್ಕಾರ ಮಾಡುವನು. ಅವರ ಪಾದಧೂಳಿಯನ್ನು ತನ್ನ ತಲೆಯ ಮೇಲೆ ಎಸೆದುಕೊಳ್ಳುವನು. ಅವರಿಗೆ ಮನಃತೃಪ್ತಿ ಭೋಜನವನ್ನು ಮಾಡಿಸಿ ಎಲ್ಲಾ ಸೇವೆಯನ್ನೂ ಮಾಡುವನು. ಈ ಸ್ಥಿತಿಯಲ್ಲಿ ಶಿಷ್ಯ ತನ್ನ ಗುರುವಿನಲ್ಲಿರುವ ಯಾವ ದೋಷವನ್ನೂ ಕಾಣಲಾರ. ಆಗ ಮಾತ್ರ

ಆತನು “ ನನ್ನ ಗುರು ಹೆಂಡದ ಅಂಗಡಿಗೆ ಹೋದರೂ ಅವನು ದೇವರು, ಸಚ್ಚಿದಾನಂದಸ್ವರೂಪನು ” ಎನ್ನುವನು. ಮಾನವನಾಗಿರುವಾಗ ಕೇವಲ ಸುಗುಣಗಳ ನಿಧಿಯಾಗಿ ಸ್ವಲ್ಪವೂ ದೋಷವಿಲ್ಲದೆ ಇರಲಾರ. ಶಿಷ್ಯ ತನ್ನ ಭಕ್ತಿಯಿಂದ ಗುರುವನ್ನು ಮನುಷ್ಯನಂತೆ ಕಾಣುವುದಿಲ್ಲ. ಅವನಿಗೆ ಗುರು ಪ್ರತ್ಯಕ್ಷದೇವರು. ಕಾಮಾಲೆರೋಗದಲ್ಲಿರುವವನ ಕಣ್ಣಿಗೆ ಎಲ್ಲವೂ ಹಳದೀ ಬಣ್ಣದಂತಿರುತ್ತದೆ. ಅವನ ಭಕ್ತಿ ಆಗ ಅವನಿಗೆ ದೇವರೆ ಸರ್ವವೂ ಆಗಿರುವನೆಂದು ತೋರುವುದು. ಆತನು ಸ್ವಾಮಿಯಾಗಿರುವನು, ತಂದೆ ತಾಯಿಯಾಗಿರುವನು, ಮನುಷ್ಯ ಮತ್ತು ಪ್ರಾಣಿಯಾಗಿರುವನು, ಚರಾಚರ ವಸ್ತುಗಳೂ ಕೂಡ ಆತನೆ ಆಗಿರುವನು.

## ಅವತಾರ

### ಅವತಾರವೆಂದರೇನು ?

೭೦೩. ಅವತಾರವೆಂದರೆ ದೇವರಿಂದ ಬಂದ ಒಬ್ಬ ಮಾನವ ಸಂದೇಶಕ. ಅವನು ದೊಡ್ಡ ಚಕ್ರಾಧಿಪತ್ಯದಲ್ಲಿರುವ ವೈಸರಾಯಿಯಂತೆ. ದೂರದ ಯಾವುದಾದರೊಂದು ದೇಶದಲ್ಲಿ ಗಲಭೆಯಾದಾಗ ಅದನ್ನು ಅಡಗಿಸಲು ದೊರೆ ವೈಸರಾಯಿಯನ್ನು ಕಳುಹಿಸುವಂತೆ, ಜಗದ ಯಾವ ಮೂಲೆಯಲ್ಲಾದರೂ ಧರ್ಮಗ್ಲಾನಿಯಾದರೆ ಧರ್ಮವನ್ನು ಉದ್ಧಾರಮಾಡುವುದಕ್ಕಾಗಿ ದೇವರು ದೇವದೂತನನ್ನು ಕಳುಹಿಸುವನು.

೭೦೪. ರಾಮ ಮತ್ತು ಸೀತೆ, ಕೃಷ್ಣ ಮತ್ತು ರಾಧೆ ಮುಂತಾದವರು ಚಾರಿತ್ರಿಕ ವ್ಯಕ್ತಿಗಳಲ್ಲವೆಂದೂ, ಕೇವಲ ಕಾಲ್ಪನಿಕ ವ್ಯಕ್ತಿಗಳೆಂದೂ, ಅಥವಾ ಶಾಸ್ತ್ರಗಳ ಸತ್ಯವಿರುವುದು ಅವುಗಳ ರಹಸ್ಯಾರ್ಥದಲ್ಲಿ ಎಂದು ತಿಳಿಯಬೇಡಿ. ನಿಮ್ಮಂತೆಯೇ ಅವರು ರಕ್ತಮಾಂಸದಿಂದ ಕೂಡಿದ ಮಾನವರು. ಆದರೆ ಅವರು ದೇವಾಂಶರಾದುದರಿಂದ ಅವರ ಜೀವನವನ್ನು ನೀವು ಚಾರಿತ್ರಿಕ ದೃಷ್ಟಿಯಿಂದಲಾದರೂ ಆಗಲಿ ಅಥವಾ ಲಾಕ್ಷಣಿಕ ದೃಷ್ಟಿಯಿಂದಲಾದರೂ ಆಗಲಿ ನೋಡಬಹುದು. ಅಲೆಗಳು ಸಾಗರಕ್ಕೆ ಹೇಗೋ ಅವತಾರಗಳೂ ಬ್ರಹ್ಮನಿಗೆ ಹಾಗೆ.

೭೦೫. ಅವತಾರ ಯಾವಾಗಲೂ ಒಂದೆ. ಸಂಸಾರ ಸಾಗರದಲ್ಲಿ ಮುಳುಗಿ ಒಂದು ಕಡೆ ಎದ್ದಾಗ ಕೃಷ್ಣನೆಂದು, ಮತ್ತೊಮ್ಮೆ ಮುಳುಗಿ ಇನ್ನೊಂದೆಡೆ ಎದ್ದರೆ ಅವನನ್ನು ಕ್ರಿಸ್ತನೆಂದು ತಿಳಿಯುವರು.

೭೦೬. ಸಚ್ಚಿದಾನಂದದ ಮರದಲ್ಲಿ, ರಾಮ, ಕೃಷ್ಣ, ಬುದ್ಧ, ಕ್ರಿಸ್ತರೆಂಬ ಹಲವು ಫಲಗಳ ಜೊಂಪೆಗಳಿವೆ. ಇವುಗಳಲ್ಲಿ ಯಾವಾಗಲಾದರೂ ಒಂದೆರಡು ಜಗತ್ತಿಗೆ ಬಂದು ಜನರ ಜೀವಮಾನದಲ್ಲಿ ದೊಡ್ಡ ಬದಲಾವಣೆಯನ್ನು, ಕ್ರಾಂತಿಯನ್ನುಂಟುಮಾಡುವರು.

೭೦೭. ಅವತಾರಗಳು ದಿವ್ಯಶಕ್ತಿ ಮತ್ತು ದಿವ್ಯಜ್ಞಾನದೊಂದಿಗೆ ಬರುವರು. ಕೆಳಗಿನಿಂದ ಮೇಲಿನವರೆಗೆ ಸಾಕ್ಷಾತ್ಕಾರ ಯಾವ ಸ್ಥಿತಿಯಲ್ಲಾದರೂ ಆಗಲಿ. ಅವರು ಹೋಗಿ ಇರಬಲ್ಲರು. ರಾಜನ ಅರಮನೆಯಲ್ಲಿ ಅಪರಿಚಿತನು ಹೊರಗಡೆಯ ಕೆಲವು ಕೋಣೆಗಳಿಗೆ ಮಾತ್ರ ಹೋಗಬಲ್ಲ. ಆದರೆ ದೊರೆಯ ಸ್ವಂತ ಮಗು ಅರಮನೆಯ ಯಾವ ಮೂಲೆಗೆ ಬೇಕಾದರೂ ಹೋಗಬಲ್ಲದು.

೭೦೮. ಅವತಾರಗಳಂತಹ ವ್ಯಕ್ತಿಯಲ್ಲಿ ಅಹಂಕಾರ ಬಹಳ ತೆಳ್ಳಗೆ ಇರುವದು. ಈ ಅಹಂಕಾರದ ಮೂಲಕ ದೇವರು ಯಾವಾಗಲೂ ಕಾಣುತ್ತಿರುವನು. ಉದಾಹರಣೆಗೆ, ಒಬ್ಬ ಗೋಡೆಯ ಈಚೆ ಕಡೆಗೆ ಬಂದು ನಿಂತಿರುವನು. ಗೋಡೆಯ ಎರಡು ಕಡೆಯೂ ಬೇಕಾದಷ್ಟು ಮೈದಾನವಿದೆ. ಗೋಡೆಯಲ್ಲಿ ಒಂದು ಕಂಡಿ ಇದ್ದರೆ ಅತ್ತಕಡೆ ಇರುವುದೆಲ್ಲಾ ಕಾಣುವುದು. ಅದು ಸ್ವಲ್ಪ ದೊಡ್ಡದಾಗಿದ್ದರೆ ಒಬ್ಬನು ಅದರ ಮೂಲಕವಾದರೂ ಹೋಗಬಹುದು. ಅವತಾರದ ಅಹಂಕಾರವೆನ್ನುವುದು ಬಾಗಿಲಿರುವ ಒಂದು ಗೋಡೆಯಂತೆ. ಅವರು ಗೋಡೆಯ ಪಕ್ಕದಲ್ಲಿದ್ದರೂ ಇನ್ನೊಂದು ಕಡೆ ಇರುವ ಅನಂತವಾದ ಪ್ರದೇಶವನ್ನು ನೋಡಬಲ್ಲರು. ಇದರ ಅರ್ಥವೇನೆಂದರೆ, ಅವರು ದೇಹಧಾರಿಗಳಾದರೂ ಯಾವಾಗಲೂ ಯೋಗದಲ್ಲಿ ನಿರತರಾಗಿರುವರು. ಅವರು ಇಚ್ಛೆಪಟ್ಟರೆ ಬಾಗಿಲಿನ ಅತ್ತಕಡೆ ಇರುವ ಸಮಾಧಿಯಲ್ಲಿ ಮಗ್ನರಾಗಬಲ್ಲರು. ಬಾಗಿಲು ದೊಡ್ಡದಾಗಿದ್ದರೆ ಬೇಕಾದರೆ ಹೋಗಿ ಬರಬಲ್ಲರು. ಅಂದರೆ ಸಮಾಧಿಯ ನಂತರ ಕೆಳಗಿನ ಸ್ಥಿತಿಗೂ ಬರಬಲ್ಲರು.

## ಅವತಾರವನ್ನು ಕಂಡು ಹಿಡಿಯುವ ಕಷ್ಟ

೭೦೯. ಅವತಾರವನ್ನು ತಿಳಿದುಕೊಳ್ಳುವುದು ಬಹಳ ಕಷ್ಟ. ಇದು ಸಾಂತದ ಮೇಲಿರುವ ಅನಂತದ ಲೀಲೆ.

೭೧೦. ಭಗವಾನ್ ರಾಮಚಂದ್ರನು ಪ್ರಪಂಚಕ್ಕೆ ಬಂದಾಗ ಅವನು ಭಗವಂತನ ಅವತಾರವೆಂದು ಹನ್ನೆರಡು ಜನ ಋಷಿಗಳು

ಮಾತ್ರ ತಿಳಿದುಕೊಂಡರು. ಹಾಗೆಯೆ ದೇವರು ಈ ಜಗದಲ್ಲಿ ಅವತಾರ ಮಾಡಿದಾಗ ಎಲ್ಲೋ ಕೆಲವರು ಮಾತ್ರ ಅವನಲ್ಲಿರುವ ಭಗವಂತನ ಅಂಶಗಳನ್ನು ಕಂಡು ಹಿಡಿಯುವರು.

೭೧೧. ದೇವದೂತನನ್ನು ಅವನ ಜನರೇ ಗೌರವಿಸದಿರುವುದಕ್ಕೆ ಕಾರಣವೇನು? ದೊಂಬರ ನೆಂಟರು ಅವನು ಮಾಡುವ ಚಮತ್ಕಾರ ವನ್ನು ನೋಡುವುದಕ್ಕೆ ನೆರೆಯುವುದಿಲ್ಲ. ಆದರೆ ಅಪರಿಚಿತರು ಅವನ ಚಮತ್ಕಾರವನ್ನು ನೋಡಲು ಇಚ್ಛಿಸುವರು.

೭೧೨. ವಜ್ರಬಂತುಲ (Euphorbia) ಮರದ ಬೀಜ ಅದರ ಕೆಳಗೆ ಬೀಳುವುದಿಲ್ಲ. ಅವು ಗಾಳಿಯಿಂದ ದೂರ ಹಾರಿ ಬಿದ್ದು ಅಲ್ಲಲ್ಲಿ ಬೇರು ಬಿಡುವುವು. ಹಾಗೆಯೇ ದೇವದೂತರ ಭಾವನೆ ತನ್ನ ಊರಿನಿಂದ ದೂರ ದೇಶದಲ್ಲಿ ಪ್ರಕಟವಾಗಿ ಅಲ್ಲಿನ ಜನರು ಅವನನ್ನು ಮೆಚ್ಚುವರು.

೭೧೩. ದೀಪ ಸುತ್ತಲೂ ಬೆಳಗುತ್ತಿದ್ದರೂ ಯಾವಾಗಲೂ ಅದರ ಕೆಳಗೆ ನೆರಳಿರುವುದು. ಹಾಗೆಯೆ ಮಹಾತ್ಮರ ಹತ್ತಿರವಿರುವವರು ಆತನನ್ನು ತಿಳಿದುಕೊಳ್ಳುವುದಿಲ್ಲ. ಯಾರು ದೂರದಲ್ಲಿರುವರೋ ಅವರೇ ಆತನ ಅದ್ಭುತ ಶಕ್ತಿಯನ್ನು ಆಧ್ಯಾತ್ಮಿಕ ಕಾಂತಿಯನ್ನು ಮೆಚ್ಚುವರು.

೭೧೪. ಆನೆಗೆ ಎರಡು ತರಹದ ಹಲ್ಲುಗಳಿವೆ. ಹೊರಗೆ ಕಾಣುವ ಕೊಂಬು ಮತ್ತು ಬಾಯಲ್ಲಿರುವ ಅಗಿಯುವ ದವಡೆಗಳು. ಇದರಂತೆ ಶ್ರೀ ಕೃಷ್ಣನಂತಹ ಅವತಾರ ವ್ಯಕ್ತಿಗಳಿಗೆ ಬಾಹ್ಯ ಆಕಾರ ವೊಂದಿದೆ. ಎಲ್ಲರಂತೆ ಸಾಧಾರಣ ವ್ಯಕ್ತಿಯಂತೆ, ಅದರ ಮೂಲಕ ಆಚರಿಸುವರು. ಆದರೆ ಇವರು ಅಂತರಂಗದಲ್ಲಿ ಕರ್ಮರಹಿತವಾದ ಇಂದ್ರಿಯಾತೀತವಾದ ಶಾಂತಿಯಲ್ಲಿ ನೆಲೆಸಿರುವರು.

## ಅವತಾರಗಳು ಭಗವಂತನ ಆವಿರ್ಭಾವ

೭೧೫. ದೇವರು ನಿಜವಾಗಿ ಅನಂತ. ಆದರೆ ಆವನು ಸರ್ವ ಶಕ್ತನು. ಅವನ ಅಮೃತಪ್ರೇಮ ಮಾನವ ರೂಪನ್ನು ಧಾರಣೆ ಮಾಡಿ ನಮ್ಮೊಂದಿಗೆ ಅವತಾರದಂತೆ ಇರುವ ಹಾಗೆ ಇಚ್ಛಿಸಬಲ್ಲ. ಅವತಾರದ ಮೂಲಕ ಪ್ರೇಮ ನಮ್ಮೆಡೆಗೆ ಹರಿಯುವುದು. ಅವತಾರ ಸತ್ಯ. ಕೇವಲ ಮಾತಿನಿಂದ ಅದನ್ನು ವಿವರಿಸುವುದಕ್ಕೆ ಅಗುವುದಿಲ್ಲ. ಆಧ್ಯಾತ್ಮಿಕ

ದೃಷ್ಟಿಯಿಂದ ಇದನ್ನು ನೋಡಿ ತಿಳಿದುಕೊಳ್ಳಬೇಕು. ಉಪಮಾನದಿಂದ ಹೆಚ್ಚು ಅಂದರೆ ನಾವು ಒಂದು ವಸ್ತುವನ್ನು ಅಸ್ಪಷ್ಟವಾಗಿ ತಿಳಿಯ ಬಹುದು. ಒಬ್ಬನು ಒಂದು ಹಸುವಿನ ಕೊಂಬು, ಬಾಲ, ಮೊಲೆಯನ್ನು ಮುಟ್ಟಿದರೆ ಹಸುವನ್ನು ಮುಟ್ಟಿದಂತಾಗುವುದಿಲ್ಲವೆ? ಮನುಷ್ಯರಾದ ನಮಗೆ ಮುಖ್ಯವಾಗಿ ಬೇಕಾಗಿರುವುದು ಹಸುವಿನ ಹಾಲು. ಅದರ ಮೊಲೆಯಿಂದ ಬರುವ ಹಾಲೇ ಪರಮಾತ್ಮನ ಪ್ರೇಮಾಮೃತ. ಅದು ಅವತಾರಗಳ ಮೂಲಕ ನಮಗೆ ಹರಿದುಬರುವುದು.

೭೧೬. ಯಾರು ದೇವರನ್ನು ಪೂರ್ಣವಾಗಿ ತಿಳಿಯಬಲ್ಲರು? ಅವನನ್ನು ಪೂರ್ಣವಾಗಿ ತಿಳಿದುಕೊಳ್ಳುವುದು ನಮಗೆ ಸಾಧ್ಯವಿಲ್ಲ; ಅಥವಾ ಆವಶ್ಯಕವೂ ಇಲ್ಲ. ನಾವು ಅವನನ್ನು ನೋಡಿದರೆ ಸಾಕು. ಅವನೊಬ್ಬನೇ ಸತ್ಯವೆಂದು ತಿಳಿದರೆ ಸಾಕು. ಒಬ್ಬ ಮನುಷ್ಯನು ಪವಿತ್ರ ಗಂಗಾನದಿಯ ನೀರನ್ನು ಮುಟ್ಟುತ್ತಾನೆಂದು ತಿಳಿಯೋಣ. "ಗೋಮುಖಿ (ಗಂಗಾಮೂಲ) ದಿಂದ ಗಂಗಾಸಾಗರದವರೆಗೆ (ಗಂಗಾ ಸಂಗಮ) ಗಂಗಾನದಿಯನ್ನು ನೋಡಿದ್ದಾಯಿತು, ಸ್ಪರ್ಶಮಾಡಿ ಧನ್ಯನಾದೆನು" ಎಂದು ಭಾವಿಸುವನು.

೭೧೭. ನೀನು ದೇವರನ್ನು ಹುಡುಕುತ್ತೀಯೇನು? ಹಾಗಾದರೆ ಅವನನ್ನು ಮನುಷ್ಯನಲ್ಲಿ ಹುಡುಕು. ಉಳಿದ ಎಲ್ಲಾ ವಸ್ತುಗಳಿಗಿಂತಲೂ ಅವನ ಮಹಿಮೆ ಮಾನವನಲ್ಲಿ ಹೆಚ್ಚು ಪ್ರಕಟವಾಗಿರುವುದು. ಭಗವಂತನಿಗಾಗಿ ಯಾರ ಹೃದಯ ತುಂಬಿ ತುಳುಕಾಡುವುದೊ, ಆತನಲ್ಲಿ ವಿಹರಿಸುವರೊ, ಅವನ ಪ್ರೇಮದಿಂದ ಉನ್ಮತ್ತರಾಗಿರುವರೊ ಅವರಲ್ಲಿ ಹುಡುಕು. ಅಂತಹ ವ್ಯಕ್ತಿಯಲ್ಲಿ ದೇವರು ನಿಜವಾಗಿಯೂ ಇರುವನು.

೭೧೮. ಅವನು ಅವ್ಯಕ್ತ, ಆದರೂ ಈ ಲೀಲೆಯೆಲ್ಲ ಅವನದೆ. ಈ ಲೀಲೆಯಲ್ಲಿ ನಾಲ್ಕು ವಿಧಗಳಿವೆ; ಈಶ್ವರಲೀಲೆ, ದೇವಲೀಲೆ, ಜಗತ್ ಲೀಲೆ ಮತ್ತು ನರಲೀಲೆ. ನರಲೀಲೆಯಲ್ಲಿ ಅವನ ಅವತಾರ ಸಾಧ್ಯವಾಗುತ್ತದೆ. ನೀನು ನರಲೀಲೆಯ ಸ್ವಭಾವವನ್ನು ತಿಳಿಯಬಲ್ಲೆಯ? ಒಂದು ವಿಸ್ತಾರವಾದ ಪ್ರದೇಶದಿಂದ ನೀರು ನಾಲೆಯ ಮೂಲಕವಾಗಿ ಹರಿಯುವ ಒಂದು ವೇಗವಾದ ಪ್ರವಾಹದಂತೆನ್ನಬಹುದು ಅವತಾರವನ್ನು. ಅವತಾರವ್ಯಕ್ತಿಯನ್ನು ಸುಲಭವಾಗಿ ಎಲ್ಲರೂ ಗ್ರಹಿಸುವುದಕ್ಕೆ ಆಗುವುದಿಲ್ಲ. ಭಾರದ್ವಾಜ ಮುಂತಾದ ಸಪ್ತಋಷಿಗಳು ಮಾತ್ರ ಶ್ರೀರಾಮನನ್ನು ಅವತಾರವೆಂದು ಅರಿತರು. ದೇವರು ಮಾನವನಿಗೆ

ಜ್ಞಾನ ಮತ್ತು ಭಕ್ತಿಯನ್ನು ಬೋಧಿಸುವುದಕ್ಕಾಗಿ ಮಾನವ ರೂಪನ್ನು ಧಾರಣೆಮಾಡುವನು.

೭೧೯. ಉಪಯೋಗಿಸದೆ ಇರುವ ಹಾಳು ಭಾವಿಯ ಮೇಲೆ ಕವಿದುಕೊಂಡಿರುವ ಮಣ್ಣು ಮುಂತಾದುವನ್ನು ತೆರೆದು ಅಲ್ಲಿರುವ ಭಾವಿಯನ್ನು ಕಣ್ಣಿಗೆ ಕಾಣುವಂತೆ ಮಾಡುವನು ಸಿದ್ಧಪುರುಷ. ಅವತಾರವಾದರೋ ನೀರಿಲ್ಲದೆ ಇರುವ ಸ್ಥಳದಲ್ಲಿಯೂ ಒಂದು ಹೊಸ ಭಾವಿಯನ್ನು ತೋಡುವ ವಾಸ್ತುವಿದ್ಯಾ ವಿಶಾರದನಂತೆ(Engineer). ಮೊದಲನೆಯವನು ಮುಕ್ತಿ ಸೋಪಾನದ ಹತ್ತಿರದಲ್ಲೆ ಇರುವವರಿಗೆ ಸಾಯುಜ್ಯ ಪದವಿಯನ್ನು ಕೊಡಬಲ್ಲ. ಆದರೆ ಅವತಾರವಾದರೊ ಯಾರ ಹೃದಯ ಮರುಭೂಮಿಯಂತೆ ಒಣಗಿಹೋಗಿದೆಯೊ, ಯಾರಲ್ಲಿ ಸ್ವಲ್ಪವೂ ಭಕ್ತಿರಸವಿಲ್ಲವೊ ಅವರಿಗೂ ಮುಕ್ತಿಯನ್ನು ಕೊಡುವನು.

೭೨೦. ದೊಡ್ಡದೊಂದು ಅಲೆ ಸಾಗರದಿಂದ ಬಂದರೆ, ನದಿ, ಹೊಳೆ, ನೆಲ ಎಲ್ಲವೂ ನೀರಿನಿಂದ ತುಂಬಿಹೋಗುವುದು. ಸುತ್ತ ಮುತ್ತಲಿನ ಪ್ರದೇಶವೆಲ್ಲ ನೀರಿನಿಂದ ಆವೃತವಾಗುವುದು. ಆದರೆ ಮಳೆಯ ನೀರಾದರೊ ಹಳೆಯ ಕಾಲುವೆಯಲ್ಲಿ ಮಾತ್ರ ಹರಿದು ಹೋಗುವುದು. ಅವತಾರ ಬಂದಾಗ ಅವನ ಅನುಗ್ರಹದಿಂದ ಎಲ್ಲರೂ ಉದ್ಧಾರವಾಗುವರು. ಆದರೆ ಸಿದ್ಧಪುರುಷರಾದರೋ ತುಂಬ ಶ್ರಮ ಮತ್ತು ತಪಸ್ಸಿನಿಂದ ತಮ್ಮನ್ನು ಮಾತ್ರ ಉದ್ಧಾರ ಮಾಡಿಕೊಳ್ಳ ಬಹುದು.

೭೨೧. ಪ್ರವಾಹದಲ್ಲಿ ದೊಡ್ಡದೊಂದು ತೊಲೆ ತೇಲಿಕೊಂಡು ಹೊಗುತ್ತಿರುವಾಗ ತನ್ನ ಮೇಲೆ ನೂರಾರು ಹಕ್ಕಿಗಳನ್ನು ಎತ್ತಿಕೊಂಡು ಹೋಗುವುದು; ಮುಳುಗುವುದಿಲ್ಲ. ಒಂದು ಹುಲ್ಲು ಕೊಚ್ಚಿಕೊಂಡು ಹೋಗುತ್ತಿರುವಾಗ ಒಂದು ಹಕ್ಕಿಯ ಭಾರವನ್ನೂ ಕೂಡ ತಾಳಲಾರದೆ ಮುಳುಗಿ ಹೋಗುವುದು. ಇದರಂತೆಯೆ ಅವತಾರ ಬಂದಾಗ ಅವನಲ್ಲಿ ಶರಣಾಗತರಾಗಿ ಹಲವರು ಮುಕ್ತಿಯನ್ನು ಪಡೆಯುವರು. ಸಿದ್ಧನಾದರೋ ಬಹಳ ಕಷ್ಟದಿಂದ ತನ್ನನ್ನು ಮಾತ್ರ ಕಾಪಾಡಿಕೊಳ್ಳಬಲ್ಲ.

೭೨೨. ದೊಡ್ಡದಾದ ಜಹಜು ಸಾಮಾನಿನಿಂದ ತುಂಬಿದ ಹಲವು ದೋಣಿಗಳನ್ನು ಎಳೆದುಕೊಂಡು ವೇಗವಾಗಿ ಹೋಗುವಂತೆ, ಅವತಾರಗಳು ಬಂದಾಗ, ಸಂಸಾರ ಸಾಗರದಿಂದ ಪರಮಾತ್ಮನೆಡೆಗೆ ಸಾವಿರಾರು ಜನರನ್ನು ಕರೆದುಕೊಂಡು ಹೋಗುವರು.

೭೨೩. ರೈಲ್ವೆ ಯಂಜಿನ್ ಸಂಚರಿಸಿ ತಾನು ಗುರಿ ಸೇರುವುದು ಮಾತ್ರವಲ್ಲದೆ, ಜೊತೆಗೆ ದೊಡ್ಡಗಾಡಿಗಳ ಸಾಲೊಂದನ್ನೂ ಎಳೆದು ಕೊಂಡು ಹೋಗುವುದು. ಇದರಂತೆಯೆ ನಮ್ಮ ಅವತಾರಗಳು ಪಾಪ ಕಾರ್ಯದಲ್ಲಿ ಬದ್ಧರಾಗಿರುವ ಮಾನವರನ್ನು ಭಗವಂತನ ಎಡೆಗೆ ಕರೆದುಕೊಂಡು ಹೋಗುವರು.

೭೨೪. ಸಾಧಾರಣ ಕಾಲದಲ್ಲಿ ನೀರನ್ನು ಬಹಳ ಆಳದಿಂದ ಮತ್ತು ಶ್ರಮದಿಂದ ಬಾವಿಯಿಂದ ಎಳೆಯಬಹುದು. ಆದರೆ ಮಳೆಗಾಲ ದಲ್ಲಿ ಎಲ್ಲಾ ಕಡೆಗಳಲ್ಲಿಯೂ ನೀರು ಇರುವಾಗ ಎಲ್ಲಿಂದ ಬೇಕಾದರೂ ನೀರನ್ನು ಸುಲಭವಾಗಿ ಪಡೆಯಬಹುದು. ಇದರಂತೆಯೇ ಸಾಮಾನ್ಯ ವಾಗಿ ದೇವರನ್ನು ಪ್ರಾರ್ಥನೆ ಮತ್ತು ತಪಸ್ಸಿನಿಂದ ಬಹಳ ಕಷ್ಟಪಟ್ಟು ಪಡೆಯಬಹುದು. ಆದರೆ ಜಗದಲ್ಲಿ ಅವತಾರವೆಂಬ ಮಹಾಪ್ರವಾಹ ಬಂದಾಗ ಎಲ್ಲಾ ಕಡೆಯಲ್ಲಿಯೂ ದೇವರನ್ನು ನೋಡಬಹುದು.

೭೨೫. ದೊಡ್ಡ ಗೋಡೆಯಿಂದ ಸುತ್ತಲ್ಪಟ್ಟ ಒಂದು ಸ್ಥಳವಿತ್ತು. ಹೊರಗಿನವರಿಗೆ ಇದು ಎಂತಹ ಸ್ಥಳವೆಂದು ಗೊತ್ತಿರಲಿಲ್ಲ. ಒಂದು ಸಾರಿ ನಾಲ್ಕು ಜನರು ಆ ಗೋಡೆಯನ್ನು ಏಣಿಯ ಮೂಲಕ ಹತ್ತಿ ಒಳಗೆ ಏನಿದೆ ನೋಡೋಣವೆಂದು ನಿರ್ಧರಿಸಿದರು. ಮೊದಲನೆಯವನು ಮೇಲಕ್ಕೆ ಹತ್ತಿದ ಕ್ಷಣವೆ ಕೆಳಗೆ ನೋಡಿ " ಹಾ! ಹಾ! ಹಾ! " ಎಂದು ಒಳಗೆ ಧುಮಿಕಿದನು. ಎರಡನೆಯವನು ಅವನಂತೆಯೆ ಗೋಡೆಯನ್ನು ಹತ್ತಿ ಹಾಗೆಯೆ ಕೂಗಿ ಧುಮಿಕಿದನು. ಮೂರನೆಯವನೂ ಕೂಡ ಅವನನ್ನು ಅನುಸರಿಸಿದನು. ನಾಲ್ಕನೆಯವನು ಹತ್ತಿ ನೋಡಲಾಗ ಒಳಗೆ ಸುಂದರವಾದ ಹಣ್ಣಿನ ಮರದ ತೋಪನ್ನು ಕಂಡನು. ಅದನ್ನು ನೋಡಿ ಒಳಗೆ ಧುಮುಕಿ ದೃಶ್ಯವನ್ನು ಆನಂದಿಸಬೇಕೆಂದು ಇಚ್ಛೆಯಾದರೂ ಅದನ್ನು ತಡೆದು ಏಣಿಯ ಮೂಲಕ ಹಿಂದಕ್ಕೆ ಬಂದು ತೋಟದ ಸೌಂದರ್ಯವನ್ನು ನೋಡದವರಿಗೆ ವರ್ಣಿಸಿದನು. ಬ್ರಹ್ಮನು ಅಂತಹ ಗೋಡೆಯಿಂದ ಆವರಿಸಲ್ಪಟ್ಟ ತೋಟದಂತೆ. ಯಾರು ಅವನನ್ನು ನೋಡುತ್ತಾರೆಯೊ ಅವರು ತಮ್ಮನ್ನು ಮರೆತು ಅದರಲ್ಲಿ ಐಕ್ಯವಾಗಲು ಆತುರಪಡುವರು. ಮಹಾತ್ಮರು ಮತ್ತು ಸಿದ್ಧರು ಇಂತಹವರು. ಆದರೆ ಅವತಾರಿಗಳಾದರೊ ಬೇರೆ, ಅವರು ದೇವರನ್ನು ನೋಡಿದರೂ ಆ ಪರಮಾತ್ಮನ ದರ್ಶನಾನಂದವನ್ನು ಇತರರೊಂದಿಗೆ ಅನುಭವಿಸ ಬೇಕೆಂದು ನಿರ್ವಾಣವನ್ನು ಬಯಸುವುದಿಲ್ಲ. ತಾವು ಕರ್ಮದಲ್ಲಿ

ಸಿಕ್ಕಿರುವ ಮಾನವರಿಗೆ ಬುದ್ಧಿ ಹೇಳಿ ಅವರಿಗೆ ದಾರಿತೋರುವುದಕ್ಕಾಗಿ ಪುನರ್ಜನ್ಮದ ಕಷ್ಟವನ್ನು ಸಹಿಸುವರು.

೭೨೬. ಬಾಣಬಿರಸುಗಳಲ್ಲಿ ಒಂದು ಬಗೆಯ ಹೂವಿನ ಕುಡಿಕೆ ಇದೆ. ಕೆಲವುಕಾಲ ಅದರಿಂದ ಒಂದು ತರಹ ಹೂವು ಬರುವುದು; ನಂತರ ಇನ್ನೊಂದು ವಿಧದ ಹೂವು, ಅನಂತರ ಮತ್ತೊಂದು ತರಹದ ಹೂವು ಬರುವುದು. ಅದರಲ್ಲಿ ಹಲವು ವಿಧದ ಹೂವುಗಳು ಇರುವಂತೆ ತೋರುವುದು. ಇದರಂತೆಯೇ ಅವತಾರಗಳೂ ಕೂಡ. ಮತ್ತೊಂದು ತರಹದ ಹೂವಿನ ಕುಡಿಕೆ ಇದೆ. ಇದನ್ನು ಹಚ್ಚಿದ ಮೇಲೆ ಕೆಲವು ಕಾಲ ಅದು ಉರಿದ ನಂತರ ಆರಿಹೋಗುವುದು. ಇದರಂತೆಯೆ ಸಾಧಾರಣ ಜೀವಿಗಳು ಬಹಳ ಕಾಲ ಸಾಧನೆ ಭಜನೆ ಮಾಡಿಯಾದಮೇಲೆ ಸಮಾಧಿ ಮಗ್ನರಾಗಿ ಪುನಃ ಹಿಂತಿರುಗುವುದಿಲ್ಲ.

೭೨೭. ಪ್ರಶ್ನೆ: ದೇವರು ಏತಕ್ಕೆ ಮಾನವ ರೂಪವನ್ನು ಧರಿಸ ಬೇಕು?

ಉತ್ತರ: ಪವಿತ್ರತೆಯ ಪರಿಪೂರ್ಣತೆಯನ್ನು ಮಾನವನಿಗೆ ತೋರುವುದಕ್ಕಾಗಿ. ಇಂತಹ ವ್ಯಕ್ತಿಯ ಮೂಲಕವಾಗಿಯೆ ಮಾನವನು ದೇವರೊಂದಿಗೆ ಮಾತನಾಡಬಹುದು. ಅವನ ಲೀಲೆಯನ್ನು ನೋಡ ಬಹುದು. ಅವತಾರವಾಗಿರುವಾಗ ದೇವರು ತನ್ನ ಅವ್ಯಕ್ತದ ಆನಂದ ವನ್ನು ತಾನೆ ಅನುಭವಿಸುವಂತೆ ತೋರುತ್ತದೆ. ಭಗವಂತನು ಮಹಾತ್ಮ ರಲ್ಲಿ ತನ್ನ ಅಂಶವನ್ನು ಮಾತ್ರ ವ್ಯಕ್ತಗೊಳಿಸುವನು. ಹೂವಿನಲ್ಲಿರುವ ಮಕರಂದದ ಬಿಂದುವಿನಂತೆ. ನೀವು ಹೂವನ್ನು ಚೀಪಿದರೆ ಸ್ವಲ್ಪ ಮಕರಂದ ಸಿಕ್ಕುವುದು. ಆದರೆ ಅವತಾರಿಗಳಲ್ಲಿರುವುದೆಲ್ಲ ಜೇನು. ಅಲ್ಲಿರುವುದೆಲ್ಲ ಮಾಧುರ್ಯವೆ, ಆನಂದಮಯವೆ.

೭೨೮. ಅವತಾರವ್ಯಕ್ತಿಗೆ ಯಾವದೂ ಅಸಾಧ್ಯವಿಲ್ಲ. ಜೀವನದ ಅತಿ ಕಷ್ಟ ಸಮಸ್ಯೆಗಳನ್ನು ಅತಿ ಸಾಧಾರಣವಾದ ವಿಷಯಗಳಂತೆ ಬಗೆಹರಿಸುವನು. ಒಂದು ಮಗು ಕೂಡ ತಿಳಿದುಕೊಳ್ಳುವಷ್ಟು ಸರಳ ವಾಗಿರುವುದು ಅವರ ಬೋಧನೆ. ಪರಮಾರ್ಥ ಜ್ಞಾನಭಾಸ್ಕರನವನು. ಯುಗ ಯುಗಗಳಿಂದ ಮೇಲೆ ಕವಿದುಕೊಂಡಿರುವ ಅಜ್ಞಾನಾಂಧಕಾರ ವನ್ನು ಅವನು ಪರಿಹರಿಸುವನು.

೭೨೯. ಕೆಲವು ವೇಳೆ ಆಕಾಶದಲ್ಲಿ ಅತಿಚಮತ್ಕಾರವಾದ ಮಿಶ್ರಕಾಂತಿಯೊಂದು ಕಾಣುವುದು. ಅದನ್ನು ಸೂರ್ಯಚಂದ್ರ ರಶ್ಮಿ

ಯೆನ್ನಬಹುದು. ಜ್ಞಾನ ಮತ್ತು ಭಕ್ತಿ ಮಿಶ್ರವಾದ ಚೈತನ್ಯದೇವನಂತಹ ಅಸಾಧಾರಣ ಅವತಾರವನ್ನು ಇದಕ್ಕೆ ಹೋಲಿಸಬಹುದು. ಇದು ಏಕಕಾಲದಲ್ಲಿ ಸೂರ್ಯಚಂದ್ರರು ಬೆಳಗುವಂತೆ. ಒಂದೇ ವ್ಯಕ್ತಿಯಲ್ಲಿ ಜ್ಞಾನ, ಭಕ್ತಿ ಆವಿರ್ಭಾವ ಮೇಲಿನ ಪ್ರಸಂಗದಷ್ಟೆ ಅಸಾಧಾರಣವಾದುದು.

೭೩೦. ಯಾವ ಪರಿಶುದ್ಧಾತ್ಮರು ಭಗವಂತನನ್ನು ಪ್ರೀತಿಸುವರೋ ಅವರಿಗಾಗಿ ಭಗವಂತನು ಮಾನವ ದೇಹವನ್ನು ಧಾರಣೆ ಮಾಡುವನು.

೭೩೧. ಅವತಾರದೊಂದಿಗೆ ಬರುವವರು ನಿತ್ಯಮುಕ್ತರು ಅಥವಾ ಅದೇ ಜಗತ್ತಿನಲ್ಲಿ ಧರಿಸುವ ಕೊನೆಯ ಜನ್ಮ ಅವರಿಗೆ.

# ಅಧ್ಯಾಯ ೧೬

## ಜ್ಞಾನಯೋಗ

### ಜ್ಞಾನಯೋಗವೆಂದರೇನು ?

೭೩೨. ಜ್ಞಾನಯೋಗವೆಂದರೆ ಜ್ಞಾನದ ಮೂಲಕ ದೇವರೊಂದಿಗೆ ಸಂಬಂಧವನ್ನು ಕಲ್ಪಿಸಿಕೊಳ್ಳುವುದು. ನಿರಾಕಾರ ಬ್ರಹ್ಮನನ್ನು ಪಡೆಯುವುದು ಜ್ಞಾನಿಯ ಗುರಿ. ಅವನು ನೇತಿ, ನೇತಿ ಎಂದು ಒಂದು ಅಸತ್ಯವಾದಮೇಲೆ ಮತ್ತೊಂದು ಅಸತ್ಯವನ್ನು ತೊರೆದು ಕೊನೆಗೆ ನಿತ್ಯ ಅನಿತ್ಯ ವಸ್ತು ವಿಚಾರ ನಿಲ್ಲುವವರೆಗೂ ಹೋಗಿ ಸಮಾಧಿಯಲ್ಲಿ ಬ್ರಹ್ಮ ಸಾಕ್ಷಾತ್ಕಾರ ಪಡೆಯುವನು.

೭೩೩. ಕಳ್ಳನೊಬ್ಬನು ಕತ್ತಲೆಯ ಕೋಣೆಗೆ ಹೋಗಿ ಎಲ್ಲಾ ವಸ್ತುಗಳನ್ನು ಮುಟ್ಟಿ ನೋಡುತ್ತಾನೆ. ತನ್ನ ಕೈಯನ್ನು ಬಹುಶಃ ಒಂದು ಮೇಜಿನ ಮೇಲಿಟ್ಟು ಇದಲ್ಲ ಎಂದು ಹೇಳಿ ಮುಂದೆ ಹೋಗುತ್ತಾನೆ. ನಂತರ ಒಂದು ಕುರ್ಚಿಯನ್ನು ಮುಟ್ಟಿ ಇದಲ್ಲ ಎಂದು ಹೇಳಿ ಮುಂದೆ ಹೋಗುತ್ತಾನೆ. ಎಲ್ಲಾ ವಸ್ತುಗಳನ್ನು ಇದಲ್ಲ ಇದಲ್ಲ ಎಂದು ಹೇಳಿ ದ್ರವ್ಯದ ಪೆಟ್ಟಿಗೆ ಸಿಕ್ಕುವ ತನಕ ಹುಡುಕುತ್ತಾ ಹೋಗುತ್ತಾನೆ. ನಂತರ ಇಲ್ಲಿದೆ, ಎಂದು ಹೇಳಿ ತನ್ನ ಹುಡುಕಾಟವನ್ನು ನಿಲ್ಲಿಸುವನು. ಬ್ರಹ್ಮನನ್ನು ಅರಸುವಿಕೆಯೂ ಹೀಗೆ.

೭೩೪. ಧ್ಯಾನದಿಂದ ಗೋಚರಿಸುವ ಜ್ಞಾನ ಬೇರೆ; ತರ್ಕದಿಂದ ಸಿಕ್ಕುವ ಜ್ಞಾನ ಬೇರೆ. ಪುನಃ ಇದಕ್ಕಿಂತ ಅವನಿಗೆ ಸತ್ಯಸಾಕ್ಷಾತ್ಕಾರವಾದ ಮೇಲೆ ದೊರಕುವ ಜ್ಞಾನವೇ ಬೇರೆ ಎಂದು ನನಗೆ ಗೊತ್ತಾಗಿದೆ.

೭೩೫. ಜ್ಞಾನವೈವಿಧ್ಯತೆಯಲ್ಲಿ ಮತ್ತು ತರತಮದಲ್ಲಿ ವ್ಯತ್ಯಾಸವಾಗುವುದು. ಮೊದಲನೆಯದಾಗಿ ಸಾಧಾರಣ ಮನುಷ್ಯರ ಜ್ಞಾನವಿದೆ. ಇದು ಅಷ್ಟು ತೀವ್ರವಾಗಿಲ್ಲ. ಇದನ್ನು ಒಂದು ಕೋಣೆಯ ಒಳಗೆ ಬೆಳಗುವ ದೀಪಕ್ಕೆ ಹೋಲಿಸಬಹುದು. ಭಕ್ತನ ಜ್ಞಾನ ಇದಕ್ಕಿಂತ ಪ್ರಕಾಶಮಾನವಾಗಿರುವುದು. ಕೋಣೆಯ ಒಳಗೆ ಮತ್ತು ಹೊರಗೆ ಬೆಳಗುವ ಚಂದ್ರನಿಗೆ ಹೋಲಿಸಬಹುದು. ಆದರೆ ಅವತಾರ ಪುರುಷರ ಜ್ಞಾನ ಇದಕ್ಕಿಂತಲೂ ಪ್ರಕಾಶಮಾನವಾಗಿದೆ. ಇದನ್ನು ಒಂದು ಸೂರ್ಯನ ಬೆಳಕಿಗೆ ಹೋಲಿಸಬಹುದು. ಕಾಲಾನುಕಾಲದಿಂದ ಕವಿದು ಬಂದಿರುವ ಅಜ್ಞಾನಾಂಧಕಾರವನ್ನು ನಿವಾರಿಸುವ ಜ್ಞಾನಭಾಸ್ಕರನ ಬೆಳಕು ಇದು.

## ಜ್ಞಾನಮಾರ್ಗ

೭೩೬. ಒಬ್ಬನಿಗೆ ತನ್ನ ಆತ್ಮ ಗೊತ್ತಾಗಿದ್ದರೆ ಆತನಿಗೆ ಉಳಿದವರೂ ಮತ್ತು ದೇವರು ಗೊತ್ತಾಗುವುದು. ನನ್ನ ಅಹಂಕಾರವೆಂದರೇನು? ಇದೇನು ನನ್ನ ಕೈಯೋ ಕಾಲೋ ರಕ್ತವೋ ಮಾಂಸವೆ? ಇದನ್ನು ಕುರಿತು ಗಹನವಾಗಿ ವಿಚಾರಮಾಡಿರಿ. ಆಗ ನಾನು ಎನ್ನುವುದು ಇಲ್ಲವೆಂದು ಗೊತ್ತಾಗುತ್ತದೆ. ನೀವು ಈರುಳ್ಳಿಯ ಸಿಪ್ಪೆಯನ್ನು ತೆಗೆಯುತ್ತಿದ್ದರೆ ಕೊನೆಗೆ ಅದೆಲ್ಲ ಸಿಪ್ಪೆಯಿಂದಲೇ ಆಗಿರುವಂತೆ ತೋರುವುದು. ಅದರೊಳಗಡೆ ಏನೂ ತಿರುಳು ಕಾಣುವುದಿಲ್ಲ. ನೀವು ಅಹಂಕಾರವನ್ನು ವಿಭಜನೆ ಮಾಡಿದರೆ ಕೊನೆಗೆ ನಾನು ಎನ್ನುವ ಯಾವ ಸತ್ಯವೂ ಇಲ್ಲವೆಂದು ಗೊತ್ತಾಗುವುದು. ಇಂತಹ ಅಹಂಕಾರ ವಿಭಜನೆ, ಕೊನೆಗೆ ದೇವರು ಒಬ್ಬನೇ ಸತ್ಯವೆಂಬುದನ್ನು ದೃಢಪಡಿಸುವುದು. ಅಹಂಕಾರ ಕಳಚಿಬಿದ್ದಾಗ ದೇವರು ಅಲ್ಲೇ ವ್ಯಕ್ತವಾಗುವನು.

೭೩೭. ಎಲ್ಲಿಯವರೆವಿಗೂ ದೇವರು ದೂರದಲ್ಲಿರುವನು ಎಂದು ತೋರುವುದೊ ಅಲ್ಲಿಯವರೆವಿಗೂ ಅಜ್ಞಾನವಿರುವುದು. ಆದರೆ ದೇವರನ್ನು ಅಂತರಂಗದಲ್ಲಿ ಕಂಡಾಗ ನಿಜವಾದ ಜ್ಞಾನವಿದೆ.

೭೩೮. ತಮ್ಮ ಎದೆಯನ್ನು ತೋರುತ್ತಾ ಶ್ರೀರಾಮಕೃಷ್ಣರು "ಯಾರಿಗೆ ದೇವರು ಇಲ್ಲಿರುವನೊ ಅವರಿಗೆ ದೇವರು ಹೊರಗೂ ಇರುವನು. ಯಾರು ತಮ್ಮಲ್ಲಿ ದೇವರನ್ನು ಕಾಣರೊ ಅವರಿಗೆ ಹೊರಗೂ ದೇವರಿಲ್ಲ. ಯಾರು ತಮ್ಮ ಆತ್ಮದಲ್ಲಿ ದೇವರನ್ನು ನೋಡುವರೊ ಅವರು ವಿಶ್ವವೆಂಬ ದೇವಾಲಯದಲ್ಲಿಯೂ ನೋಡುವರು" ಎಂದರು.

೭೩೯. ಒಬ್ಬನು ಅರ್ಧರಾತ್ರಿಯಲ್ಲಿ ಎದ್ದು ತಂಬಾಕನ್ನು ಸೇದಬೇಕೆಂದು ಬಯಸಿದನು. ಅವನಿಗೆ ಸ್ವಲ್ಪ ಬೆಂಕಿ ಬೇಕಾಯಿತು. ಆದಕ್ಕಾಗಿ ಪಕ್ಕದ ಮನೆಗೆ ಹೋಗಿ ಬಾಗಿಲನ್ನು ತಟ್ಟಿದನು. ಯಾರೋ ಬಾಗಿಲನ್ನು ತೆಗೆದು, ಏನುಬೇಕೆಂದು ವಿಚಾರಿಸಿದರು. ಅದಕ್ಕೆ ಅವನು "ನಾನು ಬೀಡಿ ಸೇದಬೇಕಾಗಿದೆ. ಸ್ವಲ್ಪ ಬೆಂಕಿಯನ್ನು ಕೊಡುವಿರಾ?" ಎಂದನು. "ಅಯ್ಯಾ, ಇದು ಏನು ಹುಚ್ಚು? ಈ ಹೊತ್ತಿನಲ್ಲಿ ಎದ್ದು ಬಂದು ನಮ್ಮನ್ನು ಎಚ್ಚರಿಸುವಷ್ಟು ತೊಂದರೆ ತೆಗೆದುಕೊಂಡೆಯಲ್ಲಾ! ನಿನ್ನ ಕೈಯಲ್ಲಿಯೇ ಉರಿಯುತ್ತಿರುವ ದೀಪವಿದೆಯಲ್ಲಾ" ಎಂದನು. ಮನುಷ್ಯನಿಗೆ ಏನು ಬೇಕೋ ಅದು ಆಗಲೇ ಅವನಲ್ಲಿದೆ. ಆದರೂ ಅದನ್ನು ಹುಡುಕುತ್ತಾ ಅಲೆಯುತ್ತಿರುವನು.

೭೪೦. ವಿಚಾರದಲ್ಲಿ ಎರಡುವಿಧ, ಅನುಲೋಮ ಮತ್ತು ವಿಲೋಮ. ಅನುಲೋಮದಲ್ಲಿ ಒಬ್ಬನು ಸೃಷ್ಟಿಚಿಂತನೆಯಿಂದ ಸೃಷ್ಟಿಕರ್ತನ ಕಡೆಗೆ ಹೋಗುತ್ತಾನೆ. ಎಂದರೆ ಕಾರ್ಯದಿಂದ ಆದಿಕಾರಣಕ್ಕೆ ಹೋಗುತ್ತಾನೆ ಕೊನೆಗೆ ವಿಲೋಮ ವಿಚಾರ ಪ್ರಾರಂಭವಾಗುವುದು. ದೇವರನ್ನು ನೋಡಿ ಆದಮೇಲೆ ಸೃಷ್ಟಿಯ ಪ್ರತಿಯೊಂದು ಕಡೆಯಲ್ಲಿಯೂ, ಪ್ರತಿಯೊಂದು ಕ್ರಿಯೆಯಲ್ಲಿಯೂ, ಅವನನ್ನು ನೋಡುತ್ತಾನೆ. ಒಂದು ವಿಭಜನಾ ರೂಪವಾದುದು. ಮತ್ತೊಂದು ಸಂಯೋಜನಾರೂಪವಾದುದು. ಮೊದಲನೆಯದು ಬಾಳೆಯ ಕಂದನ್ನು ದಿಂಡು ಸಿಕ್ಕುವ ತನಕ ಒಂದರ ಕೆಳಗೆ ಇರುವ ಮತ್ತೊಂದು ಮುಸಕನ್ನು ಹರಿಯುತ್ತಾ ಹೋಗುವುದು. ಎರಡನೆಯದು ಮುಸಕನ್ನು ಹೊದಿಸುತ್ತಾ ಬರುವುದು.

೭೪೧. ಜ್ಞಾನ ಐಕ್ಯತೆಗೆ ಒಯ್ಯುವುದು. ಅಜ್ಞಾನ ಭಿನ್ನತೆಗೆ ಒಯ್ಯುವುದು.

೭೪೨. ವೇದಾಂತ ಗ್ರಂಥಗಳನ್ನು ಓದುವುದರಲ್ಲಿ ನಿರತನಾದ

ಒಬ್ಬ ಶಿಷ್ಯನಿಗೆ ಶ್ರೀಗುರುದೇವರು ಈರೀತಿ ಹೇಳಿದರು : "ಏನು ಮಗು, ವೇದಾಂತದ ರಹಸ್ಯವನ್ನು ವಿಚಾರಿಸುವುದರಲ್ಲಿ ಈಗ ನಿರತನಾಗಿರುವೆ ಯಲ್ಲವೆ ? ಬಹಳ ಒಳ್ಳೆಯದು ಬ್ರಹ್ಮ ಒಂದೇ ಸತ್ಯ, ಜಗತ್ತು ಮಿಥ್ಯ ವೆಂಬುದಲ್ಲವೆ ಎಲ್ಲಾ ವೇದಾಂತಗಳ ಬೋಧನೆಯ ಸಾರ. ಅಥವಾ ಇದಕ್ಕಿಂತ ಏನಾದರೂ ಹೆಚ್ಚಾಗಿರುವುದೊ ?" ತರುಣ ಶಿಷ್ಯನು ಇದೇ ಸರ್ವಸ್ವವೆಂದು ಒಪ್ಪಿಕೊಂಡನು. ಶ್ರೀ ಗುರುದೇವರ ವಾಣಿ ವೇದಾಂತ ಸತ್ಯದ ಮೇಲೆ ಒಂದು ಹೊಸ ಬೆಳಕನ್ನು ಕೊಟ್ಟಿತು. ಇದನ್ನು ಕೇಳಿ ಅತ್ಯಾಶ್ಚರ್ಯವಾಯಿತು. ಈ ಸತ್ಯವನ್ನು ಒಬ್ಬನು ದೃಢವಾಗಿ ನಂಬಿದರೆ ವೇದಾಂತದ ಸರ್ವಸ್ವವನ್ನೂ ತಿಳಿದುಕೊಳ್ಳಬಹು ದೆಂದು ಯೋಚಿಸಿದನು. ಶ್ರೀಗುರುದೇವರು ಅದನ್ನು ವಿವರಿಸುತ್ತಾ ಹೋದರು. 'ಶ್ರವಣ; ಮನನ, ಧ್ಯಾನ; ಬ್ರಹ್ಮ ಸತ್ಯ ಜಗತ್ತು ಮಿಥ್ಯವೆಂಬುದನ್ನು ಮೊದಲು ಕೇಳಬೇಕು. ನಂತರ ವಿಚಾರ ಮಾಡ ಬೇಕು. ಕೇಳಿದುದರ ಸತ್ಯ, ವಿಚಾರದಿಂದ ದೃಢವಾಗುವುದು. ನಂತರವೇ ಧ್ಯಾನ. ಅಂದರೆ ಮನಸ್ಸನ್ನು ಮಿಥ್ಯಾಜಗತ್ತಿನಿಂದ ಸೆಳೆದು ಸತ್ಯವಾದ ಬ್ರಹ್ಮನ ಮೇಲೆ ಕೇಂದ್ರೀಕರಿಸುವುದು. ವೇದಾಂತ ಶಿಕ್ಷಣದ ಕ್ರಮ ಇದು. ಅದಲ್ಲದೆ ಸತ್ಯವನ್ನು ಸುಮ್ಮನೆ ಕೇಳಿ, ಬುದ್ಧಿಯಿಂದ ಆಲೋಚಿಸಿ, ಅದನ್ನು ಸಾಕ್ಷಾತ್ಕಾರ ಮಾಡಿಕೊಳ್ಳುವುದಕ್ಕೆ ಪ್ರಯತ್ನಿಸದೆ ಇದ್ದರೆ ಅಂತಹ ಸತ್ಯದಿಂದ ಪ್ರಯೋಜನವೇನು ? ಇಂತಹ ಜ್ಞಾನ ಕೇವಲ ಪ್ರಪಂಚದಲ್ಲಿ ಮಾತ್ರ ನಿರತರಾಗಿರುವವರದು. ಸತ್ಯವನ್ನು ತಿಳಿದುಕೊಳ್ಳುವುದಕ್ಕೆ ಇದು ಏನೂ ಸಹಾಯ ಮಾಡಲಾರದು. ದೃಢನಂಬಿಕೆ ಮತ್ತು ವೈರಾಗ್ಯ ಅತ್ಯಾವಶ್ಯಕ. ಇದರಿಂದ ಮಾತ್ರ ಸತ್ಯವನ್ನು ಪಡೆಯಬಹುದು. ಇಲ್ಲದಿದ್ದರೆ ಒಬ್ಬನು ಬರಿಯ ಬಾಯಿ ಮಾತಿನಿಂದ ಜಗತ್ತು ಅಸತ್ಯ, ಅದೆಂದಿಗೂ ಇಲ್ಲ. ಬ್ರಹ್ಮ ಒಂದೇ ಸತ್ಯವೆಂದು ಹೇಳಬಹುದು. ಆದರೆ ವಿಷಯ ವಸ್ತುಗಳು ಎದುರಿಗೆ ಬಂದೊಡನೆಯೇ ಅದು ಸತ್ಯವೆಂದು ಭ್ರಮಿಸಿ ಅದರ ಪಾಶಕ್ಕೆ ಬೀಳು ವನು. ಇವನು ಮುಳ್ಳು ಇಲ್ಲವೆಂದು ಕೂಗುತ್ತಾ ಮುಳ್ಳು ತಾಗಿ ದೊಡನೆಯೇ ಅರಚುವವನಂತೆ. ಒಂದು ಸಲ ಪಂಚವಟಿಗೆ ಒಬ್ಬ ಸಾಧು ಬಂದನು ಉಳಿದವರೆದುರಿಗೆ ಅವನು ಬಹಳ ವೇದಾಂತವನ್ನು ಮಾತನಾಡುತ್ತಿದ್ದನು. ಒಂದು ದಿನ ಅವನು ಒಬ್ಬ ಹೆಂಗಸಿನೊಂದಿಗೆ ನ್ಯಾಯವಿರುದ್ಧವಾದ ಸಂಬಂಧವನ್ನು ಬೆಳೆಸಿದನೆಂದು ನಾನು ಕೇಳಿ

ದೆನು. ಸ್ವಲ್ಪ ಹೊತ್ತಾದಮೇಲೆ ನಾನು ಅಲ್ಲಿಗೆ ಹೋದಾಗ ಅವನಿಗೆ, "ವೇದಾಂತವನ್ನು ಅಷ್ಟು ಚೆನ್ನಾಗಿ ಮಾತನಾಡುವಿಯಲ್ಲಾ? ಜನವೆಲ್ಲಾ ನಿನ್ನ ವಿಚಾರವಾಗಿ ಆಡಿಕೊಳ್ಳುವ ವಿಷಯವೇನು?" ಎಂದು ಕೇಳಿದೆನು. ಅವನು "ಅದಕ್ಕೇನು? ಅದರಿಂದ ಏನೂ ದೋಷ ವಿಲ್ಲವೆಂದು ನಾನು ನಿನಗೆ ತೋರುತ್ತೇನೆ. ಎಲ್ಲಾ ಕಾಲದಲ್ಲಿಯೂ ಜಗತ್ತು ಅಸತ್ಯವಾದರೆ ನನ್ನ ಪತನವೊಂದು ಸತ್ಯವಾಗುವುದೊ? ಅದು ಕೂಡ ಅಸತ್ಯ" ಎಂದನು ಇದನ್ನು ಕೇಳಿ ನಾನು ಬೇಸತ್ತು "ಇಂತಹ ವೇದಾಂತ ಜ್ಞಾನದ ಮೇಲೆ ನಾನು ಉಗುಳುವೆನು. ಇದು ನಿಜವಾದ ಜ್ಞಾನವಲ್ಲ. ಬರಿ ನಟನೆ ಇಂದ್ರಿಯ ಭೋಗದಲ್ಲಿ ನಿರತ ರಾದ ಪ್ರಾಪಂಚಿಕರ ಮತ್ತು ಕಪಟಿಗಳ ಸೋಗಿನ ಮಾತು ಇದು" ಎಂದೆನು.

## ಜ್ಞಾನಮಾರ್ಗದ ಕಷ್ಟ

೭೪೩. ಕಲಿಯುಗದಲ್ಲಿ ಜ್ಞಾನಯೋಗ ಬಹಳ ಕಷ್ಟ. ಮೊದಲ ನೆಯದಾಗಿ ನಮ್ಮ ಪ್ರಾಣ ಅನ್ನದ ಮೇಲೆ ನಿಂತಿದೆ. ಎರಡನೆಯದಾಗಿ ಈ ಯುಗದಲ್ಲಿ ಮನುಷ್ಯರು ಅಲ್ಪ ಆಯುಸ್ಸಿನವರು. ಮೂರನೆಯದಾಗಿ ನಮ್ಮಲ್ಲಿರುವ ಜೀವಾತ್ಮಬುದ್ಧಿ ಭ್ರಮೆಯಿಂದ ಪಾರಾಗುವುದಕ್ಕೆ ಸಾಧ್ಯವೇ ಇಲ್ಲವೆನ್ನಬಹುದು. ಜ್ಞಾನ ಬರಬೇಕಾದರೆ ನಿರ್ಧರ ಯಾವುದೆಂದರೆ "ನಾನು ದೇಹವಲ್ಲ ಸರ್ವವ್ಯಾಪಿಯೂ ನಿರಂಕುಶವೂ, ಅವ್ಯಕ್ತವೂ ಆದ ಬ್ರಹ್ಮ. ನಾನು ದೇಹವಲ್ಲದಕಾರಣ ದೇಹದ ಅವಸ್ಥೆ ಗಳಾದ ಜನನ ಮರಣ, ಹಸಿವು-ತೃಷೆ ರೋಗಾದಿಗಳಿಲ್ಲದವನು" ಎಂಬುದು. ಇಂತಹ ಅವಸ್ಥೆಗಳಿಗೆ ಒಳಗಾಗಿದ್ದರೂ ತಾನೆ ಜ್ಞಾನಿಯೆಂದು ಹೇಳಿಕೊಳ್ಳುವವನು ಕೈಗೆ ಚುಚ್ಚಿಕೊಂಡಿರುವ ಮುಳ್ಳಿನ ವ್ಯಥೆಯಿಂದ ಅರಚುತ್ತಿದ್ದರೂ ತನ್ನ ಕೈಗೆ ಏನೂ ಆಗಿಲ್ಲ, ಅದು ಸರಿಯಾಗಿದೆ ಎನ್ನು ವವನಂತೆ. ಇಂತಹ ಮಾತಿನಿಂದ ಪ್ರಯೋಜನವಿಲ್ಲ. ಮೊದಲನೆಯದಾಗಿ ದೇಹಬುದ್ಧಿ ಎಂಬ ಮುಳ್ಳನ್ನು ಜ್ಞಾನಾಗ್ನಿಯಿಂದ ದಹಿಸಿ ಬೂದಿ ಮಾಡಬೇಕು.

೭೪೪. ಜ್ಞಾನಕ್ಕೆ ಅರ್ಹರಾದವರು ಎಲ್ಲೋ ಸ್ವಲ್ಪ ಮಂದಿ ಮಾತ್ರ. ಸಹಸ್ರಾರು ಜನಗಳಲ್ಲಿ ಒಬ್ಬನು ತಿಳಿಯಲು ಯತ್ನಿಸುವನು. ಹಾಗೆ ಬಯಸುವ ಸಾವಿರಾರು ಜನರಲ್ಲಿ ಒಬ್ಬನು ಅವನ್ನು ನೋಡ

ಬಹುದು—ಎಂದು ಗೀತೆ ಸಾರುತ್ತದೆ. ಕಾಮ ಕಾಂಚನಗಳ ಮೇಲೆ ಆಸಕ್ತಿ ಕಡಿಮೆಯಾದಷ್ಟೂ ಜ್ಞಾನ ಹೆಚ್ಚಾಗುವುದು.

೭೪೫. ಜ್ಞಾನಯೋಗಿ ನಾನು ಎನ್ನುತ್ತಾನೆ. ಆದರೆ ಎಲ್ಲಿಯವರೆವಿಗೆ ದೇಹಬುದ್ಧಿ ಇದೆಯೋ, ಅಲ್ಲಿಯವರೆಗೂ ಈ ಅಹಂಕಾರದಿಂದ ಅಪಾಯ. ಇದು ಒಬ್ಬನ ಪುರೋಭಿವೃದ್ಧಿಗೆ ಸಹಾಯ ಮಾಡುವುದಿಲ್ಲ. ಅವನ ನಾಶಕ್ಕೆ ಕಾರಣವಾಗುವುದು. ಅಂತಹವನು ತನ್ನನ್ನು ಮತ್ತು ಇತರರನ್ನೂ ವಂಚಿಸುವನು.

೭೪೬. ರಾಮಚಂದ್ರನೆಂಬ ಒಬ್ಬ ಬ್ರಹ್ಮಚಾರಿ ಶ್ರೀರಾಮಕೃಷ್ಣರನ್ನು ದಕ್ಷಿಣೇಶ್ವರದಲ್ಲಿ ಕಂಡನು. ಸಾಧಕನು ಋಷಿಯಂತೆ ದೊಡ್ಡ ಜಟೆಯನ್ನು ಬಿಟ್ಟಿದ್ದನು. ಮುಂದೆ ಕುಳಿತುಕೊಂಡ ಮೇಲೆ "ಶಿವೋಹಂ, ಶಿವೋಹಂ" ಎಂದು ಹೇಳುತ್ತಾ ಸುಮ್ಮನಿದ್ದನು. ಶ್ರೀರಾಮಕೃಷ್ಣರು ಆತನನ್ನು ಕ್ಷಣಕಾಲ ಪರೀಕ್ಷಿಸಿ, ಹೀಗೆಂದರು: "ಶಿವೋಹಂ, ಎಂದು ಸುಮ್ಮನೆ ಉಚ್ಚರಿಸಿ ಫಲವೇನು ? ಒಬ್ಬನು ತನ್ನ ಹೃದಯದಲ್ಲಿರುವ ಶಿವನ ಜ್ಞಾನದಲ್ಲಿ ಸಿದ್ಧನಾಗಿ ತನ್ನ ಅಹಂಕಾರವನ್ನೆಲ್ಲಾ ಕಳೆದುಕೊಂಡು ಶಿವನಲ್ಲಿ ಐಕ್ಯನಾದ ಮೇಲೆ ಈ ಪವಿತ್ರ ಮಂತ್ರವನ್ನು ಹೇಳುವುದಕ್ಕೆ ಅರ್ಹನಾಗುವನು. ಸಾಕ್ಷಾತ್ಕಾರವಿಲ್ಲದೆ ಈ ಮಂತ್ರವನ್ನುಚ್ಚರಿಸಿ ಫಲವೇನು? ಎಲ್ಲಿಯವರೆವಿಗೆ ಒಬ್ಬನಿಗೆ ಸಾಕ್ಷಾತ್ಕಾರವಿಲ್ಲವೊ ಅಲ್ಲಿಯವರೆವಿಗೆ ದೇವರನ್ನು ಸ್ವಾಮಿ ಎಂದೂ, ತನ್ನನ್ನು ದಾಸನೆಂದೂ ತಿಳಿದುಕೊಳ್ಳುವುದು ಒಳ್ಳೆಯದು" ಸಾಧಕನಿಗೆ ತನ್ನ ತಪ್ಪು ಗೊತ್ತಾಗಿ ಇದು ಮತ್ತು ಇನ್ನೂ ಇತರ ಬುದ್ಧಿವಾದಗಳಿಂದ ಉತ್ತಮನಾದನು. ಆತನು ಕೋಣೆಯನ್ನು ಬಿಡುವುದಕ್ಕಿಂತ ಮುಂಚೆ ಶ್ರೀ ರಾಮಕೃಷ್ಣರ ಕೋಣೆಯ ಹೊರಗೆ ಗೋಡೆಯ ಮೇಲೆ ಹೀಗೆ ಬರೆದನು: "ಸ್ವಾಮಿಗಳ ಬುದ್ಧಿವಾದದಂತೆ ಇಂದಿನಿಂದ ಬ್ರಹ್ಮಚಾರಿ ರಾಮಚಂದ್ರ, ದೇವರನ್ನು ಸ್ವಾಮಿ ಎಂತಲೂ, ತನ್ನನ್ನು ಆತನ ವಿಧೇಯನಾದ ಸೇವಕನೆಂತಲೂ ತಿಳಿಯುತ್ತಾನೆ."

## ಭಕ್ತಿಮಾರ್ಗ ಮತ್ತು ಅದರ ಬೆಳವಣಿಗೆಗೆ ಅವಕಾಶ

೭೪೭. ಬರಿಯ ಕನ್ನಡಿಯ ಮೇಲೆ ಯಾವ ಪ್ರತಿಬಿಂಬವೂ ಬೀಳುವುದಿಲ್ಲ. ಅದರ ಮೇಲೆ ಸರಿಯಾದ ರಸಾಯನಿಕ ದ್ರವ್ಯಗಳನ್ನು ಲೇಪಿಸಿದ ಮೇಲೆ ಛಾಯಾ ಯಂತ್ರದಂತೆ ಆದರ ಮೇಲೆ ಫೋಟೋ

ಗಳನ್ನು ತೆಗೆಯಬಹುದು. ಇದರಂತೆಯೇ ಭಕ್ತಿಯೆನ್ನುವ ರಸಾಯನಿಕ ದ್ರವ್ಯಗಳಿಂದ ಲೇಪನವಾದ ಮೇಲೆ ಮಾನವ ಹೃದಯದಲ್ಲಿ ದೇವರ ಪ್ರತಿಬಿಂಬವನ್ನು ಹಿಡಿಯಬಹುದು.

೭೪೮. ಭಕ್ತಿ ಎನ್ನುವುದು ಬಹಳ ಅಪರೂಪ. ಪತಿವ್ರತಾ ಹೆಂಗಸಿಗೆ ತನ್ನ ಪತಿಯ ಮೇಲಿರುವಂತಹ ಪ್ರೇಮ, ಒಬ್ಬನಲ್ಲಿ ಹೃತ್ಪೂರ್ವಕವಾಗಿ ದೇವರ ಮೇಲೆ ಇದ್ದರೆ ಮಾತ್ರ ಭಕ್ತಿ ಹೆಚ್ಚುವುದು. ಪರಿಶುದ್ಧವಾದ ಭಕ್ತಿಯನ್ನು ಪಡೆಯುವುದು ಬಹಳ ಕಷ್ಟ. ಭಕ್ತಿಯ ಮೂಲಕ ನಮ್ಮ ಮನಸ್ಸು ಮತ್ತು ಆತ್ಮ ದೇವರಲ್ಲಿ ಐಕ್ಯವಾಗಬೇಕು. ನಂತರ ಭಾವ ಬರುವುದು. ಭಾವದಲ್ಲಿರುವಾಗ ಒಬ್ಬನು ಮೌನವಾಗುವನು. ಉಸಿರು ನಿಲ್ಲುವುದು, ಕುಂಭಕ ತನಗೆ ತಾನೆ ಪ್ರಾಪ್ತವಾಗುವುದು. ಒಬ್ಬನು ಒಂದು ಗುರಿಯ ಕಡೆ ಹೊಡೆಯುವಾಗ ಮಾತಿಲ್ಲದೆ ಉಸಿರು ನಿಲ್ಲುವಂತೆ.

೭೪೯. ಇಂದ್ರಿಯವಸ್ತುಗಳ ಮೇಲೆ ಆಸಕ್ತಿ ತಗ್ಗಿದಷ್ಟೂ ದೇವರ ಭಕ್ತಿ ಹೆಚ್ಚುವುದು.

೭೫೦. ಪ್ರಾಪಂಚಿಕರು ನಿಜವಾಗಿ ಆಶಿಸುವುದು ಕೆಲಸಕ್ಕೆ ಬಾರದ ವಿಷಯವಸ್ತುಗಳನ್ನು. ಪ್ರಾಪಂಚಿಕತೆಯಿಂದ ಮೈಲಿಗೆಯಾಗದ ಶುದ್ಧ ಹೃದಯರಿಗೆ ಮಾತ್ರ ದೇವರನ್ನು ಸಂಪೂರ್ಣ ಪ್ರೀತಿಸುವ ಚಿತ್ತೈಕಾಗ್ರತೆ ದೊರಕುವುದು.

೭೫೧. ಪಳಗಿಲ್ಲದ ಕುದುರೆಯ ಕಣ್ಣನ್ನು ಪಕ್ಕದಲ್ಲಿ ಮುಚ್ಚುವ ತನಕ ಅದು ಒಂದು ಹೆಜ್ಜೆಯನ್ನೂ ಇಡುವುದಿಲ್ಲ ಮನಸ್ಸನ್ನು ನಿಗ್ರಹಿಸದಿದ್ದರೆ ದೇವರನ್ನು ಕಾಣಲು ಸಾಧ್ಯವೆ? ಒಂದು ದೃಷ್ಟಿಯಿಂದ ಸಾಧ್ಯವಿಲ್ಲ. ಆದರೆ ಇದು ಜ್ಞಾನಮಾರ್ಗಕ್ಕೆ ಮಾತ್ರ ಅನ್ವಯಿಸುವುದು. ದೇವರನ್ನು ನೋಡಬೇಕಾದರೆ ಒಬ್ಬನು ಪರಿಶುದ್ಧನಾಗಿರಬೇಕು ಎನ್ನುವನು ಜ್ಞಾನಿ. ಮೊದಲು ಒಬ್ಬನು ತನ್ನ ಮನಸ್ಸನ್ನು ನಿಗ್ರಹಿಸಬೇಕು. ಮೊದಲು ಇಂದ್ರಿಯ ನಿಗ್ರಹ, ನಂತರ ಬ್ರಹ್ಮಜ್ಞಾನ, ಎನ್ನುವನು ಜ್ಞಾನಿ. ಆದರೆ ದೇವರೆಡೆಗೆ ಒಯ್ಯುವ ಮತ್ತೊಂದು ದಾರಿಯಿದೆ. ಅದು ಭಕ್ತಿಮಾರ್ಗ, ಒಬ್ಬನಿಗೆ ಭಕ್ತಿ ಲಭಿಸಿದರೆ, ಅವನ ನಾಮೋಚ್ಚಾರಣೆಯಿಂದ ಆನಂದಪರವಶನಾದರೆ ನಂತರ ಇಂದ್ರಿಯನಿಗ್ರಹಕ್ಕೆ ಎಷ್ಟು ಪ್ರಯತ್ನಬೇಕು! ನಿಗ್ರಹ ತನ್ನಷ್ಟಕ್ಕೆ ತಾನೇ ಬರುವುದು.

ತುಂಬಾ ವ್ಯಸನದಲ್ಲಿರುವವನಿಗೆ, ಇನ್ನೊಬ್ಬರೊಂದಿಗೆ ಜಗಳವಾಡುವುದಕ್ಕೆ ಅಥವಾ ಹಬ್ಬದೂಟವನ್ನು ಮಾಡುವುದಕ್ಕೆ ಅಥವಾ ಇತರ ವಿಷಯ ಸುಖದ ಕಡೆಗೆ ಮನಸ್ಸಿಡುವುದಕ್ಕೆ ಸಾಧ್ಯವೆ? ಇದರಂತೆಯೇ ಪರಮಾತ್ಮನ ಭಕ್ತಿಯಲ್ಲಿ ತನ್ಮಯನಾಗಿರುವವನು ವಿಷಯಸುಖಗಳನ್ನು ಆಲೋಚಿಸುವುದಿಲ್ಲ.

೭೫೨. ರಾಧೆ ಶ್ರೀಕೃಷ್ಣನ ಹತ್ತಿರ ಸಮೀಪಿಸಿದಂತೆಲ್ಲಾ ಅವನ ದೇಹದ ಪವಿತ್ರ ಪರಿಮಳ ಹೆಚ್ಚುಹೆಚ್ಚಾಗಿ ಬರುತ್ತಿತ್ತು. ದೇವರ ಹತ್ತಿರ ಸಮೀಪಿಸಿದಷ್ಟೂ ಅವನ ಮೇಲೆ ಪ್ರೇಮ ಹೆಚ್ಚುವುದು. ನದಿಯು ಸಮುದ್ರದ ಹತ್ತಿರ ಸಮೀಪಿಸಿದಂತೆಲ್ಲಾ ಹೆಚ್ಚುಹೆಚ್ಚು ಅದರ ಉಬ್ಬರವಿಳಿತಗಳಿಗೆ ಒಳಗಾಗುವುದು.

೭೫೩. ಒಂದು ಸಲ ಪೂಜೆಯ ವಿಚಾರವಾಗಿ ಕೇಶವ ಚಂದ್ರ ಸೇನ ಮತ್ತು ಆತನ ಅನುಯಾಯಿಗಳಿಗೆ ಶ್ರೀ ಗುರುದೇವರು ಹೀಗೆ ಹೇಳಿದರು : "ದೇವರ ಶಕ್ತಿ ಮತ್ತು ಮಹಿಮೆಯ ಮೇಲೆ ಏತಕ್ಕೆ ಅಷ್ಟೊಂದು ನೀವು ಆಲೋಚಿಸುವಿರಿ? ತಂದೆಯ ಎದುರಿಗೆ ಕುಳಿತುಕೊಂಡಿರುವ ಮಗನು, ನನ್ನ ತಂದೆಗೆ ಅಷ್ಟೊಂದು ಮನೆಗಳಿವೆ, ಕುದುರೆಗಳಿವೆ, ಹಸುಗಳಿವೆ ಎಂದು ಆಲೋಚಿಸುವನೇನು? ನಾವೆಲ್ಲಾ ದೇವರ ಮಕ್ಕಳು. ಅವನು ನಮ್ಮನ್ನು ಸುರಕ್ಷಿತವಾಗಿ ಇಟ್ಟಿರುವನು. ಇದರಲ್ಲಿರುವ ಆಶ್ಚರ್ಯವೇನು? ಆದಕಾರಣ ನಿಜವಾದ ಭಕ್ತ ಈ ವಿಚಾರವನ್ನು ಕುರಿತು ಆಲೋಚಿಸುವುದನ್ನು ಬಿಟ್ಟು ಅವನೊಂದಿಗೆ ಅತಿನಿಕಟ ಸಂಬಂಧವನ್ನು ಬೆಳೆಸಬೇಕು. ಅವನನ್ನು ತನ್ನ ಆಪ್ತನನ್ನಾಗಿ ಮಾಡಿಕೊಳ್ಳಬೇಕು ಅವನನ್ನು ಬೇಡಿಕೊಳ್ಳಬೇಕು. ಅವನ ವಿಚಾರವಾಗಿ ಹೆಮ್ಮೆ ಪಡಬೇಕು. ಪ್ರಾರ್ಥನೆಯಿಂದ ಅವನನ್ನು ಬಲಾತ್ಕಾರ ಮಾಡಬೇಕು. ನಿನ್ನ ಪ್ರಾರ್ಥನೆಯನ್ನು ಮಾಡಬೇಕು ಮತ್ತು ನೀನು ನನಗೆ ಮೈದೋರಬೇಕು ಎಂದು ಬೇಡಬೇಕು. ನೀವು ಅವನನ್ನು ಒಂದು ಅದ್ಭುತವ್ಯಕ್ತಿಯೆಂದು ಆಲೋಚಿಸುತ್ತಿದ್ದರೆ ನೀವು ಅವನನ್ನು ನಿಮ್ಮ ಅತಿ ನಿಕಟ ಸಂಬಂಧಿ ಎಂದು ತಿಳಿಯುವುದಕ್ಕೆ ಆಗುವುದಿಲ್ಲ. ಆಗ ಆತನನ್ನು ಬಲಾತ್ಕರಿಸುವುದಕ್ಕಾಗುವುದಿಲ್ಲ. ಓ! ಅವನೆಷ್ಟು ಮಹಿಮಾವಂತನು. ನಮ್ಮಿಂದ ಎಷ್ಟು ದೂರದಲ್ಲಿರುವನು? ಎಂಬ ಭಾವನೆ ಬರುವುದು. ನಿಮಗೆ ಸಾಧ್ಯವಾದ ಮಟ್ಟಿಗೆ ಅವನು ನಿಮ್ಮವನೆಂದು ತಿಳಿಯಿರಿ. ಆಗ ನೀವು ಅವನನ್ನು ಹೊಂದುವಿರಿ."

೭೫೮. ಯಾವುದಾದರೂ ಒಂದು ಭಾವವನ್ನು ದೃಢವಾಗಿ ನಂಬಿ ನೀವು ಅವನನ್ನು ನಿಮ್ಮವನನ್ನಾಗಿ ಮಾಡಿಕೊಳ್ಳಬೇಕು. ಆಗ ಮಾತ್ರ ಅವನು ನಿಮ್ಮ ಪ್ರಾರ್ಥನೆಗಳನ್ನು ಸಲ್ಲಿಸಬೇಕಾಗುವುದು. ಇಬ್ಬರಿಗೂ ಆಗತಾನೆ ಪರಿಚಯವಾದಾಗ ಅವರು ಮಾತನಾಡುವಾಗ ಎಲ್ಲ ನಿಯಮಗಳನ್ನು ಅನುಸರಿಸುವರು. ನಿಕಟತೆ ಹೆಚ್ಚಿದಂತೆಲ್ಲಾ ತೋರಿಕೆಯ ಗೌರವವೆಲ್ಲಾ ಮಾಯವಾಗುವುದು. ಇಬ್ಬರೂ ಬಹಳ ಸದರದಿಂದ ಮಾತನಾಡುವರು. ಇದರಂತೆಯೆ ನಾವು ದೇವರೊಂದಿಗೆ ಅತ್ಯಂತ ಹತ್ತಿರದ ಸಂಬಂಧವನ್ನು ಇಟ್ಟುಕೊಂಡಿರಬೇಕು. ಜಾರೆಗೆ ತನ್ನ ಉಪಪತಿಯ ಸಮೀಪದಲ್ಲಿ ಪ್ರಾರಂಭದಲ್ಲಿ ತುಂಬಾ ನಾಚಿಕೆ ಯಾಗುವುದು. ತುಂಬಾ ಜೋಪಾನವಾಗಿ ಅವಳ ಪ್ರೀತಿಯನ್ನು ರಹಸ್ಯ ವಾಗಿಟ್ಟಿರುವಳು. ಆದರೆ ಅವಳ ಪ್ರೇಮ ಮಾಗಿದ ಮೇಲೆ ಇಂತಹ ನಾಚಿಕೆ ಮಾಯವಾಗುವುದು ಬಹಿರಂಗವಾಗಿ ಮನೆ ತೊರೆದು ತನ್ನ ಪ್ರಿಯನೊಂದಿಗೆ ಅಲೆಯುವಳು. ನಂತರ ಅವನಿಗೆ ಇವಳಮೇಲೆ ಪ್ರೀತಿ ಇಲ್ಲದೆ ಇದ್ದರೆ ಅವನ ಕತ್ತನ್ನು ಹಿಡಿದುಕೊಂಡು "ನಿನ ಗೋಸುಗ ನಾನು ಮನೆಬಿಟ್ಟೆ. ಈಗ ನನ್ನನ್ನು ರಕ್ಷಿಸದೆ ಇದ್ದರೆ ಬಿಡುವುದಿಲ್ಲ" ಎನ್ನುವಳು.

## ಭಕ್ತಿ ಮತ್ತು ಪ್ರಾಪಂಚಿಕಪ್ರೀತಿ

೭೫೯. ಜ—ತಾಯಿ ಮುದುಕಿಯಾದಳು. ಸಂಸಾರವನ್ನು ತ್ಯಜಿಸಿ ಬೃಂದಾವನದಲ್ಲಿ ತನ್ನ ಕೊನೆಗಾಲವನ್ನು ಕಳೆಯುವುದಕ್ಕೆ ಆಗಲೆ ಸಮಯವಾಗಿದೆ ಎಂದು ತಿಳಿದಳು. ಆಕೆ ತನ್ನ ಇಚ್ಛೆಯನ್ನು ಶ್ರೀರಾಮಕೃಷ್ಣರಿಗೆ ತಿಳಿಸಿದಳು. ಅವರು ಅದಕ್ಕೆ ಅನುಮತಿ ಕೊಡದೆ ಹೀಗೆ ಹೇಳಿದರು: "ನಿನಗೆ ನಿನ್ನ ಮಗನ ಮಗಳ ಮೇಲೆ ತುಂಬಾ ಪ್ರೀತಿ. ನೀನು ಎಲ್ಲಿಗೆ ಹೋದರೂ ಅದರ ಮೇಲೆ ಆಲೋಚನೆ ನಿನ್ನ ಮನಸ್ಸನ್ನು ಆವರಿಸಿ ಅಶಾಂತಳನ್ನಾಗಿ ಮಾಡುವುದು. ಬೇಕಾದರೆ ನೀನು ಬೃಂದಾವನಕ್ಕೆ ಹೋಗಬಹುದು. ಆದರೆ ನಿನ್ನ ಮನಸ್ಸು ಯಾವಾಗಲೂ ಮನೆಯಕಡೆ ಸುಳಿಯುತ್ತಿರುವುದು. ಹಾಗಲ್ಲದೆ ನಿನ್ನ ಮೊಮ್ಮಗಳು ರಾಧೆ ಎಂದು ತಿಳಿದು ಅವಳನ್ನು ಪ್ರೇಮದಿಂದ ನೋಡು ವುದನ್ನು ಕಲಿತರೆ ಬೃಂದಾವನದಲ್ಲಿ ಇದ್ದರೆ ಬರಬಹುದಾದ ಪುಣ್ಯ ವೆಲ್ಲಾ ತನಗೆ ತಾನೆ ಬರುವುದು. ಮನದಣಿಯ ನೀನು ಅವಳನ್ನು

ಮುದ್ದಿಸು ಬೇಕಾದಷ್ಟು ಅದಕ್ಕೆ ತಿಂಡಿಯನ್ನು ಕೊಡು, ಅಲಂಕಾರ ಮಾಡು. ಆದರೆ ಮನಸ್ಸಿನಲ್ಲಿ ಯಾವಾಗಲೂ ಹಾಗೆ ಮಾಡುವುದೆಲ್ಲ ಬೃಂದಾವನದಲ್ಲಿರುವ ದೇವಿಗೆ ಮಾಡುತ್ತಿರುವೆನು ಎಂದು ತಿಳಿ."

೭೫೬. ಭಕ್ತನೊಬ್ಬನು ತನ್ನ ಹತ್ತಿರದ ನೆಂಟನೊಬ್ಬನ ಮೇಲೆ ತುಂಬಾ ಆಸಕ್ತನಾಗಿ, ಮನಸ್ಸನ್ನು ಸ್ಥಿರಗೊಳಿಸಲು ಅಸಾಧ್ಯವಾಗಿರುವುದನ್ನು ಕಂಡು ಶ್ರೀ ರಾಮಕೃಷ್ಣರು ಅವನಿಗೆ, ಪ್ರೀತಿಸುವ ವಸ್ತುವನ್ನು ದೇವರೆಂದು ತಿಳಿದು ಉಪಚಾರಮಾಡು ಎಂದರು. ಈ ವಿಷಯವನ್ನೇ ವಿವರಿಸುತ್ತಿರುವಾಗ ವೈಷ್ಣವಚರಣ ಕೂಡ ಇದೇ ಅಭಿಪ್ರಾಯವನ್ನು ಹೀಗೆ ಹೇಳುತ್ತಿದ್ದನು : "ಒಬ್ಬನು ತಾನು ಪ್ರೀತಿಸುವ ವಸ್ತುವನ್ನು ಇಷ್ಟದೇವತೆ ಎಂದು ತಿಳಿದರೆ ಮನಸ್ಸು ಸುಲಭವಾಗಿ ದೇವರ ಕಡೆ ತಿರುಗುವುದು."

## ಭಕ್ತಿಯ ಪರಿಣಾಮ

೭೫೭. ಒಬ್ಬ ಭಕ್ತ:—ಸ್ವಾಮಿ, ವಿಚಾರದಿಂದ ಮೊದಲು ನಾವು ಇಂದ್ರಿಯನಿಗ್ರಹವನ್ನು ಮಾಡುವುದು ಆವಶ್ಯಕವೆ ?

ಶ್ರೀ ಗುರುದೇವರು :—ಹೌದು. ಅದೊಂದು ಮಾರ್ಗ. ಅದನ್ನು ಜ್ಞಾನಯೋಗ ಎನ್ನಬಹುದು. ಭಕ್ತಿಮಾರ್ಗದಲ್ಲಿ ಇಂದ್ರಿಯನಿಗ್ರಹ ಸುಲಭವಾಗಿ ತನಗೆ ತಾನೆ ಬರುವುದು. ಪರಮಾತ್ಮನ ಮೇಲೆ ಪ್ರೇಮ ಹೆಚ್ಚಿದಷ್ಟೂ ಇಂದ್ರಿಯ ಸುಖಗಳು ಸಪ್ಪೆಯಾಗುವುವು. ಮಗುವನ್ನು ಕಳೆದುಕೊಂಡ ದಿನ ತಾಯಿತಂದೆಗಳು ತಮ್ಮ ದೇಹಸುಖವನ್ನು ಆಲೋಚಿಸಲು ಸಾಧ್ಯವಿಲ್ಲದಂತೆ.

೭೫೮. ಹರಿನಾಮವನ್ನು ಕೇಳಿದ ತಕ್ಷಣವೇ ಆನಂದಭಾಷ್ಪ ಸುರಿಯದೆ ಇರುವತನಕ ಸಾಧನೆ ಆವಶ್ಯಕ. ಭಗವಂತನ ಹೆಸರನ್ನು ಕೇಳಿದ ತಕ್ಷಣವೇ ಯಾರ ಹೃದಯ ಕರಗಿ ಕಣ್ಣಿನಲ್ಲಿ ಆನಂದಭಾಷ್ಪ ಬರುವುದೊ ಅವನಿಗೆ ಯಾವ ಸಾಧನೆಯೂ ಬೇಕಾಗಿಲ್ಲ.

೭೫೯. ಕವಿಯೊಬ್ಬನು ಭಕ್ತಿಯನ್ನು ಒಂದು ಹುಲಿಗೆ ಹೋಲಿಸುವನು. ಹೇಗೆ ಹುಲಿ ಪ್ರಾಣಿಗಳನ್ನು ತಿಂದುಹಾಕುವುದೋ ಹಾಗೆಯೆ ಭಕ್ತಿ ಮಾನವನ ಅರಿಷಡ್ವರ್ಗಗಳಾದ ಕಾಮ, ಕ್ರೋಧ, ಲೋಭಾದಿಗಳನ್ನು ತಿಂದುಹಾಕುವುದು. ಭಗವಂತನಮೇಲೆ ಭಕ್ತಿ ಒಂದುಸಾರಿ

ಚೆನ್ನಾಗಿ ಜಾಗ್ರತವಾಯಿತೆಂದರೆ ಕಾಮಕ್ರೋಧಾದಿಗಳೆಲ್ಲ ಸಂಪೂರ್ಣ ವಾಗಿ ನಾಶವಾಗುವುವು ಬೃಂದಾವನದ ಗೋಪಿಯರು ಕೃಷ್ಣನ ಮೇಲಿನ ಅತಿನಿಕಟಪ್ರೇಮದಿಂದ ಅಂತಹ ಸ್ಥಿತಿಯನ್ನು ಪಡೆದರು.

೭೬೦. ಭಕ್ತಿಯನ್ನು ಅಂಜನಕ್ಕೂ ಹೋಲಿಸಬಹುದು. ಶ್ರೀಮತಿ (ರಾಧೆ) ಒಂದುಸಾರಿ "ಓ! ನಾನು ಕೃಷ್ಣನನ್ನು ಎಲ್ಲಾ ಕಡೆಯಲ್ಲಿಯೂ ನೋಡುತ್ತಿರುವೆನು" ಎಂದಳು. ಅದಕ್ಕೆ ಉಳಿದ ಗೋಪಿಯರು, "ನಿನ್ನ ಕಣ್ಣಿಗೆ ಪ್ರೇಮಾಂಜನವನ್ನು ಲೇಪಿಸಿಕೊಂಡಿರುವೆ. ಅದಕ್ಕೇ ನೀನು ಎಲ್ಲಾ ಕಡೆಯಲ್ಲಿಯೂ ಅವನನ್ನು ನೋಡುತ್ತಿರುವುದು" ಎಂದರು.

೭೬೧. ದೇವರಿಗಾಗಿ ಭಕ್ತ ಎಲ್ಲವನ್ನೂ ಏತಕ್ಕೆ ತ್ಯಜಿಸಬೇಕು? ಪತಂಗ ಬೆಳಕನ್ನು ಕಂಡೊಡನೆಯೆ ಕತ್ತಲೆಯಿಂದ ಹಾರುವುದು. ಇರುವೆ ಸಕ್ಕರೆಯ ಪಾಕವನ್ನು ಕಂಡರೆ, ಅದನ್ನು ಬಿಡದೆ ಅದರಲ್ಲಿ ತನ್ನ ಪ್ರಾಣವನ್ನು ಕಳೆದುಕೊಳ್ಳುವುದು. ಇದರಂತೆಯೆ ಭಕ್ತ ಎಲ್ಲವನ್ನೂ ತೊರೆದು ದೇವರನ್ನು ನಂಬುವನು.

೭೬೨. ಶ್ರೀ ಗುರುದೇವರು :- ಬೆಳಕನ್ನು ಕಂಡ ಪತಂಗ ಕತ್ತಲೆಗೆ ಹೋಗುವುದೆ?

ವೈದ್ಯ:—ಎಂದಿಗೂ ಇಲ್ಲ. ಅದು ಧಾವಿಸಿ ಅದರಲ್ಲಿಯೇ ಸಾಯುವುದು.

ಶ್ರೀ ಗುರುದೇವರು :—ಆದರೆ ನಿಜವಾದ ಭಕ್ತನ ಸ್ಥಿತಿ ಹಾಗಲ್ಲ. ಅವನನ್ನು ಆಕರ್ಷಿಸುವ ಪರಂಜ್ಯೋತಿ ಭಕ್ತನನ್ನು ಸುಟ್ಟು ಸಾಯಿಸುವುದಿಲ್ಲ. ಇದು ವಜ್ರಕಾಂತಿಯಂತೆ, ಬೆಳಗುತ್ತಿದ್ದರೂ ಕೋಮಲವಾಗಿ ತಂಪಾಗಿ ಆಹ್ಲಾದಕರವಾಗಿರುವುದು. ಇದು ಸುಡುವುದಿಲ್ಲ, ಹೃದಯಕ್ಕೆ ಶಾಂತಿ ಆನಂದಗಳನ್ನು ನೀಡುವುದು.

೭೬೩ ಒಬ್ಬನಿಗೆ ಸರಿಯಾದಮಾರ್ಗ ಗೊತ್ತಿಲ್ಲದೆ ಇರಬಹುದು. ಆದರೂ ದೇವರನ್ನು ಕಾಣಬೇಕೆಂಬ ತೀವ್ರ ಅಭಿಲಾಷೆ ಅವನಲ್ಲಿರಬಹುದು. ಅಂತಹ ಭಕ್ತ ಕೇವಲ ತನ್ನ ಭಕ್ತಿಯಿಂದ ಅವನನ್ನು ಪಡೆಯುವನು. ಪೂರಿಯ ಜಗನ್ನಾಥನನ್ನು ನೋಡುವುದಕ್ಕೆ ಒಬ್ಬ ಭಕ್ತ ಹೊರಟ. ಆದರೆ ಪೂರಿಗೆ ದಾರಿ ತಿಳಿಯದೆ ಆದರ ಹತ್ತಿರ ಹೋಗುವ ಬದಲು ಅದರಿಂದ ವಿಮುಖನಾಗಿ ಹೊರಟುಹೋದನು. ಅತಿಕಾತುರ

ನಾಗಿ ದಾರಿಯಲ್ಲಿ ಸಿಕ್ಕಿದವರನ್ನೆಲ್ಲ ವಿಚಾರಮಾಡಿದನು. ಅವರೆಲ್ಲರೂ ಇದಲ್ಲ, ಆ ದಾರಿಯಲ್ಲಿ ಹೋಗು ಎಂದು ಹೇಳಿದರು. ಕೊನೆಗೆ ಭಕ್ತ ಊರನ್ನು ಸೇರಿ ಕೃತಾರ್ಥನಾದ. ಒಬ್ಬನಿಗೆ ದಾರಿಗೊತ್ತಿಲ್ಲದೆ ಇದ್ದರೂ ಇಚ್ಛೆಯಿದ್ದರೆ ಅಲ್ಲಿಗೆ ದಾರಿ ತೋರುವುದಕ್ಕೆ ಯಾರಾದರೂ ಸಿಕ್ಕೇಸಿಕ್ಕುವರು. ಮೊದಲು ಒಬ್ಬನು ತಪ್ಪುಮಾಡಬಹುದು. ಆದರೆ ಕೊನೆಗೆ ಅವನು ಸರಿಯಾದ ದಾರಿಯನ್ನು ಸೇರುವನು.

೭೬೪. ಭಕ್ತಿವಿಕಾಸವಾದಂತೆ ಕ್ರಮೇಣ, ವಿವೇಕ ವೈರಾಗ್ಯ ಭೂತದಯೆ, ಸಾಧುಸೇವೆ ಮತ್ತು ಅವರಸಂಗ, ಭಜನೆ, ಸತ್ಯ ಮುಂತಾದ ಗುಣಗಳೆಲ್ಲಾ ಆವಿರ್ಭವಿಸುವುವು.

೭೬೫. ಈಶ್ವರದರ್ಶನದ ಚಿಹ್ನೆಗಳಿವೆ. ಯಾರಲ್ಲಿ ಭಕ್ತಿ ಮೂಡಿದೆಯೊ ಅವರು ಶೀಘ್ರದಲ್ಲಿಯೆ ದೇವರನ್ನು ಪಡೆಯುವರು ಎಂದು ತಿಳಿ.

೭೬೬. ಸಮುದ್ರದ ಕೆಳಗೆ ಇರುವ ಅಯಃಕಾಂತ ಬಂಡೆ ಅದರ ಮೇಲೆ ತೇಲುತ್ತಿರುವ ಹಡಗವನ್ನು ತನ್ನೆಡೆಗೆ ಆಕರ್ಷಿಸಿ, ಅದರ ಕಬ್ಬಿಣದ ಮೊಳೆಯನ್ನೆಲ್ಲ ಸೆಳೆದು, ಹಲಗೆಗಳನ್ನು ಪ್ರತ್ಯೇಕಮಾಡಿ ಆ ಹಡಗನ್ನು ಮುಳುಗಿಸುವುದು. ಇದರಂತೆಯೆ ಜೀವನು ದೇವರೆಂಬ ಅಯಃಕಾಂತಶಿಲೆಯಿಂದ ಆಕರ್ಷಿತನಾದರೆ, ಒಂದು ಕ್ಷಣದಲ್ಲಿ ಅವನ ಸ್ವಾರ್ಥತೆ ಮತ್ತು ವ್ಯಕ್ತಿತ್ವವನ್ನು ನಾಶಮಾಡಿ ಆತ್ಮನನ್ನು ಪರಮಾನಂದ ಸಾಗರದಲ್ಲಿ ಮುಳುಗಿಸುವುದು.

## ಭಕ್ತಿ ಸೋಪಾನ

೭೬೭. ಪ್ರೇಮದಲ್ಲಿ ಮೂರುವಿಧ. ಸಮರ್ಥ (ನಿಸ್ವಾರ್ಥ) ಸಮಂಜಸ (ಪರಸ್ಪರ) ಮತ್ತು ಸಾಧಾರಣ (ಸ್ವಾರ್ಥ). ಸಮರ್ಥ ಪ್ರೇಮ ಅತ್ಯುತ್ತಮವಾದುದು. ಇಲ್ಲಿ ಪ್ರೇಮಿಯು ಪ್ರೇಯಸಿಯ ಹಿತವನ್ನು ಮಾತ್ರ ಬಯಸುವನು. ಅದರಿಂದ ತನಗೆ ಅನಾನುಕೂಲ ಮತ್ತು ವ್ಯಥೆಯಾದರೆ ಮನಸ್ಸಿಗೆ ತೆಗೆದುಕೊಳ್ಳುವುದಿಲ್ಲ. ಎರಡನೆಯದು ಪರಸ್ಪರ ಪ್ರೀತಿ, ಅಂದರೆ ತನ್ನ ಪ್ರೇಯಸಿಯ ಹಿತಮಾತ್ರವಲ್ಲ, ಜತೆಗೆ ತನ್ನ ಹಿತವೂ ಅವನ ಮನಸ್ಸಿನಲ್ಲಿರುವುದು. ಸ್ವಾರ್ಥಪ್ರೇಮ ಅತ್ಯಂತ ಕೀಳುತರಗತಿಯದು. ಇದು ತನ್ನ ಪ್ರೇಯಸಿಯ ಸುಖದುಃಖಗಳನ್ನು ಮನಸ್ಸಿಗೆ ತಾರದೆ ಕೇವಲ ತನ್ನ ಸುಖವನ್ನು ಮಾತ್ರ ನೋಡಿಕೊಳ್ಳುವಂತೆ ಮಾಡುವುದು.

೭೬೮. ಪ್ರಾಪಂಚಿಕತೆಯಲ್ಲಿ ಸತ್ತ್ವ, ರಜಸ್ಸು ಮತ್ತು ತಮಸ್ಸು ಹೇಗೆ ಇದೆಯೋ ಅದರಂತೆಯೆ ಭಕ್ತಿಯಲ್ಲಿ ಕೂಡ ಇರುವುದು. ಸಾತ್ತ್ವಿಕವಾದ ದೈನ್ಯತೆಯನ್ನು ತಾಳುವುದು ಒಂದು ಭಕ್ತಿ, ರಾಜಸಿಕವಾದ ತೋರಿಕೆಯದು ಒಂದು ಭಕ್ತಿ. ಮೂರನೆಯದು ತಾಮಸಿಕವಾದ ವ್ಯಗ್ರೀಯ ಭಕ್ತಿ.

ಸಾತ್ತ್ವಿಕಭಕ್ತ ತನ್ನ ಸಾಧನೆಯನ್ನು ಯಾರಿಗೂ ತಿಳಿಯದಂತೆ ಮಾಡುವನು. ರಾತ್ರಿಯಹೊತ್ತು ತನ್ನ ಹಾಸಿಗೆಯ ಮೇಲೆ ಸೊಳ್ಳೆಯ ಪರದೆಯ ಕೆಳಗೆ ಧ್ಯಾನಮಾಡುವನು. ಬೆಳಗ್ಗೆ ಹೊತ್ತಾಗಿ ಏಳುವನು. ಅವನ ಸ್ನೇಹಿತರು ಅವನಿಗೆ ರಾತ್ರಿ ಸರಿಯಾಗಿ ನಿದ್ದೆಬರಲಿಲ್ಲವೇನೋ ಅನ್ನುವರು. ಅವನ ದೇಹದ ಕಡೆಗೆ ಕೊಡುವ ಗಮನ ಕೇವಲ ಸ್ವಲ್ಪ. ಅನ್ನ ಮತ್ತು ತರಕಾರಿ ಅವುಗಳನ್ನು ಕೊಡುವುದರಲ್ಲಿ ಕೊನೆಗಾಣು ವುದು. ಆಹಾರದಲ್ಲಾಗಲಿ ಅಥವಾ ಬಟ್ಟೆಯಲ್ಲಾಗಲಿ ಯಾವ ಷೋಕಿಯೂ ಇಲ್ಲ. ತನ್ನ ಮನೆಯಲ್ಲಿ ಕುರ್ಚಿ ಮೇಜು ಮುಂತಾದವು ಗಳ ಆಡಂಬರವಿಲ್ಲ. ಇನ್ನೊಬ್ಬರನ್ನು ಹೊಗಳಿ ತಾನು ಮುಂದಕ್ಕೆ ಬರಬೇಕೆಂದು ಅವನೆಂದಿಗೂ ಬಯಸುವುದಿಲ್ಲ.

ರಾಜಸಿಕಭಕ್ತ ತನ್ನ ಮತಚಿಹ್ನೆಯನ್ನು ಮುಖದಮೇಲೆ ಧರಿಸಿ ಕೊಂಡಿರಬಹುದು. ಕತ್ತಿನಲ್ಲಿ ರುದ್ರಾಕ್ಷಿಯ ಮಣಿಗಳ ಸರ, ಅವುಗಳ ಮಧ್ಯದಲ್ಲಿ ಕೆಲವು ಚಿನ್ನದಮಣಿಗಳು ಬೇರೆ. ಬಾಹ್ಯನಿಯಮಾಚಾರಗಳ ಮೇಲೆ ಅವನ ಮನಸ್ಸು ಬಹಳ. ಪೂಜೆಮಾಡುವಾಗ ರೇಷ್ಮೆವಸ್ತ್ರಗಳನ್ನು ಉಡುವನು. ದೇವರನ್ನು ವಿಜೃಂಭಣೆಯಿಂದ ಪೂಜೆಮಾಡುವನು.

ತಾಮಸಿಕ ಸ್ವಭಾವದವನು ಉಗ್ರಭಕ್ತ. ದರೋಡೆಕಾರನು ವಸ್ತುವನ್ನು ಅಪಹರಿಸುವಂತೆ ದೇವರಮೇಲೆ ಬಲಪ್ರಯೋಗಮಾಡು ವನು. "ಏನು! ನಾನು ಅವನ ಹೆಸರನ್ನು ತೆಗೆದುಕೊಂಡಿರುವೆನು ಆದರೂ ನಾನು ಪಾಪಿಯಾಗಿರಬೇಕೆ? ನಾನು ಅವನ ಮಗು. ಅವನ ಆಸ್ತಿಗೆ ನಾನು ಹಕ್ಕುದಾರ" ಎಂಬುದು ಅವನ ಶ್ರದ್ಧೆಯ ಭಾವ.

೭೬೯. ಪ್ರಶ್ನೆ :—ಬಲತ್ಕಾರದ ಭಕ್ತಿ ಎಂತಹುದು ?

**ಉತ್ತರ :—"ಜಯಕಾಳಿ" ಎಂದು ಸದಾ ರಭಸದಿಂದ ಉಚ್ಚರಿಸುವುದು, ಅಥವಾ "ಹರಿ ಓಂ" ಎಂದು ಕೈಗಳನ್ನು ಎತ್ತಿ ಉನ್ಮತ್ತನಂತೆ ಕುಣಿಯುವುದು. ಕಲಿಯುಗದಲ್ಲಿ ಉಳಿದ ಭಕ್ತಿಗಿಂತ ಇಂತಹ**

ಬಲಾತ್ಕಾರದ ಭಕ್ತಿ ಹೆಚ್ಚು ಪ್ರಯೋಜನಕಾರಿ. ಸಾಧಾರಣವಾದ ಧ್ಯಾನಕ್ಕಿಂತ ಇದು ಶೀಘ್ರ ಫಲಕಾರಿ. ದೇವನಗರಿಯನ್ನು ಬಲಾತ್ಕಾರ ದಿಂದ ತೆಗೆದುಕೊಳ್ಳಬೇಕು.

೭೭೦. ಆತ್ಮಪರಿಶುದ್ಧಿಗೆ ಇವು ಸಾಧನೆಯ ಹಂತಗಳು: (೧) ಸಾಧು ಸಂಗ (೨) ಧಾರ್ಮಿಕವಿಷಯಗಳಲ್ಲಿ ಶ್ರದ್ಧೆ (೩) ಇಷ್ಟ ದೇವತಾನಿಷ್ಠೆ (೪) ಭಕ್ತಿ (೫) ಭಾವ ಅಥವಾ ದೇವರ ಚಿಂತನೆಯಲ್ಲಿ ತನ್ಮಯನಾಗುವುದು. (೬) ಮಹಾಭಾವವೆಂದರೆ ಭಾವ ತೀವ್ರವಾದಾಗ ಭಕ್ತನು ಕೆಲವುವೇಳೆ ಹುಚ್ಚನಂತೆ ನಗುತ್ತಾನೆ, ಕೆಲವುವೇಳೆ ಅಳುತ್ತಾನೆ. ಅವನು ಸಂಪೂರ್ಣವಾಗಿ ದೇಹಾಭಿಲಾಷೆಯನ್ನು ಗೆದ್ದಿರುವನು. ಅವನಿಗೆ ದೇಹದ ಅರಿವೇ ಇರುವುದಿಲ್ಲ. ಇಂತಹ ಅವಸ್ಥೆ ಸಾಧಾರಣ ಜೀವಿಗಳಿಗೆ ಬರುವುದಿಲ್ಲ. ಮಹಾಪುರುಷರು ಮತ್ತು ಅವತಾರ ವ್ಯಕ್ತಿಗಳಿಗೆ ಮಾತ್ರ ಸಾಧ್ಯ (೭) ಪ್ರೇಮ ಅಥವಾ ದೇವರಮೇಲೆ ಅತ್ಯಂತ ತೀವ್ರ ಭಕ್ತಿ. ಇದು ಮಹಾಭಾವದೊಂದಿಗೆ ಜೊತೆಯಲ್ಲಿಯೇ ಹೋಗುವುದು. ಈ ಭಾವದ ಎರಡು ಚಿಹ್ನೆಗಳು ಯಾವುವೆಂದರೆ, ಮೊದಲನೆಯದು ಪ್ರಪಂಚ ವನ್ನು ಮರೆಯುವುದು, ನಂತರ ತನ್ನನ್ನು ಮರೆಯುವುದು, (ಅಂದರೆ ತನ್ನ ದೇಹವನ್ನು ಕೂಡ). ಇದರಿಂದ ಭಕ್ತ ಪರಮಾತ್ಮನನ್ನು ಸಂದರ್ಶಿ ಸುವನು. ಜೀವನದ ಗುರಿಯನ್ನು ಸೇರುವನು.

೭೭೧. "ಶಾಸ್ತ್ರಗಳು ಇಷ್ಟು ಧರ್ಮಕೆಲಸಗಳನ್ನು ಹೇಳಿರು ವುವು. ಆದಕ್ಕೇ ಅವನ್ನು ನಾನು ಮಾಡುತ್ತಿರುವೆನು" ಎಂದು ಹೇಳುವುದು ವೈಧಿಭಕ್ತಿ. ರಾಗಭಕ್ತಿ ಎಂಬ ಮತ್ತೊಂದು ವಿಧದ ಭಕ್ತಿಯಿರುವುದು. ಇದು ಪ್ರಹ್ಲಾದನಂತೆ ಪರಮಾತ್ಮನ ಮೇಲೆ ಇಡುವ ಅತಿನಿಕಟ ಪ್ರೇಮದಿಂದ ಬರುವುದು. ಇಂತಹ ರಾಗಭಕ್ತಿ ಬಂದಾಗ ವೈದಿಕ ಕರ್ಮಗಳನ್ನು ಮಾಡುವ ಆವಶ್ಯಕವಿರುವುದಿಲ್ಲ.

೭೭೨. ವೈಧಿಭಕ್ತಿ ಎನ್ನುವುದೊಂದು ಇದೆ. ಇಷ್ಟುಸಾರಿ ದೇವರ ಹೆಸರನ್ನು ಹೇಳಬೇಕು, ಕೆಲವು ಸಮಯ ಉಪವಾಸಮಾಡು ವುದು, ಕೆಲವು ತೀರ್ಥಯಾತ್ರೆ ಮಾಡುವುದು, ಕೆಲವು ವಸ್ತುಗಳ ಮೂಲಕ ಪೂಜೆಮಾಡುವುದು, ಇಂತಹವು ವೈಧಿಭಕ್ತಿಗೆ ಸಂಬಂಧಿಸಿರು ವುದು. ಇವನ್ನು ಬಹಳ ದಿನ ಅಭ್ಯಾಸಮಾಡಿದರೆ ಇದು ರಾಗಭಕ್ತಿ ಎಂಬ ಉತ್ತಮ ಭಕ್ತಿಯ ಸ್ಥಿತಿಗೆ ಕರೆದೊಯ್ಯುವುದು. ಪ್ರೇಮವೊಂದು

ಬೇಕಾಗಿರುವುದು. ಸಂಪೂರ್ಣ ಪ್ರಾಪಂಚಿಕ ವಿಷಯಗಳು ಹೋಗ ಬೇಕು. ಹದಿನಾರು ಆಣೆ ಮನಸ್ಸು ಅವನಮೇಲೆ ನಿಲ್ಲಬೇಕು. ಆಗ ಮಾತ್ರ ನೀನು ಅವನನ್ನು ಪಡೆಯುವೆ. ರಾಗಭಕ್ತಿ ಇಲ್ಲದೆ ನೀನು ಅವನನ್ನು ಪಡೆಯಲಾಗುವುದಿಲ್ಲ.

೭೭೩. ಭಕ್ತಿಯಲ್ಲಿ ಎರಡು ವಿಧ. ಮೊದಲು ಶಾಸ್ತ್ರದಲ್ಲಿ ವಿಧಿಸಿರುವ ಭಕ್ತಿ. ನಾವು ಒಂದು ರೀತಿಯಲ್ಲಿ ಪೂಜೆ ಮಾಡಬೇಕು, ಅಥವಾ ಇಷ್ಟುಸಲ ದೇವರ ಹೆಸರನ್ನು ಜಪಿಸಬೇಕು, ಇತ್ಯಾದಿ. ಇವು ವೈಧಿಭಕ್ತಿ. ಇದು ಕ್ರಮೇಣ ಶುದ್ಧ ಭಕ್ತಿ ಮತ್ತು ಬ್ರಹ್ಮಜ್ಞಾನಕ್ಕೆ ಒಯ್ಯುಬಹುದು. ಜೀವಾತ್ಮ ಮತ್ತೊಮ್ಮೆ ಬಾರದಂತೆ ಪರಮಾತ್ಮನಲ್ಲಿ ಐಕ್ಯನಾಗುವನು. ಇದು ಸಾಧಾರಣ ಭಕ್ತನ ಸ್ಥಿತಿ. ಆದರೆ ಅವತಾರಗಳು ಮತ್ತು ದೇವರ ಆಪ್ತ ಭಕ್ತರ ವಿಷಯವೇ ಬೇರೆ. ಅವರ ಭಕ್ತಿ ಕೇವಲ ಶಾಸ್ತ್ರರೀತಿಯಲ್ಲಿರದೆ, ಅವರ ಹೃದಯಾಂತರಾಳದಿಂದ ಬರುವುದು ಚೈತನ್ಯರೇ ಮೊದಲಾದ ಅವತಾರ ವ್ಯಕ್ತಿಗಳು ಮತ್ತು ಪರಮೋತ್ಕೃಷ್ಟ ಆಪ್ತ ಭಕ್ತರೂ, ಸಮಾಧಿಯಲ್ಲಿ ಬ್ರಹ್ಮಜ್ಞಾನವನ್ನು ಪಡೆದ ಮೇಲೂ ಅಲ್ಲಿಂದ ಪ್ರಪಂಚಕ್ಕೆ ಬಂದು ತಮ್ಮ ವ್ಯಕ್ತಿತ್ವವನ್ನಿಟ್ಟುಕೊಂಡು, ದೇವರನ್ನು ತಂದೆ ತಾಯಿ ಎಂದು ಪ್ರೀತಿಸಬಹುದು. ನೇತಿ ನೇತಿ ಎಂದು, ಅವರು ಒಂದಾದಮೇಲೊಂದನ್ನು ಬಿಟ್ಟು ಕೊನೆಗೆ ಮಾಳಿಗೆಯ ಮೇಲೆ ಹೋಗುವರು. ಅಲ್ಲಿಗೆ ಹೋದ ಮೇಲೆ ಇತಿ (ಇದು) ಎನ್ನುವರು. ಆದರೆ ಮೆಟ್ಟಲೂ ಕೂಡ, ಮಾಳಿಗೆ ಯಾವಾವ ವಸ್ತುವಿನಿಂದಾಗಿದೆಯೋ ಅದೇ ಗಾರೆ, ಸುಣ್ಣ, ಇಟ್ಟಿಗೆಗಳಿಂದಾಗಿದೆಯೆಂದು ಗೊತ್ತಾಗುವುದು. ಆಗ ಅವರು ಮೇಲಕ್ಕೂ, ಕೆಳಕ್ಕೂ ತಿರುಗಾಡುತ್ತ ಕೆಲವುವೇಳೆ ಮಹಡಿಯ ಮೇಲೂ, ಕೆಲವುವೇಳೆ ಮೆಟ್ಟಲುಗಳ ಮೇಲೂ ಇರುವರು.

ಮಹಡಿಯು, ಸಮಾಧಿಯಲ್ಲಿ ಪ್ರಾಪ್ತವಾಗುವ ಬ್ರಹ್ಮಜ್ಞಾನಕ್ಕೆ ಹೋಲುತ್ತದೆ. ಅಲ್ಲಿ ಇಂದ್ರಿಯಪ್ರಪಂಚದಲ್ಲಿ ಜಾಗ್ರತವಾಗಿರುವ ಜೀವ ಮಾಯವಾಗುವುದು. ಮೆಟ್ಟಲೇ ನಾಮರೂಪಗಳಿಂದ ಕೂಡಿದ ವ್ಯವಹಾರಿಕಪ್ರಪಂಚ. ಒಬ್ಬನು ಸಮಾಧಿಯ ಮಾಳಿಗೆಗೆ ಹೋದಮೇಲೆ, ಪ್ರಪಂಚ ಮಾನವನ ಇಂದ್ರಿಯಗಳಿಗೆ ಕಾಣುವ ಅವ್ಯಕ್ತದ ವ್ಯಕ್ತ ಸ್ವರೂಪವೆಂದು ತೋರುವುದು.

# ಪ್ರೇಮ ಅಥವಾ ಪರಾಭಕ್ತಿ

೭೭೪. ದೇವರನ್ನು ಕಾಣುವುದಕ್ಕೆ ಮುಂಚೆ ಪರಾಭಕ್ತಿ ಬರುವುದಿಲ್ಲ.

೭೭೫. ಪಾರ್ಸಿಗ್ರಂಥಗಳಲ್ಲಿ ಹೀಗೆ ಬರೆದಿರುವುದು ; ಮಾಂಸದ ಒಳಗೆ ಮೂಳೆ, ಮೂಳೆಯೊಳಗೆ ಮಜ್ಜೆ (Marrow) ಹೀಗೆ ಎಲ್ಲದರ ಒಳಗಿರುವುದು ಪ್ರೇಮ.

೭೭೬. ಭಕ್ತನ ಕೈಯ್ಯಲ್ಲಿ ಪ್ರೇಮವೆನ್ನುವುದು ಅವನನ್ನು ಸಚ್ಚಿದಾನಂದಕ್ಕೆ (ದೇವರಿಗೆ) ಕಟ್ಟಿಕೊಂಡಿರುವ ಹಗ್ಗದಂತೆ. ಭಕ್ತ ದೇವರನ್ನು ತನ್ನ ಅಧೀನದಲ್ಲಿಟ್ಟುಕೊಂಡಿರುವಂತೆ ತೋರುವುದು. ಅವನು ಕೂಗಿದಾಗಲೆಲ್ಲಾ ದೇವರು ಬರುವನು.

೭೭೭. ಭಾವವೆನ್ನುವ ಭಕ್ತಿ (ಮಾತಿಲ್ಲದೆ ದೇವರಲ್ಲಿ ತನ್ಮಯನಾಗುವುದು) ಇನ್ನೂ ಮಾಗದ ಮಾವಿನ ಹಣ್ಣಿನಂತೆ. ಪ್ರೇಮ ಮಾಗಿದ ಹಣ್ಣಿನಂತೆ.

೭೭೮. ಪ್ರಾರಂಭದಲ್ಲಿರುವವರು ನರಕ ಮುಂತಾದುವುಗಳಿಗೆ ಅಂಜಿ ದೇವರನ್ನು ಪೂಜಿಸುವರು. ಕೆಲವರು ಅಂಜಿಕೆಯನ್ನು ಧರ್ಮದ ಸ್ವರೂಪವೆಂದು ತಿಳಿದುಕೊಳ್ಳುವರು. ಅದು ಅತ್ಯಂತ ಮೊದಲಿನ ಮತ್ತು ಕೀಳುತರಹದ ಭಕ್ತಿ ಎಂಬುದನ್ನು ಮರೆಯುವರು. ಇದಕ್ಕಿಂತ ಉತ್ತಮ ಆದರ್ಶವಿದೆ. ಇದಕ್ಕಿಂತ ಮೇಲಿನ ಮೆಟ್ಟಲಿದೆ. ಅದೇ ದೇವರನ್ನು ನಮ್ಮ ತಂದೆ ಅಥವಾ ತಾಯಿ ಎಂದು ತಿಳಿಯುವುದು.

೭೭೯. ಪರಾಭಕ್ತಿ ಎಂದರೇನು ? ಪರಾಭಕ್ತಿಯಲ್ಲಿ ಭಕ್ತನು ದೇವರನ್ನು ತನ್ನ ಅತಿ ಸಮೀಪದ, ಅತ್ಯಂತ ಪ್ರೀತಿಗೆ ಪಾತ್ರನಾದವನೆಂದು ಭಾವಿಸುತ್ತಾನೆ. ಇದು ಕೃಷ್ಣಪರಮಾತ್ಮನ ಮೇಲೆ ಗೋಪಿಯರಿಗಿದ್ದ ಪ್ರೇಮದಂತೆ. ಅವರು ಯಾವಾಗಲೂ ಅವನನ್ನು ವಿಶ್ವಕ್ಕೆ ಅಧಿಪತಿಯೆಂದು ತಿಳಿದಿರಲಿಲ್ಲ. ಅವನನ್ನು ಗೋಪೀಜನವಲ್ಲಭನೆಂದು ತಿಳಿದಿದ್ದರು. ಅದರಂತೆಯೇ ಕರೆಯುತ್ತಿದ್ದರು.

೭೮೦. ನಾವು ಏತಕ್ಕೆ ದೇವರನ್ನು ಪ್ರೀತಿಸುವೆವು ಎಂಬುದನ್ನು ಕೂಡ ತಿಳಿಯದೆ ಅವನನ್ನು ಪ್ರೀತಿಸುವ ಒಂದು ಬಗೆ ಇದೆ. ಇದು ನಮಗೆ ಒದಗಿದರೆ ನಮಗೆ ಬೇಕಾದುದು ಮತ್ತೇನೂ ಇಲ್ಲ. ಯಾರಿಗೆ ಇಂತಹ ಭಕ್ತಿ ಪ್ರಾಪ್ತವಾಗಿದೆಯೋ ಅವರು " ಹೇ ದೇವರೆ, ನನಗೆ

ಐಶ್ವರ್ಯಬೇಡ, ಆರೋಗ್ಯ ಬೇಡ, ಸುಖ ಬೇಡ ಮತ್ತೇನೂ ಬೇಡ; ನಿನ್ನ ಪಾದಕಮಲಗಳ ಮೇಲೆ ಯಾವಾಗಲೂ ನನಗೆ ಪರಿಶುದ್ಧವಾದ ಭಕ್ತಿ ಇರುವಂತೆ ದಯಪಾಲಿಸು " ಎಂದು ಬೇಡುತ್ತಾರೆ.

೭೮೧. ಪ್ರೇಮದ ಎರಡು ಗುಣಗಳಿವು: ಬಾಹ್ಯಪ್ರಪಂಚದ ಮರವು ಮತ್ತು ತನ್ನ ಸ್ವಂತ ದೇಹದ ಮರವು.

೭೮೨. ಪ್ರೇಮಭಕ್ತಿಯಲ್ಲಿ, ನಾನು ಮತ್ತು ನನ್ನದು ಎಂಬೆರಡು ವಿಷಯಗಳಿವೆ, ನಾನು ಭಕ್ತ; ದೇವರು ಸಂಪೂರ್ಣ ನನ್ನವನು. ಯಶೋದೆ ತಾನಲ್ಲದೆ ಗೋಪಾಲನನ್ನು ಮತ್ತಾರೂ ನೋಡಿಕೊಳ್ಳ ಲಾರರೆಂದೂ, ತಾನು ಅವನನ್ನು ನೋಡಿಕೊಳ್ಳದೆ ಇದ್ದರೆ, ಅವನು ಖಾಯಿಲೆ ಬೀಳುತ್ತಿದ್ದನೆಂದು ಭಾವಿಸಿದ್ದಳು. ಯಶೋದೆ ತನ್ನ ಮಗು ವಿಶ್ವಕ್ಕೆ ಒಡೆಯನೆಂದು ಯೋಚಿಸಲು ಇಚ್ಛಿಸಲಿಲ್ಲ. ಭಕ್ತನ " ನನ್ನದು " ಎನ್ನುವುದು " ಅವನು ನನ್ನವನು, ನನ್ನ ಗೋಪಾಲ " ಎಂದು ಭಾವಿ ಸುವಂತೆ ಮಾಡುವುದು. ಉದ್ಧವ ಯಶೋದೆಗೆ, " ತಾಯಿ, ನಿನ್ನ ಕೃಷ್ಣ ಸ್ವಯಂ ಭಗವಂತ, ವಿಶ್ವಕ್ಕೆ ಚಿಂತಾಮಣಿಯಂತೆ ಇರುವನು. ಅವನು ಸಾಧಾರಣ ಮನುಷ್ಯನಲ್ಲ " ಎಂದು ಹೇಳಿದನು. ಅದಕ್ಕೆ ಯಶೋದೆ " ಅಲ್ಲ, ಅಲ್ಲ, ನಾನು ನಿನ್ನ ಚಿಂತಾಮಣಿಯ ವಿಷಯವಾಗಿ ಕೇಳುತ್ತಿಲ್ಲ. ನನ್ನ ಗೋಪಾಲ ಹೇಗೆ ಇರುವನು ಎಂಬುದನ್ನು ಕೇಳು ತ್ತಿರುವೆನು. ಚಿಂತಾಮಣಿಯನ್ನಲ್ಲ, ನನ್ನ ಗೋಪಾಲನನ್ನು ! " ಎಂದು ಹೇಳಿದಳು.

೭೮೩. ಎಲ್ಲೋ ಕೆಲವರು ಮಾತ್ರ ಪ್ರೇಮವನ್ನು ಪಡೆಯ ಬಲ್ಲರು. ಭಗವತ್ಕಾರ್ಯಕ್ಕಾಗಿ ಬಂದ, ಅದ್ಭುತಶಕ್ತಿಯಿಂದ ಕೂಡಿದ ಮಾನವರು ಅವರು. ಚೈತನ್ಯದೇವನಂತಹ ಅವತಾರಪುರುಷರು ಮತ್ತು ಪರಮ ಶ್ರೇಷ್ಠ ಭಕ್ತರಾದ ಅವರ ಅನುಯಾಯಿಗಳು ಈ ಗುಂಪಿಗೆ ಸೇರಿದವರು. ಭಗವಂತನ ಅಂಶಸ್ವರೂಪರವರು.

೭೮೪. ಬಹುಶಃ ಬಾಲ್ಯದಿಂದಲೇ ಇಂತಹ ಪ್ರೇಮವನ್ನು ಸ್ವಭಾವತಃ ಪಡೆದ ಕೆಲವರಿರುವರು. ಪ್ರಹ್ಲಾದನಂತೆ ಬಾಲ್ಯಾವಸ್ಥೆ ಯಲ್ಲಿಯೇ ದೇವರಿಗಾಗಿ ಅಳುವರು. ಅವನನ್ನು ಹಗಲಿರುಳೂ ಬಯಸು ವರು. ಅವರು ನಿತ್ಯಸಿದ್ಧರ ಗುಂಪಿಗೆ ಸೇರಿದವರು.

# ಗೋಪೀ ಪ್ರೇಮ

೭೮೫. ರಾಧೆ, ಕೃಷ್ಣರು ದೇವರ ಅವತಾರವೆಂದು ನಂಬುವುದು ಅಥವಾ ನಂಬದೆ ಇರುವುದು ಅಷ್ಟು ಮುಖ್ಯವಲ್ಲ. ಒಬ್ಬನು (ಹಿಂದು ಮತ್ತು ಕ್ರೈಸ್ತರಂತೆ) ದೇವರ ಅವತಾರದಲ್ಲಿ ನಂಬಬಹುದು. ಅಥವಾ ಬ್ರಹ್ಮಸಮಾಜದಂತೆ, ಅವನು ಮಾನವನ ಅಥವಾ ಇನ್ನು ಯಾವ ಆಕಾರವನ್ನು ತಾಳುವುದಿಲ್ಲವೆಂದು ನಂಬಬಹುದು. ಆದರೆ ಎಲ್ಲರೂ ಭಗವಂತನ ಮೇಲೆ ತೀವ್ರ ಅನುರಾಗವನ್ನು ಪಡೆಯಲಿ. ಈ ತೀವ್ರ ಅನುರಾಗವೊಂದೇ ಬೇಕಾಗಿರುವುದು.

೭೮೬. ಗೋಪಿಯರ ಪ್ರೇಮದ ವಿಚಾರವಾಗಿ ಮಾತನಾಡುತ್ತಾ ಶ್ರೀರಾಮಕೃಷ್ಣರು ತಮ್ಮ ಶಿಷ್ಯನಾದ ಮ....ಗೆ ಹೀಗೆಂದರು : " ಅವರ ಪ್ರೇಮದ ತೀವ್ರತೆ ಎಷ್ಟು ಅದ್ಭುತವಾಗಿತ್ತು. ತಮಾಲವೃಕ್ಷವನ್ನು ನೋಡಿದ ಕ್ಷಣವೇ ಅವರು ಪ್ರೇಮೋನ್ಮತ್ತರಾದರು. ಆ ಮರದ ಶ್ಯಾಮಲಬಣ್ಣ ಅವರಿಗೆ ಕೃಷ್ಣನ ನೆನಪನ್ನು ತಂದಿತು. ಚೈತನ್ಯರ ವಿಷಯವೂ ಹೀಗೆಯೆ. ಎದುರಿಗಿರುವ ಕಾಡನ್ನು ಬೃಂದಾವನವೆಂದು ತಿಳಿದರು. ಇಂತಹ ಪ್ರೇಮಾನುರಾಗದ ಬಿಂದುವೊಂದು ಲಭಿಸಿದರೆ! ಈ ಪ್ರೇಮ ಅವರಲ್ಲಿ ಪೂರ್ಣವಾಗಿದ್ದುದು ಮಾತ್ರವಲ್ಲ, ಯಥೇಚ್ಛವಾಗಿ ತುಂಬಿ ತುಳುಕಾಡುತ್ತಿತ್ತು.

೭೮೭. ಗೋಪಿಯರ ದೃಢನಿಷ್ಠೆ ಅದ್ಭುತವಾದುದು. ಗೋಪಿಯರು ಶ್ರೀಕೃಷ್ಣನನ್ನು ನೋಡುವುದಕ್ಕಾಗಿ ಮಧುರೆಗೆ ಹೋದಮೇಲೆ, ಅರಮನೆಯ ಪಹರೆಯವನನ್ನು ಅನೇಕವೇಳೆ ಬೇಡಿ ಶ್ರೀಕೃಷ್ಣನು ಪ್ರೇಕ್ಷಕರನ್ನು ಕಾಣುವ ಕೋಣೆಗೆ ಬಂದರು. ಆದರೆ ಅವರೆದುರಿಗೆ ಶ್ರೀಕೃಷ್ಣ ಪೇಟವನ್ನು ಸುತ್ತಿಕೊಂಡಿರುವುದನ್ನು ಕಂಡು ಇವರು ತಲೆಯನ್ನು ತಗ್ಗಿಸಿ, ತಮ್ಮೊಳಗೆ " ರುಮಾಲಿನ ಮನುಷ್ಯ ಯಾರು? ನಾವು ಇವನೊಂದಿಗೆ ಮಾತನಾಡುವುದಿಲ್ಲ. ಕೃಷ್ಣನ ಮೇಲೆ ನಮಗೆ ಇರುವ ನಿಷ್ಠೆಯಿಂದ ದೂರವಾದೇವು! ಓ! ಎಲ್ಲಿ ನಮ್ಮ ಪ್ರಾಣೇಶ್ವರ, ಪ್ರಿಯತಮ! ಪೀತಾಂಬರವನ್ನು ಉಟ್ಟು ನವಿಲುಗರಿಯನ್ನು ಧರಿಸಿದವನು " ಎಂದರು. ಹಾ! ನೋಡಿ ಗೋಪಿಯರ ನಿಷ್ಠೆಯನ್ನು.

೭೮೮. ಗೋಪಿಯರದು ಪ್ರೇಮ ಭಕ್ತಿ. ಇದಕ್ಕೆ ಅವ್ಯಭಿಚಾರಣೀಭಕ್ತಿ ಅಥವಾ ನಿಷ್ಠಾಭಕ್ತಿ ಎಂತಲೂ ಹೆಸರು. ವ್ಯಭಿಚಾರಿಣೀಭಕ್ತಿ ಎಂದರೇನು? ಜ್ಞಾನಮಿಶ್ರವಾದಭಕ್ತಿ. ಉದಾಹರಣೆಗೆ ಕೃಷ್ಣನೇ

ಎಲ್ಲವೂ ಆಗಿರುವನು. ಅವನೇ ಪರಬ್ರಹ್ಮ, ಅವನೇ ರಾಮ, ಶಿವ, ಶಕ್ತಿ ಮತ್ತು ಪರಾಶಕ್ತಿ ಎಂದು ತಿಳಿದುಕೊಳ್ಳುವುದು. ಪ್ರೇಮ ಭಕ್ತಿಯಲ್ಲಿ ಈ ಜ್ಞಾನ ಮಿಶ್ರವಾಗಿರುವುದಿಲ್ಲ. ಹನುಮಂತ ದ್ವಾರಕೆಗೆ ಹೋದಾಗ ಸೀತಾರಾಮರನ್ನು ಮಾತ್ರ ನೋಡುವೆನೆಂದು ಹೇಳಿದನು. ಆಗ ಕೃಷ್ಣ ಭಗವಂತನು ರುಕ್ಮಿಣಿಗೆ ಸೀತೆಯ ಆಕಾರವನ್ನು ಧರಿಸುವಂತೆ ಕೇಳಿ ಕೊಂಡನು. ಇಲ್ಲದಿದ್ದರೆ ಹನುಮಂತನಿಗೆ ಸಮಾಧಾನವಾಗುವುದಿಲ್ಲ. ಪಾಂಡವರು ರಾಜಸೂಯಯಾಗವನ್ನು ಮಾಡಿದಾಗ ಯುಧಿಷ್ಠಿರನು ಸಿಂಹಾಸನದಮೇಲೆ ಕುಳಿತಿದ್ದನು. ಎಲ್ಲಾ ದೊರೆಗಳೂ ಅವನಿಗೆ ನಮಸ್ಕರಿಸಿದರು. ಆದರೆ ವಿಭೀಷಣನು ನಾರಾಯಣನಿಗೆ ವಿನಃ ಮತ್ತಾರಿಗೂ ನಮಸ್ಕರಿಸುವುದಿಲ್ಲವೆಂದನು. ಆಗ ಭಗವಂತನೇ ಯುಧಿಷ್ಠಿರನಿಗೆ ನಮಸ್ಕರಿಸಿದನು. ಅನಂತರ ವಿಭೀಷಣನು ತನ್ನ ಕಿರೀಟದತಲೆಯನ್ನು ನೆಲಕ್ಕೆಮುಟ್ಟಿಸಿ ಸಾಷ್ಟಾಂಗ ಪ್ರಣಾಮ ಮಾಡಿದನು.

## ವಿರಹ ಮತ್ತು ಮಹಾಭಾವ

೭೮೯. ದೇವರಿಂದ ಬೇರೆಯಾದಾಗ ಏಳುವ ವಿರಹವ್ಯಥೆ ಬಹಳ ಗುರುತರವಾದುದು. ರೂಪ ಮತ್ತು ಸನಾತರು (ಶ್ರೀಚೈತನ್ಯರ ಶಿಷ್ಯರು) ಆ ಭಾವದಲ್ಲಿ ಮರದ ಕೆಳಗೆ ಕುಳಿತಾಗ ಆ ಮರದ ಎಲೆಗಳೆಲ್ಲಾ ಒಣಗಿ ಹೋದವೆಂಬ ವದಂತಿ ಇದೆ. ಆ ಭಾವದಲ್ಲಿ ಇದ್ದಾಗ ನಾನು ಸುಮಾರು ಮೂರು ದಿನಗಳು ಪ್ರಜ್ಞೆ ಇಲ್ಲದೆ ಇದ್ದೆ ನನಗೆ ಸಂಚರಿಸುವುದಕ್ಕೆ ಆಗುತ್ತಿರಲಿಲ್ಲ. ಒಂದೇಸ್ಥಳದಲ್ಲಿ ಇರುತ್ತಿದ್ದೆ. ನನಗೆ ಸ್ವಲ್ಪ ಪ್ರಜ್ಞೆ ಬಂದ ಮೇಲೆ ಬ್ರಾಹ್ಮಣಿ ನನ್ನನ್ನು ಸ್ನಾನಕ್ಕೆ ಕರೆದುಕೊಂಡು ಹೋಗುತ್ತಿದ್ದಳು. ಆದರೆ ಅವಳಿಗೆ ನನ್ನ ಚರ್ಮವನ್ನು ಮುಟ್ಟಲು ಅಸಾಧ್ಯವಾಗಿತ್ತು. ದೇಹವನ್ನೆಲ್ಲಾ ಒಂದು ದಪ್ಪ ಬಟ್ಟೆಯಿಂದ ಮುಚ್ಚಿ. ಬಟ್ಟೆಯಮೇಲೆ ಕೈಯನ್ನು ಇಟ್ಟು ನನ್ನನ್ನು ಹಿಡಿದುಕೊಳ್ಳುತ್ತಿದ್ದಳು. ದೇಹಕ್ಕೆ ಲೇಪಿಸಿದ್ದ ಮಣ್ಣು ಸುಟ್ಟುಹೋಯಿತು. ಆ ಭಾವ ಬಂದಾಗ ನನ್ನ ಬೆನ್ನುಮೂಳೆಗೆ ಒಂದು ದೊಡ್ಡ ಭರ್ಜಿಯನ್ನು ನಾಟಿದಂತೆ ಇತ್ತು. ನಾನು ಸಾಯುತ್ತಿರುವೆನು ಎಂದು ಕೆಲವು ವೇಳೆ ಅಳುತ್ತಿದ್ದೆನು. ಆದರೆ ಇದಾದ ನಂತರ ಯಾವಾಗಲೂ ಅತ್ಯಂತ ಆನಂದ ಪ್ರಾಪ್ತವಾಗುತ್ತಿತ್ತು.

೭೯೦. ಮಹಾಭಾವವೆಂದರೆ ಅತ್ಯುತ್ತಮ ಭಗವದನುಭವ.

ಇದರಿಂದ ದೇಹ ಮತ್ತು ಮನಸ್ಸಿನಮೇಲೆ ದೊಡ್ಡ ಬದಲಾವಣೆ ಆಗುವುದು ದೊಡ್ಡದೊಂದು ಆನೆ ಸಣ್ಣ ಗುಡಿಸಿಲಿನೊಳಗೆ ಹೋಗಿ ರೋಷದಿಂದ ಅದನ್ನು ಅಲ್ಲಾಡಿಸಿ, ಕೆಲವು ವೇಳೆ ಅದನ್ನು ಚೂರು ಚೂರು ಮಾಡುವಂತೆ. ಮುಂಚೆ ವ್ಯಥೆಯಾದಷ್ಟೂ ನಂತರ ಆನಂದವಾಗುವುದು.

## ಭಕ್ತಿ ಮತ್ತು ಜ್ಞಾನ ಅಂತ್ಯದಲ್ಲಿ ಒಂದೆ

೭೯೧. ಶುದ್ಧ ಭಕ್ತಿ ಮತ್ತು ಶುದ್ಧ ಜ್ಞಾನ ಎರಡೂ ಒಂದೆ.

೭೮೨. ಯಾರನ್ನು ವೇದಾಂತಿಗಳು ಬ್ರಹ್ಮನೆನ್ನುವರೊ, ಅವರನ್ನೆ ಯೋಗಿಗಳು ಆತ್ಮನೆನ್ನುವರು, ಭಕ್ತರು ಭಗವಂತನೆನ್ನುವರು. ಒಬ್ಬನೇ ಬ್ರಾಹ್ಮಣ ಪೂಜೆ ಮಾಡುವಾಗ ಪೂಜಾರಿಯೆಂದೂ ಅಡಿಗೆ ಮಾಡುವಾಗ ಅಡಿಗೆಯವನೆಂದೂ ಕರೆಸಿಕೊಳ್ಳುತ್ತಾನೆ.

೭೯೩. ಪರಮದೃಷ್ಟಿಯಿಂದ ಜ್ಞಾನವೆಂದರೇನು? ಅದಕ್ಕೆ ಜ್ಞಾನಿ "ಹೇ ದೇವರೇ ನೀನೊಬ್ಬನೇ ಪ್ರಪಂಚದಲ್ಲಿ ಕರ್ತೃ. ನಾನೊಂದು ಸಣ್ಣ ಯಂತ್ರ ನಿನ್ನ ಕೈಯಲ್ಲಿ. ಯಾವುದೂ ನನ್ನದಲ್ಲ. ಸರ್ವವೂ ನಿನ್ನದು. ನಾನು, ನನ್ನ ಸಂಸಾರ, ಐಶ್ವರ್ಯ, ನನ್ನ ಗುಣ, ಎಲ್ಲವೂ ನಿನ್ನದು" ಎನ್ನುತ್ತಾನೆ.

೭೯೪. ಭಕ್ತನೊಬ್ಬ:—ಗೃಹಸ್ಥನಾಗಿರುವಾಗಲೂ ಒಬ್ಬನಿಗೆ ಜ್ಞಾನ ಪ್ರಾಪ್ತವಾಗಿದೆ ಎಂದು ಹೇಗೆ ತಿಳಿಯುವುದು?

ಶ್ರೀಗುರುದೇವರು:—ಆಗ ಹರಿನಾಮೋಚ್ಚಾರಣೆಯಿಂದ ಕಂಬನಿ ದುಂಬಿ ರೋಮಾಂಚನವಾಗುವುದು. ಭಗವಂತನ ಮಧುರ ನಾಮವನ್ನು ಕೇಳಿದೊಡನೆಯೆ, ಯಾರ ಕಣ್ಣಿಂದ ನೀರು ಸುರಿಯುವುದೊ, ಯಾರ ಕೂದಲು ಎದ್ದು ನಿಲ್ಲುವುದೊ. ಅವನು ನಿಜವಾಗಿ ಜ್ಞಾನಸಿದ್ಧ.

೭೯೫. ಜ್ಞಾನ ಮತ್ತು ಭಕ್ತಿಯನ್ನು ರಾಜಿಮಾಡಿಸುವ ಒಂದು ಪೌರಾಣಿಕ ಕಥೆ ಇದೆ. ಒಂದು ಸಾರಿ ಅವತಾರಪುರುಷನಾದ ರಾಮಚಂದ್ರ ತನ್ನ ಮಹಾಭಕ್ತನಾದ ಹನುಮಂತನನ್ನು ಕುರಿತು "ಮಗು ನನ್ನನ್ನು ಯಾವ ಸಂಬಂಧದಿಂದ ನೋಡುತ್ತೀಯೆ. ನನ್ನನ್ನು ಹೇಗೆ ಧ್ಯಾನ ಮಾಡುವೆ ಹೇಳು" ಎಂದು ಕೇಳಿದನು.

ಹನುಮಂತ "ಹೇ ರಾಮ! ಕೆಲವು ವೇಳೆ ನಾನು ನಿನ್ನನ್ನು ಪೂರ್ಣನೆಂದೂ, ಅವ್ಯಕ್ತನೆಂದೂ, ಪೂಜಿಸುತ್ತೇನೆ. ಆಗ ನಾನು

ಪೂರ್ಣತೆಯ, ಪವಿತ್ರತೆಯ ಒಂದು ಅಂಶವೆಂದು ಭಾವಿಸುತ್ತೇನೆ. ಕೆಲವು ವೇಳೆ ನಿನ್ನನ್ನು, ನನ್ನ ಸ್ವಾಮಿ ಎಂದೂ, ನಾನು ನಿನ್ನ ಭೃತ್ಯನೆಂದೂ ಭಾವಿಸುತ್ತೇನೆ. ಕೆಲವು ವೇಳೆ ಹೇ ರಾಮಚಂದ್ರ, ಬ್ರಹ್ಮಜ್ಞಾನದಿಂದ ಧನ್ಯನಾದಾಗ ನಾನೇ ನೀನು, ನೀನೇ ನಾನೆಂದು ಭಾವಿಸುತ್ತೇನೆ '' ಎಂದನು.

೭೬೬. ಕೊಳದ ಮೇಲಿರುವ ಪಾಚಿಯನ್ನು ಸ್ವಲ್ಪ ತಳ್ಳಿದರೆ ಪುನಃ ಅದು ಕೊಳವನ್ನು ಆವರಿಸುವುದು. ಬೊಂಬಿನ ಕಟ್ಟನಿಂದ ಅದನ್ನು ಚೆನ್ನಾಗಿ ಸರಿಸಿ ಇಟ್ಟರೆ ಅದು ಇನ್ನೆಂದಿಗೂ ಬರುವುದಿಲ್ಲ. ಇದರಂತೆಯೇ ಮಾಯೆಯನ್ನು ಆಚೆಗೆ ನೂಕಿದರೆ, ನಮಗೆ ತೊಂದರೆ ಮಾಡುವುದಕ್ಕೆ ಪುನಃ ಬರುವುದು. ಆದರೆ ಭಕ್ತಿ ಮತ್ತು ಜ್ಞಾನದಿಂದ ಬೇಲಿ ಹಾಕಿದರೆ, ಅದು ಸಂಪೂರ್ಣ ಹೊರಗೆ ಇರುವುದು. ನಿಜವಾಗಿಯೂ ದೇವರು ನಮಗೆ ಕಾಣಿಸಿಕೊಳ್ಳುವುದು ಈ ರೀತಿಯಲ್ಲಿ.

## ಭಕ್ತಿ ಜ್ಞಾನಕ್ಕೆ ಒಯ್ಯುವ ರೀತಿ

೭೯೭. ಅದ್ವೈತ ಜ್ಞಾನವೇ ಶ್ರೇಷ್ಠ. ಆದರೆ ದೇವರನ್ನು ಮೊದಲು, ಭೃತ್ಯ ತನ್ನ ಸ್ವಾಮಿಯನ್ನು ಪೂಜಿಸುವಂತೆ, ಪ್ರೇಮಿ ಪ್ರೇಯಸಿಯನ್ನು ಪ್ರೀತಿಸುವಂತೆ ಪ್ರೀತಿಸಬೇಕು. ಇದು ಬಹಳ ಸುಲಭವಾದ ಮಾರ್ಗ. ಅದ್ವೈತ ಜ್ಞಾನಕ್ಕೆ ಒಯ್ಯುವುದು.

೭೯೮. ಅದ್ವೈತಜ್ಞಾನವೇ ಇಷ್ಟವಾದರೂ ಕೂಡ, ನೀವು ಮೊದಲು ಪೂಜ್ಯ ಪೂಜಕ ಭಾವದಿಂದ ಹೊರಡಬೇಕು. ಅನಂತರ ಜ್ಞಾನ ನಿಮಗೆ ಸುಲಭವಾಗಿ ಪ್ರಾಪ್ತವಾಗುವುದು.

೭೯೯. ಪಂಚಭೂತಗಳ ಬಲೆಯಲ್ಲಿ ಸಿಕ್ಕಿ ಬ್ರಹ್ಮ ಕೂಡ ಕಣ್ಣೀರು ಕರೆಯುವನು. ಕಣ್ಣನ್ನು ಮುಚ್ಚಿ, ಮುಳ್ಳಿಲ್ಲ, ಮುಳ್ಳಿಲ್ಲ ಎಂದು ನೀವು ಪದೇ ಪದೇ ಹೇಳಿ ತೃಪ್ತರಾಗಬಹುದು. ಅದನ್ನು ಮುಟ್ಟಿದ ಕ್ಷಣವೇ ಚುಚ್ಚುವುದು. ನೀವು ನೋವಿನಿಂದ ಕೈಯನ್ನು ಆ ಕ್ಷಣವೇ ಎಳೆದುಕೊಳ್ಳುವಿರಿ. ಇದರಂತೆಯೇ ನೀವು ಜನನಮರಣಗಳ ಆಚೆ, ಧರ್ಮಾಧರ್ಮಗಳಾಚೆ, ಸುಖದುಃಖಗಳಾಚೆ, ಹಸಿವು ತೃಷೆಗಳಾಚೆ ಇರುವ ಅವಿಕಾರಿಯಾದ ಆತ್ಮನೆಂದು, ಸಚ್ಚಿದಾನಂದ ಸ್ವರೂಪನೆಂದೂ ವಿಚಾರದಿಂದ ತಿಳಿದುಕೊಂಡರೂ, ದೇಹ ರೋಗಕ್ಕೆ ತುತ್ತಾದೊಡನೆ ಅಥವಾ ಮನಸ್ಸು ಪ್ರಪಂಚದ ಪ್ರಲೋಭನೆಗಳಿಗೆ ಒಳಗಾಗಿ,

ಅಸ್ಥಿರವಾದ ಕಾಮಕಾಂಚನಗಳಾಸೆಗಳನ್ನು ಮೋಹಿಸಿ ಯಾವುದಾದರೂ ತಪ್ಪನ್ನು ಮಾಡಿದರೆ, ನೀವು ಮೋಹ, ದುಃಖ, ಕಷ್ಟಗಳಿಗೆ ಬೀಳುವಿರಿ. ವಿವೇಕವನ್ನು ಕಳೆದುಕೊಂಡು ಕರ್ತವ್ಯಮೂಢರಾಗುವಿರಿ. ಆದಕಾರಣ ದೇವರೆ ಅವನಿಗೆ ದಯೆ ತೋರುವವರೆಗೆ ಮಾಯೆ ಬಾಗಿಲನ್ನು ತೆಗೆಯುವವರೆಗೆ, ಯಾರಿಗೂ ಆತ್ಮಸಾಕ್ಷಾತ್ಕಾರ ಲಭಿಸುವುದಿಲ್ಲ. "ವರವನ್ನು ಕರುಣಿಸುವ ದೇವಿಯೇ ತೃಪ್ತಳಾದರೆ ಮಾನವನ ಬಂಧನಗಳನ್ನು ತೊಡೆದು ಹಾಕುವಳು" ಎಂಬುದನ್ನು ಚಂಡಿಯಲ್ಲಿ ಕೇಳಿಲ್ಲವೇ? ಜಗನ್ಮಾಯೆಯೆ, ಮಾರ್ಗದಲ್ಲಿರುವ ಆತಂಕಗಳನ್ನು ತೆಗೆಯುವ ವರೆಗೆ ಏನೂ ಸಿದ್ಧಿಸುವುದಿಲ್ಲ. ಮಾಯೆ ದಯೆತೋರಿ ಅವನಿಂದ ದೂರವಾಗುವ ತನಕ ಸಾಧಕ ದೇವರನ್ನು ನೋಡಲಾರ. ಅವಳು ಸಾಧಕನ ಮೇಲೆ ಕೃಪೆತೋರಿಸಿದೊಡನೆಯೇ ಅವನಿಗೆ ದೇವರ ದರ್ಶನ ಲಭಿಸಿ ಎಲ್ಲಾ ಕಷ್ಟಗಳಿಂದಲೂ ಪಾರಾಗುವನು. ಇಲ್ಲದೆ ಇದ್ದರೆ ನೀನು ಎಷ್ಟು ವಿಚಾರಮಾಡಿದರೇನು, ಎಷ್ಟು ಸಾಧನೆ ಮಾಡಿದರೇನು. ಅದರಿಂದ ಅಷ್ಟೇನೂ ಪ್ರಯೋಜನವಿಲ್ಲ. ಪ್ರತಿ ಒಂದು ಓಮಿನ ಕಾಳು ನೂರು ಕಾಳು ಅನ್ನವನ್ನು ಅರಗಿಸಿಕೊಳ್ಳುವುದಕ್ಕೆ ಸಹಾಯಮಾಡುವುದು ಎನ್ನುತ್ತಾರೆ. ಆದರೆ ಜೀರ್ಣೇಂದ್ರಿಯ ಕೆಟ್ಟಿರುವಾಗ ನೂರು ಕಾಳು ಓಮಾದರೂಒಂದು ಕಾಳು ಅನ್ನವನ್ನೂ ಅರಗಿಸಲಾರದು.

೮೦೦. ಜ್ಞಾನಯೋಗಿ ನಿರಾಕಾರವಾದ, ಅದ್ವೈತವಾದ ಅವ್ಯಕ್ತಬ್ರಹ್ಮನನ್ನು ಪಡೆಯಬೇಕೆಂದು ಇಚ್ಛಿಸುವನು. ಸಾಧಾರಣ ಜನರು ಕಲಿಯುಗದಲ್ಲಿ ದೇವರನ್ನು ಪ್ರೀತಿಸಿ, ಅವನನ್ನು ಪ್ರಾರ್ಥಿಸಿ ಅವನಲ್ಲಿ ಶರಣಾಗತರಾದರೆ ಒಳ್ಳೆಯದು. ದೇವರು ತನ್ನ ಭಕ್ತನನ್ನು ಉದ್ಧಾರಮಾಡುವನು ಅವನು ಬ್ರಹ್ಮಜ್ಞಾನಕ್ಕಾಗಿ ಕಾತುರನಾದರೆ ಅದನ್ನು ಕೂಡ ಕರುಣಿಸುವನು. ಹೀಗೆ ಜ್ಞಾನಯೋಗಿಗೆ ಜ್ಞಾನ ಮತ್ತು ಭಕ್ತಿಗಳೆರಡೂ ಲಭಿಸುವುವು. ಬ್ರಹ್ಮನನ್ನು ಕೂಡ ಪಡೆಯಲು ಸಾಧ್ಯವಾಗುವುದು. ಈಶ್ವರನು ಇಚ್ಛಿಸಿದರೆ ಭಕ್ತನು ಸಾಕಾರಬ್ರಹ್ಮನನ್ನು ಸಹ ನೋಡುವನು. ಆದರೆ ಭಕ್ತನಾದರೊ ಉಪನಿಷತ್ತಿನ ಸಗುಣ ಸಾಕಾರಬ್ರಹ್ಮವನ್ನು ನೋಡುವುದರಲ್ಲಿ ಸಾಧಾರಣವಾಗಿ ತೃಪ್ತನಾಗುವನು. ಆದರೂ ದೇವರು ಅವನನ್ನು ತನ್ನ ಅನಂತಮಹಿಮೆಗೆ ಪಾಲುದಾರನನ್ನಾಗಿ ಮಾಡಿ, ಭಕ್ತಿ ಜ್ಞಾನಗಳನ್ನು ನೀಡಿ ಸಾಕಾರ

ಮತ್ತು ನಿರಾಕಾರ ಸಾಕ್ಷಾತ್ಕಾರವನ್ನು ದಯಪಾಲಿಸುವನು. ಒಬ್ಬನು ಕಲ್ಕತ್ತೆಗೆ ಹೋದರೆ, ಅಲ್ಲಿ ಮೈದಾನ, ಅಕ್ಟರ್ ಲೋನಿ ಮಾನ್ಯುಮೆಂಟ್, ಮ್ಯೂಸಿಯಂ ಮತ್ತು ಇತರ ದರ್ಶನಾರ್ಹವಾದ ಸ್ಥಳಗಳನ್ನು ನೋಡಿ ಇಂತಹುದೆ ಇದು ಎಂದು ತಿಳಿದುಕೊಳ್ಳಲಾರನೆ ?

೮೦೧. ಪ್ರಶ್ನೆ:—ದೇವನೊಂದಿಗೆ ಸಂಪೂರ್ಣ ಐಕ್ಯವನ್ನು ಪಡೆಯಲು ಭಕ್ತನಿಗೆ ಎಂದಿಗಾದರೂ ಸಾಧ್ಯವೆ ? ಅದು ಸಾಧ್ಯವಾದರೆ ಹೇಗೆ ?

ಉತ್ತರ :—ಜೀವನಿಗೆ ದೇವನೊಂದಿಗೆ ಸಂಪೂರ್ಣ ಐಕ್ಯತೆಯನ್ನು ಪಡೆಯಲು ಸಾಧ್ಯ. ಆಗಮಾತ್ರ ಒಬ್ಬನು "ನಾನೇ ಅವನು" ಎಂದು ಭಾವಿಸಬಹುದು ಮತ್ತು ಹೇಳಬಹುದು. ಮನೆಯ ಹಳೆಯ ಜವಾನನನ್ನು ಕಾಲಕ್ರಮೇಣ ಅವನೂ ಒಬ್ಬ ಮನೆಯ ಸಂಸಾರಕ್ಕೆ ಸೇರಿದವನೆಂದು ಪರಿಗಣಿಸುವರು. ಮನೆಯ ಯಜಮಾನ ಇವನ ಕೆಲಸವನ್ನು ನೋಡಿ ತುಂಬಾ ಮೆಚ್ಚಿ, ಒಂದು ದಿನ ಅವನನ್ನು ತನ್ನ ಪೀಠದ ಮೇಲೆಯೆ ಕುಳ್ಳಿರಿಸಿಕೊಂಡು, ತನ್ನವರನ್ನು ಕುರಿತು ಅಂದಿನಿಂದ ತನಗೂ ಅವನಿಗೂ ಭೇದವೇನೂ ಇಲ್ಲವೆನ್ನಬಹುದು. ಯಜಮಾನ, "ನಾನೂ ಅವನೂ ಒಂದೇ. ನನ್ನ ಮಾತನ್ನು ಕೇಳುವಂತೆಯೇ ಅವನ ಮಾತನ್ನು ಕೇಳಬೇಕು. ಯಾರು ಹಾಗೆ ಮಾಡುವುದಿಲ್ಲವೋ ಅವರು ಶಿಕ್ಷೆಗೆ ಒಳಗಾಗುವರು" ಎಂದು ಹೇಳಬಹುದು. ಆಳು ನಾಚಿಗೆಯಿಂದ ಹಾಗೆ ಗೌರವಿಸಲ್ಪಡುವುದಕ್ಕೆ ಅನುಮಾನಿಸಿದರೂ, ಯಜಮಾನನು ಅವನನ್ನು ಬಲಾತ್ಕಾರದಿಂದ ಗೌರವಸ್ಥಾನಕ್ಕೆ ಎಳೆದೊಯ್ಯುವನು.

ಭಗವಂತ ಪ್ರೀತಿಯಿಂದ ಅವರಿಗೆ ತನ್ನ ಮಹಿಮೆಗಳೆಲ್ಲವನ್ನೂ ದಯಪಾಲಿಸಿ ತನ್ನ ಸ್ವಂತ ವಿಶ್ವಾಧಿಪತ್ಯದ ಸ್ಥಾನಕ್ಕೆ ಅವರನ್ನು ಏರಿಸುವನು.

೮೦೨. ಭಕ್ತ ಸಾಧಾರಣವಾಗಿ ಬ್ರಹ್ಮಜ್ಞಾನವನ್ನೂ ಅಪೇಕ್ಷಿಸುವುದಿಲ್ಲ. ಜಗನ್ಮಾಯಿಯೋ, ಅಥವಾ ಆಕೆಯ ಅನಂತರೂಪಗಳಲ್ಲಿ ಒಂದಾದ, ಕೃಷ್ಣನೋ ಚೈತನ್ಯದೇವನೋ, ಮುಂತಾದ ಪ್ರತ್ಯಕ್ಷ ಪರಮಾತ್ಮನ ಸ್ವರೂಪವನ್ನು ಕಂಡು ಕೃತಾರ್ಥನಾಗುವನು. ಸಮಾಧಿಯಲ್ಲಿ ತನ್ನ ಅಹಂಕಾರ ಸಂಪೂರ್ಣ ನಾಶವಾಗದೆ ಇರಲಿ ಎಂದು ಭಕ್ತನು ಜೋಪಾನವಾಗಿರುವನು. ಪರಮಾತ್ಮನ ಸ್ವರೂಪವನ್ನು

ಒಂದು ವ್ಯಕ್ತಿರೂಪದಲ್ಲಿ ಆನಂದಿಸುವುದಕ್ಕೆ ಸಂತೋಷಿಸುವನು. ಅವನಿಗೆ ಸಕ್ಕರೆಯಾಗುವುದಕ್ಕಿಂತ, ಸಕ್ಕರೆಯ ರುಚಿ ನೋಡುವುದಕ್ಕೆ ಆಸೆ.

೮೦೩. ನನ್ನ ಜಗನ್ಮಾಯಿ, ತಾನೇ ವೇದಾಂತಬ್ರಹ್ಮನೆಂದು ಸಾರುವಳು. ಕೇಳು ಅಹಂಕಾರವನ್ನು ಅಳಿಸಿ ಬ್ರಹ್ಮಜ್ಞಾನವನ್ನು ಕೊಡುವುದು ಅವಳ ಕೈಯಲ್ಲಿದೆ. ಆದಕಾರಣ ಜಗನ್ಮಾಯಿ ಇಚ್ಛೆಪಟ್ಟರೆ ನೀನು ಮೊದಲು ಬ್ರಹ್ಮನಲ್ಲಿಗೆ ವಿಚಾರದ ಮೂಲಕವಾಗಿ ಬರಬಹುದು. ಭಕ್ತಿಯ ಮೂಲಕವೂ ಬರಬಹುದು. ಜ್ಞಾನ ಮತ್ತು ಭಕ್ತಿಯನ್ನು ದಯಪಾಲಿಸೆಂದು ಆಕೆಯನ್ನು ಅನುದಿನವೂ ಪ್ರಾರ್ಥಿಸುವುದು ಮತ್ತು ಆಕೆಯಲ್ಲಿ ಶರಣುಹೋಗುವುದು ಇವೆ ಭಕ್ತಿಯ ಸಾರ. ಮೊದಲು ಇವುಗಳ ಮೂಲಕ ನನ್ನ ಜಗನ್ಮಾಯಿಯಲ್ಲಿಗೆ ಬನ್ನಿ. ನನ್ನ ಮಾತನ್ನು ನಂಬಿ. ನಿಮ್ಮ ಪ್ರಾರ್ಥನೆ ನಿಜವಾಗಿಯೂ ಹೃತ್ಪೂರ್ವಕವಾಗಿದ್ದರೆ, ನೀವು ಅದಕ್ಕಾಗಿ ಕಾದು ಕುಳಿತರೆ, ಜಗನ್ಮಾಯಿಯು ಬಯಕೆಯನ್ನು ಸಲ್ಲಿಸುವಳು. ನಂತರ ನೀವು ಅವಳ ನಿರಾಕಾರ ಸ್ವರೂಪವನ್ನು ಪಡೆಯಬೇಕೆಂದಿದ್ದರೆ, ಅವಳನ್ನು ಬೇಡಿ. ನಿಮ್ಮ ಪ್ರಾರ್ಥನೆಯನ್ನು ಅವಳು ಕರುಣಿಸಲು ಇಚ್ಛೆಪಟ್ಟರೆ, ಅವಳು ಸರ್ವಶಕ್ತಳಾದುದರಿಂದ ಸಮಾಧಿಯಲ್ಲಿ ಅವಳ ನಿರಾಕಾರ ಸ್ಥಿತಿಯನ್ನು ಕೂಡ ಅನುಭವಿಸಲು ನಿಮಗೆ ಸಾಧ್ಯವಾಗುವುದು. ಇದನ್ನೇ ಬ್ರಹ್ಮಜ್ಞಾನವೆನ್ನುವುದು.

## ಜ್ಞಾನಿ ಮತ್ತು ಭಕ್ತರ ಸ್ವಭಾವಭೇದ

೮೦೪. ಎರಡು ತರಹ ಸಾಧಕರನ್ನು ನಾವು ನೋಡುತ್ತೇವೆ. ಒಬ್ಬರನ್ನು ಕೋತಿಯಮರಿಗೆ ಹೋಲಿಸಬಹುದು. ಮತ್ತೊಬ್ಬರನ್ನು ಬೆಕ್ಕಿನಮರಿಗೆ ಹೋಲಿಸಬಹುದು. ಕೋತಿಯಮರಿ ತನ್ನ ತಾಯಿಯನ್ನು ಭದ್ರವಾಗಿ ಹಿಡಿದುಕೊಳ್ಳುವುದು. ಆದರೆ ಬೆಕ್ಕಿನಮರಿ ಇದ್ದ ಸ್ಥಳದಲ್ಲಿ ಸುಮ್ಮನೆ ಕಿರಿಚಿಕೊಳ್ಳುವುದು. ಕೋತಿಯಮರಿ ತನ್ನ ಕೈಗಳನ್ನು ಸಡಿಲಿಸಿದರೆ ಕೆಳಗೆ ಬಿದ್ದು ಗಾಯಹೊಂದುವುದು. ಏಕೆಂದರೆ ಇದು ತನ್ನ ಸ್ವಂತ ಶಕ್ತಿಯ ಮೇಲೆ ನಿಂತುಕೊಳ್ಳಬೇಕಾಗಿರುವುದು. ಆದರೆ ಬೆಕ್ಕಿನಮರಿಗೆ ಈ ಅಂಜಿಕೆ ಇಲ್ಲ. ತಾಯಿ ಒಂದು ಕಡೆಯಿಂದ ಮತ್ತೊಂದು ಕಡೆಗೆ ಕರೆದುಕೊಂಡು ಹೋಗುವುದು. ಇದರಂತೆಯೇ ಕರ್ಮಯೋಗಿಯಾಗಲಿ ಅಥವಾ ಜ್ಞಾನಯೋಗಿಯಾಗಲಿ ಮೋಕ್ಷಕ್ಕೆ ತನ್ನ ಸ್ವಂತ ಪ್ರಯತ್ನದ ಮೇಲೆ ನಿಲ್ಲುವನು. ಭಕ್ತನಿಗಾದರೋ ದೇವರು

ಸರ್ವವನ್ನೂ ಮಾಡುವನು ಎಂದು ಗೊತ್ತಿದೆ. ಆದಕಾರಣ ಅವನನ್ನು ನಂಬಿ ಅವನಲ್ಲಿ ಶರಣಾಗತನಾಗುವನು. ಮೊದಲನೆಯವರು ಕೋತಿಯ ಮರಿಯಂತೆ, ಎರಡನೆಯವರು ಬೆಕ್ಕಿನ ಮರಿಯಂತೆ.

೮೦೫. "ನಾನೇ ಅವನು" "ಪರಿಶುದ್ಧಾತ್ಮ" ಎಂದು ಜ್ಞಾನಿ ಹೇಳುತ್ತಾನೆ. ಆದರೆ ಭಕ್ತ "ಇದೆಲ್ಲವೂ ಅವನ ಮಹಿಮೆ" ಎನ್ನುತ್ತಾನೆ.

೮೦೬. ಎಲ್ಲವೂ ನಾನೆ, ಎಲ್ಲವೂ, ನೀನೆ, ನೀನು ಸ್ವಾಮಿ ನಾನು ಭೃತ್ಯ ಎಂಬ ಈ ಮೂರು ಭಾವಗಳಲ್ಲಿ ಯಾವುದಾದರೊಂದರಲ್ಲಿ ಪಳಗಿದ ಮೇಲೆಯೆ ಒಬ್ಬನು ದೇವರನ್ನು ಪಡೆಯುವುದು.

೮೦೭. ಒಬ್ಬನು ಶಿವಶಕ್ತಿಯಿಂದ ಹುಟ್ಟಿದರೆ ಅವನು ಜ್ಞಾನಿಯಾಗುತ್ತಾನೆ. ಅವನ ಸ್ವಭಾವ ಯಾವಾಗಲೂ, ಬ್ರಹ್ಮನೊಬ್ಬನೇ ಸತ್ಯ, ಜಗತ್ತೆಲ್ಲಾ ಮಿಥ್ಯ ಎಂಬುದರ ಕಡೆಗೆ. ಆದರೆ ಒಬ್ಬನು ವಿಷ್ಣು ಶಕ್ತಿಯಿಂದ ಹುಟ್ಟಿದರೆ ಅವನಲ್ಲಿ ಶ್ರದ್ಧೆ ಭಕ್ತಿಗಳೆಂದಿಗೂ ಮಾಯವಾಗುವುದಿಲ್ಲ. ವಿಚಾರ ಮತ್ತು ತರ್ಕದಿಂದ ಇವು ಕೆಲವು ವೇಳೆ ಕಡಿಮೆಯಾದರೂ, ಕಾಲಕ್ರಮೇಣ ಇವು ಯಥೇಚ್ಛವಾಗಿ ಯಾದವಸಂತತಿಯನ್ನು ನಾಶಮಾಡಿದ ಮುಸಲದಂತೆ ವೃದ್ಧಿಯಾಗುವುದು.

೮೦೮. ಜ್ಞಾನಿಯ ಹೃದಯದಲ್ಲಿ ಹರಿಯುತ್ತಿರುವ ಜ್ಞಾನಗಂಗೆ ಒಂದೇ ದಿಕ್ಕಿನಲ್ಲಿ ಹರಿಯುತ್ತಿರುವುದು. ಅವನಿಗೆ ವಿಶ್ವವೆಲ್ಲ ಒಂದು ಕನಸು. ಅವನು ಯಾವಾಗಲೂ ತನ್ನ ಆತ್ಮನಲ್ಲಿ ಇರುವನು ಭಕ್ತನ ಹೃದಯದಲ್ಲಿರುವ ಪ್ರೇಮಗಂಗೆ, ಯಾವಾಗಲೂ ಒಂದೇಕಡೆ ಹರಿಯುವುದಿಲ್ಲ. ಅದಕ್ಕೆ ಉಬ್ಬರ ಇಳಿತಗಳಿವೆ. ಭಕ್ತ ಅಳುತ್ತಾನೆ ಕುಣಿಯುತ್ತಾನೆ, ಹಾಡುತ್ತಾನೆ, ನಗುತ್ತಾನೆ. ಅವನಿಗೆ ಯಾವಾಗಲೂ, ಭಗವಂತನ ಸಾನ್ನಿಧ್ಯದಲ್ಲಿ ಇದ್ದು ಆನಂದವನ್ನು ಅನುಭವಿಸಬೇಕೆಂಬ ಆಸೆ. ಆ ಆನಂದಸಾಗರದಲ್ಲಿ ಬೀಳಲಿಚ್ಛಿಸುವನು. ಹಿಮದ ಚೂರೊಂದು ನೀರಿನಲ್ಲಿ ಮುಳಗಿ ಏಳುವಂತೆ, ಅವನು ಕೆಲವುವೇಳೆ ಈಜುವನು ಮುಳುಗುವನು ಮತ್ತೆ ತೇಲುವನು.

೮೦೯. ಪೌರಾಣಿಕ ರೀತಿ ಭಕ್ತನು ಭಗವಂತನಿಗಿಂತ ಬೇರೆ. ಮನುಷ್ಯರೆ ಬೇರೆ, ದೇವರು ಬೇರೆ. ದೇಹ ಪಾತ್ರೆಯಂತೆ, ಮನಸ್ಸು ಬುದ್ಧಿ ಅಹಂಕಾರ, ಅದರಲ್ಲಿರುವ ನೀರಿನಂತೆ. ಬ್ರಹ್ಮ ಸೂರ್ಯನಂತೆ ನೀರಿನಲ್ಲಿ ಪ್ರತಿಬಿಂಬಿಸುತ್ತಿರುವನು. ಆದಕಾರಣ ಭಕ್ತನು ಭಗವಂತನ ಅನೇಕ ರೂಪಗಳನ್ನು ಕಾಣುತ್ತಾನೆ. ಆದರೆ ವೇದಾಂತ ರೀತಿ ಬ್ರಹ್ಮ

ನೊಬ್ಬನೆ ಸತ್ಯ. ಅವನೊಬ್ಬನೇ ನಿತ್ಯ. ಉಳಿದವು ಮಾಯೆ. ಕನಸಿನಂತೆ ಸುಳ್ಳು. ಬ್ರಹ್ಮಸಾಗರದ ಮೇಲೆ, ನಾನು ಎಂಬ ಅಹಂಕಾರದ ತೃಣ ತೇಲುತ್ತದೆ. ತೃಣವನ್ನು ತೆಗೆದು ಹಾಕಿದರೆ ವಿಭಾಗವಾಗದ ನೀರಿನ ರಾಶಿಯಿದೆ. ಆದರೆ ತೃಣವಿದ್ದರೆ ಅದು ನೀರನ್ನೂ ಇಬ್ಭಾಗವಾಗಿ ಭಾಗಿಸುತ್ತದೆ. ಒಬ್ಬನು ಸಮಾಧಿಗೆ ಹೋದಾಗ ಬ್ರಹ್ಮಜ್ಞಾನೋದಯವಾಗುತ್ತದೆ. ಆಗ ಅಹಂಕಾರ ಮಾಯವಾಗುವುದು. ವೇದಾಂತ ದೃಷ್ಟಿಯಲ್ಲಿ ಜಾಗ್ರತಾವಸ್ಥೆಯೂ ನಿತ್ಯವಲ್ಲ.

೮೧೦. ನಾರದ ಮುಂತಾದವರು ಜ್ಞಾನವನ್ನು ಪಡೆದ ಮೇಲೂ ಜಗದ ಹಿತಕ್ಕೋಸುಗ ಭಕ್ತಿಯನ್ನು ಅವಲಂಬಿಸಿದರು.

೮೧೧. ಶ್ರೀ ಗುರುದೇವರು :—ಭಕ್ತಿ ಚಂದ್ರನಂತೆ, ಜ್ಞಾನವಾದರೋ ಸೂರ್ಯನಂತೆ. ಉತ್ತರ ಮತ್ತು ದಕ್ಷಿಣ ಧ್ರುವಗಳ ಬಳಿ ಸಾಗರವಿದೆಯೆಂದು ಕೇಳಿರುವೆನು. ಅಲ್ಲಿ ಶೈತ್ಯಾಧಿಕ್ಯದಿಂದ ನೀರಿನ ಕೆಲವು ಭಾಗ ಘನೀಭೂತವಾಗಿ ದೊಡ್ಡ ಹಿಮರಾಶಿಯಾಗುತ್ತದೆ. ಕೆಲವು ವೇಳೆ ಹಡಗು ಅವುಗಳಲ್ಲಿ ಸಿಕ್ಕಿ ಮುಂದುವರಿಯಲಾರದು.

ಭಕ್ತ :—ಭಕ್ತಿಮಾರ್ಗದಲ್ಲಿ ಮನುಷ್ಯರೂ ಕೂಡ ಹಾಗೆಯೆ ಮಧ್ಯ ದಾರಿಯಲ್ಲಿ ಸಿಕ್ಕಿಕೊಳ್ಳುವರೆ ?

ಶ್ರೀ ಗುರುದೇವರು :—ಹೌದು, ಅದೇನೊ ನಿಜ. ಆದರೆ ಇದರಿಂದ ದೋಷವಿಲ್ಲ. ಯಾವ ಹಿಮದ ರಾಶಿಯಲ್ಲಿ ಅವರು ಸಿಕ್ಕಿಕೊಳ್ಳುವರೊ ಅದು ಸಚ್ಚಿದಾನಂದಸಾಗರದ ಘನೀಭೂತವಾದ ನೀರು. ಬ್ರಹ್ಮವೊಂದೆ ಸತ್ಯ, ಜಗತ್ತು ಮಿಥ್ಯವೆಂದು ಆಲೋಚಿಸಿದರೆ ಜ್ಞಾನಸೂರ್ಯನೆದುರಿಗೆ ಹಿಮ ಕರಗುವುದು. ಆಗ ಉಳಿಯುವುದೇನು ? ಸಚ್ಚಿದಾನಂದ ನಿರಾಕಾರ ನೀರೊಂದೆ.

೮೧೨. ಜ್ಞಾನ ಪುರುಷನಂತೆಯೂ, ಭಕ್ತಿ ಸ್ತ್ರೀಯಂತೆಯೂ ಇರುವುದು. ದೇವರ ಅರಮನೆಯಲ್ಲಿ, ದಿವಾನ್‌ಖಾನೆಯ ವರೆಗೆ ಮಾತ್ರ ಜ್ಞಾನಿಗೆ ಅವಕಾಶ. ಆದರೆ ಭಕ್ತನಾದರೋ ಅವನ ಅಂತಃಪುರಕ್ಕೆ ಪ್ರವೇಶಿಸಬಲ್ಲ.

೮೧೩. ಒಂದುದಿನ ಜ್ಞಾನಿ ಮತ್ತು ಭಕ್ತ ಇಬ್ಬರೂ ಒಂದು ಕಾಡಿನ ಮೂಲಕ ಹೋಗುತ್ತಿದ್ದರು. ದಾರಿಯಲ್ಲಿ ಅವರು ಒಂದು ಹುಲಿಯನ್ನು ನೋಡಿದರು. ಜ್ಞಾನಿ “ ನಾವು ಓಡಿಹೋಗುವ ಅಗತ್ಯ

ವಿಲ್ಲ. ಸರ್ವಶಕ್ತನಾದ ದೇವರು ನಮ್ಮನ್ನು ನಿಜವಾಗಿ ಕಾಪಾಡುವನು" ಎಂದನು. ಭಕ್ತನು "ಬೇಡಪ್ಪ ಬೇಡ, ನಾವು ಓಡಿ ಹೋಗೋಣ ನಮ್ಮ ಸ್ವಂತ ಪ್ರಯತ್ನದಿಂದ ಇದನ್ನು ಸಾಧಿಸುವುದಕ್ಕೆ ಸಾಧ್ಯವಾಗಿ ರುವಾಗ ದೇವರಿಗೇಕೆ ತೊಂದರೆ ಕೊಡಬೇಕು" ಎಂದನು.

## ಕರ್ಮಯೋಗವೆಂದರೇನು ?

೮೧೪. ಕರ್ಮಯೋಗವೆಂದರೆ ಕರ್ಮದ ಮೂಲಕ ದೇವರಿಗೆ ಸಂಬಂಧವನ್ನು ಕಲ್ಪಿಸಿಕೊಳ್ಳುವುದು. ಅನಾಸಕ್ತಿಯಿಂದ ಅಷ್ಟಾಂಗ ಯೋಗ ಅಥವಾ ರಾಜಯೋಗವನ್ನು ಅಭ್ಯಾಸಮಾಡಿದರೆ ಅದು ಕರ್ಮ ಯೋಗ. ಇದು ಏಕಾಗ್ರತೆ ಮತ್ತು ಧ್ಯಾನದ ಮೂಲಕ ಐಕ್ಯತೆಗೆ ಒಯ್ಯುತ್ತದೆ. ಗೃಹಸ್ಥ ಕರ್ಮಗಳನ್ನು (ಅಂದರೆ, ತನಗೆ ಅಥವಾ ಪರೋಪಕಾರಕ್ಕೆ ಅನ್ವಯಿಸುವ ರಾಜಕೀಯ ಅಥವಾ ಸಾಮಾಜಿಕ ಕಾರ್ಯಗಳು) ದೇವರ ಪ್ರೀತ್ಯರ್ಥವಾಗಿ ಅನಾಸಕ್ತಿಯಿಂದ ಮಾಡಿದರೆ ಅದು ಕರ್ಮಯೋಗ. ಕರ್ಮಯೋಗದ ಗುರಿಯಂತೆಯೆ ಸಾಕಾರ, ನಿರಾಕಾರ, ಅಥವಾ ಇವೆರಡು ಬಗೆಯ ದೇವರನ್ನು ಸಾಕ್ಷಾತ್ಕಾರ ಮಾಡಿಕೊಳ್ಳುವುದು.

೮೧೫. ಸತ್ತ್ವಗುಣ ಪ್ರಧಾನವಾಗಿರುವವರಿಗೆ ಕರ್ಮ ಸಾಮಾನ್ಯ ವಾಗಿ ಬಿದ್ದು ಹೋಗುವುದು. ಪ್ರಯತ್ನಪಟ್ಟರೂ ಅವರು ಕರ್ಮದಲ್ಲಿ ನಿರತರಾಗಿರಲು ಸಾಧ್ಯವಿಲ್ಲ. ದೇವರು ಅವರನ್ನು ಕೆಲಸ ಮಾಡುವುದಕ್ಕೆ ಬಿಡುವುದಿಲ್ಲ. ಉದಾಹರಣೆಗೆ ಗರ್ಭಿಣಿಯಾಗಿರುವ ಸೊಸೆಯ ಕೆಲಸ ಕ್ರಮೇಣ ಕಡಿಮೆಯಾಗುವುದು. ಮಗು ನಿಜವಾಗಿ ಹುಟ್ಟಿದಮೇಲೆ ಅವಳಿಗೆ ಏನು ಕೆಲಸವನ್ನೂ ಹೇಳುವುದಿಲ್ಲ. ಕೇವಲ ಮಗುವನ್ನು ಮಾತ್ರ ನೋಡಿಕೊಳ್ಳುವುದಕ್ಕೆ ಬಿಟ್ಟುಬಿಡುವರು. ಸತ್ತ್ವಗುಣಿಗಳಲ್ಲ ದವರು ಎಲ್ಲಾ ಪ್ರಾಪಂಚಿಕ ವ್ಯವಹಾರಗಳನ್ನೂ ನೋಡಿಕೊಳ್ಳ ಬೇಕಾಗುವುದು. ಸಂಪೂರ್ಣ ತಮ್ಮ ಮನಸ್ಸನ್ನು ದೇವರ ಮೇಲೆ ಇಟ್ಟು ಶ್ರೀಮಂತನ ಮನೆಯಲ್ಲಿರುವ ಆಳಿನಂತೆ ಇರಬೇಕು. ಇದನ್ನೆ ಕರ್ಮಯೋಗವೆನ್ನುವುದು. ಒಬ್ಬನು ಸಾಧ್ಯವಾದಮಟ್ಟಿಗೆ ಭಗವಂತನ ನಾಮವನ್ನು ಜಪಿಸುತ್ತ, ಅವನನ್ನು ಧ್ಯಾನಿಸುತ್ತ, ಮೇಲೆ ಹೇಳಿದಂತೆ ಅನಾಸಕ್ತಿಯಿಂದ ಎಲ್ಲವನ್ನೂ ದೇವರಿಗೆ ಸಮರ್ಪಿಸಿ ಕೆಲಸ ಮಾಡು ವುದೇ ಇದರ ರಹಸ್ಯ.

೬೧೬. ದೇವರಿಗೆ ನೀನು ಏನನ್ನು ಅರ್ಪಿಸಿದರೂ ಅದು ಸಾವಿರ ಪಾಲು ಹೆಚ್ಚಾಗಿ ನಿನಗೆ ಹಿಂದಿರುಗಿ ಬರುವುದು. ಆದಕಾರಣವೆ ಎಲ್ಲಾ ಕರ್ಮಗಳ ಕೊನೆಯಲ್ಲಿ ಕರ್ಮಫಲಗಳನ್ನೆಲ್ಲಾ ಕೃಷ್ಣಾರ್ಪಣ ಮಾಡಿ ಸ್ವಲ್ಪ ನೀರನ್ನು ಧಾರೆ ಎರೆಯಬೇಕು.

೬೧೭. ಯುಧಿಷ್ಠಿರ ಶ್ರೀಕೃಷ್ಣನಿಗೆ ತನ್ನ ಪಾಪಗಳನ್ನೂ ಕೂಡ ಸಮರ್ಪಿಸುವುದರಲ್ಲಿರುವಾಗ, ಭೀಮಸೇನನು ಅವನನ್ನು ಎಚ್ಚರಿಸಿದನು : "ನೀನು ಹಾಗೆ ಮಾಡಕೂಡದು ; ಶ್ರೀಕೃಷ್ಣನಿಗೆ ನೀನು ಏನನ್ನು ಅರ್ಪಿಸುವೆಯೋ ಅವುಗಳೆಲ್ಲಾ ಸಾವಿರಪಾಲಿನಷ್ಟು ಹೆಚ್ಚಿ ನಿನಗೆ ಹಿಂದಿರುಗಿ ಬರುವುವು."

## ಕರ್ಮಯೋಗದಲ್ಲಿ ಭಕ್ತಿಯ ಮುಂಜಾಗ್ರತೆ

೬೧೮. ಈ ಯುಗದಲ್ಲಿ ಅನಾಸಕ್ತಿಯೋಗ ಬಹಳ ಕಷ್ಟ. ಆದ ಕಾರಣವೇ ಕರ್ಮ ಜ್ಞಾನ ಅಥವಾ ಸಿದ್ಧಾಂತಗಳಿಗಿಂತ ದೇವರನ್ನು ಪ್ರಾರ್ಥನೆ ಭಕ್ತಿ ಮತ್ತು ಪ್ರೇಮಗಳಿಂದ ಒಲಿಸಿಕೊಳ್ಳುವುದು ಸುಲಭವೆಂದು ಹೇಳಿರುವರು. ಆದರೆ ಕರ್ಮಯೋಗವನ್ನು ಯಾರೂ ಅಲ್ಲಗಳೆಯಲಾರರು. ಮನಸ್ಸಿನ ಪ್ರತಿಯೊಂದು ಕ್ರಿಯೆಯೂ, ಕರ್ಮ. ನಾನು ಅನುಭವಿಸುತ್ತೇನೆ. ಅಥವಾ ನಾನು ಆಲೋಚಿಸುತ್ತೇನೆ, ಎಂಬ ಆಲೋಚನೆಯಲ್ಲಿಯೂ ಕೂಡ ಕರ್ಮವಿದೆ. ಭಕ್ತಿಯೋಗದಲ್ಲಿ ಬರುವ ಕರ್ಮ ದೇವರ ಮೇಲೆ ಇಡುವ ಭಕ್ತಿ ಅಥವಾ ಪ್ರೇಮದಿಂದ ಸುಲಭವಾಗುವುದು. ಮೊದಲನೆಯದಾಗಿ ಈ ಪ್ರೇಮ ಒಬ್ಬನ ಇಷ್ಟವಾದ ಭಗವಂತನಮೇಲೆ ಮನಸ್ಸನ್ನು ಕೇಂದ್ರೀಕರಿಸುವುದರಿಂದ ಕರ್ಮವನ್ನು ತಗ್ಗಿಸುವುದು. ಎರಡನೆಯದಾಗಿ ಅನಾಸಕ್ತಿಯಿಂದ ಕೆಲಸಮಾಡುವುದಕ್ಕೆ ಇದು ಸಹಾಯಮಾಡುವುದು. ಒಬ್ಬನು ಏಕಕಾಲದಲ್ಲಿ ದೇವರು ಮತ್ತು ಐಶ್ವರ್ಯ, ಭೋಗ ಕೀರ್ತಿ ಅಥವಾ ದರ್ಪಗಳನ್ನು ಪ್ರೀತಿಸಲಾರ. ಯಾರು ಒಂದು ಸಲ ಕಲ್ಲುಸಕ್ಕರೆ ಪಾನಕವನ್ನು ರುಚಿ ನೋಡುವನೊ ಅವನಿಗೆ ಬೆಲ್ಲದ ಪಾನಕದ ಮೇಲೆ ಅಷ್ಟು ಅಭಿಲಾಷೆ ಇರುವುದಿಲ್ಲ.

೬೧೯. ಈ ಯುಗದಲ್ಲಿ ಭಕ್ತಿ ಇಲ್ಲದೆ ಕರ್ಮಕ್ಕೆ ತಾನೆ ನಿಂತುಕೊಳ್ಳಲು ಕಾಲಿಲ್ಲ. ಅದು ಮರಳಿನ ತಳಹದಿಯಂತೆ. ಮೊದಲು ಭಕ್ತಿಯನ್ನು ಅಭ್ಯಾಸಮಾಡಿ. ಉಳಿದವು ಅಂದರೆ, ಪಾಠಶಾಲೆ, ಔಷಧಾಲಯ ನೀವು ಇಚ್ಛೆಪಟ್ಟರೆ ನಂತರ ಸೇರುವುವು. ಮೊದಲು ಭಕ್ತಿ. ನಂತರ

ಕರ್ಮ. ದೇವರಮೇಲೆ ಭಕ್ತಿ ಅಥವಾ ಪ್ರೇಮವಿಲ್ಲದೆ, ಪ್ರಯೋಜನವಿಲ್ಲ. ಅದು ನಿಲ್ಲಲಾರದು.

೮೨೦. ಈ ಕಲಿಯುಗಕ್ಕೆ ನಾರದೋಕ್ತ ಭಕ್ತಿಯೇ ಮಾರ್ಗ. ಅದೇ ದೇವರನ್ನು ಪ್ರೀತಿ, ಭಕ್ತಿ, ಶರಣಾಗತಿಗಳಿಂದ ಆರಾಧಿಸುವುದು. ಕರ್ಮಯೋಗಕ್ಕೆ ಸಾಕಾದಷ್ಟು ಸಮಯವಿಲ್ಲ. ಅಂದರೆ ಶ್ರುತಿಗಳು ಮಾನವರಿಗೆ ವಿಧಿಸಿರುವ ಬಹುವಿಧದ ಕರ್ಮಗಳನ್ನು ಮಾಡುವುದಕ್ಕೆ ಕಾಲವಿಲ್ಲ. ಪ್ರಖ್ಯಾತವಾದ ದಶಮೂಲಪಚನದ ಕಷಾಯ ಇಂದಿನ ಕಾಲದ ಜ್ವರಕ್ಕೆ ತಕ್ಕ ಔಷಧಿಯಲ್ಲವೆನ್ನುವುದು ನಿಮಗೆ ಕಾಣುವುದಿಲ್ಲವೆ? ಔಷಧಿ ದೇಹದ ಮೇಲೆ ತನ್ನ ಪರಿಣಾಮವನ್ನು ಬೀರುವುದಕ್ಕೆ ಮುಂಚೆ ರೋಗಿ ಮರಣಕ್ಕೆ ತುತ್ತಾಗುವ ಅಪಾಯವಿದೆ. ಆದಕಾರಣವೆ ಈಗಿನ ಕಾಲಕ್ಕೆಲ್ಲ "ಜ್ವರ ಕಷಾಯ" ತಕ್ಕ ಔಷಧಿ.

೮೨೧. ಶಿಷ್ಯ :—ಕೆಲಸದ ಅವಾಂತರ ಮನಸ್ಸನ್ನು ದೇವರ ಕಡೆಗೆ ಹರಿಸಲು ಅಡ್ಡಿ ತರುವುದು.

ಶ್ರೀ ಗುರುದೇವರು :—ಹೌದು ಅದೇನೋ ನಿಜ. ಆದರೆ ಜ್ಞಾನಿ ಅನಾಸಕ್ತನಾಗಿ ಕೆಲಸ ಮಾಡಬಹುದು. ಆಗ ಕರ್ಮ ಅವನಿಗೆ ಅಡ್ಡಿಯನ್ನು ತರುವುದಿಲ್ಲ. ನೀನು ಹೃತ್ಪೂರ್ವಕ ಇಚ್ಛಿಸಿದರೆ ಕ್ರಮೇಣ ಕರ್ಮದ ಬಂಧನ ಬಿದ್ದುಹೋಗುವಂತೆ ದೇವರು ನಿನಗೆ ಸಹಾಯ ಮಾಡುವನು.

೮೨೨. ಭರತಖಂಡದಲ್ಲಿ ಒಬ್ಬ ಪ್ರಖ್ಯಾತ ಪರೋಪಕಾರಿಯಾದ ಈಶ್ವರಚಂದ್ರ ವಿದ್ಯಾಸಾಗರನನ್ನು ಕುರಿತು ಶ್ರೀರಾಮಕೃಷ್ಣರು ಒಂದು ದಿನ ಹೀಗೆಂದರು : "ನಿನ್ನ ಸ್ವಭಾವ ಸತ್ತ್ವಗುಣದಿಂದಾಗಿದೆ. ಅಂದರೆ ಮೋಕ್ಷಕ್ಕೆ ಅಥವಾ ಜ್ಞಾನಕ್ಕೆ ಕೊಂಡೊಯ್ಯುವಂತಹುದು. ನಿನ್ನ ಸತ್ತ್ವಗುಣ, ಒಳ್ಳೆಯ ಕೆಲಸಗಳನ್ನು ಮಾಡುವುದರಲ್ಲಿ ಜಾಗ್ರತನಾಗಿ ಉತ್ಸಾಹಿಯಾಗಿ ಇರುವಂತೆ ಮಾಡುವ ಸ್ಥಿತಿಯಲ್ಲಿದೆ. ಉಳಿದವರಿಗೆ, ದಾನ ಧರ್ಮ, ಮಾಡುವುದು, ದಯೆಯನ್ನು ತೋರುವುದು ಮುಂತಾದುವುಗಳನ್ನೂ ಅನಾಸಕ್ತಿಯಿಂದ ಮಾಡುವುದು ಒಳ್ಳೆಯದು. ಅದನ್ನು ಹಾಗೆ ಅಭ್ಯಾಸ ಮಾಡಿದರೆ ಮತ್ತು ಅದರೊಂದಿಗೆ ಭಕ್ತಿ ಸೇರಿದ್ದರೆ ಅದು ದೇವರೆಡೆಗೆ ಒಯ್ಯುವುದು."

೮೨೩. ಧ್ಯಾನದ ಸಮಯದಲ್ಲಿ ಮಾತ್ರ ದೇವರ ಆಲೋಚನೆ ಮಾಡಿ ಉಳಿದ ಸಮಯದಲ್ಲಿ ಅವನನ್ನು ಮರೆಯುವೆಯೇನು ? ದುರ್ಗಾ

ಪೂಜೆಯ ಸಮಯದಲ್ಲಿ ಯಾವಾಗಲೂ ವಿಗ್ರಹದ ಸಮೀಪದಲ್ಲಿ ಒಂದು ನಂದಾದೀಪ ಉರಿಯುತ್ತಿರುವುದನ್ನು ನೋಡಿಲ್ಲವೆ? ಅದು ಎಂದೂ ಆರಿಹೋಗಲು ಅವಕಾಶ ಕೊಡಕೂಡದು. ಅದೇನಾದರೂ ಆರಿ ಹೋದರೆ ಮನೆಯವರಿಗೇನಾದರೂ ವಿಪತ್ತು ಬರುವುದು. ಇದರಂತೆಯೇ ಇಷ್ಟದೇವತೆಯನ್ನು ಹೃದಯಕಮಲದಲ್ಲಿ ಸ್ಥಾಪಿಸಿದಮೇಲೆ ಆತನ ಜ್ಞಾಪಕವೆನ್ನುವ ನಂದಾದೀವಿಗೆಯನ್ನು ಯಾವಾಗಲೂ ಉರಿಸುತ್ತಿರ ಬೇಕು. ಪ್ರಪಂಚದ ಕೆಲಸಗಳನ್ನು ಮಾಡುತ್ತಿರುವಾಗ ಅನವರತವೂ ಅಂತರ್ಯದಲ್ಲಿ ದೀಪ ಉರಿಯುತ್ತಿದೆಯೆ ಇಲ್ಲವೆ ಎನ್ನುವುದನ್ನು ಪರೀಕ್ಷಿಸ ಬೇಕು.

೮೨೪. ಸೇವೆಯಂತೆ ಮಾಡಿದ ಕರ್ಮ ಪೂಜೆಗೆ ಸಮ. ಶ್ರೀ ರಾಮಕೃಷ್ಣರು, ಶ್ರೀ ಚೈತನ್ಯರ ಮತದ ಸಾರವನ್ನು ಹೀಗೆ ಹೇಳು ತ್ತಿದ್ದರು: "ಮನುಷ್ಯನು ಸದಾಕಾಲದಲ್ಲಿಯೂ ಭಗವನ್ನಾಮೋ ಚ್ಚಾರಣೆಯಲ್ಲಿ ಆನಂದ, ಎಲ್ಲಾ ಜೀವಿಗಳಲ್ಲಿಯೂ ದಯೆ ಮತ್ತು ಭಕ್ತರಿಗೆ ಸೇವೆ, ಈ ಮೂರನ್ನು ಅಭ್ಯಾಸ ಮಾಡಬೇಕೆಂದು ಈ ಧರ್ಮ ಬೋಧಿಸುತ್ತದೆ. ದೇವರು ಮತ್ತು ಆತನ ಹೆಸರು ಅಭೇದವಾದುದು. ಇದನ್ನು ತಿಳಿದು ಒಬ್ಬನು ಭಗವಂತನ ನಾಮವನ್ನು ಭಕ್ತಿಯಿಂದಲೂ ಮತ್ತು ಉತ್ಸಾಹದಿಂದಲೂ ನೆನೆಯಬೇಕು. ಭಗವಂತ ಮತ್ತು ಆತನ ಭಕ್ತರಲ್ಲಿ ಭೇದವಿಲ್ಲವೆಂದು ತಿಳಿದು ಭಕ್ತರನ್ನು ಗೌರವಿಸಬೇಕು. ವಿಶ್ವವೇ ಭಗವಂತನ ಸಂಸಾರವೆಂದು ತಿಳಿದು ಎಲ್ಲಾ ಜೀವಿಗಳಿಗೂ ಕರುಣೆ ಯನ್ನು ತೋರಬೇಕು." ಜೀವಕಾರುಣ್ಯವೆಂಬ ಕೊನೆಯ ಪದವನ್ನು ಅವಸರದಿಂದ ಹೇಳಿ ಶ್ರೀ ರಾಮಕೃಷ್ಣರು ತಕ್ಷಣವೆ ಸಮಾಧಿಸ್ಥರಾದರು. ಹೊತ್ತಾದ ಮೇಲೆ ಭಾವಮುಖಕ್ಕೆ ಹಿಂತಿರುಗಿ ಅವರು ಹೀಗೆ ಹೇಳಿದರು: "ಜೀವಿಗಳಿಗೆ ಕರುಣೆ! ಜೀವಿಗಳಿಗೆ ಕರುಣೆ! ಅಬ್ಬಬ್ಬ! ಕೀಟಕ್ಕಿಂತ ಕೀಳಾದ ನೀನು ಜೀವರಿಗೆ ದಯೆತೋರುವೆನು ಎನ್ನುವುದಕ್ಕೆ ಎಷ್ಟು ಎದೆಗಾರಿಕೆ! ನೀನಾರು ಅವರಿಗೆ ಕರುಣೆಯನ್ನು ತೋರುವುದಕ್ಕೆ? ಇಲ್ಲ! ಇಲ್ಲ! ಜೀವರಿಗೆ ಕರುಣೆಯಲ್ಲ, ಅವುಗಳೇ ಸಾಕ್ಷಾತ್ ದೇವ ಸ್ವರೂಪವೆಂದು ತಿಳಿದು ಸೇವೆ ಮಾಡಬೇಕು."

## ಕರ್ಮ ಒಂದು ಮಾರ್ಗ, ಗುರಿಯಲ್ಲ.

೮೨೫. ಬಹಳ ಉತ್ಸಾಹಶಾಲಿಗಳಾದ ಸಮಾಜ ಸುಧಾರಕರ ಗುಂಪಿನೊಂದಿಗೆ ಮಾತನಾಡುತ್ತ ಶ್ರೀರಾಮಕೃಷ್ಣರು ಹೀಗೆ ಹೇಳಿದರು: "ಏನೋ ಪ್ರಪಂಚಕ್ಕೆ ದೊಡ್ಡ ಸಹಾಯವನ್ನು ಮಾಡುವಂತೆ ನೀವು ಮಾತನಾಡುತ್ತಿರುವಿರಲ್ಲ. ನೀವು ಒಳ್ಳೆಯದನ್ನು ಮಾಡಬೇಕೆಂದು ಬಯಸುವ ಪ್ರಪಂಚ ಅಷ್ಟು ಸಣ್ಣದೆ? ಎರಡನೆಯದಾಗಿ ಪ್ರಪಂಚಕ್ಕೆ ಸಹಾಯ ಮಾಡಬೇಕೆಂದು ನೀವು ಬಯಸುತ್ತೀರಲ್ಲ, ಅದಕ್ಕೆ ನೀವು ಯಾರು? ಮೊದಲು ಸಾಧನೆಮಾಡಿ ದೇವರನ್ನು ಕಾಣಿ. ಆಗ ಮಾತ್ರ ಸ್ಫೂರ್ತಿ ಮತ್ತು ಶಕ್ತಿ ನಿಮಗೆ ಬರುತ್ತದೆ. ಆಗ ಪ್ರಪಂಚಕ್ಕೆ ಒಳ್ಳೆಯದನ್ನು ಮಾಡುವುದನ್ನು ಕುರಿತು ಮಾತನಾಡಬಹುದು. ಅಲ್ಲಿಯವರೆಗೂ ಮಾತನಾಡಬೇಡಿ."

ಒಬ್ಬ ಭಕ್ತ:—ಸ್ವಾಮಿ, ಹಾಗಾದರೆ ನಾವು ದೇವರನ್ನು ಕಾಣುವವರೆಗೆ ಕೆಲಸಗಳನ್ನೆಲ್ಲಾ ಬಿಡಬೇಕೆ?

ಶ್ರೀ ರಾಮಕೃಷ್ಣರು:—ಹಾಗಲ್ಲ ಮಹಾಶಯರೆ! ಕೆಲಸಗಳನ್ನೆಲ್ಲಾ ನೀವು ಏತಕ್ಕೆ ಬಿಡಬೇಕು? ಧ್ಯಾನ, ಭಜನೆ, ಜಪ ಮುಂತಾದುವುಗಳನ್ನು ಮಾಡುತ್ತಿರಬೇಕು.

ಭಕ್ತ:—ಅಂದರೆ ಪ್ರಪಂಚಕ್ಕೆ ಸಂಬಂಧಿಸಿದ ಕೆಲಸ. ಸಂಸಾರದ ಹವ್ಯಾಸವನ್ನೇ ತೊರೆಯಬೇಕೇನು?

ಶ್ರೀ ರಾಮಕೃಷ್ಣರು:—ಪ್ರಪಂಚದಲ್ಲಿರುವುದಕ್ಕೆ ಸಾಧ್ಯವಾದ ಮಟ್ಟಿಗೆ ಕೆಲಸವನ್ನು ನೋಡಿಕೊಳ್ಳಬಹುದು. ಆದರೆ ನೀವು ಅದೇ ಕಾಲದಲ್ಲಿ ಕಂಬನಿದುಂಬಿ ದೇವರ ಕೃಪಾಕಟಾಕ್ಷಕ್ಕೆ ಬೇಡಿಕೊಳ್ಳಬೇಕು. ಯಾವ ಫಲಾಪೇಕ್ಷೆಯೂ ಇಲ್ಲದೆ ಇಹದಲ್ಲಿನ ಅಥವಾ ಪರದಲ್ಲಿನ ಯಾವ ಶಿಕ್ಷೆಯ ಭಯವೂ ಇಲ್ಲದೆ ಕರ್ಮಗಳನ್ನು ಮಾಡುವ ಶಕ್ತಿಯನ್ನು ದಯಪಾಲಿಸೆಂದು ಭಗವಂತನಿಗೆ ಬೇಡಿಕೊಳ್ಳಬೇಕು.

೮೨೬. ನೀವು ಕೆಲಸವನ್ನು ಬಿಡುವುದಕ್ಕೆ ಆಗುವುದಿಲ್ಲ. ಪ್ರಕೃತಿ ನಿಮ್ಮಿಂದ ಕೆಲಸ ಮಾಡಿಸುವುದು. ಆದಕಾರಣ ಕೆಲಸ ಮಾಡೋಣ. ಅನಾಸಕ್ತಿಯಿಂದ ಕೆಲಸ ಮಾಡಿದರೆ ಅದು ದೇವರೆಡೆಗೆ ನಮ್ಮನ್ನು ಒಯ್ಯುವುದು. ಅನಾಸಕ್ತಿಯಿಂದ ಕೆಲಸ ಮಾಡುವುದು ಎಂದರೆ ಈ ಜನ್ಮದಲ್ಲಿ ಅಥವಾ ಮುಂದಿನ ಜನ್ಮದಲ್ಲಿ ಯಾವ ಅಂಜಿಕೆ ಅಥವಾ

ಪ್ರತಿಫಲದಾಸೆಗೆ ಕೆಲಸ ಮಾಡದೆ ಇರುವುದು. ಹೀಗೆ ಮಾಡಿದ ಕರ್ಮ ಮೋಕ್ಷಕ್ಕೆ ದಾರಿ. ಆ ಮೋಕ್ಷವೇ ದೇವರು.

೮೨೭. ಕರ್ಮವನ್ನು ಅನಾಸಕ್ತಿಯಿಂದ ಮಾಡುವುದು ಒಂದು ಮಾರ್ಗ. ಆದರೆ ಜೀವನದ ಗುರಿ ದೇವರನ್ನು ನೋಡುವುದು. ನಾನು ಪುನಃ ಹೇಳುತ್ತೇನೆ, ಮಾರ್ಗವನ್ನು ಗುರಿಯೆಂದು ತಪ್ಪು ಭಾವಿಸಬೇಡಿ. ದಾರಿಯ ಮೊದಲನೆ ಹಂತವನ್ನೇ ಗುರಿಯೆಂದು ಭಾವಿಸಬಾರದು. ಕರ್ಮವೆ ನಮ್ಮ ಸರ್ವಸ್ವ, ಅದೇ ನಮ್ಮ ಗುರಿ, ಮಾನವನ ಬಾಳಿನ ಚರಮದೃಷ್ಟಿಯೆ ಅದು ಎಂದು ತಿಳಿಯಬೇಡಿ. ಹೇಗೊ ದೇವರನ್ನು ನೋಡುವ ಅದೃಷ್ಟ ನಿಮಗೆ ಒದಗಿತು ಎಂದು ಇಟ್ಟುಕೊಳ್ಳಿ. ಆಗ ನೀವು ಏನನ್ನು ಕೇಳಿಕೊಳ್ಳುವಿರಿ? ಔಷಧಾಲಯ ಆಸ್ಪತ್ರೆ, (Hospital) ಕೆರೆ, ಭಾವಿ, ರಸ್ತೆ, ಛತ್ರ ಮುಂತಾದುವುಗಳನ್ನು ಕೇಳಿಕೊಳ್ಳುವಿರಾ? ಇಲ್ಲ, ದೇವರನ್ನು ಕಾಣದೆ ಇರುವವರೆಗೆ ಮಾತ್ರ ಇವುಗಳೆಲ್ಲವೂ ಸತ್ಯ. ಆದರೆ ಒಮ್ಮೆ ಭಗವಂತನ ಸಾಕ್ಷಾತ್ಕಾರವಾದರೆ ಅವುಗಳ ನಿಜಸ್ಥಿತಿಯನ್ನು ನೋಡುತ್ತೇವೆ. ಎಲ್ಲಾ ತನಗಿಂತಲೂ ಕ್ಷಣಿಕ, ಸ್ಥಿರವೇನೂ ಅಲ್ಲ. ಆಗ ಪಾರಮಾರ್ಥಿಕ ದೃಷ್ಟಿಯಿಂದ ಹೆಚ್ಚು ಜ್ಞಾನವನ್ನು ಕೇಳಿಕೊಳ್ಳುತ್ತೇವೆ, ಹೆಚ್ಚು ದೇವರ ಪ್ರೇಮವನ್ನು ಕೇಳಿಕೊಳ್ಳುತ್ತೇವೆ. ಯಾವ ಪ್ರೇಮ ನಮ್ಮನ್ನು ಮಾನವತ್ವದಿಂದ ದೇವತ್ವಕ್ಕೆ ಒಯ್ಯುವುದೊ, ಯಾವ ಪ್ರೇಮ ನಮ್ಮನ್ನು ನಿಜವಾಗಿಯೂ ಆ ಪರಮಾತ್ಮನ ಮಕ್ಕಳೆಂದು ತಿಳಿಯುವಂತೆ ಮಾಡುವುದೊ, ಅದನ್ನು ಕೇಳಿಕೊಳ್ಳುತ್ತೇವೆ. ಆತನ ವಿಚಾರವಾಗಿ ನಾವು ಹೇಳುವುದೆಲ್ಲ, ಆತನು ಇರುವನು ಎಂದು ಮಾತ್ರ. ಪಾರಮಾರ್ಥಿಕ ದೃಷ್ಟಿಯಿಂದ ಆತನೆ ಜ್ಞಾನಸ್ವರೂಪ. ಎಂದಿಗೂ ಬತ್ತದ ಪ್ರೇಮ ಮತ್ತು ಆನಂದಗಳ ಚಿಲುಮೆ ಅವನು.

೮೨೮. ತಮ್ಮ ಭಕ್ತನೊಬ್ಬನ ವಿಚಾರವಾಗಿ ಶ್ರೀರಾಮಕೃಷ್ಣರು ಹೀಗೆ ಹೇಳಿದರು: "ಶಂಭುಮಲ್ಲಿಕ್ ಒಂದು ದಿನ, ಔಷಧಾಲಯಗಳು, ಆಸ್ಪತ್ರೆ, ಶಾಲೆ, ಕಾಲೇಜು ಮತ್ತು ಸಾರ್ವಜನಿಕರ ಉಪಕಾರಕ್ಕಾಗಿ, ರಸ್ತೆ, ಭಾವಿ ಮುಂತಾದುವುಗಳನ್ನು ಸ್ಥಾಪಿಸುವ ವಿಚಾರವನ್ನು ಮಾತನಾಡಿದನು. ನಾನು ಅವನಿಗೆ ಹೀಗೆ ಹೇಳಿದೆ: "ಹೌದು ಇನ್ನೊಬ್ಬರಿಗೆ ಉಪಕಾರ ಮಾಡುವಾಗ ನೀನು ಅನಾಸಕ್ತನಾಗಿರಬೇಕು. ನಿನ್ನ ಪಾಲಿಗೆ ಬಂದ ಕೆಲಸಗಳನ್ನು ಮಾತ್ರ ತೆಗೆದುಕೊಳ್ಳಬೇಕು. ಜೋಪಾನವಾಗಿರು

ಬೇಕು. ಆದರಲ್ಲಿಯೂ ಯಾವುದು ಅತ್ಯಾವಶ್ಯಕವೋ ಅದನ್ನು ಮಾತ್ರ ಮಾಡು. ಅವುಗಳಿಗಾಗಿ ಹುಡುಕಾಡಬೇಡ. ನೀನು ನಿರ್ವಹಿಸುವುದಕ್ಕಿಂತ ಹೆಚ್ಚು ಕೆಲಸವನ್ನು ಹಿಡಿಯಬೇಡ. ನೀನು ಹಾಗೆ ಮಾಡಿದರೆ ದೇವರನ್ನು ಮರೆಯುವೆ."

## ಕರ್ಮ ಮತ್ತು ಅಕರ್ಮ

೮೨೯. ಮನುಷ್ಯನಲ್ಲಿ ಶುದ್ಧ ಸತ್ತ್ವಗುಣ ವೃದ್ಧಿಯಾದರೆ ಅವನು ದೇವರಮೇಲೆ ಧ್ಯಾನಮಾತ್ರ ಮಾಡುವನು. ಬೇರೆ ಕೆಲಸಗಳಲ್ಲಿ ಅವನಿಗೆ ಅಭಿರುಚಿ ಇರುವುದಿಲ್ಲ. ಕೆಲವರು ತಮ್ಮ ಪೂರ್ವಕರ್ಮ ಫಲಕ್ಕೆ ಅನುಗುಣವಾಗಿ ಈ ಸತ್ತ್ವಗುಣದೊಂದಿಗೆ ಹುಟ್ಟುವರು. ಆದರೆ ನಿಸ್ವಾರ್ಥವಾದ ಕರ್ಮವನ್ನು ಭಗವಂತನಿಗೆ ಅರ್ಪಣೆಯಾಗಲಿ ಎಂಬ ಭಾವನೆಯಿಂದ ಮಾಡುವುದರಿಂದಲೂ, ಶುದ್ಧ ಸತ್ತ್ವಗುಣವನ್ನು ಅಭಿವೃದ್ಧಿಗೊಳಿಸಬಹುದು. ರಜಸ್ಸಿನೊಂದಿಗೆ ಸತ್ತ್ವ ಬೆರೆತಿದ್ದರೆ ಮನಸ್ಸು ಕ್ರಮೇಣ ಚಂಚಲವಾಗಿ "ನಾನು ಪ್ರಪಂಚಕ್ಕೆ ಒಳ್ಳೆಯದನ್ನು ಮಾಡುತ್ತೇನೆ" ಎಂಬ ಅಹಂಕಾರ ಭಾವವನ್ನು ತರುವುದು. ಸಾಧಾರಣ ಜೀವಿಗಳಿಗೆ ಪ್ರಪಂಚಕ್ಕೆ ಒಳ್ಳೆಯದನ್ನು ಮಾಡಬೇಕೆಂದು ಪ್ರಯತ್ನಿಸುವುದು ಬಹಳ ಕಷ್ಟ. ಆದರೆ ಮತ್ತೊಬ್ಬರ ಹಿತಕ್ಕಾಗಿ, ಯಾವ ಪ್ರತಿಫಲವೂ ಇಲ್ಲದೆ, ಕೆಲಸಮಾಡುವುದರಲ್ಲಿ ಅಪಾಯವಿಲ್ಲ. ಇಂತಹ ಕೆಲಸಗಳನ್ನು ಮಾಡುವುದು ಒಳ್ಳೆಯದು. ಆದರೆ ಎಲ್ಲರೂ ಇದನ್ನು ಮಾಡಲಾರರು; ಇದು ಬಹಳ ಕಷ್ಟ.

೮೩೦. ಎಲ್ಲರೂ ಕೆಲಸ ಮಾಡಲೇಬೇಕು. ಎಲ್ಲೋ ಕೆಲವರು ಮಾತ್ರ ಅವನ್ನು ನಿರಾಕರಿಸಬಹುದು. ಅಂತಹ ಶುದ್ಧ ಸತ್ತ್ವಗುಣ ಎಲ್ಲೋ ಕೆಲವರಲ್ಲಿ ಮಾತ್ರ ಇರುವುದು, ಭಕ್ತಿಯಿಂದ ಮತ್ತು ಅನಾಸಕ್ತಿಯಿಂದ ಮನುಷ್ಯ ತನ್ನ ಕೆಲಸವನ್ನು ಮಾಡುತ್ತಾ ಹೋದರೆ ಬರುವ ಸತ್ತ್ವಗುಣದ ಲಾಭದಿಂದ ಅವನು ಪರಮಾತ್ಮನನ್ನು ನೋಡುವನು. ಸಾಧಾರಣ ಜನರು ಅಂತಹ ಶುದ್ಧ ಸತ್ತ್ವದ ಸ್ಥಿತಿಯನ್ನು ತಿಳಿದುಕೊಳ್ಳಲಾರರು.

೮೩೧. ಹೃದಯದಲ್ಲಿ ಪರಮಾತ್ಮನ ಮೇಲೆ ಪ್ರೀತಿ ತುಂಬಿತುಳುಕಾಡಿದರೆ ಕರ್ಮತ್ಯಾಗ ತಾನಾಗಿಯೇ ಬರುವುದು. ದೇವರು ಯಾರನ್ನು ಕೆಲಸಕ್ಕಾಗಿ ಪ್ರೇರೇಪಿಸುತ್ತಾನೊ ಅವರು ಕೆಲಸ ಮಾಡಲಿ. ಸಕಾಲ

ಬಂದಾಗ ಒಬ್ಬನು ತನ್ನ ಕೆಲಸಗಳನ್ನೆಲ್ಲ ಬಿಟ್ಟು "ಬಾ ನನ್ನ ಮನಸ್ಸೆ; ನಾವಿಬ್ಬರೂ ಹೃದಯಪದ್ಮದಲ್ಲಿ ನೆಲೆಸಿರುವ ಪರಮಾತ್ಮನನ್ನು ನೋಡೋಣ" ಎನ್ನಬೇಕು.

೮೩೨. ಸಂಧ್ಯಾವಂದನೆ ಗಾಯತ್ರಿಯಲ್ಲಿ ಲಯವಾಗುವುದು. ಗಾಯತ್ರಿ ಪ್ರಣವದಲ್ಲಿ ಲಯವಾಗುವುದು. ಪ್ರಣವ ಕೊನೆಗೆ ಸಮಾಧಿಯಲ್ಲಿ ಲಯವಾಗುವುದು. ಇದರಂತೆಯೇ ಕರ್ಮಗಳೆಲ್ಲ ಕೊನೆಗೆ ಸಮಾಧಿಯಲ್ಲಿ ಮಗ್ನವಾಗುವುವು.

೮೩೩. ಎಲ್ಲಿವರೆಗೆ ಮನಸ್ಸು ಸಚ್ಚಿದಾನಂದದಲ್ಲಿ ಮಗ್ನವಾಗುವುದಿಲ್ಲವೊ ಅಲ್ಲಿಯವರೆಗೆ ಮನುಷ್ಯ ಎರಡನ್ನೂ ಮಾಡಬೇಕು. ದೇವರನ್ನು ಧ್ಯಾನಿಸಬೇಕು, ಪ್ರಪಂಚದ ಕೆಲಸಕ್ಕೂ ಗಮನಕೊಡಬೇಕು. ಆದರೆ ಮನಸ್ಸು ಆತನಲ್ಲಿ ಮಗ್ನವಾದಮೇಲೆ ಕೆಲಸದ ಆವಶ್ಯಕತೆ ಇನ್ನು ಇರುವುದಿಲ್ಲ. ಉದಾಹರಣೆಗೆ ಕೀರ್ತನೆಯನ್ನು ತೆಗೆದುಕೊಳ್ಳೋಣ. ಒಬ್ಬ ಮನುಷ್ಯನು "ನಿತೈ ಹಾಮಾರ ಮತಾ ಹಾತೀ" ನಿತ್ಯಾನಂದನು ಒಂದು ಮದ್ದಾನೆ ಎಂದು ಹಾಡುವನು. ಮೊದಲು ಇದನ್ನು ಹಾಡುವಾಗ ಕೀರ್ತನಕಾರನು ಸ್ವರ, ತಾಳ, ರಾಗ ಮುಂತಾದ ವಿವರಗಳನ್ನೆಲ್ಲ ಗಮನಕ್ಕೆ ತೆಗೆದುಕೊಳ್ಳುತ್ತಾನೆ. ಆದರೆ ಅವನ ಮನಸ್ಸು ಗಾನದಲ್ಲಿ ಸ್ವಲ್ಪ ಮಗ್ನವಾದಮೇಲೆ ಸುಮ್ಮನೆ "ಮತ ಹಾತಿ, ಮತ ಹಾತಿ" ಎನ್ನುತ್ತಾನೆ. ಮಗ್ನತೆಯಲ್ಲಿ ಸ್ವಲ್ಪ ಮುಂದುವರಿದ ಮೇಲೆ "ಹಾತಿ, ಹಾತಿ" ಎಂದು ಮಾತ್ರ ಅವನು ಉಚ್ಚರಿಸುತ್ತಾನೆ. ಇನ್ನು ಸ್ವಲ್ಪ ಮುಂದುವರಿದರೆ ಅವನು ಸುಮ್ಮನೆ "ಹ, ಹ!" ಎಂದು ಮಾತ್ರ ಉಚ್ಚರಿಸುತ್ತಾನೆ, ಮತ್ತೇನೂ ಇಲ್ಲ

೮೩೪. ಆದಕಾರಣವೇ ನಾನು ಹೇಳುವುದು, ಮೊದಲಲ್ಲಿ ಕರ್ಮದ ಗೊಂದಲ ಜಾಸ್ತಿ ಎಂದು. ಆದರೆ ನೀನು ಹೆಚ್ಚು ದೇವರೆಡೆಗೆ ಸಮೀಪಿಸಿದಷ್ಟು, ಕರ್ಮ ಅಷ್ಟು ಕಡಿಮೆಯಾಗುವುದು. ಕೊನೆಗೆ ಸಂಪೂರ್ಣ ಕರ್ಮ ತ್ಯಾಗವಾಗಿ ಸಮಾಧಿ ಸಿದ್ಧಿಸುವುದು. ಸಾಧಾರಣ ಸಮಾಧಿಯನ್ನು ಪಡೆದಮೇಲೆ ದೇಹ ಬಹುಕಾಲ ಇರುವುದಿಲ್ಲ. ಆದರೆ ಕೆಲವರ ವಿಷಯದಲ್ಲಿ ಮಾತ್ರ ಅದು ಜಗತ್ತಿಗೆ ಬೋಧಿಸುವುದಕ್ಕಾಗಿ ಇರುವುದು. ನಾರದನಂತಹ ಋಷಿ, ಚೈತನ್ಯರಂತಹ ಅವತಾರಗಳು ಇದಕ್ಕೆ ಉದಾಹರಣೆ. ಒಂದು ಭಾವಿಯನ್ನು ತೋಡಿ ಆದಮೇಲೆ ಕೆಲವರು ಹಾರೆ, ಗುದ್ದಲಿ, ಮಕ್ಕರಿಗಳನ್ನೆಲ್ಲಾ ಎಸೆಯುವರು. ಆದರೆ

ಮತ್ತೆ ಕೆಲವರು ನೆರೆಹೊರೆಯವರ ಉಪಯೋಗಕ್ಕೆ ಬಂದೀತು ಎಂದು ಅವನ್ನು ಇಡುವರು. ಇಂತಹ ಮಹಾ ಪುರುಷರು ಜಗತ್ತಿನ ದುಃಖವನ್ನು ನೋಡಿ ಮನಕರಗುವರು. ತಮಗೆ ಮಾತ್ರ ಜ್ಞಾನವನ್ನು ಪಡೆದುಕೊಳ್ಳುವಷ್ಟು ಸ್ವಾರ್ಥರಲ್ಲ ಅವರು.

# ಅಧ್ಯಾಯ ೧೭

## ನಿರಾಕಾರಬ್ರಹ್ಮ

೮೩೫. ಬ್ರಹ್ಮ ಹೇಗಿರುವನು? ಅದನ್ನು ಮಾತಿನಲ್ಲಿ ವಿವರಿಸಲಾಗುವುದಿಲ್ಲ. ಸಮುದ್ರವನ್ನು ನೋಡಿದವನಿಗೆ ಒಬ್ಬನು ಅದರ ವಿಷಯವಾಗಿ ಹೇಳಬೇಕಾದರೆ, "ಅದೊಂದು ಅನಂತ ನೀರಿನ ರಾಶಿ, ನೀರು ನೀರು, ಎಲ್ಲೆಲ್ಲೂ ನೀರೆ" ಎಂದು ಮಾತ್ರ ಹೇಳಬಹುದು.

೮೩೬. ವೇದ, ತಂತ್ರ, ಪುರಾಣ ಮತ್ತು ಜಗತ್ತಿನ ಎಲ್ಲಾ ಶಾಸ್ತ್ರಗಳೂ ಕೂಡ ಎಂಜಲಂತೆ ಆಗಿವೆ. ಏಕೆಂದರೆ ಅವು ಹಲವರ ಬಾಯಿಂದ ಹೊರಬಿದ್ದಿವೆ ಮತ್ತು ಹಲವರು ಅದನ್ನು ಮತ್ತೆ ಹೇಳುತ್ತಿರುವರು. ಆದರೆ ಬ್ರಹ್ಮ ಅಥವಾ ಅವ್ಯಕ್ತವನ್ನು ಹಾಗೆ ಯಾರೂ ಎಂಜಲು ಮಾಡಿಲ್ಲ. ಏಕೆಂದರೆ ಇದುವರೆಗೆ ಅದನ್ನು ಯಾರಿಗೂ ಮಾತಿನಿಂದ ವರ್ಣಿಸುವುದಕ್ಕೆ ಆಗಲಿಲ್ಲ.

೮೩೭. ಬ್ರಹ್ಮನ ಸ್ವಭಾವವೆಂತಹದು? ಅದಕ್ಕೆ ಗುಣವಿಲ್ಲ. ಚಲನೆ ಇಲ್ಲ. ಅಚಲವಾದುದು. ಮೇರುಪರ್ವತದಂತೆ ಸ್ಥಿರವಾದುದು.

೮೩೮. ಬ್ರಹ್ಮನು ಒಳ್ಳೆಯದು ಅಥವಾ ಕೆಟ್ಟುದಕ್ಕೆ ನಿಸ್ಸಂಗನಾಗಿರುವನು. ಇದು ದೀಪದ ಬೆಳಕಿನಂತೆ. ಅದರಲ್ಲಿ ನೀನು ಭಾಗವತವನ್ನು ಬೇಕಾದರೆ ಓದಬಹುದು ಅಥವಾ ಸುಳ್ಳು ಅರ್ಜಿಯನ್ನು ಬೇಕಾದರೆ ಬರೆಯಬಹುದು. ಅದೇ ಬೆಳಕಿನ ಸಹಾಯದಿಂದ ಎರಡನ್ನೂ ಮಾಡಬಹುದು. ಪುನಃ ಬ್ರಹ್ಮನು ಒಂದು ಹಾವಿನಂತೆ. ಆದರೆ ಹಲ್ಲಿನಲ್ಲಿ ವಿಷವಿದ್ದರೆ ಏನಂತೆ? ಇದರಿಂದ ಅದಕ್ಕೇನೂ ತೊಂದರೆ ಇಲ್ಲ. ವಿಷ ಅದನ್ನು ಸಾಯಿಸುವುದಿಲ್ಲ. ಇದು ಕಚ್ಚಬಹುದಾದ ಮಿಕ್ಕ ಪ್ರಾಣಿಗಳಿಗೆ ಮಾತ್ರ ಅದು ವಿಷ. ಇದರಂತೆಯೆ ಈ ಪ್ರಪಂಚದಲ್ಲಿ ಕಾಣಬರುವ ದುಃಖ ಪಾಪ ಮತ್ತು ಇನ್ನೂ ಇತರ ಕುಂದುಕೊರತೆಗಳೂ ಕೂಡ ದೃಷ್ಟಿಯ ನ್ಯೂನತೆಗಳು. ಬ್ರಹ್ಮ ಇದನ್ನು ಮೀರಿರು

ವನು. ಸೃಷ್ಟಿಯಲ್ಲಿರುವ ಒಳ್ಳೆಯದು ಮತ್ತು ಕೆಟ್ಟದ್ದು ಬ್ರಹ್ಮನಿಗಿಲ್ಲ. ಮಾನವದೃಷ್ಟಿಯ ಒಳ್ಳೆಯದು ಮತ್ತು ಕೆಟ್ಟದ್ದು ಇವುಗಳಿಂದ ಅವನನ್ನು ತಿಳಿಯುವುದಕ್ಕಾಗುವುದಿಲ್ಲ.

೮೩೯. ಬ್ರಹ್ಮನು ಜ್ಞಾನ ಮತ್ತು ಅಜ್ಞಾನ, ಒಳ್ಳೆಯದು ಕೆಟ್ಟುದು, ಧರ್ಮ ಅಧರ್ಮಗಳ ಆಚೆ ಇರುವನು. ನಿಜವಾಗಿಯೂ ಅವನು ಎಲ್ಲಾ ದ್ವಂದ್ವಗಳ ಆಚೆ ಇರುವನು.

೮೪೦. ಬ್ರಹ್ಮನು ಮನಸ್ಸಿನ ಆಚೆ, ಮಾತಿನ ಆಚೆ, ಇರುವನು. ಧಾರಣ ಧ್ಯಾನವನ್ನು ಮೀರಿರುವನು. ಜ್ಞಾನ ಜ್ಞೇಯ ಜ್ಞಾತೃಗಳನ್ನು ಮೀರಿರುವನು. ಅವನು ಸತ್ಯಾಸತ್ಯಗಳಾಚೆ ಇರುವನು. ಒಟ್ಟನಲ್ಲಿ ಅದು ಎಲ್ಲಾ ದ್ವಂದ್ವಗಳನ್ನೂ ಮೀರಿರುವುದು.

೮೪೧. ಬ್ರಹ್ಮನು ಗಂಧವನ್ನು ಒಯ್ಯುವ ಗಾಳಿಯಂತೆ. ಅದು ಒಳ್ಳೆಯದಾಗಲಿ ಕೆಟ್ಟುದಾಗಲಿ ಗಾಳಿ ಇದರಿಂದ ಎಂದಿಗೂ ಮಲಿನವಾಗುವುದಿಲ್ಲ.

೮೪೨. ಬ್ರಹ್ಮನು ಗುಣಗಳಾಚೆ ಇರುವನು. ಮಾಯೆಯೊಂದಿಗೆ ಸಂಬಂಧಿಸಿರುವ ವಸ್ತುಗಳೆಲ್ಲದರ ಹೊರಗೆ ಇರುವನು.

## ಬ್ರಹ್ಮ ಮತ್ತು ವ್ಯಾವಹಾರಿಕ ಜಗತ್ತು

೮೪೩. ಬ್ರಹ್ಮವೊಂದೇ ಸತ್ಯ. ಜೀವ ಜಗತ್ತಿನಂತೆ ಕಾಣುವುದೆಲ್ಲ ಅಸತ್ಯ.

೮೪೪. ಪ್ರಪಂಚವನ್ನು ಮಿಥ್ಯವೆಂದು ಹೇಳುವುದು ಸುಲಭ. ಆದರೆ ಹಾಗೆಂದರೇನೆಂದು ನಿನಗೆ ನಿಜವಾಗಿ ಗೊತ್ತೆ? ಇದು ಶೇಷ ಬಿಡದೆ ಉರಿಯುವ ಕರ್ಪೂರದಂತೆ. ಕಟ್ಟಿಗೆ ಉರಿದು ಬೂದಿಯನ್ನು ಬಿಡುವಂತೆಯೂ ಅಲ್ಲ. ವಿಚಾರ ಕೊನೆಗಂಡಮೇಲೆ, ಅತ್ಯುತ್ತಮ ಸಮಾಧಿಯನ್ನು ಹೊಂದಿದಮೇಲೆ ಮಾತ್ರ, ಆಗ ನಾನು, ನೀನು, ಎಂಬ ಜಗತ್ತಿನ ಆಲೋಚನೆ ಇರುವುದಿಲ್ಲ.

೮೪೫. ತನ್ನ ಶಿಷ್ಯನಿಗೆ ಉಪದೇಶವನ್ನು ಮಾಡುತ್ತಿದ್ದಾಗ ಗುರು ತನ್ನ ಎರಡು ಕೈ ಬೆರಳುಗಳನ್ನೂ ಎತ್ತಿದನು. ಇದು ಬ್ರಹ್ಮ ಮತ್ತು ಮಾಯೆಯನ್ನು ತೋರುವುದು. ನಂತರ ಒಂದು ಬೆರಳನ್ನು ಕೆಳಗೆ ಇಳಿಸಿ, ಮಾಯೆ ಹೋದಮೇಲೆ ಈ ಪ್ರಪಂಚ ಯಾವುದೂ ಉಳಿಯುವುದಿಲ್ಲವೆಂದು ಹೇಳಿದನು. ನಿರಾಕಾರ ಬ್ರಹ್ಮನೊಬ್ಬನೇ ಇರುವನು.

೮೪೬. ನಿರ್ಗುಣನಾದ ಅವ್ಯಕ್ತನಾದ ಬ್ರಹ್ಮನನ್ನು ಸಮಾಧಿಯಲ್ಲಿ ಮಾತ್ರ ಕಾಣಬಹುದು. ಆಗ ಎಲ್ಲವೂ ಮೌನ. ಆಗ, ಸತ್ಯ, ಜೀವ, ಜಗತ್ತು, ಜ್ಞಾನ ಮತ್ತು ಅಜ್ಞಾನಗಳ ಮಾತೆಲ್ಲ ತಪ್ಪಿಹೋಗುವುವು. ಅಲ್ಲಿರುವುದು ಅಸ್ತಿತ್ವ ಒಂದೇ. ಇನ್ನೇನೂ ಇಲ್ಲ. ನಿಜವಾಗಿ ಉಪ್ಪಿನ ಗೊಂಬೆ ಅನಂತಸಾಗರದಲ್ಲಿ ಒಂದಾದಮೇಲೆ ಅದರ ವ್ಯಕ್ತಿತ್ವ ಉಳಿಯದು. ಇದು ಬ್ರಹ್ಮಜ್ಞಾನ.

೮೪೭. ಪ್ರಶ್ನೆ:—ಅವ್ಯಕ್ತನಾದ ಬ್ರಹ್ಮನಲ್ಲಿ ಜೀವಾತ್ಮನೆಂಬ ಭ್ರಾಂತಿ ಹೇಗೆ ಬಂದಿತು?

ಉತ್ತರ:—ಅದ್ವೈತವಾದಿ ಕೇವಲ ತನ್ನ ಯುಕ್ತಿಯಮೇಲೆ ನಿಂತಿರುವ ತನಕ, ಈ ಪ್ರಶ್ನೆಗೆ "ನನಗೆ ಗೊತ್ತಿಲ್ಲ" ಎಂದು ಮಾತ್ರ ಉತ್ತರ ಹೇಳುವನು. "ನನಗೆ ಗೊತ್ತಿದೆ" ಅಥವಾ "ನನಗೆ ಗೊತ್ತಿಲ್ಲ" ಎಂದು ಎಲ್ಲಿಯವರೆಗೆ ನೀನು ಹೇಳುವೆಯೋ ಅಲ್ಲಿಯವರೆಗೆ ನೀನು ಒಂದು ವ್ಯಕ್ತಿಯೆಂದು ತಿಳಿಯುತ್ತೀಯೆ. ಆದಕಾರಣ ಈ ಭಿನ್ನತೆಯನ್ನು ಸತ್ಯವೆಂದೇ ತೆಗೆದುಕೊಳ್ಳಬೇಕಾಗಿದೆ. ಅದನ್ನು ಭ್ರಾಂತಿ ಎನ್ನಲಾಗುವುದಿಲ್ಲ. ವ್ಯಕ್ತಿತ್ವವೆಲ್ಲಾ ಮಾಯವಾದಾಗ ಸಮಾಧಿಯಲ್ಲಿ ಒಬ್ಬನಿಗೆ ಅವ್ಯಕ್ತಬ್ರಹ್ಮಜ್ಞಾನ ಲಭಿಸುವುದು. ಆಗ ಮಾತ್ರ ಭ್ರಾಂತಿ ಮತ್ತು ಭ್ರಾಂತಿ ಇಲ್ಲದಿರುವುದು, ಸತ್ಯ ಮತ್ತು ಮಿಥ್ಯಗಳ ಸಂದೇಹ ಶಾಂತವಾಗುವುದು

೮೪೮. ಎಲ್ಲಿಯವರೆವಿಗೂ ನೀನು ಒಂದು ವ್ಯಕ್ತಿಯಾಗಿರುವೆಯೊ ಅಲ್ಲಿಯವರೆವಿಗೂ ನಿನ್ನ ಏಕಕ್ಕೆ ಸಂಬಂಧವಿರಬೇಕು. ದ್ರವ್ಯಕ್ಕೆ ಗುಣಗಳಿರಬೇಕು. ನಿತ್ಯಕ್ಕೆ (ಅವಿಕಾರವಾದುದು) ಒಂದು ಲೀಲೆ (ವಿಕಾರ) ಇರಬೇಕು. ನಿನ್ನ ನಿರಾಕಾರಕ್ಕೆ ಒಂದು ಆಕಾರದ ಆಸರೆ ಇರಬೇಕು; ನಿನ್ನ ಒಂದಕ್ಕೆ ಹಲವು ಇರಬೇಕು.

೮೪೯. ಎಲ್ಲಿಯವರೆಗೂ ನೀನು ವ್ಯವಹಾರಿಕ ಜಗತ್ತಿನಲ್ಲಿ ಇರುವೆಯೊ ಅಲ್ಲಿಯವರೆವಿಗೂ ಬೆಣ್ಣೆ ಮತ್ತು ಮಜ್ಜಿಗೆ ಎರಡನ್ನೂ ಒಪ್ಪಿಕೊಳ್ಳಬೇಕಾಗುವುದು. ಅಂದರೆ ಸಾಕಾರನಾದ ಈಶ್ವರ ಮತ್ತು ಜಗತ್ತನ್ನು ಒಪ್ಪಿಕೊಳ್ಳಬೇಕು. ಉಪಮಾನದ ಮೂಲಕ ವಿವರಿಸಿದರೆ ಆದಿಯಲ್ಲಿದ್ದ ಹಾಲೇ ಸಮಾಧಿಯಲ್ಲಿ ಸಾಕ್ಷಾತ್ಕಾರವಾಗುವ ಬ್ರಹ್ಮ. ಬೆಣ್ಣೆಯೇ ಸಾಕಾರ ಮತ್ತು ನಿರಾಕಾರನಾದ ದೇವರು. ಮಜ್ಜಿಗೆಯೆ ಇಪ್ಪತ್ತುನಾಲ್ಕು ತತ್ತ್ವಗಳಿಂದಾದ ಜಗತ್ತು.

೮೫೦. ಅದ್ವೈತಿ ನನ್ನ ಸ್ಥಿತಿಯೊಂದೆ ಸತ್ಯ, ಯುಕ್ತಿಪೂರಿತ ನಿಸ್ಸಂದೇಹವಾದುದು, ಯಾರು ಸಾಕಾರದಲ್ಲಿ ನಂಬುತ್ತಾರೊ ಅವರು ತಪ್ಪು ಎಂದು ವಾದಿಸದಿರಲಿ. ದೇವರ ಸಾಕಾರಗಳೇನು ಕಡಿಮೆ ಸತ್ಯವಲ್ಲ. ಅವು ದೇಹ ಮನಸ್ಸು ಮತ್ತು ಬಾಹ್ಯ ಜಗತ್ತಿಗಿಂತಲೂ ಹೆಚ್ಚು ಸತ್ಯ.

೮೫೧. ಅದ್ವೈತವನ್ನು ಮಾತಾಡಿದ ತಕ್ಷಣವೇ ನೀನು ದ್ವೈತವನ್ನು ಒಪ್ಪಿಕೊಳ್ಳಬೇಕಾಗುತ್ತದೆ. ಏಕವನ್ನು ಕುರಿತು ಮಾತನಾಡುವಾಗ ಅನೇಕವಿದೆ ಎಂದು ಒಪ್ಪಿಕೊಳ್ಳಲೇಬೇಕಾಗಿದೆ. ಏಕೆಂದರೆ ಸಮಾಧಿಯಲ್ಲಿ ಅದ್ವೈತ ಸಾಕ್ಷಾತ್ಕಾರವಾಗುವವರೆಗೆ, ಹೆಚ್ಚು ಅಂದರೆ ನಿನ್ನ ಅದ್ವೈತಭಾವವು ದ್ವೈತಭಾವದ ಪರಸ್ಪರ ಸಾಂಬಂಧಿಕ ವಸ್ತು. ಇಲ್ಲದೆ ಇದ್ದರೆ ಅದು ಬರಿಯ ಬಾಯಿಮಾತು. ಅದ್ವೈತ ಹೇಗೆ ಇದೆಯೊ ಹಾಗೆ ಹೇಳುವುದಕ್ಕೆ ಆಗುವುದಿಲ್ಲ. ಹಾಗೆ ಮಾಡುವುದರಿಂದ ಅದಕ್ಕೆ ಬಾಹ್ಯವಸ್ತುವಿನ ಒಂದು ಮೆರಗನ್ನು ಅಂದರೆ ನಿನ್ನ ಸ್ವಂತ ವ್ಯಕ್ತಿತ್ವವನ್ನು ಕೊಡಬೇಕಾಗುತ್ತದೆ.

೮೫೨. ನನ್ನಲ್ಲಿ "ನಾನು" ಎಂಬ ಅಹಂಕಾರವಿರುವವರೆಗೆ, ಎದುರಿಗೆ ದೇವರು, ವಿಶ್ವದಂತೆ ಮತ್ತು ಹಲವು ಜೀವಿಗಳಂತೆ ಅನೇಕ ರೂಪಿನಿಂದ ಕಂಗೊಳಿಸುತ್ತಿರುವನು.

## ಸಗುಣವೇ ಈಶ್ವರ ಮತ್ತು ಮಾಯಾಶಕ್ತಿಯಂತೆ ತೋರುವುದು

೮೫೩. ಪರಬ್ರಹ್ಮನನ್ನು ಅಚಲ ಎಂದರೆ, ಅವನು ಸೃಷ್ಟಿ ಸ್ಥಿತಿ ಪ್ರಳಯ ಕಾರ್ಯಗಳಲ್ಲಿ ನಿರತನಾಗದೆ ಇರುವುದನ್ನು ಆಲೋಚಿಸಿದಾಗ ಅವನನ್ನು ಬ್ರಹ್ಮ ಅಥವಾ ಪುರುಷ ಎಂದು ಕರೆಯುತ್ತೇನೆ. ಆದರೆ ಅವನು ಸೃಷ್ಟಿ, ಸ್ಥಿತಿ, ಪ್ರಳಯಕಾರ್ಯಗಳಲ್ಲಿ ನಿರತನಾಗಿರುವನು ಎಂದು ಭಾವಿಸಿದಾಗ ಅವನನ್ನು ಶಕ್ತಿ, ಮಾಯೆ, ಅಥವಾ ಪ್ರಕೃತಿ ಎಂದು ಕರೆಯುತ್ತೇನೆ.

೮೫೪. ಪ್ರಪಂಚ ಪುರುಷ ಮತ್ತು ಪ್ರಕೃತಿಯಿಂದ ಬಂದಿದೆ ಎಂಬ ಸಾಂಖ್ಯ ತತ್ತ್ವವನ್ನು ಶ್ರೀ ರಾಮಕೃಷ್ಣರು ವಿವರಿಸುವಾಗ ಒಂದು ದಿನ ಹೀಗೆಂದರು : "ಸಾಂಖ್ಯತತ್ತ್ವ, ಪುರುಷ ನಿಷ್ಕ್ರಿಯನು ಪ್ರಕೃತಿ ಕಾರ್ಯಗಳನ್ನೆಲ್ಲ ಮಾಡುತ್ತಿರುವಳು ಎಂದು ಹೇಳುತ್ತದೆ. ಪುರುಷ ಈ ಎಲ್ಲಾ ಕಾರ್ಯಗಳ ಸಾಕ್ಷಿಮಾತ್ರ. ಪ್ರಕೃತಿ ಪುರುಷನಿಲ್ಲದೆ ಏನೂ

ಕೆಲಸ ಮಾಡಲಾರಳು. ಮದುವೆಯ ಕಾಲದಲ್ಲಿ ಕೆಲಸಕಾರ್ಯಗಳು ಹೇಗೆ ನಡೆಯುತ್ತವೆ ಎಂಬುದನ್ನು ನೀನು ನೋಡಿಲ್ಲವೆ? ಮನೆಯ ಯಜಮಾನನು ಒಂದು ಸ್ಥಳದಲ್ಲಿ ಕುಳಿತುಕೊಂಡು ಗುಡಿಗುಡಿಯನ್ನು ಸೇದುತ್ತ ಅಪ್ಪಣೆ ಮಾಡುತ್ತಿರುವನು. ಆದರೆ ಮನೆಯ ಯಜಮಾನಿಯಾದರೊ ಹಳದಿ ಸೀರೆಯನ್ನು ಉಟ್ಟುಕೊಂಡು ಮನೆಯಲ್ಲಿ ಅತ್ತಿಂದಿತ್ತ ತಾರಾಡುತ್ತಲೇ ಇರುವಳು. ಏರ್ಪಾಡುಗಳನ್ನು ಮೇಲ್ವಿಚಾರಣೆ ನೋಡಿಕೊಳ್ಳುವುದರಲ್ಲಿ, ಹೆಂಗಸರುಮಕ್ಕಳನ್ನು ಬರಮಾಡಿಕೊಳ್ಳುವುದರಲ್ಲಿ ನಿರತಳಾಗಿರುವಳು. ಮಧ್ಯೆ ಮಧ್ಯೆ ಯಜಮಾನನ ಹತ್ತಿರ ಹೋಗಿ ನಡೆಯುತ್ತಿರುವುದನ್ನೆಲ್ಲಾ ಕೈ ಬಾಯಿಗಳ ಸನ್ನೆ ಮತ್ತು ಮಾತುಗಳಿಂದ ಹೇಳಿ ಅವನ ಸಲಹೆಯನ್ನು ಕೇಳುವಳು. ಯಜಮಾನನು ಇವಳು ಹೇಳುವುದನ್ನೆಲ್ಲ ತಿಳಿದುಕೊಂಡು ಸುಮ್ಮನೆ ತಲೆಯಲ್ಲಾಡಿಸುವನು, ಅಥವಾ ಒಪ್ಪಿಗೆಯನ್ನು ಕೊಡುವನು. ಪ್ರಕೃತಿ ಮತ್ತು ಪುರುಷನ ಲಕ್ಷಣಗಳೂ ಹೀಗೆಯೆ.''

೮೫೫. ನಿಶ್ಚೇಷ್ಟಿತನಾದ ಬ್ರಹ್ಮ ಮತ್ತು ಸಚೇತನಳಾದ ಶಕ್ತಿ, ಎರಡೂ ನಿಜವಾಗಿ ಒಂದೆ. ಯಾರು ಅವ್ಯಕ್ತಳು ಸಚ್ಚಿದಾನಂದಸ್ವರೂಪಳು ಆಗಿರುವಳೊ ಅವಳೆ ಸರ್ವಜ್ಞಳೂ, ಜ್ಞಾನಮಯಿಯೂ, ಆನಂದಸ್ವರೂಪಳೂ ಆದ ಜಗನ್ಮಯಿ. ವಜ್ರ ಮತ್ತು ಅದರ ಪ್ರಕಾಶ ಎರಡೂ ಒಂದೆ. ಏಕೆಂದರೆ ವಜ್ರವನ್ನು ಪ್ರಕಾಶವಿಲ್ಲದೆ ಭಾವಿಸುವುದಕ್ಕೆ ಆಗುವುದಿಲ್ಲ. ಮತ್ತು ಪ್ರಕಾಶವನ್ನು ವಜ್ರವಿಲ್ಲದೆ ಭಾವಿಸುವುದಕ್ಕಾಗುವುದಿಲ್ಲ.

೮೫೬. ಸಗುಣ ಮತ್ತು ನಿರ್ಗುಣ ದೇವರು ಒಂದೆ. ಒಂದರ ನಂಬಿಕೆ ಇನ್ನೊಂದರ ನಂಬಿಕೆಗೆ ಆಧಾರವಾಗಿದೆ ಬೆಂಕಿಯನ್ನು ಅದರ ಸುಡುವ ಸ್ವಭಾವವನ್ನು ಬಿಟ್ಟು ಆಲೋಚಿಸುವುದಕ್ಕೆ ಆಗುವುದಿಲ್ಲ, ಅಥವಾ ಅದರ ಸುಡುವ ಶಕ್ತಿಯನ್ನು ಬೇರೆ ನಾವು ಗ್ರಹಿಸುವುದಕ್ಕೆ ಆಗುವುದಿಲ್ಲ. ಪುನಃ ಸೂರ್ಯನ ಕಿರಣಗಳನ್ನು ಸೂರ್ಯನನ್ನು ಬಿಟ್ಟು ಗ್ರಹಿಸುವುದಕ್ಕೆ ಆಗುವುದಿಲ್ಲ, ಅಥವಾ ಸೂರ್ಯನನ್ನು ಅದರ ಕಿರಣಗಳಿಲ್ಲದೆ ಆಲೋಚಿಸುವುದಕ್ಕೆ ಆಗುವುದಿಲ್ಲ. ಹಾಲನ್ನು ಬಿಟ್ಟು ಅದರ ಬಿಳುಪನ್ನು ಮಾತ್ರ ಆಲೋಚಿಸಲಾರಿರಿ. ಅಥವಾ ಅದರ ಬಿಳೀ ಬಣ್ಣವನ್ನು ಹಾಲನ್ನು ಬಿಟ್ಟು ಆಲೋಚಿಸಲಾರಿರಿ. ಹೀಗೆಯೇ ನಿರ್ಗುಣನಾದ ದೇವನನ್ನು ಸಗುಣ ದೇವರನ್ನು ಬಿಟ್ಟು ಆಲೋಚಿಸಲು ಅಸಾಧ್ಯ.

೮೫೭. ಬ್ರಹ್ಮ ಮತ್ತು ಶಕ್ತಿಗೆ ಇರುವ ಭಿನ್ನತೆ ನಿಜವಾಗಿಯೂ

ಯಾವ ವ್ಯತ್ಯಾಸವೂ ಇಲ್ಲದ ಭಿನ್ನತೆ. ಬೆಂಕಿ ಮತ್ತು ಅದರ ಸುಡುವ ಶಕ್ತಿ ಹೇಗೊ ಹಾಗೆಯೆ ಬ್ರಹ್ಮ ಮತ್ತು ಶಕ್ತಿ ಅಭೇದ. ಹಾಲು ಮತ್ತು ಅದರ ಬಿಳುಪು ಹೇಗೆ ಒಂದೊ ಹಾಗೆಯೆ ಬ್ರಹ್ಮ ಮತ್ತು ಶಕ್ತಿ. ವಜ್ರ ಮತ್ತು ಅದರ ಕಾಂತಿ ಹೇಗೆ ಒಂದೊ, ಹಾಗೆಯೆ ಬ್ರಹ್ಮ ಮತ್ತು ಶಕ್ತಿ. ಒಂದಿಲ್ಲದೆ ಮತ್ತೊಂದನ್ನು ನೀವು ಊಹಿಸಲಾರಿರಿ. ಅಥವಾ ಅದರಲ್ಲಿ ಭಿನ್ನತೆಯನ್ನು ಕಲ್ಪಿಸಲಾರಿರಿ.

೮೫೮. ಎಲ್ಲಿ ಸೃಷ್ಟಿ ಸ್ಥಿತಿ ಪ್ರಳಯದ ಕ್ರಿಯೆ ಇದೆಯೊ ಅಲ್ಲೆಲ್ಲಾ ಶಕ್ತಿ ಇರುವುದು. ನೀರು ನೀರೆ, ಅದು ಶಾಂತವಾಗಿರಲಿ, ಅಥವಾ ಕದಡಿಹೋಗಿರಲಿ. ಅವ್ಯಕ್ತವಾದ ಸಚ್ಚಿದಾನಂದವೆ ಸೃಷ್ಟಿ ಸ್ಥಿತಿ ಪ್ರಳಯಗಳನ್ನು ಮಾಡುತ್ತಿರುವ ಸನಾತನವಾದ ಚಿತ್‌ಶಕ್ತಿ. ಕ್ಯಾಪ್ಟನ್ (ವಿಶ್ವನಾದ ಉಪಾಧ್ಯಾಯ, ನೇಪಾಲ ಸರ್ಕಾರದ ಕಾರಭಾರಿ) ಕೆಲವು ವೇಳೆ ಕೆಲಸವಿಲ್ಲದೆ ಮನೆಯಲ್ಲಿರಲಿ, ಅಥವಾ ಕೆಲವು ವೇಳೆ ಪೂಜೆ ಮತ್ತು ಗೌರ್ನರ್ ಜನರಲ್ಲರನ್ನು ನೋಡುವುದಕ್ಕೆ ಹೋಗುವ ಕೆಲಸದಲ್ಲಿ ನಿರತನಾಗಿರಲಿ, ಒಂದೇ; ಅವನು ಅದೇ ಕ್ಯಾಪ್ಟನ್. ಇವು ಅವನ ಬೇರೆ ಬೇರೆ ಉಪಾಧಿಗಳು.

೮೫೯. ಹೇಗೆ ನಾನು ಕೆಲವುವೇಳೆ ಬಟ್ಟೆಬರೆಗಳನ್ನು ಹಾಕಿ ಕೊಂಡಿರುವೆನೊ ಮತ್ತು ಕೆಲವುವೇಳೆ ದಿಗಂಬರನಾಗಿರುವೆನೊ ಹಾಗೆಯೆ ಬ್ರಹ್ಮ, ಕೆಲವುವೇಳೆ ಗುಣಸಹಿತನಾಗಿರುವನು, ಕೆಲವುವೇಳೆ ಗುಣರಹಿತ ನಾಗಿರುವನು. ಶಕ್ತಿಯಿಂದ ಒಡಗೂಡಿದಾಗ ಅವನನ್ನು ಈಶ್ವರ ಅಥವಾ ಸಾಕಾರನೆಂದು ಕರೆಯುತ್ತಾರೆ.

೮೬೦. ನನ್ನ ಜಗನ್ಮಾಯಿ ಏಕವೂ ಮತ್ತು ಅನೇಕವೂ ಆಗಿರು ವಳು. ಮತ್ತು ಏಕ ಅನೇಕವನ್ನೂ ಮೀರಿರುವಳು ಎಂಬುದನ್ನು ತಿಳಿಯಿರಿ.

೮೬೧. ನನ್ನ ಜಗನ್ಮಾಯಿ ಅನೇಕದಂತೆ ತೋರುತ್ತಿರುವುದರ ಏಕ. ಅನಂತ ಶಕ್ತಿಯುತಳಾಗುವುದರಿಂದ ಅವಳೇ, ಹಲವು ವಿಧವಾಗಿ ತೋರುವ, ಭೌತಿಕ, ಮಾನಸಿಕ ಮತ್ತು ಆಧ್ಯಾತ್ಮಿಕ ಶಕ್ತಿಗಳಾಗಿ ಜೀವ ಮತ್ತು ಜಗತ್ತೆಂಬ ಭೇದವನ್ನು ಧರಿಸುವಳು. ನನ್ನ ಜಗನ್ಮಾಯಿ ವೇದಾಂತಿಗಳ ಬ್ರಹ್ಮವಲ್ಲದೆ ಬೇರೆಯಲ್ಲ. ಅವಳೇ ನಿರಾಕಾರ ಬ್ರಹ್ಮನ ಸಾಕಾರ ಸ್ವರೂಪ.

## ಸರ್ವರಲ್ಲಿಯೂ ದೇವರು

೮೬೨. ನಿಜವಾದ ವಿವೇಕ ಎರಡು ವಿಧವಾದುದು. ಒಂದು ವಿಭಜನಾತ್ಮಕವಾದುದು, ಮತ್ತೊಂದು ಸಂಯೋಜನಾತ್ಮಕವಾದುದು. ಮೊದಲನೆಯದು ಸೃಷ್ಟಿಯಿಂದ ಅವ್ಯಕ್ತ ಬ್ರಹ್ಮನಲ್ಲಿಗೆ ಒಯ್ಯುವುದು. ಎರಡನೆಯುದರಿಂದ ಹೇಗೆ ಅವ್ಯಕ್ತಬ್ರಹ್ಮ ವಿಶ್ವದಂತೆ ತೋರುತ್ತಿರುವನು ಎಂದು ತಿಳಿಯುವುದು.

೮೬೩. ಅವ್ಯಕ್ತವನ್ನು ಸಮಾಧಿಯಲ್ಲಿ ಅನುಭವಿಸಿದವರು ಕೂಡ ಇಂದ್ರಿಯ ಜ್ಞಾನದ ಕಡೆಗೆ ಕೆಳಗೆ ಇಳಿದು ಬಂದು ಸಾಕಾರ ದೇವರೊಂದಿಗೆ ಸಂಬಂಧವನ್ನು ಕಲ್ಪಿಸಿಕೊಳ್ಳುವಷ್ಟು ಅಹಂಕಾರವನ್ನು ಇಟ್ಟುಕೊಂಡಿರುತ್ತಾರೆ. ಯಾವಾಗಲೂ ಸ್ವರದಲ್ಲಿ ಬಹಳ ಮೇಲಿರುವ ಸಪ್ತಮಶೃತಿಗೆ ಏರುವುದು ಬಹಳ ಕಷ್ಟ. ಆದಕಾರಣವೇ ಸಗುಣ ದೇವರಲ್ಲಿಡುವ ಭಕ್ತಿಯ ಆವಶ್ಯಕತೆ.

೮೬೪. ಸಮಾಧಿಯಿಂದ ಯಾರು ಇಂದ್ರಿಯ ಜ್ಞಾನಕ್ಕೆ ಬರುತ್ತಾರೆಯೊ ಅವರಲ್ಲಿ ಮಾತ್ರ, ಗಾತ್ರವಿಲ್ಲದ ಸರಳರೇಖೆಯಂತೆ, ಸ್ವಲ್ಪ ಅಹಂಕಾರ ಉಳಿದಿರುತ್ತದೆ. ದಿವ್ಯಭಾವವನ್ನು ಇಟ್ಟುಕೊಳ್ಳುವುದಕ್ಕೆ ಮಾತ್ರ ಸಾಕಾದಷ್ಟು ಅಹಂಕಾರವಿರುವುದು. ಇದರಿಂದ ಅವನು ಜೀವ ಜಗತ್ತು ಮತ್ತು ತನ್ಮಾತ್ರ ಇವುಗಳೆಲ್ಲ ಒಂದೇ ಆಗಿ ಹೇಗೆ ಪುನಃ ಹಲವು ರೂಪಗಳಾಗಿವೆ ಎಂಬುದನ್ನು ನೋಡಲು ಸಹಾಯವಾಗುವುದು. ಇದು ಜಡ ಅಥವಾ ನಿರ್ವಿಕಲ್ಪ ಸಮಾಧಿಯಲ್ಲಿ ನಿರಾಕಾರ ನಿರ್ಗುಣ ಬ್ರಹ್ಮನನ್ನು ಅನುಭವಿಸಿದ ವಿಜ್ಞಾನಿಯೂ, ಮತ್ತು ಚೇತನ ಅಥವಾ ಸವಿಕಲ್ಪ ಸಮಾಧಿಯಲ್ಲಿ ಸಾಕಾರ ಸಗುಣ ಬ್ರಹ್ಮನನ್ನು ಕಂಡವನಿಗೂ ಬರುವುದು. ಎಲ್ಲಿಯುವರೆವಿಗೂ, ನೀನು ಅಹಂಕಾರದಿಂದ ಕೂಡಿದ ವ್ಯಕ್ತಿಯಾಗಿರುವೆಯೊ ಅಲ್ಲಿಯವರೆವಿಗೂ ದೇವರನ್ನು ವ್ಯಕ್ತಿಯ ರೂಪದಲ್ಲಿ ಅಲ್ಲದೆ ಬೇರೆ ವಿಧದಿಂದ ಭಾವಿಸಲಾರೆ, ಆಲೋಚಿಸಲಾರೆ, ಗ್ರಹಿಸಲಾರೆ, ಅವ್ಯಕ್ತ, ನಿನಗೆ ಒಳಗೆ ಮತ್ತು ಹೊರಗೆ, ವ್ಯಕ್ತ ಅಥವಾ ಸಾಕಾರದಂತೆ ಕಾಣಿಸಿಕೊಳ್ಳದೆ ಇರಲಾರದು. ದೇವರ ಇಂತಹ ಸಾಕಾರ ಆವಿರ್ಭಾವಗಳು ದೇಹ ಮನಸ್ಸು ಮತ್ತು ಬಾಹ್ಯ ಜಗತ್ತಿಗಿಂತ ಏನೂ ಕಡಿಮೆ ಸತ್ಯವಲ್ಲ. ಆದರೆ ಇವುಗಳೆಲ್ಲಕ್ಕಿಂತ ಅದು ಎಷ್ಟೋ ಪಾಲು ಹೆಚ್ಚು ಸತ್ಯ.

೮೬೫. ಒಂದು ಸಂಕೋಚನ ಮತ್ತೊಂದು ವಿಕಸನದ ವಿಷಯ. ಒಂದರಲ್ಲಿ ನೀನು ಪರಮಾತ್ಮನೆಡೆಗೆ ಹಿಂತಿರುಗಿ ನಿನ್ನ ವ್ಯಕ್ತಿತ್ವ ಅವನಲ್ಲಿ ಐಕ್ಯವಾಗುವುದು. ಅದೇ ಸಮಾಧಿ. ನಂತರ ದಿವ್ಯ ವ್ಯಕ್ತಿತ್ವದಿಂದ ಹಿಂತಿರುಗಿ ಹೊರಟ ಸ್ಥಳಕ್ಕೆ ಬರುವೆ. ಆಗ ಅಹಂಕಾರ ಮತ್ತು ವಿಶ್ವ ಎಲ್ಲವೂ ಒಂದೇ ಪರಮಾತ್ಮನಿಂದ ಬಂದಿರುವುದೆಂದು, ದೇವರು ಜೀವ ಜಗತ್ತು ಎಲ್ಲಾ ತದಾತ್ಮ್ಯವೆಂದೂ, ಒಂದನ್ನು ನೀನು ನಂಬಿದರೆ ಉಳಿದವುಗಳನ್ನು ನೀನು ತಿಳಿಯುವೆ ಎಂದೂ ಗೊತ್ತಾಗುವುದು.

೮೬೬. ಈ ಲೀಲೆ ಯಾರದೊ (ಈ ವಿಕಾರಗಳಿಂದ ಕೂಡಿದ ಜಗತ್ತನ್ನು ದೇವರ ಲೀಲೆ ಎನ್ನಬಹುದು) ಅವನದೆ ನಿತ್ಯವೂ ಕೂಡ. ಯಾರು ನಿತ್ಯಾವಸ್ಥೆಯಲ್ಲಿ ಇರುವನೊ, ಅವನದೆ, ಈ ಲೀಲೆಯೂ ಕೂಡ ನೀನು ಈ ಲೀಲೆಯ ಮೂಲಕ ನಿತ್ಯಕ್ಕೆ ಹೋಗಬೇಕಾಗಿದೆ. ಪುನಃ ನಿತ್ಯದಿಂದ ಲೀಲೆಗೆ ದಾರಿಯನ್ನು ಹುಡುಕಬೇಕಾಗಿದೆ. ಈಗ ಅದು ಮಿಥ್ಯವಲ್ಲ. ಇಂದ್ರಿಯ ಗ್ರಹಣದ ಕ್ಷೇತ್ರದಲ್ಲಿ ಇರುವುದು ನಿತ್ಯದ ಆವಿರ್ಭಾವ.

೮೬೭. ಹೇಗೆ ಹಣ್ಣಿನ ಚಿಪ್ಪು, ಬೀಜ, ತಿರುಳು ಎಲ್ಲವೂ ಆ ಮರದ ಮೂಲ ಬೀಜದಿಂದ ಬಂದಿದೆಯೊ ಹಾಗೆಯೆ, ಒಬ್ಬ ದೇವರಿಂದ ಚರಾಚರಾತ್ಮಕವಾದುದೆಲ್ಲ, ಆಧ್ಯಾತ್ಮಿಕ ಮತ್ತು ಪಾಂಚ ಭೌತಿಕವಾದುದೆಲ್ಲ ಬಂದಿವೆ.

೮೬೮. "ನಾನು ಪ್ರತಿಯೊಂದನ್ನೂ ಒಪ್ಪಿಕೊಳ್ಳುತ್ತೇನೆ. ತುರೀಯ, ಜಾಗ್ರತ್, ಸ್ವಪ್ನ, ಸುಷುಪ್ತಿ, ಬ್ರಹ್ಮ, ಜೀವ, ಜಗತ್, ಎಲ್ಲವನ್ನೂ ಒಪ್ಪಿಕೊಳ್ಳುತ್ತೇನೆ. ಇಲ್ಲದಿದ್ದರೆ ಒಟ್ಟು ತೂಕ ಕಡಿಮೆಯಾಗುವುದು" ಎಂದು ಶ್ರೀ ರಾಮಕೃಷ್ಣರು ಹೇಳುತ್ತಿದ್ದರು.

೮೬೯. ದೇವರೊಬ್ಬನೆ ಇದ್ದರೆ ಪ್ರತ್ಯೇಕ ಅಹಂಕಾರಗಳಿಂದ ಉನ್ಮತ್ತವಾದ ಈ ತಾರತಮ್ಯ ಮತ್ತು ಭಿನ್ನತೆಗಳು ಏತಕ್ಕೆ? ಈ ವಿಚಾರವನ್ನು ಕುರಿತು ಶ್ರೀರಾಮಕೃಷ್ಣರು ಹೀಗೆಂದರು: "ಇದು ಅವನ ಲೀಲೆ. ಒಬ್ಬ ದೊರೆಗೆ ನಾಲ್ಕುಜನ ಮಕ್ಕಳಿದ್ದಾರೆ. ಅವರೆಲ್ಲರೂ ರಾಜಕುಮಾರರು. ಆದರೆ ಅವರು ಆಡುವಾಗ ಒಬ್ಬನು ಮಂತ್ರಿಯಾಗುತ್ತಾನೆ. ಮತ್ತೊಬ್ಬನು ಪೋಲೀಸಿನವನಾಗುತ್ತಾನೆ, ಇತ್ಯಾದಿ. ರಾಜಕುಮಾರನಾದರೂ ಪೋಲೀಸಿನವನಂತೆ ಆಟವಾಡುತ್ತಾನೆ.

## ದೇವರು ಸಾಕಾರ ಮತ್ತು ನಿರಾಕಾರನಾಗಿರುವನು

೮೭೦. ಒಬ್ಬನು ಶ್ರೀರಾಮಕೃಷ್ಣದೇವರನ್ನು "ಸ್ವಾಮಿ, ದೇವರು ಸಾಕಾರವೆ ಅಥವಾ ನಿರಾಕಾರವೆ? ಯಾವುದು ಉತ್ತಮ?" ಎಂದು ಕೇಳಿದನು. ಶ್ರೀರಾಮಕೃಷ್ಣರು ಹೀಗೆ ಹೇಳಿದರು: "ನಿರಾಕಾರದಲ್ಲಿ ಎರಡುವಿಧ ಒಂದು ಪಕ್ವವಾದುದು, ಇನ್ನೊಂದು ಪಕ್ವವಾಗದೆ ಇರುವುದು. ಪಕ್ವವಾಗಿರುವುದೇನೊ ನಿಜವಾಗಿಯೂ ಉತ್ತಮವಾದುದು. ಅದನ್ನು ಸಾಕಾರದ ಮೂಲಕ ಸೇರಬೇಕಾಗಿದೆ. ಬ್ರಹ್ಮಸಮಾಜದವರು ನಂಬುವ ಅಪಕ್ವ ನಿರಾಕಾರವಾದರೊ ಕಣ್ಣನ್ನು ಮುಚ್ಚಿಕೊಂಡಾಗ ಕಾಣುವ ಕತ್ತಲೆಯಂತೆ.

೮೭೧. ದೇವರು ನಿರಾಕಾರ ಮತ್ತು ಸಾಕಾರನೂ ಹೌದು. ಅವನು ಸಾಕಾರ ನಿರಾಕಾರಗಳನ್ನು ಮೀರಿಯೂ ಇರುವನು. ಅವನು ಇನ್ನೇನೇನು ಆಗಿರುವನೊ ಅವನೊಬ್ಬನಿಗೆ ಗೊತ್ತು.

೮೭೨. ದೇವರ ಸಾಕಾರ ಸ್ವಭಾವ ಹೇಗೆ ಎಂಬುದು ನಿನಗೆ ಗೊತ್ತೆ? ನೀರನಿಂದೇಳುವ ಗುಳ್ಳೆಗಳಂತೆ. ಚಿದಾಕಾಶದಿಂದ ಹಲವು ಆಕಾರಗಳು ಏಳುತ್ತಿರುವುದನ್ನು ನೋಡಬಹುದು. ದೇವರ ಅವತಾರವಾದರೊ ಇಂತಹ ಒಂದು ರೂಪು.

೮೭೩. ಒಬ್ಬನು ದೇವರನ್ನು ನೋಡುವ ತನಕ ಇವನ್ನೆಲ್ಲ ತಿಳಿದುಕೊಳ್ಳುವುದಕ್ಕೆ ಆಗುವುದಿಲ್ಲ. ಯಾರು ದೇವರನ್ನು ಪ್ರೀತಿಸುವರೊ ಅವರ ಸಲುವಾಗಿ ಅವನು ಹಲವುಬಗೆಯಲ್ಲಿ ಹಲವು ಆಕಾರಗಳನ್ನು ತಾಳುವನು.

ಒಬ್ಬನು ಬಟ್ಟೆಗಳಿಗೆ ತನ್ನದೇ ಒಂದು ರೀತಿಯಲ್ಲಿ ಬಣ್ಣ ಹಾಕುತ್ತಿದ್ದನು. ಅವನು ಗಿರಾಕಿಗಳಿಗೆ ನಿನ್ನ ಬಟ್ಟೆಗೆ ಯಾವ ಬಣ್ಣದಿಂದ ಬಣ್ಣ ಹಾಕಬೇಕು, ಎಂದು ಕೇಳುತ್ತಿದ್ದನು. ಗಿರಾಕಿ ಕೆಂಪು ಎಂದರೆ, ಬಣ್ಣ ಹಾಕುವವನು ತನ್ನ ಪಾತ್ರೆಯಲ್ಲಿ ಅದ್ದಿ "ನೋಡು! ನಿನ್ನ ಬಟ್ಟೆಗೆ ಕೆಂಪು ಬಣ್ಣ ಹಾಕಿದೆ" ಎಂದು ಹೇಳಿ ಹೊರಗೆ ತರುತ್ತಿದ್ದನು. ಮತ್ತೊಬ್ಬನ ಬಟ್ಟೆಗೆ ಹಳದಿ ಬಣ್ಣ ಬೇಕಾಗಿತ್ತು. ಬಣ್ಣಗಾರನು ಅದೇ ಪಾತ್ರೆಯಲ್ಲಿ ಅದ್ದಿ ಅದನ್ನು ಹೊರಗೆ ತೆಗೆದಾಗ ಅದಕ್ಕೆ ಹಳದಿ ಬಣ್ಣ ಬಂದಿತ್ತು. ಇದೇ ರೀತಿಯಲ್ಲಿ ನೀಲಿ ಮುಂತಾದ ಬಣ್ಣಗಳಿಗೆ ಅದೇ ಪಾತ್ರೆಯನ್ನು ಉಪಯೋಗಿಸಿ ಅವರಿಗೆ ಬೇಕಾದ ಬಣ್ಣಗಳನ್ನು ಕೊಡುತ್ತಿದ್ದನು.

ಇದನ್ನೆಲ್ಲ ನೋಡುತ್ತಿದ್ದ ಗಿರಾಕಿಯೊಬ್ಬನು ಅವನ ಹತ್ತಿರ ಬಂದು, "ಸ್ನೇಹಿತನೆ ನನಗೆ ಯಾವ ಒಂದು ಬಣ್ಣವೂ ಇಚ್ಛೆಯಿಲ್ಲ. ನಿನ್ನ ಇಚ್ಛೆಯಂತೆ ನನ್ನ ಬಟ್ಟೆಗೆ ಬಣ್ಣ ಹಾಕಬೇಕು. ನೀನು ಯಾವ ಬಣ್ಣವನ್ನು ಹಾಕಿರುವೆಯೊ, ನನಗೆ ಅದೇ ಬೇಕು" ಎಂದನು. ಭಕ್ತನ ಇಷ್ಟದಂತೆ ದೇವರು ಸಾಕಾರನಾಗಿ ಅಥವಾ ನಿರಾಕಾರನಾಗಿ ತೋರುವನು. ಆವಿರ್ಭೂತವಾದ ದರ್ಶನ ಪರಸ್ಪರ ದೃಷ್ಟಿಯಿಂದ ಸತ್ಯ, ಅಂದರೆ ಬೇರೆ ಬೇರೆ ಮನುಷ್ಯರಿಗೆ ಬೇರೆ ಸ್ಥಳಗಳಲ್ಲಿ ಅವರಿರುವ ವಾತಾವರಣಕ್ಕೆ ತಕ್ಕಂತೆ ಸತ್ಯ. ಪರಮಾತ್ಮನೆಂಬ ಬಣ್ಣಗಾರನಿಗೆ ಗೊತ್ತು ತನಗೆ ಯಾವ ಬಣ್ಣ ನಿಜವಾಗಿ ಇದೆಯೆಂದು. ಅವನು ವ್ಯಕ್ತವಾಗಿರುವ ಯಾವ ಆಕಾರಗಳಿಂದಲೂ ಅಥವಾ ಅವುಗಳ ನಿಷೇಧಗಳಿಂದಲೂ ಬಂಧಿತನಾಗಿಲ್ಲ.

೮೭೪. ಸನ್ಯಾಸಿಯೊಬ್ಬನು ಪೂರಿಯ ಜಗನ್ನಾಥ ದೇವಾಲಯಕ್ಕೆ ಹೋದನು ದೇವರು ಸಾಕಾರನೊ ಅಥವಾ ನಿರಾಕಾರನೊ ಎನ್ನುವುದರಲ್ಲಿ ಅವನಿಗೆ ಸಂದೇಹವಿತ್ತು. ಆ ಪವಿತ್ರ ವಿಗ್ರಹವನ್ನು ನೋಡಿದಾಗ ಅದನ್ನು ಪರೀಕ್ಷಿಸಿ ತನ್ನ ಸಂದೇಹವನ್ನು ದೂರಮಾಡಿಕೊಳ್ಳಲು ಆಶಿಸಿದನು. ಅವನು ತನ್ನ ದಂಡವನ್ನು ಎಡಗಡೆಯಿಂದ ಬಲಗಡೆಗೆ, ಅದು ವಿಗ್ರಹವನ್ನು ಮುಟ್ಟುವುದೆ ಇಲ್ಲವೆ ಎಂದು ನೋಡಲು ಚಲಿಸಿದನು. ಸ್ವಲ್ಪ ಹೊತ್ತು ಅವನಿಗೆ ಏನೂ ಕಾಣಿಸಲಿಲ್ಲ ಅಥವಾ ದಂಡಕ್ಕೆ ಏನೂ ತಾಕಲಿಲ್ಲ. ಆದುದರಿಂದ ದೇವರು ನಿರಾಕಾರ ಎಂದು ನಿರ್ಧರಿಸಿದನು. ಬಲಗಡೆಯಿಂದ ಎಡಗಡೆಗೆ ದಂಡವನ್ನು ಚಲಿಸುವಾಗ ಅದು ವಿಗ್ರಹವನ್ನು ತಾಕಿತು. ಆದಕಾರಣ ದೇವರು ಸಾಕಾರನೂ ಹೌದು ಮತ್ತು ನಿರಾಕಾರನೂ ಹೌದು ಎಂದ ನಿರ್ಧರಿಸಿದನು.

೮೭೫. ಗಂಟೆಯನ್ನು ಬಾರಿಸಿದಾಗ ಒಂದು ಶಬ್ದವನ್ನು ಮತ್ತೊಂದು ಶಬ್ದದಿಂದ ಅವುಗಳಿಗೆ ಒಂದು ಆಕಾರವಿರುವುದೇನೊ ಎನ್ನುವಂತೆ ಪ್ರತ್ಯೇಕವಮಾಡಬಹುದು. ಆದರೆ ಬಾರಿಸುವುದನ್ನು ನಿಲ್ಲಿಸಿದಾಗ, ಕೆಲವುಕಾಲ ಕೇಳಿಸಿ ಮಾಯವಾಗುವ ಅವ್ಯಕ್ತವಾದ ಧ್ವನಿ ನಿರಾಕಾರದಂತೆ ಕಾಣಿಸುತ್ತದೆ. ಗಂಟೆಯ ಶಬ್ದದಂತೆ ದೇವರು ಸಾಕಾರನೂ ಹೌದು ನಿರಾಕಾರನೂ ಹೌದು.

೮೭೬. ಸಾಕಾರನಾದ ದೇವರು ದೃಶ್ಯಕ್ಕೆ ಗೋಚರನು. ನಮ್ಮ

ಪ್ರೀತಿಪಾತ್ರನಾದ ಸ್ನೇಹಿತನೊಂದಿಗೆ ಪ್ರತ್ಯಕ್ಷವಾಗಿ ಮಾತನಾಡುವಂತೆ ಮಾತನಾಡಬಹುದು, ಮುಟ್ಟಬಹುದು.

೮೭೭. ಅವನನ್ನು ನಿರಾಕಾರನೆಂದು ಭಾವಿಸುವುದೂ ಸರಿ. ಆದರೆ ಅದೊಂದೆ ಸತ್ಯ, ಉಳಿದವುಗಳೆಲ್ಲ ಮಿಥ್ಯ ಎಂದು ತಿಳಿಯಬೇಡಿ. ಜೋಪಾನವಾಗಿರಿ! ಅವನನ್ನು ಸಾಕಾರನೆಂದು ಧ್ಯಾನಿಸುವುದು ಅದರಷ್ಟೆ ಸತ್ಯ. ಆದರೆ ನೀವು ದೇವರನ್ನು ನೋಡುವತನಕ ನಿಮ್ಮ ಸಾಕಾರ ಇಷ್ಟದೇವತೆಯನ್ನು ಬಿಡಬೇಡಿ. ನಂತರ ಎಲ್ಲವೂ ವಿಶದವಾಗುವುದು.

೮೭೮. ದೇವರು ಅವ್ಯಕ್ತನಾದ ಸನಾತನವಾದ ಬ್ರಹ್ಮ ಮತ್ತು ಸೃಷ್ಟಿಯ ತಂದೆಯೂ ಆಗಿರುವನು. ಆದರೆ ಸಚ್ಚಿದಾನಂದಸ್ವರೂಪನಾದಂತಹ ಅವ್ಯಕ್ತನಾದ ಬ್ರಹ್ಮನನ್ನು ಅಮಿತವಾದ ಕರ್ಮಗಳಿಲ್ಲದ ಅನಂತ ಆಕಾಶದಂತೆ ಭಾವಿಸಲು ಅಸಾಧ್ಯ. ಅದರಲ್ಲಿ ನಾವು ವೃಥಾ ಶ್ರಮಿಸಿ ಮುಳುಗುವೆವು. ಲೀಲೆಯಲ್ಲಿ ಮಗ್ನನಾಗಿರುವ ಸಾಕಾರದೇವರನ್ನು ಕಂಡಾಗ, ಮುಳುಗುವ ಮನುಷ್ಯನನ್ನು ಕರೆಗೆ ಜೋಪಾನವಾಗಿ ಕರೆದೊಯ್ದಂತೆ ನಮಗೆ ಸುಲಭವಾಗಿ ಶಾಂತಿ ದೊರಕುವುದು.

೮೭೯. ಭಕ್ತಿಯ ಒಂದು ಹಂತದಲ್ಲಿ ಭಕ್ತನಿಗೆ ಸಾಕಾರದ ದೇವರಲ್ಲಿ ತೃಪ್ತಿ, ಮತ್ತೊಂದು ಹಂತದಲ್ಲಿ ನಿರಾಕಾರ ದೇವರಲ್ಲಿ ತೃಪ್ತಿ,

೮೮೦. ಭಕ್ತನಿಗೆ ದೇವರು ಹಲವು ಆಕಾರಗಳಲ್ಲಿ ಕಾಣಿಸಿಕೊಳ್ಳುವನು. ಆದರೆ ಸಮಾಧಿಯಲ್ಲಿ, ಬ್ರಹ್ಮಜ್ಞಾನದ ಶಿಖರವನ್ನು ಮುಟ್ಟಿದವನಿಗೆ ಅವನು ಪುನಃ ನಿರ್ಗುಣನಾದ ನಿರಾಕಾರನಾದ ಅವ್ಯಕ್ತ ಬ್ರಹ್ಮ. ಜ್ಞಾನ ಮತ್ತು ಭಕ್ತಿಗಳ ಸಂಧಿ ಇಲ್ಲಿದೆ.

೮೮೧. ಶೈತ್ಯಾಧಿಕ್ಯದಿಂದ ನೀರು ಹಿಮವಾಗುವಂತೆ ಭಗವಂತನ ಆಕಾರ ಸರ್ವಾಂತರ್ಯಾಮಿಯಾದ ನಿರಾಕಾರನಾದ ಪರಬ್ರಹ್ಮನ ಸಾಕಾರ ಸ್ವರೂಪ. ಇದನ್ನು ಘನೀಭೂತವಾದ ಸಚ್ಚಿದಾನಂದವೆಂದು ಕರೆಯಬಹುದು. ಹೇಗೆ ನೀರಿನ ಒಂದು ಭಾಗವಾದ ಹಿಮವು ನೀರಿನಲ್ಲಿದ್ದು ನಂತರ ಅದರಲ್ಲಿಯೆ ಕರಗಿಹೋಗುವುದೊ ಹಾಗೆಯೆ, ಅವ್ಯಕ್ತದ ಒಂದು ಅಂಶವಾದ ಸಾಕಾರ ಅವ್ಯಕ್ತದಿಂದ ಬಂದು ಅದರಲ್ಲಿಯೆ ಇದ್ದು ಕೊನೆಗೆ ಅದರಲ್ಲಿ ಕರಗಿಹೋಗುವುದು.

೮೮೨. ಬೆಂಕಿಗೆ ಯಾವ ಆಕಾರವೂ ಇಲ್ಲ. ಆದರೆ ಉರಿಯುತ್ತಿರುವಾಗ ಹಲವು ರೂಪಗಳನ್ನು ಧರಿಸುವುದು. ನಿರಾಕಾರವಾದ

ಬೆಂಕಿಗೆ ಒಂದು ಆಕಾರ ಬಂದಂತೆ ಆಗುವುದು. ಇದರಂತೆಯೆ ನಿರಾಕಾರನಾದ ದೇವರು ಕೂಡ ಕೆಲವು ವೇಳೆ ಸಾಕಾರವನ್ನು ಧರಿಸುವನು.

## ಭಗವಂತನ ಕೆಲವು ರೂಪುಗಳು

೮೮೩. ದೇವರು ಹಲವುರೂಪಗಳಲ್ಲಿ ಕಾಣಿಸಿಕೊಳ್ಳುವನು. ಕೆಲವು ವೇಳೆ ಮಾನವರೂಪಿನಲ್ಲಿ, ಕೆಲವುವೇಳೆ ಚಿನ್ಮಯರೂಪಿನಲ್ಲಿ ಕಾಣಿಸಿಕೊಳ್ಳುವನು. ಆದರೆ ಒಬ್ಬರಿಗೆ ಸಾಕಾರದಲ್ಲಿ ಶ್ರದ್ಧೆ ಇರಬೇಕು.

೮೮೪. ಸಚ್ಚಿದಾನಂದ ಹೀಗೆ ಎಂದು ಯಾರೂ ಹೇಳಲಾರರು. ಆದಕಾರಣವೆ ದೇವರು ಮೊದಲು ಅರ್ಧನಾರೀಶ್ವರ ರೂಪವನ್ನು ಧರಿಸಿದನು. ಅವನು ಏತಕ್ಕೆ ಹೀಗಾದನು ನಿನಗೆ ಗೊತ್ತೆ? ಪ್ರಕೃತಿ ಮತ್ತು ಪುರುಷ ಎರಡೂ ತಾನೆ ಎನ್ನುವುದನ್ನು ತೋರಿಸುವುದಕ್ಕೆ. ಅದಕ್ಕಿಂತ ಕೆಳಗೆ ಸಚ್ಚಿದಾನಂದ ಹಲವು ಪುರುಷ ಮತ್ತು ಪ್ರಕೃತಿಗಳಾದವು.

೮೮೫. ದೂರಕ್ಕೆ ಸಾಗರದ ನೀರು ನೀಲಿಯಂತೆ ಕಾಣುತ್ತದೆ. ಆದರೆ ಕೈಯಲ್ಲಿ ಸ್ವಲ್ಪ ತೆಗೆದುಕೊಂಡರೆ ಅದು ಶುದ್ಧವಾಗಿ ತಿಳಿಯಾಗಿರುವುದು. ಇದರಂತೆಯೆ ಭಗವಾನ್ ಶ್ರೀಕೃಷ್ಣನೂ ಕೂಡ ದೂರಕ್ಕೆ ಶ್ಯಾಮಲವರ್ಣದಂತೆ ಇರುವನು. ಆದರೆ ಅವನು ನಿಜವಾಗಿ ಹಾಗಿಲ್ಲ. ಅವನು ಅವ್ಯಕ್ತ ನಿರ್ಮಲ ಮತ್ತು ನಿರ್ಗುಣ.

೮೮೬. ಶ್ರೀಕೃಷ್ಣನನ್ನು ತ್ರಿಭಂಗಿ ಎನ್ನುತ್ತಾರೆ. ಮೃದುವಾದುದನ್ನುಮಾತ್ರ ಬಗ್ಗಿಸಲು ಸಾಧ್ಯ. ಆದಕಾರಣ ಶ್ರೀಕೃಷ್ಣನ ಆಕಾರ ಯಾವುದರಿಂದಲೊ ಮೃದುವಾಗಿದೆಯೆಂದು ಊಹಿಸಬೇಕಾಗಿದೆ. ಈರೀತಿ ಇಲ್ಲಿ ಮೃದುವಾಗಿರುವುದಕ್ಕೆ ಕಾರಣ ಪ್ರೇಮ.

೮೮೭ ಭಕ್ತರು :—"ಜಗನ್ಮಯಿಯನ್ನು ಯೋಗಮಾಯಾ ಎಂದು ಏತಕ್ಕೆ ಕರೆಯುತ್ತಾರೆ?" ಶ್ರೀ ರಾಮಕೃಷ್ಣರು :—"ಯೋಗಮಾಯಾ ಎಂದರೆ ಪ್ರಕೃತಿ ಮತ್ತು ಪುರುಷರ ಐಕ್ಯ. ನೀನು ನೋಡುವುದೆಲ್ಲ ಇಂತಹ ಐಕ್ಯವಲ್ಲದೆ ಬೇರೆ ಅಲ್ಲ. ಶಿವನ ಮೇಲೆ ನಿಂತಿರುವ ಶಿವಕಾಳಿ ವಿಗ್ರಹವನ್ನು ನೋಡಿಲ್ಲವೆ? ಶಿವನು ಒಂದು ಹೆಣದಂತೆ ಬಿದ್ದಿರುವನು. ಕಾಳಿಯು ಆ ಶಿವನನ್ನು ದೃಷ್ಟಿಸುತ್ತಾ ನಿಂತಿರುವಳು. ಇವುಗಳೆಲ್ಲ ಪುರುಷ ಮತ್ತು ಪ್ರಕೃತಿಯರ ಸಂಬಂಧವೆ. ಪುರುಷನು ನಿಶ್ಚೇಷ್ಟಿತನು. ಆದಕಾರಣವೆ ಶಿವನು ಒಂದು ಹೆಣದಂತೆ ನೆಲದ ಮೇಲೆ ಬಿದ್ದಿರುವನು.

ಆದರೆ ಅವನೊಂದಿಗೆ ಸಂಬಂಧವಿರುವ ಕಾರಣ ಪ್ರಕೃತಿಯು ಎಲ್ಲವನ್ನೂ ಅಂದರೆ ಸೃಷ್ಟಿ, ಸ್ಥಿತಿ, ಪ್ರಳಯಗಳನ್ನು ಮಾಡುತ್ತಿರುವಳು. ರಾಧಾ ಕೃಷ್ಣರ ಆಲಿಂಗನದ ವಿಗ್ರಹಕ್ಕೆ ಕಾರಣವೂ ಇದೆ ''

೮೮೮. ದೇವರ ಹತ್ತಿರ ಮುಂದುವರಿದು ಹೋದಂತೆಲ್ಲ ಅವನ ಗುಣ ವೈಭವ ಕಡಿಮೆಯಾಗುತ್ತ ಬರುವುದು ಕಾಣುವುದು. ಸಾಧಕನಿಗೆ ಮೊದಲು ಕಾಣುವುದು, ವಿಶ್ವಕ್ಕೇ ಶ್ರೇಷ್ಠತಮ ಸರ್ವಾಧಿಕಾರಿಣಿಯಾದ ದಶಬಾಹುಗಳಿಂದ ಕೂಡಿದ ದುರ್ಗೆಯ ರೂಪು. ಆ ಆಕಾರದಲ್ಲಿ ಮಹಾ ಶಕ್ತಿ ಮತ್ತು ಭವ್ಯತೆಯ ಪ್ರದರ್ಶನವಿದೆ. ನಂತರ ಅವಳು ಎರಡು ಕೈಗಳಿಂದ ಕಾಣುತ್ತಾಳೆ. ಅನೇಕ ಶಸ್ತ್ರಾಸ್ತ್ರಗಳಿಂದ ಕೂಡಿದ ಹತ್ತು ಕೈಗಳು ಇನ್ನು ಮೇಲೆ ಇರುವುದಿಲ್ಲ. ನಂತರ ಗೋಪಾಲನ ದೃಶ್ಯ ಕಾಣು ವುದು. ಇಲ್ಲಿ ಸ್ವಲ್ಪವಾದರೂ, ಶಕ್ತಿ ಮತ್ತು ಭವ್ಯತೆಯ ಪ್ರದರ್ಶನವಿಲ್ಲ. ಇದೊಂದು ಸುಕೋಮಲಕಾಯನಾದ ಮಗು ಮಾತ್ರ. ಇದಕ್ಕಿಂತಲೂ ಶ್ರೇಷ್ಠತರವಾದ ಒಂದು ದೃಶ್ಯವಿದೆ : ಪ್ರಕಾಶಮಾನವಾದ ಜ್ಯೋತಿಯ ದರ್ಶನ.

## ಅಂತರ್ಯಾಮಿ ಭಗವಂತ

೮೮೯. ದೇವರು ಎಲ್ಲದರಲ್ಲಿಯೂ ಇರುವನು. ಆದರೆ ಎಲ್ಲರೂ ದೇವರಲ್ಲಿ ಇಲ್ಲ. ಅದಕ್ಕೇ ಅವರು ಕಷ್ಟವನ್ನು ಅನುಭವಿಸುವುದು.

೮೯೦. ಎಲ್ಲ ವಸ್ತುಗಳೂ ನಾರಾಯಣ. ಮನುಷ್ಯನು ನಾರಾ ಯಣ, ಮೃಗವೂ ನಾರಾಯಣ, ಋಷಿ ನಾರಾಯಣ, ಕಪಟಿಯೂ ನಾರಾಯಣ, ಇರುವುದೆಲ್ಲ ನಾರಾಯಣನೆ. ನಾರಾಯಣ ಹಲವು ರೂಪಿನಲ್ಲಿ ಆಟವಾಡುವನು. ಇರುವುದೆಲ್ಲವೂ ಅವನ ಅನಂತರೂಪುಗಳು ಅವನ ಮಹಿಮೆಯ ಅನಂತ ದೃಶ್ಯಗಳು.

೮೯೧. '' ಕಚ್ಚುವ ಹಾವೂ ನಾನೆ, ಗುಣಮಾಡುವ ಮಂತ್ರ ವಾದಿಯೂ ನಾನೆ. ಶಿಕ್ಷೆಯನ್ನು ವಿಧಿಸುವ ನ್ಯಾಯಾಧಿಪತಿಯೂ ನಾನೆ, ಶಿಕ್ಷೆಯನ್ನು ಕೊಡುವ ದೂತನೂ ನಾನೆ '' ಎಂದು ದೇವರು ಹೇಳುವನು.

೮೯೨. ಆದಿಶಕ್ತಿ ಹಲವು ಕಡೆ ಹಲವು ರೀತಿಯಲ್ಲಿ ವ್ಯಕ್ತವಾಗು ತ್ತಿದೆ. ಜೀವನದ ನಿಯಮ ವೈವಿಧ್ಯತೆ ; ಒಂದೇ ಸಮನಾಗಿರುವುದಲ್ಲ. ಎಲ್ಲಾ ಪ್ರಾಣಿಗಳಲ್ಲಿಯೂ, ಭಗವಂತನು ಅಂತರ್ಯಾಮಿಯಾಗಿರು

ವನು. ಅವನು ಒಂದು ಇರುವೆಯಲ್ಲಿಯೂ ಇರುವನು. ವ್ಯತ್ಯಾಸವಿರುವುದು, ಅವುಗಳ ಆವಿರ್ಭಾವದಲ್ಲಿ.

೮೯೩. ಯಾರು ಗೌರವಕ್ಕೆ ಪಾತ್ರರೊ, ಯಾರನ್ನು ಹಲವರು ಅನುಸರಿಸುವರೊ, ಅವರಲ್ಲಿ ಸಾಧಾರಣ ಜನರಲ್ಲಿ ಇರುವುದಕ್ಕಿಂತ ಹೆಚ್ಚಾಗಿ ಭಗವಂತನ ಶಕ್ತಿ ಇರುವುದು.

೮೯೪. ಪ್ರಶ್ನೆ:—ದೇವರು ಈ ಸ್ಥೂಲದೇಹದಲ್ಲಿ ಹೇಗೆ ವಾಸಿಸುವನು?

ಉತ್ತರ:—ಒಂದು ಜೀರ್ಕೊಳವಿಯೊಳಗೆ ಓಕಳಿಯನ್ನು ನೂಕುವ ಕೋಲಿನಂತೆ ಇರುವನು. ಅವನು, ದೇಹದಲ್ಲಿರುವನು, ಆದರೂ ಅದರಿಂದ ಪ್ರತ್ಯೇಕನಾಗಿರುವನು.

## ಭಗವಂತ ಮತ್ತು ಮಾನವನ ನೈತಿಕ ಜವಾಬ್ದಾರಿ

೮೯೫. ಪ್ರಶ್ನೆ:—ದೇವರು ಎಲ್ಲವೂ ಆಗಿದ್ದರೆ, ಪಾಪಪುಣ್ಯಗಳು ಇಲ್ಲವೆ?

ಉತ್ತರ:—ಹೌದು ಇದೆ, ಆದರೆ ಅದೇ ಕಾಲದಲ್ಲಿ ಇಲ್ಲ. ಎಲ್ಲಿಯವರೆಗೂ ಅವನು ನಮ್ಮಲ್ಲಿ ಅಹಂಕಾರವನ್ನು ಇಟ್ಟಿರುವನೊ ಅಲ್ಲಿಯವರೆಗೂ ನಾವು ಜಗತ್ತಿನಲ್ಲಿ ವೈವಿಧ್ಯತೆಯನ್ನು ನೋಡುವೆವು ಮತ್ತು ಪಾಪಪುಣ್ಯಗಳ ತಾರತಮ್ಯಭಾವವನ್ನು ಕಾಣುವೆವು. ಆದರೆ ಕೆಲವು ವೇಳೆ ಕೆಲವರ ಅಹಂಕಾರವನ್ನು ಸಂಪೂರ್ಣವಾಗಿ ಅಳಿಸಿಬಿಡುವನು. ಆಗ ಅವರು ಎಲ್ಲಾ ಒಳ್ಳೆಯದು ಮತ್ತು ಕೆಟ್ಟುದರ ಆಚೆ ಹೋಗುವರು. ಎಲ್ಲಿಯುವರೆಗೂ ಒಬ್ಬನು ದೇವರನ್ನು ಕಾಣುವುದಿಲ್ಲವೊ ಅಲ್ಲಿಯವರೆಗೆ ವೈವಿಧ್ಯತೆ, ಒಳ್ಳೆಯದು ಮತ್ತು ಕೆಟ್ಟುದು ಎಂಬ ಭಾವಗಳು ಇದ್ದೇ ಇರುವುವು. ಮಾತಿನಲ್ಲೇನೊ ನೀನು ಅವನು ಹೇಳಿದಂತೆ ನಾನು ಮಾಡುವೆನು ಎನ್ನಬಹುದು. ಆದರೆ ನಿನ್ನ ಹೃದಯಾಂತರಾಳದಲ್ಲಿ ಇವುಗಳೆಲ್ಲ ಬರೀ ಬಾಯಿಮಾತು ಎಂದು ನಿನಗೆ ಗೊತ್ತೇ ಇರುವುದು. ಯಾವುದಾದರೂ ಕೆಟ್ಟಕೆಲಸಗಳನ್ನು ಮಾಡಿದ ತಕ್ಷಣವೆ ನಿನ್ನ ಅಂತರಾತ್ಮ ತಪ್ಪು ಎಂದು ಹೇಳುವುದು.

೮೯೬. ಪ್ರಶ್ನೆ:—ಎಲ್ಲಾ ಕೆಲಸಗಳನ್ನೂ ಅವನೇ ಪ್ರೇರೇಪಿಸುತ್ತಿದ್ದರೆ ನಾನು ನನ್ನ ತಪ್ಪಿಗೆ ಜವಾಬ್ದಾರನಲ್ಲ. ನಾನು ಜವಾಬ್ದಾರನೆ?

ಉತ್ತರ :—ದುರ್ಯೋಧನನೂ ಕೂಡ ಹೀಗೆಯೆ ಹೇಳಿದನು :- "ಹೇ ದೇವರೆ, ನೀನು ನನ್ನ ಹೃದಯದಲ್ಲಿ ಇರುವೆ. ನೀನು ಹೇಳಿದಂತೆ ನಾನು ಮಾಡುವೆ." ದೇವರೊಬ್ಬನೇ ಕರ್ತೃ ತಾನು ಕೇವಲ ಯಂತ್ರ ಎಂದು ಯಾರು ನಿಜವಾಗಿ ನಂಬುತ್ತಾರೊ, ಅವರು ಯಾವ ತಪ್ಪನ್ನೂ ಮಾಡಲಾರರು. ನಿಪುಣನಾದ ನೃತ್ಯಗಾರ ಎಂದಿಗೂ ತಪ್ಪು ಹೆಜ್ಜೆಯನ್ನು ಇಡುವುದಿಲ್ಲ, ಹೃದಯ ಶುದ್ಧವಾಗುವವರೆಗೆ ದೇವರು ಇರುವನು ಎಂದು ಒಬ್ಬನು ನಂಬುವುದಕ್ಕೆ ಕೂಡ ಆಗುವುದಿಲ್ಲ.

೮೯೭. ಭಕ್ತನೊಬ್ಬ :—"ಸ್ವಾಮಿ ನನಗೆ ಒಂದು ಸಂಶಯ ವಿದೆ. ನಮ್ಮ ಇಚ್ಛೆ ಸ್ವತಂತ್ರವಾದುದು ಎಂದು ಹೇಳುತ್ತಾರೆ. ಅಂದರೆ ಒಳ್ಳೆಯದೊ ಕೆಟ್ಟದ್ದೊ ನಮ್ಮ ಮನಸ್ಸಿಗೆ ತೋರಿದುದನ್ನು ನಾವು ಮಾಡಬಹುದು. ಇದು ಸತ್ಯವೆ ?"

ಶ್ರೀರಾಮಕೃಷ್ಣರು :—"ಎಲ್ಲವೂ ದೇವರ ಇಚ್ಛೆಯಮೇಲೆ ಇದೆ. ಎಲ್ಲ ಅವನ ಲೀಲೆ. ಹಲವು ಕೆಲಸಗಳನ್ನು ಹಲವು ರೀತಿಯಲ್ಲಿ ಮಾಡಿಸುವನು. ಒಳ್ಳೆಯದು ಕೆಟ್ಟದು, ದೊಡ್ಡದು, ಸಣ್ಣದು, ದುರ್ಬಲವಾದುದು, ಸಬಲವಾದುದು ಇವುಗಳೆಲ್ಲ ಕೊನೆಗೆ ಅವನಿಂದಲೇ ಬರುವುದು. ಒಳ್ಳೆಯವರು, ಕೆಟ್ಟವರು, ಎಲ್ಲ ಅವನ ಮಾಯೆ, ಅವನ ಆಟ. ಉದಾಹರಣೆಗೆ, ತೋಟದ ಮರಗಳೆಲ್ಲ ಎತ್ತರದಲ್ಲಿ ಸೌಂದರ್ಯದಲ್ಲಿ ಮತ್ತು ಭವ್ಯತೆಯಲ್ಲಿ ಒಂದೇಸಮನಾಗಿಲ್ಲ."

"ಎಲ್ಲಿಯವರೆಗೂ ಒಬ್ಬನು ದೇವರನ್ನು ಸಾಕ್ಷಾತ್ಕಾರ ಮಾಡಿಕೊಂಡಿಲ್ಲವೊ ಅಲ್ಲಿಯವರೆಗೂ ಒಬ್ಬನು ತಾನು ಸ್ವತಂತ್ರನೆಂದು ತಿಳಿಯುತ್ತಾನೆ. ಆದರೆ ಈ ಮೋಹವನ್ನು ಮಾನವನಲ್ಲಿ ಇಟ್ಟಿರುವವನು ಕೂಡ ದೇವರೆ. ಇಲ್ಲದೆ ಇದ್ದರೆ ಪಾಪದ ರಾಶಿ ಹೆಚ್ಚಾಗುತ್ತಿತ್ತು. ತಪ್ಪನ್ನು ಮಾಡುವುದಕ್ಕೆ ಜನರು ಅಂಜುತ್ತಿರಲಿಲ್ಲ. ಪಾಪಕ್ಕೆ ಮತ್ತು ದೋಷಕ್ಕೆ ಶಿಕ್ಷೆಯೂ ಇರುತ್ತಿರಲಿಲ್ಲ."

"ಆದರೆ ಯಾರು ದೇವರನ್ನು ಕಂಡಿರುವರೊ ಅವರ ಮನಸ್ಸಿನ ಸ್ಥಿತಿ ನಿನಗೆ ಗೊತ್ತೆ ? ಅವರು ಹೀಗೆ ಹೇಳುತ್ತಾರೆ, ಮತ್ತು ಇದರಂತೆ ಅನುಭವಿಸುತ್ತಾರೆ. "ನಾನು ಯಂತ್ರ, ನೀನು ಯಾಂತ್ರಿಕನು, ನಾನು ರಥ, ನೀನು ಸಾರಥಿ. ನೀನು ಚಲಿಸಿದಂತೆ ನಾನು ಚಲಿಸುವೆನು. ನೀನು ಪ್ರೇರೇಪಿಸಿದಂತೆ ನಾನು ಮಾತನಾಡುವೆನು."

೬೯೮. ದೇವರು ಕಳ್ಳನಿಗೆ ಹೋಗಿ ಕದಿಯುವಂತೆ ಪ್ರೇರೇಪಿಸು ವನು. ಮತ್ತು ಅದೇಕಾಲದಲ್ಲಿ ಮನೆಯವನಿಗೆ ಕಳ್ಳ ಬಂದಿರುವನು ಎಂದು ಎಚ್ಚರಿಸುವನು. ಅವನೇ ಎಲ್ಲವನ್ನು ಮಾಡುವನು.

## ಭಗವತ್ ಸಾಕ್ಷಾತ್ಕಾರದ ಸಮಯದಲ್ಲಿ ಮಾನಸಿಕ ಪರಿಸ್ಥಿತಿ

೬೯೯. ಪಂಚಭೂತಗಳಿಂದ ಆದ ಈ ದೇಹವನ್ನು ಸ್ಥೂಲ ಶರೀರವೆನ್ನುತ್ತಾರೆ. ಸೂಕ್ಷ್ಮಶರೀರ ಮನಸ್ಸು, ಬುದ್ಧಿ, ಚಿತ್ತ, ಅಹಂಕಾರಗಳಿಂದ ಆಗಿದೆ. ದೇವರನ್ನು ನೋಡಿ ಅವನ ಸಂಬಂಧವನ್ನು ಅನುಭವಿಸುವ ದೇಹಕ್ಕೆ ಕಾರಣ ಶರೀರವೆಂದು ಹೆಸರು. ತಂತ್ರಶಾಸ್ತ್ರ ದಲ್ಲಿ ಇದಕ್ಕೆ ಭಗವತೀತನು ಎಂದು ಹೆಸರು. ಇವುಗಳನ್ನೆಲ್ಲಾ ಮೀರಿರುವುದು ಮಹಾಕಾರಣ, ಅಥವಾ ಆದಿಕಾರಣ.

೭೦೦. ಮನಸ್ಸು ಬಾಹ್ಯಪ್ರಪಂಚದ ಪ್ರಜ್ಞೆಯೊಂದಿಗೆ ಆಸಕ್ತ ವಾದಾಗ, ಇದು ಸ್ಥೂಲವಸ್ತುಗಳನ್ನು ನೋಡುವುದು ಮತ್ತು ಆಗ ಅನ್ನಮಯ ಕೋಶದಲ್ಲಿರುವುದು. ಮನಸ್ಸು ಅಂತರ್ಮುಖವಾದಾಗ, ಮನೆಯ ಬಾಗಿಲನ್ನು ಮುಚ್ಚಿ ಒಳಗೆ ಹೋದಂತೆ, ಅಂದರೆ ಸ್ಥೂಲದಿಂದ ಸೂಕ್ಷ್ಮಕ್ಕೆ ಹೋಗುವುದು. ನಂತರ ಕಾರಣಕ್ಕೆ, ಕೊನೆಗೆ ಆದಿ ಕಾರಣಕ್ಕೆ, ಹೋಗುವುದು. ಆ ಸ್ಥಿತಿಯಲ್ಲಿ ಮನಸ್ಸು ಅವ್ಯಕ್ತದಲ್ಲಿ ಲೀನವಾಗುವುದು. ಅದರ ವಿಚಾರವಾಗಿ ಏನನ್ನೂ ಹೇಳಲಾಗುವುದಿಲ್ಲ.

೭೦೧. ಭಗವಾನ್ ಚೈತನ್ಯನಿಗೆ ಮೂರು ಭಾವಾವಸ್ಥೆಗಳು ಬರುತ್ತಿದ್ದುವು. (೧) ಪ್ರಜ್ಞಾವಸ್ಥೆ—ಮನಸ್ಸು ಸ್ಥೂಲ ಮತ್ತು ಸೂಕ್ಷ್ಮ ವಸ್ತುಗಳಮೇಲೆ ನಿಂತಿರುವುದು. (೨) ಅರ್ಧಪ್ರಜ್ಞಾವಸ್ಥೆ—ಆಗ ಮನಸ್ಸು ಕಾರಣಶರೀರಕ್ಕೆ ಹೋಗಿ ಕಾರಣದ ಆನಂದದಲ್ಲಿ ಮಗ್ನವಾ ಗಿರುವುದು. (೩) ಅಂತಃಪ್ರಜ್ಞಾವಸ್ಥೆ—ಆ ಸ್ಥಿತಿಯಲ್ಲಿ ಮನಸ್ಸು ಸಂಪೂರ್ಣವಾಗಿ ಮಹಾಕಾರಣದಲ್ಲಿ (ಆದಿಕಾರಣ) ಲೀನವಾಗುತ್ತಿತ್ತು.

ಇದಕ್ಕೂ ವೇದಾಂತಿಗಳ ಪಂಚಕೋಶಕ್ಕೂ ಬಹಳ ಹೋಲಿಕೆ ಇದೆ. ಅನ್ನಮಯ ಮತ್ತು ಪ್ರಾಣಮಯ ಕೋಶಗಳು ಎರಡೂ ಸೇರಿ ಸ್ಥೂಲಶರೀರ. ಮನೋಮಯ ಮತ್ತು ವಿಜ್ಞಾನಮಯಗಳೆರಡೂ ಸೇರಿ ಸೂಕ್ಷ್ಮಶರೀರ. ಆನಂದಮಯ ಕಾರಣಶರೀರ. ಆದಿಕಾರಣ ಈ ಎಲ್ಲಾ ಕೋಶಗಳ ಹೊರಗೆ ಇರುವುದು. ಮನಸ್ಸು ಆದಿಕಾರಣದಲ್ಲಿ ತಲ್ಲೀನ

ವಾದಾಗ ಶ್ರೀ ಚೈತನ್ಯರು ಸಮಾಧಿಗೆ ಹೋಗುತ್ತಿದ್ದರು. ಇದನ್ನು ನಿರ್ವಿಕಲ್ಪ ಅಥವಾ ಜಡಸಮಾಧಿ ಎನ್ನುತ್ತಾರೆ.

## ಕುಂಡಲಿನಿ ಮತ್ತು ಆಧ್ಯಾತ್ಮಿಕ ಜಾಗ್ರತಿ

೯೦೨. ಕುಂಡಲಿನಿ ಜಾಗ್ರತವಾಗುವವರೆಗೆ ಆಧ್ಯಾತ್ಮಿಕ ಶಕ್ತಿ ಜಾಗ್ರತವಾಗುವುದಿಲ್ಲ. ಕುಂಡಲಿನಿ ಮೂಲಾಧಾರದಲ್ಲಿ ಸುಪ್ತಾವಸ್ಥೆಯಲ್ಲಿರುವುದು. ಅದನ್ನು ಎಚ್ಚರಿಸಿದಾಗ ಸುಷುಮ್ನಾ ಮೂಲಕ ಸ್ವಾಧಿಷ್ಠಾನ ಮಣಿಪುರ ಮುಂತಾದ ಚಕ್ರಗಳಮೂಲಕ ಸಹಸ್ರಾರಕ್ಕೆ ಹೋಗುವುದು. ಆಗ ಸಮಾಧಿಯಾಗುವುದು. ನಾನು ಇವುಗಳನ್ನೆಲ್ಲ ಪ್ರತ್ಯಕ್ಷವಾಗಿ ನೋಡಿದೆನು.

೯೦೩. ದೇವರ ಸಾಕ್ಷಾತ್ಕಾರದ ಒಂದು ಚಿಹ್ನೆ ಏನೆಂದರೆ, ಮಹಾವಾಯು ತಕ್ಷಣವೇ ಜಾಗ್ರತವಾಗಿ ಶಿರಸ್ಸಿನ ಕಡೆಗೆ ಹೋಗುವುದು. ಆಗ ಒಬ್ಬನು ಸಮಾಧಿಸ್ಥನಾಗಿ ದೇವರನ್ನು ಕಾಣುವನು.

೯೦೪. ಕುಂಡಲಿನಿ ಜಾಗ್ರತವಾಗುವಾಗ ತಮ್ಮ ಅನುಭವವನ್ನು ಕುರಿತು ಶ್ರೀರಾಮಕೃಷ್ಣರು ಹೀಗೆ ಹೇಳಿದರು: "ಕೆಲವುವೇಳೆ ತಲೆಯಿಂದ ಕಾಲಿನವರೆಗೆ ಗಂಟೆಯಂತೆ ಶಬ್ದಮಾಡಿಕೊಂಡು ಏರುವುದು. ಅದು ತಲೆಯನ್ನು ಸೇರುವವರೆಗೆ ನಾನು ಪ್ರಜ್ಞೆಯಲ್ಲಿರುತ್ತೇನೆ. ಆದರೆ ಅದು ತಲೆಯನ್ನು ಮುಟ್ಟಿದ ತಕ್ಷಣವೆ ನನಗೆ ಬಾಹ್ಯಪ್ರಜ್ಞೆ ಇರುವುದಿಲ್ಲ. ಆಗ ನೋಡುವ ಮತ್ತು ಕೇಳುವ ಶಕ್ತಿ ಕೂಡ ನಿಲ್ಲುವುದು. ಆಗ ಮಾತನಾಡುವ ಪ್ರಸಂಗವೇ ಏಳುವುದಿಲ್ಲ. ಯಾರು ಮಾತನಾಡುವುದು? ಆಗ ನಾನು ಎಂಬ ಭೇದ ಭಾವವೇ ಮಾಯವಾಗುವುದು. ಕೆಲವು ವೇಳೆ ಆ ಅದ್ಭುತ ಶಕ್ತಿ ಹೃದಯ ಮತ್ತು ಗಂಟಲಿನವರೆಗೆ ಏಳುವ ತನಕ ಏನು ಕಾಣಿಸುತ್ತದೆಯೊ ಮತ್ತು ಏನು ಅನುಭವಿಸುವೆನೊ ಅದನ್ನು ನಿನಗೆ ಹೇಳಬೇಕೆಂದಿರುವೆನು. ಆಸ್ಥಿತಿಯಲ್ಲಿ ಮಾತನಾಡುವುದಕ್ಕೇನೊ ಸಾಧ್ಯ. ನಾನು ಅದನ್ನು ಮಾಡುತ್ತೇನೆ. ಆದರೆ ಗಂಟಲನ್ನು ಮೀರಿ ಹೋದ ಮೇಲೆ ಯಾರೋ ನನ್ನ ಬಾಯನ್ನು ಮುಚ್ಚಿದಂತೆ ಆಗುತ್ತದೆ. ಪ್ರಜ್ಞೆ ತಪ್ಪುತ್ತದೆ. ಕುಂಡಲಿನಿ ಗಂಟಲಿನಮೇಲೆ ಹೋದಾಗ ಏನಾಗುತ್ತದೆ ಎಂಬುದನ್ನು ನಿಮಗೆ ತಿಳಿಸಲು ಹೇಳಬೇಕೆಂದಿರುವೆನು. ಆದರೆ ಇದನ್ನು ನಾನು ಆಲೋಚಿಸಿದ ತಕ್ಷಣವೆ ಒಂದೇ ನೆಗೆತದಲ್ಲಿ ಮನಸ್ಸು ಮೇಲೆ ಹೋಗುವುದು. ಆಗ ಹೇಳುವುದು ಕೊನೆಗಂಡಂತೆ." ಹಲವು ವೇಳೆ ಈ

ಅವಸ್ಥೆಯನ್ನು ಶ್ರೀರಾಮಕೃಷ್ಣರು ಹೇಳುವುದಕ್ಕೆ ಪ್ರಯತ್ನಪಟ್ಟರು. ಆದರೆ ಪ್ರತಿಸಲವೂ ಅವರು ಸೋತರು. ಒಂದುದಿನ ಹತ್ತಿರ ಇದ್ದವರಿಗೆ ಈ ವಿಷಯವಾಗಿ ಹೇಳಲೇಬೇಕೆಂದು ಸಂಕಲ್ಪಿಸಿ ಕುಂಡಲಿನಿ ಶಕ್ತಿ ಗಂಟಲಿಗೆ ಬರುವತನಕ ಆಗುವುದನ್ನು ಹೇಳುತ್ತಾ ಹೋದರು. ಕೊನೆಗೆ ಹುಬ್ಬುಗಳ ನಡುವೆ ಇರುವ ಆರನೇ ಚಕ್ರವನ್ನು ತೋರುತ್ತ "ಮನಸ್ಸು ಇಲ್ಲಿಗೆ ಬಂದಮೇಲೆ ಒಬ್ಬನಿಗೆ ಪರಮಾತ್ಮನ ದರ್ಶನವಾಗಿ ಸಮಾಧಿ ಪ್ರಾಪ್ತವಾಗುವುದು. ಜೀವ ಮತ್ತು ಪರಮಾತ್ಮನನ್ನು ಎಲ್ಲೋ ಒಂದು ತೆಳ್ಳಗಿರುವ ತೆರೆಯು ಮಾತ್ರ ಪ್ರತ್ಯೇಕಿಸುವುದು. ಆಗ ಅವನು ಹೀಗೆ ನೋಡುತ್ತಾನೆ" ಇದನ್ನು ವಿಶದವಾಗಿ ವಿವರಿಸುವುದಕ್ಕೆ ಪ್ರಯತ್ನಿಸಿದಾಗ ಸಮಾಧಿಮಗ್ನರಾದರು. ಮನಸ್ಸು ಕೆಳಗೆ ಬಂದಮೇಲೆ ಪುನಃ ಹೇಳಲು ಪ್ರಯತ್ನಿಸಿದರು. ಪುನಃ ಸಮಾಧಿಮಗ್ನರಾದರು. ಹೀಗೆ ಹಲವುಸಲ ವ್ಯರ್ಥ ಪ್ರಯತ್ನಪಟ್ಟಮೇಲೆ ಕಂಬನಿದುಂಬಿ ಹೀಗೆ ಹೇಳಿದರು: "ನೋಡಿ, ಎಲ್ಲವನ್ನೂ ನಿಮಗೆ ಸ್ವಲ್ಪವೂ ಬಚ್ಚಿಡದಂತೆ ಹೇಳಬೇಕೆಂದು ಬಯಸುವೆನು. ಆದರೆ ಜಗನ್ಮಾಯೆ ಯಾವರೀತಿಯಿಂದಲೂ ಹೀಗೆ ಮಾಡುವುದಕ್ಕೆ ಅವಕಾಶಕೊಡುವುದಿಲ್ಲ. ಅವಳು ನನ್ನ ಬಾಯನ್ನು ಮುಚ್ಚಿದಳು"

೯೦೫ ಪುನಃ ಕುಂಡಲಿನಿ ಜಾಗ್ರತವಾಗುವ ಬೇರೆ ಬೇರೆ ವಿಧಗಳನ್ನು ಕುರಿತು ಶ್ರೀರಾಮಕೃಷ್ಣರು ಹೀಗೆ ಹೇಳುತ್ತಿದ್ದರು:—ನೋಡಿ, ಝುಣ ಝುಣಾತ್ಕಾರದಿಂದ ಮೆದುಳಿನ ಕಡೆಗೆ ಹೋಗುವ ಕುಂಡಲಿನಿ ಶಕ್ತಿಯು ಯಾವಾಗಲೂ ಈ ರೀತಿಯನ್ನೇ ಅನುಸರಿಸುವುದಿಲ್ಲ. ಇದಕ್ಕೆ ಐದು ವಿಧದ ಚಲನಗಳಿವೆ ಎಂದು ಶಾಸ್ತ್ರಗಳು ಹೇಳುತ್ತವೆ. ಮೊದಲನೆಯದು ಆಹಾರವನ್ನು ಕಚ್ಚಿಕೊಂಡು ಹರಿಯುವ ಇರುವೆಯ ಸಾಲು ಕಾಲಿನಿಂದ ಮೇಲುಗಡೆ ನಿಧಾನವಾಗಿ ಹರಿದು ಹೋಗುವಂತೆ ಭಾಸವಾಗುವುದು. ಇದು ತಲೆಯನ್ನು ಸೇರಿದ ಮೇಲೆ ಸಾಧಕ ಸಮಾಧಿಸ್ಥನಾಗುವನು. ಎರಡನೆಯದು ಕಪ್ಪೆಯಂತೆ; ಕಪ್ಪೆಗಳು ಎರಡುಮೂರುಸಲ ಬೇಗ ನೆಗೆದು ಪುನಃ ಮುಂದೆ ಹೋಗುವುದಕ್ಕೆ ಮುಂಚೆ ಸ್ವಲ್ಪ ನಿಲ್ಲುವಂತೆ ಕಾಲಿನಿಂದ ತಲೆಯವರೆಗೆ ಏನೋ ಒಂದು ಹರಿಯುತ್ತಿರುವಂತೆ ತೋರುವುದು. ಇದು ನೆತ್ತಿಯನ್ನು ಸೇರಿದಾಗ ಸಮಾಧಿಯಾಗುವುದು. ಮೂರನೆಯದು ಸರ್ಪದಂತೆ; ಹಾವುಗಳು ನೇರವಾಗಿಯೋ ಅಥವಾ ಸುರುಳಿಸುತ್ತಿಕೊಂಡೊ, ಸುಮ್ಮನೆ,

ಮಲಗಿರುತ್ತವೆ ಆದರೆ ಏನಾದರೂ ಹುಳು ಹುಪ್ಪಟೆ ಸಿಕ್ಕಿದಾಗ ಅಥವಾ ಅಂಜಿಕೆಯಾದಾಗ ಡೊಂಕು ಡೊಂಕಾಗಿ ಹರಿದುಹೋಗುವಂತೆ, ಸುಪ್ತಾವಸ್ಥೆಯಲ್ಲಿರುವ ಚೈತನ್ಯ ತಲೆಗೆ ಹರಿದುಹೋಗುತ್ತದೆ. ಆಗ ಸಮಾಧಿಯಾಗುವುದು. ನಾಲ್ಕನೆಯದು ಹಕ್ಕಿಯಂತೆ; ಒಂದು ಸ್ಥಳದಿಂದ ಮತ್ತೊಂದು ಸ್ಥಳಕ್ಕೆ ಹಾರಿಹೋಗುವಾಗ ಹಕ್ಕಿಗಳು ಒಂದು ಸಲ ಮೇಲುಗಡೆ ಮತ್ತೊಂದುಸಲ ಸ್ವಲ್ಪಕೆಳಗಡೆ, ಅಂತೂ ಎಲ್ಲೂ ನಿಲ್ಲದೆ ಹಾರಿ ಗುರಿ ಸೇರುವಂತೆ ಈ ಶಕ್ತಿ ಮುಂದುವರಿದು ತಲೆಯನ್ನು ಸೇರುತ್ತದೆ. ಆಗ ಸಮಾಧಿಯಾಗುವುದು. ಐದನೆಯದು ಮತ್ತು ಕೊನೆಯದೆ ಕೋತಿಯಂತೆ; ಒಂದು ಮರದಿಂದ ಇನ್ನೊಂದು ಮರಕ್ಕೆ ನೆಗೆಯುವಾಗ ಕೋತಿಗಳು ರೆಂಬೆಯಿಂದ ರೆಂಬೆಗೆ, ನೆಗೆದು ದೂರವನ್ನು ಎರಡು ಮೂರು ನೆಗೆತದಲ್ಲಿ ಸೇರುವಂತೆ ಯೋಗಿಗೆ ಕುಂಡಲಿನಿ ಶಕ್ತಿ ಸಂಚರಿಸುವಂತೆ ತೋರುವುದು. ಆಗ ಸಮಾಧಿ ಪ್ರಾಪ್ತವಾಗುವುದು.

೯೦೬. ಕೆಲವುವೇಳೆ ವೇದಾಂತ ದೃಷ್ಟಿಯಿಂದ ಈ ಅನುಭವಗಳನ್ನು ಹೀಗೆ ವಿವರಿಸುತ್ತಿದ್ದರು. "ವೇದಾಂತಿಗಳು ಏಳು ಅಂತಸ್ತುಗಳಿವೆ ಎನ್ನುತ್ತಾರೆ. ಪ್ರತಿಯೊಂದು ಅಂತಸ್ತಿನಲ್ಲಿಯೂ ಸಾಧಕನಿಗೆ ಬೇರೆ ಬೇರೆ ಅನುಭವಗಳಾಗುವುವು ಸಾಧಾರಣವಾಗಿ ಮಾನವರ ಮನಸ್ಸು ಕೆಳಗಿನ ಮೂರು ಚಕ್ರಗಳಲ್ಲಿ ನಿರತವಾಗಿರುತ್ತದೆ. ಈ ಮೂರರಲ್ಲಿ ಅತ್ಯಂತ ಮೇಲಿನದೆ ಹೊಕ್ಕಳಿನ ಹತ್ತಿರ ಇರುವುದು. ಆದಕಾರಣವೆ ಕೇವಲ ದೈಹಿಕತೃಪ್ತಿಯಲ್ಲಿ ಎಂದರೆ ಊಟ ಇತ್ಯಾದಿಗಳಲ್ಲಿ ಕೊನೆಗಾಣುವುದು. ಆದರೆ ಹೃದಯದ ಸಮೀಪದಲ್ಲಿ ಇರುವ ನಾಲ್ಕನೆಯ ಚಕ್ರಕ್ಕೆ ಸೇರಿದಾಗ ಮನುಷ್ಯನಿಗೆ ಒಂದು ದಿವ್ಯಜ್ಯೋತಿ ಕಾಣುವುದು. ಆದರೂ ಈ ಚಕ್ರದಿಂದ ಅವನು ಹಲವುವೇಳೆ ಕೆಳಗಿನ ಮೂರು ಚಕ್ರಗಳಿಗೆ ಜಾರುತ್ತಾನೆ. ಸಾಧಕನು ಗಂಟಲಿನ ಹತ್ತಿರ ಇರುವ ಐದನೇ ಚಕ್ರಕ್ಕೆ ಬಂದಾಗ ಅವನು ದೇವರ ವಿಷಯವಲ್ಲದೆ ಮತ್ತೇನನ್ನೂ ಮಾತನಾಡಲಾರ. ನಾನು ಈ ಸ್ಥಿತಿಯಲ್ಲಿದ್ದಾಗ ಯಾರಾದರೂ ಪ್ರಾಪಂಚಿಕ ಪ್ರಸಂಗಗಳನ್ನು ನನ್ನೆದುರಿಗೆ ತೆರೆದಾಗ ತಲೆಯಮೇಲೆ ಏಟು ಕೊಟ್ಟಂತೆ ಆಗುತ್ತಿತ್ತು. ಇಂತಹ ಹಿಂಸೆಯಿಂದ ದೂರವಾಗಿರುವ ಪಂಚವಟಿಯ ನಿರ್ಜನ ಪ್ರದೇಶದಲ್ಲಿ ನಾನು ಅಡಗಿಕೊಳ್ಳುತ್ತಿದ್ದೆ. ಪ್ರಾಪಂಚಿಕರನ್ನು ಕಂಡೊಡನೆಯೆ ನಾನು ಓಡುತ್ತಿದೆ. ಬಂಧುಗಳು, ಒಂದುಸಲಿ ಬಿದ್ದರೆ ಅದರಿಂದ ತಪ್ಪಿಸಿಕೊಂಡು ಹೋಗುವುದಕ್ಕೆ ಆಗದ

ದೊಡ್ಡ ಹಳ್ಳದಂತೆ ಕಾಣುತ್ತಿದ್ದರು. ಅವರೆದುರಿಗೆ ಇರುವಾಗ ಉಸಿರು ಕಟ್ಟಿದಂತೆ ಆಗುತ್ತಿದ್ದು, ಇನ್ನೇನು ಸಾಯುವ ಸ್ಥಿತಿಯಲ್ಲಿರುವಂತೆ ಕಾಣುತ್ತಿತ್ತು. ಆ ಸ್ಥಳವನ್ನು ಬಿಟ್ಟಾಗ ಮಾತ್ರ ನನ್ನ ಮನಸ್ಸು ಹಗುರವಾಗುತ್ತಿತ್ತು. ಈ ಸ್ಥಳದಿಂದಲೂ ಕೂಡ ಮನುಷ್ಯನು ಕೆಳಗಿನ ಮೂರು ಚಕ್ರಗಳಿಗೆ ಜಾರಬಹುದು. ಆದಕಾರಣವೆ ಅವನು ಬಹಳ ಜೋಪಾನವಾಗಿರಬೇಕು. ಆದರೆ ಹುಬ್ಬಿನ ಹತ್ತಿರ ಇರುವ ಆರನೇ ಚಕ್ರಕ್ಕೆ ಬಂದಾಗ ಅವನು ಎಲ್ಲಾ ಅಂಜಿಕೆಯಿಂದಲೂ ಪಾರಾಗುವನು. ಅವನಿಗೆ ಪರಮಾತ್ಮನ ದರ್ಶನವಾಗುವುದು. ಮತ್ತು ಯಾವಾಗಲೂ ಸಮಾಧಿಮಗ್ನನಾಗಿರುವನು. ಎಲ್ಲಕ್ಕಿಂತಲೂ ಮೇಲುಗಡೆ ಇರುವ ಸಹಸ್ರಾರ ಚಕ್ರಕ್ಕೆ ಒಂದು ತೆಳ್ಳನೆಯ ಪಾರದರ್ಶಕ ತೆರೆ ಮಾತ್ರ ಇರುವುದು. ಅವನು ಆಗ ಪರಮಾತ್ಮನಿಗೆ ಬಹಳ ಸಮೀಪದಲ್ಲಿರುವನು. ತಾನು ಅವನಲ್ಲಿ ಐಕ್ಯನಾದಂತೆ ಭಾವಿಸುವನು. ಆದರೆ ನಿಜವಾಗಿಯೂ ಅವನು ಐಕ್ಯವಾಗಿಲ್ಲ. ಈ ಸ್ಥಿತಿಯಿಂದ ಮನಸ್ಸು ಐದನೆ ಚಕ್ರಕ್ಕೆ ಅಥವಾ ಹೆಚ್ಚು ಎಂದರೆ ನಾಲ್ಕನೆ ಚಕ್ರಕ್ಕೆ ಬರುವನು. ಇದಕ್ಕಿಂತ ಕೆಳಗೆ ಹೋಗುವುದಿಲ್ಲ. ಜೀವಿಗಳೆಂದು ಕರೆಯಲ್ಪಡುವ ಸಾಧಾರಣ ಸಾಧಕರು ಈ ಅವಸ್ಥೆಯಿಂದ ಕೆಳಗೆ ಬರುವುದಿಲ್ಲ. ಇಪ್ಪತ್ತೊಂದು ದಿನ ಒಂದೇ ಸಮನಾಗಿ ಸಮಾಧಿಯಲ್ಲಿದ್ದು ತೆಳ್ಳಗಿರುವ ತೆರೆಯನ್ನು ಸೀಳಿ ಪರಮಾತ್ಮನಲ್ಲಿ ಎಂದೆಂದಿಗೂ ಐಕ್ಯವಾಗುವರು. ಸಹಸ್ರಾರದಲ್ಲಿ ಜೀವ ಮತ್ತು ಪರಮಾತ್ಮರ ಅಂತಹ ಐಕ್ಯತೆಯನ್ನು ಏಳನೆ ಚಕ್ರಕ್ಕೆ ಪ್ರವೇಶವೆನ್ನಬಹುದು.

## ತೋರಿಕೆಯ ಪರವಶತೆ

೯೦೭. ಹೊರಗಡೆ ಸಮಾಧಿಯಂತೆ ತೋರುವ ಒಂದು ವಿಧದ ಭಾವೋದ್ರೇಕವನ್ನು ಪಡೆಯುತ್ತಿದ್ದ ಒಬ್ಬರನ್ನು ಕುರಿತು ಒಂದುದಿನ ಶ್ರೀರಾಮಕೃಷ್ಣರು ಹೀಗೆ ಹೇಳಿದರು :—ನಿಜವಾದ ಪರವಶತೆಯಲ್ಲಿ ಒಬ್ಬನು ತನ್ನ ನಿಜಸ್ಥಿತಿಯ ಆಳಕ್ಕೆ ಹೋಗಿ ಸಂಪೂರ್ಣ ಮೌನವಾಗುತ್ತಾನೆ. ಆದರೆ ಇಲ್ಲಿ ನಮಗೆ ಏನು ಕಾಣುತ್ತದೆ? ಸುಮ್ಮನೆ ಇರಿ, ಶಾಂತರಾಗಿ, ಎಂದು ಉಳಿದವರಿಗೆ ಹೇಳುವರು. ಇಂತಹ ಪರವಶತೆಯ ಸ್ವಭಾವ ನಿಮಗೆ ಗೊತ್ತೆ? ದೊಡ್ಡ ತಪ್ಪಲೆಯಲ್ಲಿ ಒಂದು ಉದ್ಧರಣೆ ಹಾಲನ್ನು ಕಾಯಿಸಿದಂತೆ. ಪಾತ್ರೆಯ ತುಂಬಾ ಹಾಲಿರುವಂತೆ ಕಾಣು

ವುದು. ಆದರೆ ಅದನ್ನು ಒಲೆಯಿಂದ ತೆಗೆಯಿರಿ ಅದರಲ್ಲಿ ಒಂದು ತೊಟ್ಟೂ ಇರುವುದಿಲ್ಲ. ಅದರಲ್ಲಿದ್ದ ಸ್ವಲ್ಪ ಹಾಲು ಕೂಡ ಎಲ್ಲಾ ತಳಕ್ಕೆ ಕಚ್ಚಿಕೊಂಡು ಹೋಗಿರಬಹುದು"

## ದೇವರ ಆಕಾರಗಳು ಮತ್ತು ಪವಿತ್ರ ಶಬ್ದಗ್ರಹಣ

೯೦೮. ದೇವರ ಸಾಕ್ಷಾತ್ಕಾರದಲ್ಲಿ ಎರಡು ವಿಧಗಳಿವೆ; ಒಂದು ಜೀವಾತ್ಮಪರಮಾತ್ಮರ ಐಕ್ಯತೆ, ಮತ್ತೊಂದು ಅವನ ಆಕಾರವನ್ನು ನೋಡುವುದು. ಮೊದಲನೆಯದಕ್ಕೆ ಜ್ಞಾನವೆಂದು, ಎರಡನೆಯದಕ್ಕೆ ಭಕ್ತಿ ಎಂದು ಹೆಸರು.

೯೦೯. ನನ್ನ ಹುಡುಗರೇ! ನಿಜವಾಗಿ ದೇವರನ್ನು ನೋಡಬಹುದು. ನಾವು ಜತೆಯಲ್ಲಿ ಕುಳಿತುಕೊಂಡು ಮಾತನಾಡುತ್ತಿರುವಂತೆಯೆ ದೇವರನ್ನು ನೋಡಬಹುದು, ಮತ್ತು ಆತನೊಂದಿಗೆ ಮಾತನಾಡಬಹುದು. ನಿಜವಾಗಿಯೂ ಹೃತ್ಪೂರ್ವಕವಾಗಿಯೂ ನಾನು ಹೇಳುತ್ತೇನೆ.

೯೧೦. ಸಗುಣ ದೇವರು ಹಲವುವೇಳೆ ಆಧ್ಯಾತ್ಮಿಕ ರೂಪವನ್ನು ಧರಿಸಿರುತ್ತಾನೆ. ಅದನ್ನು ಶುದ್ಧ ಹೃದಯರು ನೋಡಬಲ್ಲರು. ಬೇರೊಂದು ವಿಧದಿಂದ ಹೇಳಿದರೆ ಭಗವಂತನಿಂದ ಬಂದ ಭಗವತೀ ತನುವಿನ ಮೂಲಕ ಭಗವತ್ ದರ್ಶನಕ್ಕೆ ಯೋಗ್ಯವಾದ ಗ್ರಹಣ ಶಕ್ತಿಯ ಮೂಲಕ ಮಾತ್ರ ನಾವು ಇಂತಹ ರೂಪಗಳನ್ನು ನೋಡಬಹುದು. ಅಂದರೆ ಪರಿಶುದ್ಧಾತ್ಮರು ಮಾತ್ರ ಭಗವತ್ ದರ್ಶನವನ್ನು ಪಡೆಯಬಲ್ಲರು.

೯೧೧. ದೇವರನ್ನು ನೋಡಿದವರು ಸಾಧಾರಣ ಚರ್ಮದ ಕಣ್ಣುಗಳ ಮೂಲಕವಾಗಿ ನೋಡುತ್ತಾರೆಯೆ ಎಂದು ಪ್ರಶ್ನೆಮಾಡಿದಾಗ, ಶ್ರೀರಾಮಕೃಷ್ಣರು "ಇಲ್ಲ ಅವನನ್ನು ಚರ್ಮದ ಕಣ್ಣುಗಳಿಂದ ನೋಡಲಾಗುವುದಿಲ್ಲ. ಸಾಧನೆಯ ಕಾಲದಲ್ಲಿ ಪ್ರೇಮದಕಣ್ಣು ಕಿವಿಗಳಿಂದ ಕೂಡಿದ ಪ್ರೇಮತನುವೊಂದು ನಿನ್ನಲ್ಲಿ ಉತ್ಪತ್ತಿಯಾಗುವುದು. ಅವುಗಳ ಮೂಲಕ ನೀನು ದೇವರನ್ನು ನೋಡುವೆ ಮತ್ತು ಕೇಳುವೆ" ಎಂದರು.

೯೧೨. ಅನಾಹತ ಧ್ವನಿಯು ಯಾವಾಗಲೂ ಆಗುತ್ತಿದೆ. ಇದೇ ಓಂಕಾರ ಧ್ವನಿ. ಇದು ಪರಬ್ರಹ್ಮನಿಂದ ಬರುವುದು, ಯೋಗಿಗಳಿಗೆ ಗೋಚರವಾಗುವುದು. ಸಾಧಾರಣ ಪ್ರಾಪಂಚಿಕರು ಇದನ್ನು ಕೇಳಲಾ

ರರು. ಒಂದುಕಡೆ ಇದು ನಾಭಿ ಕಡೆಯಿಂದ ಏಳುವುದು, ಮತ್ತೊಂದು ಕಡೆ ಪರಬ್ರಹ್ಮನಿಂದ ಬರುವುದೆಂದು ಯೋಗಿಗಳಿಗೆ ಗೊತ್ತಾಗುವುದು.

## ಸಮಾಧಿ ಮತ್ತು ಬ್ರಹ್ಮಸಾಕ್ಷಾತ್ಕಾರ

೯೧೩. ಸಮಾಧಿಯಲ್ಲಿ ಒಬ್ಬನ ಮಾನಸಿಕ ಸ್ಥಿತಿ ಹೇಗೆ ಇರುವುದು ? ನೀರಿನಿಂದ ಹೊರಗೆ ತೆಗೆದು ಬದುಕಿದ ಮೀನನ್ನು ಪುನಃ ನೀರಿನಲ್ಲಿ ಬಿಟ್ಟಾಗ ಅದಕ್ಕೆ ಬರುವ ಆನಂದದಂತೆ ಇರುವುದು.

೯೧೪. ಗುರು-ಶಿಷ್ಯರೆಂಬ ಭೇದಭಾವವನ್ನೆ ತಿಳಿಯದ ಪವಿತ್ರ ಸ್ಥಿತಿ ಅತ್ಯದ್ಭುತವಾಗಿರುವುದು. ಬ್ರಹ್ಮಜ್ಞಾನ ಅಷ್ಟು ಅದ್ಭುತವಾಗಿರುವುದು. ಒಬ್ಬನಿಗೆ ಅದು ಸಿಕ್ಕಿದರೆ ಆಗ ಅವನಲ್ಲಿ ಗುರು-ಶಿಷ್ಯರ ಭೇದ ಭಾವನೆ ಇರುವುದಿಲ್ಲ.

೯೧೫. ಸಾವಿರ ವರ್ಷಗಳಿಂದ ಕತ್ತಲೆ ಕವಿದಿರುವ ಕೋಣೆಗೆ ದೀಪವನ್ನು ತಂದರೆ ಅದು ತಕ್ಷಣವೇ ಬೆಳಗುವಂತೆ, ಜ್ಞಾನಜ್ಯೋತಿಯು ಜೀವನನ್ನು ಬೆಳಗಿಸಿ ಅನೇಕ ಕಾಲದಿಂದಲೂ ಇರುವ ಅಜ್ಞಾನವನ್ನು ಓಡಿಸುವುದು

೯೧೬. ಸಮಾಧಿಯಲ್ಲಿ ಇರುವಾಗ ಬಾಹ್ಯಪ್ರಪಂಚದ ನೆನಪು ಇರುತ್ತದೆಯೆ ಎಂದು ಪ್ರಶ್ನಿಸಿದಾಗ, ಶ್ರೀರಾಮಕೃಷ್ಣರು ಹೀಗೆ ಹೇಳಿದರು : '' ಬೆಟ್ಟಗಳೂ ಮತ್ತು ಕಣಿವೆಗಳೂ ಸಮುದ್ರದ ಕೆಳಗೆ ಇರುತ್ತವೆ. ಆದರೆ ಮೇಲಿನಿಂದ ಅವು ಕಾಣುವುದಿಲ್ಲ. ಸಮಾಧಿಯಲ್ಲಿ ಎಲ್ಲೆಲ್ಲಿಯೂ ಇರುವ ವಿಸ್ತಾರವಾದ ಸಚ್ಚಿದಾನಂದ ಒಂದೇ ಕಾಣುವುದು. ಆಗ ವ್ಯಕ್ತಿಯ ಅನುಭವ ಸುಪ್ತಾವಸ್ಥೆಯಲ್ಲಿ ಇರುತ್ತದೆ.''

೯೧೭. ನಿಜವಾದ ಜ್ಞಾನದಲ್ಲಿ ಅಹಂಕಾರದ ಸುಳಿವು ಸ್ವಲ್ಪವೂ ಇರುವುದಿಲ್ಲ. ಸಮಾಧಿಯಿಲ್ಲದೆ ಜ್ಞಾನ ಬರುವುದಿಲ್ಲ ಜ್ಞಾನ ಮಧ್ಯಾಹ್ನದ ಸೂರ್ಯನಂತೆ ಒಬ್ಬರು ಸುತ್ತಲೂ ನೋಡಿದರೆ ನೆರಳು ಕಾಣುವುದಿಲ್ಲ. ಒಬ್ಬನಿಗೆ ಜ್ಞಾನ ಅಥವಾ ಸಮಾಧಿ ಸಿಕ್ಕಿದರೆ ಅವನಲ್ಲಿ ಅಹಂಕಾರದ ಸುಳಿವೆ ಇರುವುದಿಲ್ಲ. ಏನಾದರೂ ಸ್ವಲ್ಪ ಅಹಂಕಾರ ಉಳಿದಿದ್ದರೂ ಅದು ಕೇವಲ ವಿದ್ಯೆಯಿಂದ ಆದುದು, ಅವಿದ್ಯೆಯಿಂದ ಆದುದಲ್ಲ ಎಂಬುದನ್ನು ನೆನಪಿನಲ್ಲಿ ಇಡಿ

೯೧೮. ಬುದ್ಧ ಒಬ್ಬ ನಾಸ್ತಿಕನೆ ಎಂದು ಪ್ರಶ್ನೆಯನ್ನು ಕೇಳಿದ್ದಕ್ಕೆ ಶ್ರೀರಾಮಕೃಷ್ಣರು ಹೀಗೆಂದರು : '' ಅವನು ನಾಸ್ತಿಕನಲ್ಲ.

ಅವನಿಗೆ ತನ್ನ ಅನುಭವವನ್ನು ವರ್ಣಿಸುವುದಕ್ಕೆ ಆಗಲಿಲ್ಲ. ಬುದ್ಧ ಎಂದರೆ ಏನು ನಿಮಗೆ ಗೊತ್ತೆ? ಬೋಧ ಎಂದರೆ ಪರಮಜ್ಞಾನದೊಂದಿಗೆ ಐಕ್ಯನಾಗುವುದು. ಗಾಢಧ್ಯಾನದಿಂದ ಶುದ್ಧ ಚೈತನ್ಯಸ್ವರೂಪನಾಗುವುದು. ಆತ್ಮಸಾಕ್ಷಾತ್ಕಾರ ಅಸ್ತಿ ಮತ್ತು ನಾಸ್ತಿ ಇವುಗಳ ಮಧ್ಯ ಇರುವುದು. ಈ ಅಸ್ತಿ ನಾಸ್ತಿಗಳು ಪ್ರಕೃತಿಯ ಆವಿರ್ಭಾವಗಳು. ಸತ್ಯ ಇವೆರಡನ್ನೂ ಮೀರಿರುವುದು.

೯೧೯. ಜ್ಞಾನ ಮತ್ತು ಅಜ್ಞಾನಗಳ ಆಚೆ ಹೋಗಿ. ಅಜ್ಞಾನವೆಂದರೆ ಹಲವು ವಸ್ತುಗಳ ನೆನಪು, ಅಂದರೆ ದೇವರಿಲ್ಲದೆ, ಐಕ್ಯತೆಯ ಅನುಭವವಿಲ್ಲದೆ ಇರುವುದು. ಪಾಂಡಿತ್ಯದಿಂದ ಬರುವ ಅಹಂಕಾರ ಅಜ್ಞಾನದಿಂದ ಹುಟ್ಟುವುದು. ದೇವರು ಎಲ್ಲ ವಸ್ತುಗಳಲ್ಲಿಯೂ ಇರುವನು. ಅನೇಕದ ಹಿಂದೆ ಒಂದು ಐಕ್ಯತೆಯಿದೆ, ಎಂಬ ದೃಢನಂಬಿಕೆಗೆ ಏಕದ ಜ್ಞಾನವೆಂದು ಹೆಸರು ಅವನನ್ನು ಪ್ರತ್ಯಕ್ಷವಾಗಿ ತಿಳಿದುಕೊಳ್ಳುವುದಕ್ಕೆ ವಿಜ್ಞಾನವೆಂದು ಹೆಸರು.

ನಿಮ್ಮ ಕಾಲಿಗೆ ಒಂದು ಮುಳ್ಳು ಚುಚ್ಚಿಕೊಂಡಿದೆ ಎಂದಿಟ್ಟುಕೊಳ್ಳಿ. ಅದನ್ನು ತೆಗೆಯಬೇಕಾದರೆ ಎರಡನೇ ಮುಳ್ಳು ಬೇಕಾಗುವುದು. ಮೊದಲನೇ ಮುಳ್ಳನ್ನು ತೆಗೆದಮೇಲೆ ನಾವು ಎರಡು ಮುಳ್ಳನ್ನೂ ಎಸೆದುಬಿಡುವೆವು. ಅಜ್ಞಾನದ ಮುಳ್ಳನ್ನು ತೆಗೆಯಲೋಸುಗ ಸುಜ್ಞಾನದ ಮುಳ್ಳನ್ನು ತರುವಿರಿ. ಬ್ರಹ್ಮನನ್ನು ಪೂರ್ತಿ ತಿಳಿಯಲು ಆಗ ಜ್ಞಾನ ಅಜ್ಞಾನವೆಂಬ ಎರಡು ಮುಳ್ಳುಗಳನ್ನೂ ಬಿಸಾಡುವಿರಿ. ಬ್ರಹ್ಮ ಜ್ಞಾನ ಮತ್ತು ಅಜ್ಞಾನದ ಆಚೆ ಇರುವನು.

ಲಕ್ಷ್ಮಣ ಒಂದು ಸಲ ದೇವರಾದ ತನ್ನ ಅಣ್ಣನನ್ನು ಕುರಿತು "ಹೇ ರಾಮ! ಜ್ಞಾನಿಯಾದಂತಹ ವಶಿಷ್ಠನು ತನ್ನ ಮಗನ ಸಾವಿಗೆ ವ್ಯಥೆಪಟ್ಟನು. ಅವನನ್ನು ಸಮಾಧಾನಮಾಡುವುದಕ್ಕೆ ಆಗಲಿಲ್ಲ. ಇನು ಅತ್ಯಂತ ಆಶ್ಚರ್ಯವಲ್ಲವೆ?" ಎಂದನು. ಅದಕ್ಕೆ ಶ್ರೀರಾಮ "ತಮ್ಮ! ಇದನ್ನು ನೆನಪಿನಲ್ಲಿಡು. ಯಾರಿಗೆ ಈಶ್ವರ ಮತ್ತು ಜೀವನ ಪರಸ್ಪರ ಐಕ್ಯತೆಯ ಜ್ಞಾನವಿದೆಯೊ ಅವರಿಗೆ ಅದೇ ಕಾಲದಲ್ಲಿ ಪರಸ್ಪರ ಅಜ್ಞಾನವೂ ಇರಲೇಬೇಕು."

ಇಂತಹ ಮನುಷ್ಯನಿಗೆ ದೇವರ ವಿಚಾರದಲ್ಲಿ ಅಜ್ಞಾನವಿಲ್ಲದೆ ಇಲ್ಲ. ಈ ಸಂದರ್ಭದಲ್ಲಿ ಜ್ಞಾನ ಮತ್ತು ಅಜ್ಞಾನಗಳೆರಡಕ್ಕೂ ಅನ್ಯೋನ್ಯ ಸಂಬಂಧವಿದೆ. ಏಕೆಂದರೆ ಪ್ರಪಂಚದಲ್ಲಿ ಒಂದು ಐಕ್ಯತೆಯ

ಜ್ಞಾನ ಅದಕ್ಕೆ ಸಂಬಂಧಪಟ್ಟ ಹಲವನ್ನು ಸೂಚಿಸಿಯೇ ಸೂಚಿಸುತ್ತದೆ. ಯಾರಿಗೆ ದೀಪವಿದೆಯೆಂದು ಗೊತ್ತಾಗುವುದೋ ಅವನಿಗೆ ಕತ್ತಲೆಯ ಅರಿವು ಕೂಡ ಗೊತ್ತೇ ಇರುತ್ತದೆ.

ಅವ್ಯಕ್ತವು ಮಾನವನ ಸಂಕುಚಿತ ಬುದ್ಧಿಗೆ ಗ್ರಾಹ್ಯವಾಗುವ, ಜ್ಞಾನ ಅಜ್ಞಾನ, ಪಾಪ ಪುಣ್ಯ, ಒಳ್ಳೆಯ ಕರ್ಮ ಮತ್ತು ಕೆಟ್ಟ ಕರ್ಮ, ಶುಚಿ ಮತ್ತು ಅಶುಚಿ, ಇವುಗಳಾಚೆ ಇರುವುದು.

ಒಬ್ಬ ಪ್ರಶ್ನಕಾರ : ಸ್ವಾಮಿ, ಜ್ಞಾನ ಅಜ್ಞಾನಗಳೆಂಬ ಎರಡು ಮುಳ್ಳನ್ನು ಆಚೆಗೆ ಎಸೆದಮೇಲೆ ಉಳಿಯುವುದೇನು ಎಂಬುದನ್ನು ನಾನು ಕೇಳಲೆ ?

ಶ್ರೀರಾಮಕೃಷ್ಣರು :—ನಿತ್ಯಶುದ್ಧ ಬುದ್ಧ ಚೈತನ್ಯ ಒಂದೆ. ಆದರೆ ಅದನ್ನು ನಾನು ನಿನಗೆ ಹೇಗೆ ಸ್ಪಷ್ಟಪಡಿಸಲಿ. ಯಾರೋ ಒಬ್ಬರು ನಿನ್ನನ್ನು ಬೆಣ್ಣೆಯ ರುಚಿ ಹೇಗೆಂದು ಕೇಳಿದರು ಎಂದಿಟ್ಟುಕೊಳ್ಳೋಣ. ಅವನಿಗೆ ಚೆನ್ನಾಗಿ ತಿಳಿಯುವಂತೆ ಮಾಡುವುದು ಸಾಧ್ಯವೆ? ಅಂತಹ ಪ್ರಶ್ನೆಗೆ ಒಬ್ಬನು ಹೆಚ್ಚು ಎಂದರೆ "ಬೆಣ್ಣೆ ಬೆಣ್ಣೆಯಂತಿದೆ" ಎನ್ನಬಹುದು ಅಷ್ಟು. ಇನ್ನೂ ಮದುವೆಯಾಗದ ಒಬ್ಬ ಹುಡಿಗಿಯು ಮದುವೆಯಾದ ತನ್ನ ಸ್ನೇಹಿತಳನ್ನು ಕುರಿತು : "ನಿನ್ನ ಗಂಡ ಬಂದಿರುವನು. ನೀನು ಅವನನ್ನು ಕಂಡಾಗಲೆಲ್ಲಾ ಎಂತಹ ಸಂತೋಷ ನಿನಗೆ ಆಗುವುದು ಹೇಳು" ಎಂದಳು. ಅದಕ್ಕೆ ಮದುವೆಯಾದ ಹುಡಿಗಿ : "ನಿನಗೆ ಒಬ್ಬ ಗಂಡ ಬಂದಾಗ ಅದೆಲ್ಲ ನಿನಗೇ ಗೊತ್ತಾಗುವುದು. ಈಗ ನಾನು ಅದನ್ನು ಹೇಗೆ ಹೇಳಲಿ ?" ಎಂದಳು.

## ಸಮಾಧಿಯಲ್ಲಿ ಮಾನಸಿಕ ಸ್ಥಿತಿ

೬೨೦. ಹಕ್ಕಿಯ ಗೂಡನ್ನು ಹಾಳುಮಾಡಿದಾಗ ಹಕ್ಕಿ ಆಕಾಶಕ್ಕೆ ಹಾರುವುದು. ಇದರಂತೆಯೆ ದೇಹ ಮತ್ತು ಪ್ರಪಂಚದ ಭಾವನೆ ಮನಸ್ಸಿನಿಂದ ಹೋದಮೇಲೆ, ಪರಮಾತ್ಮನ ಆಕಾಶದಲ್ಲಿ ಜೀವಾತ್ಮನು ಹಾರಿಹೋಗಿ ಸಮಾಧಿಯಲ್ಲಿ ಮಗ್ನವಾಗುವನು.

೬೨೧. ದೇವತ್ವ ಮೂಡುವುದಕ್ಕೆ ಮುಂಚೆ ಮಾನವತ್ವ ನಾಶವಾಗಬೇಕು. ಆದರೆ ಬ್ರಹ್ಮಮಯಿ ಬರುವುದಕ್ಕೆ ಮುಂಚೆ ಈ ದೇವತ್ವವೂ ನಾಶವಾಗಬೇಕು. ಸತ್ಯಶಿವನಮೇಲೆ (ದೇವರಮೇಲೆ) ಜಗನ್ಮಯಿ ದಿವ್ಯನಾಟ್ಯವಾಡುವುದು.

೯೨೨. ಕರ್ಪೂರ ಉರಿದರೆ ಬೂದಿ ಏನೂ ಉಳಿಯುವುದಿಲ್ಲ. ನಿತ್ಯ ಅನಿತ್ಯ ವಸ್ತುವಿವೇಕ ಮುಗಿದು ಸಮಾಧಿಯನ್ನು ಪಡೆದಮೇಲೆ ಅಲ್ಲಿ "ನಾನು" "ನೀನು" ಮತ್ತು "ವಿಶ್ವ" ಇರುವುದಿಲ್ಲ. ಏಕೆಂದರೆ ಮನಸ್ಸು ಮತ್ತು ಅಹಂಕಾರ ಬ್ರಹ್ಮನಲ್ಲಿ ಐಕ್ಯವಾಗುವುದು.

೯೨೩. ಅಹಂಕಾರವನ್ನು ಅಳಿಸಿದಮೇಲೆ ಜೀವ ನಾಶವಾಗಿ ಸಮಾಧಿಯಲ್ಲಿ ಬ್ರಹ್ಮಸಾಕ್ಷಾತ್ಕಾರವಾಗುವುದು. ಆಗ ಬ್ರಹ್ಮ ಬ್ರಹ್ಮನನ್ನು ಸಾಕ್ಷಾತ್ಕಾರ ಮಾಡಿಕೊಳ್ಳುವನು.

೯೨೪. ಇಂದ್ರಿಯಗಳು ಮತ್ತು ಆಲೋಚನೆಗಳು ದೇವರನ್ನು ತಿಳಿಯಲಾರವೆಂದೂ, ಮನಸ್ಸು ಅವನನ್ನು ಅರಿಯಲಾರದೆಂದೂ ಒಬ್ಬನು ಪ್ರಶ್ನಿಸಿದಾಗ, ಶ್ರೀರಾಮಕೃಷ್ಣರು ಹೀಗೆ ಹೇಳಿದರು: "ಹಾಗಲ್ಲ, ಈ ಮಿತಿಯಿಂದ ಕೂಡಿದ ಮನಸ್ಸೇನೋ ಅವನನ್ನು ತಿಳಿಯಲಾರದು ನಿಜ. ಆದರೆ ಅವನನ್ನು ಶುದ್ಧ ಮನಸ್ಸಿನಿಂದ ತಿಳಿಯಬಹುದು. ಇದು ಶುದ್ಧ ಬುದ್ಧಿಗೆ ಸಮ. ಶುದ್ಧ ಬುದ್ಧಿಯು ಉಪಾಧಿಗಳಿಂದ ದೂರವಾದ ಆತ್ಮಕ್ಕೆ ಸಮ, ಕಾಮಿನೀ ಕಾಂಚನಗಳಲ್ಲಿ ಆಸಕ್ತವಾದ ಸಂಕುಚಿತ ಮನಸ್ಸು ಮತ್ತು ಮಿತಯುಕ್ತಿ ನಿಜವಾಗಿ ದೇವರನ್ನು ತಿಳಿಯಲಾರವು. ಮನಸ್ಸನ್ನು ವಿಷಯ ವಸ್ತುಗಳಿಂದ ಬೇರ್ಪಡಿಸಿ ಅಭ್ಯಾಸಬಲದಿಂದ ಅದನ್ನು ಶುದ್ಧಿಮಾಡಬಹುದು. ಪ್ರಾಪಂಚಿಕತೆ, ಆಸೆ, ಆಸಕ್ತಿಗಳಿಂದ ದೂರವಾದಮೇಲೆ ಮನಸ್ಸು ಅವ್ಯಕ್ತವಾದ ಅಧ್ಯಾತ್ಮಕ್ಕೆ ಸಮವಾಗುವುದು. ಹಿಂದಿನ ಕಾಲದ ಋಷಿಗಳು ದೇವರನ್ನು ನೋಡಿದುದು ಹೀಗಲ್ಲವೆ? ದೇವರನ್ನು, ಅವ್ಯಕ್ತವಾದ ಅಧ್ಯಾತ್ಮವನ್ನು, ಅವರು ಶುದ್ಧವಾದ ಮನಸ್ಸಿನಿಂದ ನೋಡಿದರು. ಈ ಶುದ್ಧವಾದ ಮನಸ್ಸೆ ಆತ್ಮ ಅಥವಾ ಅವ್ಯಕ್ತದ ಅಂತರಾಳದಲ್ಲಿರುವ ಅಧ್ಯಾತ್ಮ

೯೨೫. ಮನಸ್ಸು ಮತ್ತು ಬುದ್ಧಿ ಬಂಧನದಲ್ಲಿ ಇರುವವರೆಗೆ ದೇವರು ಇವುಗಳ ಆಚೆ ಇರುವನು. ಆದರೆ ಇವುಗಳು ಶುದ್ಧವಾದ ಮೇಲೆ ದೇವರು ಗೋಚರಿಸುವನು. ಆಸೆ ಮತ್ತು ಕಾಮ ಮನಸ್ಸನ್ನು ಅಶುದ್ಧಮಾಡುವುದು. ಅವಿದ್ಯೆ ಹೃದಯದಲ್ಲಿ ಇರುವ ತನಕ ಮನಸ್ಸು ಮತ್ತು ಬುದ್ಧಿ ಎಂದಿಗೂ ಶುದ್ಧವಾಗಲಾರದು. ಸಾಧಾರಣವಾಗಿ ಮನಸ್ಸು ಮತ್ತು ಬುದ್ಧಿ ಬೇರೆ ಬೇರೆ ಎಂದು ಪರಿಗಣಿಸಲ್ಪಟ್ಟಿವೆ. ಆದರೆ ಅವು ಪರಿಶುದ್ಧವಾದ ಮೇಲೆ ಒಂದಾಗಿ ಚೈತನ್ಯದಲ್ಲಿ ಐಕ್ಯವಾಗುವುವು. ಆಗ ದೇವರು (ಚೈತನ್ಯವು) ಚೈತನ್ಯಕ್ಕೆ ಕಾಣುವನು.

# ಸಮಾಧಿಯು ನಂತರ ಬರುವ ವಿಜ್ಞಾನ

೯೨೬. ಜ್ಞಾನವೆಂದರೆ ದೃಶ್ಯವನ್ನೆಲ್ಲ ಕಳೆದ ಮೇಲೆ ಉಳಿಯುವ ಆತ್ಮಸಾಕ್ಷಾತ್ಕಾರ. ವಿವೇಕದಿಂದ ದೃಶ್ಯವನ್ನು ಕಳೆದ ಮೇಲೆ ಒಬ್ಬನು ಸಮಾಧಿಮಗ್ನನಾಗುವನು, ಆತ್ಮಸಾಕ್ಷಾತ್ಕಾರವನ್ನು ಪಡೆಯುವನು.

ವಿಜ್ಞಾನವೆಂದರೆ ಇನ್ನೂ ಹೆಚ್ಚಾಗಿ ತಿಳಿದುಕೊಳ್ಳುವುದು. ಕೆಲವರು ಹಾಲಿನ ಹೆಸರನ್ನು ಮಾತ್ರ ಕೇಳಿರುವರು. ಕೆಲವರು ಅದನ್ನು ನೋಡಿರುವರು. ಮತ್ತೆ ಕೆಲವರು ಅದನ್ನು ರುಚಿನೋಡಿರುವರು. ಅದನ್ನು ಸುಮ್ಮನೆ ಕೇಳಿರುವವನು ಅಜ್ಞಾನಿ. ಅದನ್ನು ನೋಡಿರುವವನು ಜ್ಞಾನಿ. ಅದನ್ನು ರುಚಿ ನೋಡಿರುವವನು ಮಾತ್ರ ವಿಜ್ಞಾನಿ. ಅಂದರೆ ಸಂಪೂರ್ಣ ಅದನ್ನು ತಿಳಿದವರು ದೇವರನ್ನು ನೋಡಿ ಅವನೊಂದಿಗೆ ನಮ್ಮ ಹತ್ತಿರದ ನೆಂಟನಂತೆ ಸಂಬಂಧ ಬೆಳೆಸುವುದನ್ನು ವಿಜ್ಞಾನವೆಂದು ಕರೆಯುವುದು.

ಮೊದಲು " ನೇತಿ, ನೇತಿ " (ಇದಲ್ಲ, ಇದಲ್ಲ) ಎಂಬ ಮಾರ್ಗ ವನ್ನು ಅನುಸರಿಸಬೇಕು. ಅವನು ಪಂಚಭೂತಗಳಲ್ಲ, ಇಂದ್ರಿಯಗಳಲ್ಲ. ಮನಸ್ಸಲ್ಲ, ಬುದ್ಧಿಯಲ್ಲ, ಅಹಂಕಾರವಲ್ಲ. ಅವನು ಎಲ್ಲಾ ತತ್ತ್ವಗ ಳಾಚೆ ಇರುವನು ಮಾಳಗೆಯ ಮೇಲೆ ಹೋಗಬೇಕಾದರೆ ಮೆಟ್ಟಲ ನೆಲ್ಲಾ ಒಂದಾದಮೇಲೊಂದನ್ನು ದಾಟಿಕೊಂಡು ಹೋಗಬೇಕು. ಮೆಟ್ಟಲುಗಳೇನೋ ಮಾಳಿಗೆಯಲ್ಲ. ಆದರೆ ನೀನು ಮಾಳಿಗೆಯನ್ನು ಸೇರಿದ ಮೇಲೆ ಮೆಟ್ಟಲು ಮಾಡಲ್ಪಟ್ಟ ಇಟ್ಟಿಗೆ ಸುಣ್ಣ ಗಾರೆ ಇವುಗ ಳಿಂದಲೆ ಮಾಳಿಗೆ ಆಗಿದೆ ಎನ್ನುವುದು ಗೊತ್ತಾಗುವುದು. ಯಾವುದು ಪರಬ್ರಹ್ಮವೊ ಅದೇ ಜೀವ, ಜಗತ್, ಇಪ್ಪತ್ತನಾಲ್ಕು ತತ್ತ್ವಗಳಾ ಗಿರುವುದು. ಯಾವುದು ಆತ್ಮವೊ ಅದೇ ಪಂಚಭೂತಗಳಾಗಿರುವುದು. ಆತ್ಮನಿಂದ ಬಂದಿದ್ದರೆ ಏತಕ್ಕೆ ಇಷ್ಟು ಗಟ್ಟಿಯಾಗಿದೆಯೆಂದು ನೀವು ಕೇಳಬಹುದು? ಅವನ ಇಚ್ಛೆಯಿಂದ ಎಲ್ಲವೂ ಸಾಧ್ಯವಾಗುವುದು. ಮಾಂಸ ಮತ್ತು ಮೂಳೆ ರಕ್ತ ಮತ್ತು ವೀರ್ಯದಿಂದ ಆಗಿಲ್ಲವೇ! ಸಮುದ್ರದ ನೊರೆ ಎಷ್ಟು ಗಟ್ಟಿಯಾಗಿರುವುದು?

ವಿಜ್ಞಾನವನ್ನು ಪಡೆದ ಮೇಲೆ ಒಬ್ಬನು ಪ್ರಪಂಚದಲ್ಲಿಯೂ ಇರಬಹುದು. ಆಗ ತಾನು ಪ್ರಪಂಚದ ಹೊರಗೆ ಇರುವವನಲ್ಲ. ಜಡ ಮತ್ತು ಚೇತನದಿಂದ ಕೂಡಿದ ಜಗತ್ತೆಲ್ಲವೂ ತಾನೇ ಆಗಿರುವನೆಂದು

ಚೆನ್ನಾಗಿ ಗೊತ್ತಾಗುವುದು. ರಾಮನಿಗೆ ಜ್ಞಾನ ಪ್ರಾಪ್ತವಾಗಿ ಅವನು ಸಂಸಾರದಲ್ಲಿ ಇರಲು ಒಪ್ಪದೇ ಇದ್ದಾಗ, ದಶರಥನು ಅವನಿಗೆ ಬುದ್ಧಿ ಹೇಳಲು ವಶಿಷ್ಠನನ್ನು ಕಳುಹಿಸಿಕೊಟ್ಟನು. ಆಗ ವಶಿಷ್ಠನು ರಾಮನನ್ನು ಕುರಿತು, ಪ್ರಪಂಚ ದೇವರಿಂದ ಬೇರೆಯಾಗಿದ್ದರೆ ನೀನು ಅದನ್ನು ಬಿಡಬಹುದು ಎಂದನು. ರಾಮಚಂದ್ರನು ಸುಮ್ಮನೆ ಇದ್ದನು. ದೇವರಿಲ್ಲದೆ ಯಾವುದೂ ಇಲ್ಲವೆಂದು ತವನಿಗೆ ಚೆನ್ನಾಗಿ ಗೊತ್ತಿತ್ತು.

೯೨೭. ಸಂಗೀತದಲ್ಲಿ ಸ್ವರವು ಕೆಳಗಿನ ಮೆಟ್ಟಲಿಂದ ಕ್ರಮೇಣ ಮೇಲಿನ ಮೆಟ್ಟಲಿಗೆ ಏರಿ ಪುನಃ ಕೆಳಗಿನ ಮೆಟ್ಟಲಿಗೆ ಇಳಿಯುವುದು. ಇದರಂತೆಯೇ ಸಮಾಧಿಯಲ್ಲಿ ಅದ್ವೈತವನ್ನನುಭವಿಸಿ ಒಬ್ಬನು ಕೆಳಗಿಳಿದು ಅಹಂಭಾವದಿಂದಿರುವನು. ಬಾಳೆಯ ಮರದ ಹೊದಿಕೆಯನ್ನೆಲ್ಲಾ ಒಂದಾದಮೇಲೊಂದನ್ನು ಕಳೆದ ಮೇಲೆ ದಿಂಡಿಗೆ ಹೋಗಿ ಅದನ್ನು ಮುಖ್ಯವಾದುದೆಂದು ಪರಿಗಣಿಸುತ್ತಾನೆ. ಆದರೆ ನಂತರ ಹೊದಿಕೆಯೂ ಕೂಡ ಅದೇ ಮರದ್ದೆಂದು ತಿಳಿಯುತ್ತಾನೆ. ಬಾಳೆಯ ಕಂದು ಪೂರ್ತಿಯಾಗಬೇಕಾದರೆ ಎರಡೂ ಆವಶ್ಯಕ.

೪೨೮. ಒಂದು ಬೇಲದ ಹಣ್ಣನ್ನು ಪರೀಕ್ಷಿಸುವಾಗ ಚಿಪ್ಪು ಬೀಜ ತಿರಳು ಎಂದು ಅವರ ಭಾಗಗಳನ್ನು ಬೇರ್ಪಡಿಸುತ್ತಾನೆ. ಈಗ ಇದರಲ್ಲಿ ಯಾವುದು ಬೇಲದಹಣ್ಣು? ಮೊದಲು ಅದರ ಚಿಪ್ಪನ್ನು ಮುಖ್ಯವಲ್ಲವೆಂದೂ, ಅನಂತರ ಅದರ ಬೀಜವನ್ನು ಮುಖ್ಯವಲ್ಲವೆಂದೂ, ಕೊನೆಗೆ ತಿರುಳನ್ನು ಬೇರ್ಪಡಿಸಿ ಇದೇ ಮುಖ್ಯವೆಂದು, ಅದನ್ನೆ ನಿಜವಾದ ಹಣ್ಣೆಂದೂ, ಹೇಳುತ್ತಾನೆ. ಆದರೆ ಅನಂತರ ಹೀಗೆ ಹೊಳೆಯುತ್ತದೆ. ಯಾವ ಹಣ್ಣಿಗೆ ತಿರುಳಿದೆಯೊ ಅದಕ್ಕೆ ಚಿಪ್ಪು ಮತ್ತು ಬೀಜ ಇದೆ. ಇವುಗಳೆಲ್ಲಾ ಸೇರಿ ಒಟ್ಟು ಹಣ್ಣಾಗುವುದು. ಇದರಂತೆಯೆ ನಿರ್ಗುಣಬ್ರಹ್ಮನ ಪ್ರತ್ಯಕ್ಷ ಅನುಭವವನ್ನು ಪಡೆದ ಮೇಲೆ ಅವ್ಯಕ್ತನಾದ ಅದೇ ಬ್ರಹ್ಮನು ಲೀಲೆಗಾಗಿ ಜಗದ ರೂಪವನ್ನು ಧರಿಸಿರುವನೆಂದು ಗೊತ್ತಾಗುವುದು.

೯೨೯. ಒಂದು ದಿನ ಶ್ರೀರಾಮಕೃಷ್ಣರು ನರೇಂದ್ರನನ್ನು (ಸ್ವಾಮಿ ವಿವೇಕಾನಂದರನ್ನು) ಅವನ ಜೀವನದ ಆದರ್ಶವೇನೆಂದು ಪ್ರಶ್ನಿಸಿದರು. "ಯಾವಾಗಲೂ ಸಮಾಧಿಯಲ್ಲಿ ಮಗ್ನನಾಗುವುದು" ಎಂದನು. "ಸಮಾಧಿಯನ್ನು ಮೀರಿ ಹೋಗು. ನಿನಗೆ ಸಮಾಧಿ ಕೆಲಸಕ್ಕೆಬಾರದ ವಸ್ತು" ಎಂದರು.

ಮತ್ತೊಬ್ಬನಿಗೆ, " ಭಾವ ಮತ್ತು ಭಕ್ತಿ ಇವುಗಳೇ ಕೊನೆಯಲ್ಲ " ಎಂದರು.

೯೩೦. ಮತ್ತೊಂದು ಸಲ ಶ್ರೀರಾಮಕೃಷ್ಣರು ನರೇಂದ್ರನನ್ನು ಅದೇ ಪ್ರಶ್ನೆ ಕೇಳಿ ಅದೇ ಉತ್ತರವನ್ನು ಸ್ವೀಕರಿಸಿದರು. ಅದಕ್ಕೆ ಶ್ರೀರಾಮಕೃಷ್ಣರು ಹೀಗೆಂದರು : '' ಏತಕ್ಕೆ, ನಾನು ನಿನ್ನನ್ನು ಇನ್ನೂ ಉತ್ತಮನೆಂದು ತಿಳಿದಿದ್ದೆ. ಎಲ್ಲೋ ಒಂದು ಆದರ್ಶ ದೃಷ್ಟಿಯಿಂದ ನೀನು ಹೇಗೆ ತೃಪ್ತನಾಗಬಲ್ಲೆ? ಸರ್ವತೋಮುಖನಾಗಿರುವುದೆ ನನ್ನ ಶಕ್ತಿ. ಉದಾಹರಣೆಗೆ, ನಾನು ಮೀನನ್ನು ಹಲವು ವಿಧಗಳಲ್ಲಿ ತಿನ್ನ ಬೇಕೆಂದು ಇಚ್ಛಿಸುತ್ತೇನೆ. ಹುರಿದಿದ್ದು, ಬೇಯಿಸಿದ್ದು, ಮೀನಿನ ಸಾರು, ಅದರ ಉಪ್ಪಿನಕಾಯಿ ಇತ್ಯಾದಿ. ಸಮಾಧಿಯಲ್ಲಿ ನಿರ್ಗುಣನಾದ ಅವ್ಯಕ್ತನಾದ ದೇವರನ್ನು ಅನುಭವಿಸುವುದು ಮಾತ್ರವಲ್ಲ. ಜೊತೆಗೆ ಅವನ ಅನೇಕ ದಿವ್ಯರೂಪಗಳನ್ನು ಮಧುರವಾದ ಮಾನವಸ್ವಭಾವದ ಮೂಲಕವೂ ಅನುಭವಿಸುತ್ತೇನೆ. ನೀನು ಕೂಡ ಹಾಗೆಯೆ ಮಾಡು. ಒಟ್ಟಿಗೆ ಜ್ಞಾನಿ ಮತ್ತು ಭಕ್ತನಾಗು ''

## ಅಧ್ಯಾಯ ೧೯

## ಹಲವು ಬಗೆಯ ಮುಕ್ತಾತ್ಮರು

೯೩೧. ವಿಜ್ಞಾನ (Science) ವ್ಯಕ್ತಪ್ರಪಂಚವನ್ನು ಮಾತ್ರ ಪರಿಗಣಿಸುವುದು ಎಂಬುದನ್ನು ಜನರು ತಿಳಿಯರು. ಅದು ಅವ್ಯಕ್ತ ದಿಂದ ಯಾವ ಸುದ್ದಿಯನ್ನೂ ತರುವುದಿಲ್ಲ. ಹಿಂದಿನ ಋಷಿಗಳಂತೆ ಯಾರು ದೇವರನ್ನು ಕಂಡು ಅವನಲ್ಲಿ ಐಕ್ಯರಾಗಿರುವರೊ ಅವರು ಅಂತಹ ಸುದ್ದಿ ತಂದಿರುವರು. ದೇವರು ಇಂತಹ ಸ್ವಭಾವದವನೆಂದು ಹೇಳಲು ಅವರೇ ಅರ್ಹರು.

೯೩೨. ಈ ಪ್ರಪಂಚದಲ್ಲಿ ಐದು ಬಗೆಯ ಸಿದ್ಧಪುರುಷರಿರು ವರು. ಅವರು—(೧) ಸ್ವಪ್ನಸಿದ್ಧರು—ಕನಸಿನ ಪರಿಣಾಮವಾಗಿ ಆದ ಸ್ಫೂರ್ತಿಯ ಮೂಲಕ ಪರಿಪೂರ್ಣತೆಯನ್ನು ಪಡೆದವರು. (೨) ಮಂತ್ರ ಸಿದ್ಧರು—ಮಂತ್ರದ ಮೂಲಕ ಸಿದ್ಧಿಯನ್ನು ಪಡೆದವರು. (೩) ಹಟಾತ್ ಸಿದ್ಧರು, ಅಂದರೆ ಕಡುಬಡವನಿಗೆ ನಿಧಿ ದೊರೆತೊ ಅಥವಾ ಶ್ರೀಮಂತರ

ಹುಡುಗಿಯನ್ನು ಮದುವೆಯಾಗಿಯೊ ಐಶ್ವರ್ಯವಂತನಾದಂತೆ; ಇದ್ದಕ್ಕಿದ್ದಂತೆಯೆ ನಿಧಿಯನ್ನು ಪಡೆದವರು. ಇದರಂತೆಯೆ ಹಲವರು ಪಾಪಾತ್ಮರಾಗಿದ್ದರೂ ತಕ್ಷಣವೆ ಪರಿಶುದ್ಧರಾಗಿ ಪರಮಾತ್ಮನ ನೆಲೆಯನ್ನು ಸೇರುವರು. (೪) ಕೃಪಾಸಿದ್ಧರು—ಅಂದರೆ ದೇವರ ಕೃಪೆಯಿಂದ ಸಿದ್ಧಿಯನ್ನು ಪಡೆದವರು. ಒಂದು ಕಾಡನ್ನು ಕಡಿಯುತ್ತಿರುವಾಗ ಒಂದು ಹಳೆಯ ಮನೆಯೊ ಅಥವಾ ಕೆರೆಯನ್ನು ಕಂಡು ತಾವು ಅದನ್ನು ಕಟ್ಟುವುದಕ್ಕೆ ತೊಂದರೆಯನ್ನು ತೆಗೆದುಕೊಳ್ಳುವ ಅವಶ್ಯಕತೆಯೆ ಇಲ್ಲದೆ ಇರುವಂತೆ, ಕೆಲವರು ಅದೃಷ್ಟವಶಾತ್ ಅಷ್ಟೊಂದು ಕಷ್ಟಪಡದೆ ಸಿದ್ಧಿಯನ್ನು ಪಡೆಯುವರು. (೫) ನಿತ್ಯಸಿದ್ಧರು ಅಥವಾ ಯಾವಾಗಲೂ ಸಿದ್ಧರಾಗಿರುವವರು. ಸೋರೆ ಅಥವಾ ಕುಂಬಳದ ಬಳ್ಳಿ ಮೊದಲು ಕಾಯಿಯನ್ನು ಬಿಟ್ಟು, ನಂತರ ಹೂವನ್ನು ಬಿಡುವಂತೆ, ನಿತ್ಯಸಿದ್ಧರು ಪೂರ್ಣರಾಗಿಯೆ ಜನ್ಮವೆತ್ತುವರು. ಪೂರ್ಣತೆಗಾಗಿ ಅವರು ಪಡುವ ತೋರಿಕೆಯ ಶ್ರಮವೆಲ್ಲ ಕೇವಲ ಜನಾಂಗಕ್ಕೆ ಒಂದು ಆದರ್ಶ ಕೊಡುವುದಕ್ಕೆ ಮಾತ್ರ.

೯೩೩. ಶಾಕ್ತರಲ್ಲಿ ಸಿದ್ಧರಿಗೆ ಕೌಲನೆಂದೂ, ವೇದಾಂತಿಗಳಲ್ಲಿ ಪರಮಹಂಸನೆಂದೂ, ಬಾವುಲ್ ಪಂಗಡಕ್ಕೆ ಸೇರಿದ ವೈಷ್ಣವರಲ್ಲಿ ಸಾಯಿ ಎಂದು ಹೆಸರು.

೯೩೪. ಮಾವಿನ ಹಣ್ಣನ್ನು ತಿಂದಾದಮೇಲೆ ಕೆಲವರು ಮತ್ತೊಬ್ಬರಿಗೆ ತಿಳಿಯದೆ ಇರಲಿಯೆಂದು ತುಟಿಯನ್ನು ಚೆನ್ನಾಗಿ ಒರೆಸಿಕೊಳ್ಳುವರು. ಆದರೆ ಮಾವಿನಹಣ್ಣು ಸಿಕ್ಕಿದರೆ ಇತರರನ್ನು ಕರೆದು ಅವರಿಗೆ ಹಂಚುವವರೂ ಕೆಲವರು ಇರುವರು. ಹಾಗೆಯೆ ಪರಮಾನಂದವನ್ನು ತಾವು ಅನುಭವಿಸಿದ ಕೆಲವರು ಉಳಿದವರಿಗೂ ಕೂಡ ಇದನ್ನು ಹೊಂದುವುದಕ್ಕೆ ಸಹಾಯಮಾಡದೆ ಇರಲಾಗುವುದಿಲ್ಲ.

## ಹೃದಯಕ್ಕೆ ಪರಮಾತ್ಮನ ಆಗಮನ

೯೩೫. ಯಾರು ಭಗವಂತನನ್ನು ನೋಡಿರುವರೊ ಅವರು ಸಂಪೂರ್ಣ ಮಾರ್ಪಟ್ಟ ಜೀವಿಗಳು.

೯೩೬. ಕೆಲವರು ಆಗಲೇ ಜಾಗ್ರತರಾಗಿರುವರು. ಇವರಿಗೆ ಕೆಲವು ಚಿಹ್ನೆಗಳಿವೆ. ದೇವರಿಗೆ ಸಂಬಂಧಪಟ್ಟದುದಲ್ಲದೆ ಮತ್ತಾವು

ದನ್ನೂ ಅವರು ಕೇಳಲಿಚ್ಛಿಸುವುದಿಲ್ಲ. ಸಪ್ತಸಮುದ್ರಗಳಿದ್ದರೂ, ಗಂಗೆ ಯಮುನಾ ನದಿಗಳು ಉಕ್ಕಿ ಹರಿಯುತ್ತಿದ್ದರೂ, ಮಳೆ ಹನಿಗೆ ಮಾತ್ರ ನಿರೀಕ್ಷಿಸುವ ಚಾತಕ ಪಕ್ಷಿಯಂತೆ ಇವರು. ಬಾಯಾರಿಕೆಯಿಂದ ಇದರ ಗಂಟಲು ಒಣಗಿದ್ದರೂ ಮಳೆಹನಿಯಲ್ಲದೆ ಮತ್ತಾವುದನ್ನೂ ಇದು ಕುಡಿಯುವುದಿಲ್ಲ.

೯೩೭. ಮಾನವನ ಹೃದಯಕ್ಕೆ ದೇವರ ಆಗಮನದ ಚಿಹ್ನೆಗಳೇನು? ಅರುಣೋದಯ ಸೂರ್ಯನ ಬರವನ್ನು ಸಾರುವಂತೆ, ನಿಸ್ವಾರ್ಥತೆ, ಪರಿಶುದ್ಧತೆ ಮತ್ತು ಧಾರ್ಮಿಕತೆ ಇವು ದೇವರ ಬರವನ್ನು ಸಾರುವುವು.

೯೩೮. ರಾಜ ತನ್ನ ಭೃತ್ಯನ ಮನೆಗೆ ಹೋಗಿ ಆದರಾತಿಥ್ಯವನ್ನು ಸ್ವೀಕರಿಸುವುದಕ್ಕೆ ಮುಂಚೆ, ಭೃತ್ಯನು ತನ್ನನ್ನು ಚೆನ್ನಾಗಿ ಬರಮಾಡಿಕೊಂಡು ಗೌರವವನ್ನು ತೋರಲಿ ಎಂದು ತನ್ನ ಭಂಡಾರದಿಂದ ಅವನೇ ಆಸನ, ಆಹಾರಸಾಮಗ್ರಿ ಮುಂತಾದುವನ್ನು ಕಳುಹಿಸುವನು. ಇದರಂತೆಯೆ ದೇವರು ಬರುವುದಕ್ಕೆ ಮುಂಚೆ ಹಂಬಲಿಸುತ್ತಿರುವ ಭಕ್ತನ ಹೃದಯಕ್ಕೆ, ಪ್ರೇಮ, ಭಕ್ತಿ ಮತ್ತು ಶ್ರದ್ಧೆ ಮುಂತಾದುವನ್ನು ಕಳುಹಿಸುವನು.

೯೩೯. ಹೃದಯದಲ್ಲಿ ಆಗುವ ಆನಂದ ಭಗವಂತನ ಸಾಕ್ಷಾತ್ಕಾರದ ಚಿಹ್ನೆಗಳಲ್ಲಿ ಒಂದು. ಸಾಗರದ ಮೇಲೆ ಅಲೆಗಳು ಉರುಳಾಡುತ್ತಿರುತ್ತವೆ. ಆದರೆ ಒಳಗಿರುವ ಆಳವಾದ ನೀರು ಕದಲದೆ ಇರುವುದು.

೯೪೦. ಪರಮಾನಂದ ದೊರೆತಾಗ ಒಬ್ಬನು ಅದರಿಂದ ಅಮಲೇರುವನು. ಮದ್ಯವನ್ನು ಕುಡಿಯದೆ ಇದ್ದರೂ ಅವನೊಬ್ಬ ತುಂಬಾ ಕುಡಿದವನಂತೆ ತೋರುತ್ತಾನೆ. ನಾನು ನನ್ನ ಜಗನ್ಮಾತೆಯ ಪಾದಕಮಲಗಳನ್ನು ನೋಡಿದಾಗ ನನಗೆ ಐದು ಬುಡ್ಡಿ ಸಾರಾಯಿ ಕುಡಿದಷ್ಟು ಅಮಲೇರುವುದು. ಈ ಸ್ಥಿತಿಯಲ್ಲಿ ಒಬ್ಬನು ಸಿಕ್ಕಿದ ಆಹಾರವನ್ನು ತೆಗೆದುಕೊಳ್ಳಲಾಗುವುದಿಲ್ಲ.

೯೪೧. ಸಿದ್ಧನು ಹೊಂದುವ ಅವಸ್ಥೆ ಎಂತಹುದು? ಆಲೂಗೆಡ್ಡೆ ಅಥವಾ ಬದನೆಕಾಯಿ ಬೆಂದಾಗ ಮೆತ್ತಗೆ ಆಗುವಂತೆ ಮನುಷ್ಯನು ಸಿದ್ಧನಾದಮೇಲೆ ಮೃದುವಾಗುವನು, ವಿನಯಿಯಾಗುವನು.

## ಸಿದ್ಧಾವಸ್ಥೆಯ ಕೆಲವು ಚಿಹ್ನೆಗಳು

೯೪೨. ಯಾರು ಬದುಕಿರುವಾಗಲೇ ಸತ್ತಿರುವರೊ ಅಂದರೆ ಯಾರ ಆಸೆ ಶವದಲ್ಲಿ ಹೇಗೆ ನಾಶವಾಗಿದೆಯೋ ಹಾಗೆ ನಾಶವಾಗಿರುವವೊ ಅವನೆ ಆತ್ಮಜ್ಞಾನಿ.

೯೪೩. ಶ್ರೀರಾಮಕೃಷ್ಣರು ಒಮ್ಮೆ ಕೇಶವ ಚಂದ್ರಸೇನನಿಗೆ ಹೀಗೆ ಹೇಳಿದರು: "ನೀನು ಇನ್ನೂ ಮುಂದೆ ಹೋಗಿ, ಗಹನ ವಿಷಯಗಳನ್ನು ಬೋಧಿಸಿದರೆ ನಿನ್ನ ಪಂಗಡವೆಲ್ಲ ಚೂರು ಚೂರಾಗಿ ಒಡೆದು ಹೋಗುವುದು. ಜ್ಞಾನಾವಸ್ಥೆಯಲ್ಲಿ ಒಂದು ಪಂಗಡವನ್ನು ಮಾಡುವುದು ಕನಸಿನಂತೆ ಮಿಥ್ಯ."

೯೪೪. ಮನುಷ್ಯನಿಗೆ ನಿಜವಾದ ಜ್ಞಾನ ಪ್ರಾಪ್ತಿಯಾದರೆ ಅವನು ದೇವರನ್ನು ಎಲ್ಲೋ ದೂರದಲ್ಲಿ ಇರುವವನೆಂದು ಭಾವಿಸುವುದಿಲ್ಲ ಅವನು ಅಂದಿನಿಂದ ದೂರದಲ್ಲಿರುವವನೆಂದು ಕಾಣಿಸುವುದಿಲ್ಲ. ಅವನು ಅಂತರಂಗದಲ್ಲಿರುವವನು ಎಂದು ಭಾಸವಾಗುವುದು. ಅವನು ಎಲ್ಲರ ಅಂತರಂಗದಲ್ಲೂ ಇರುವನು. ಅವನನ್ನು ಹುಡುಕುವವರೆಲ್ಲ ಅಲ್ಲಿ ಕಾಣುತ್ತಾರೆ.

೯೪೫. ನೀರಿನಲ್ಲಿರುವ ಒಂದು ಕೂಜದ ಒಳಗೆ ಮತ್ತು ಹೊರಗೆಲ್ಲಾ ನೀರಿರುವುದು. ಇದರಂತೆಯೇ ದೇವರಲ್ಲಿ ತನ್ಮಯವಾದ ಜೀವಕ್ಕೆ ಸರ್ವಾಂತರ್ಯಾಮಿಯಾದ ಭಗವಂತ ಒಳಗೆ ಮತ್ತು ಹೊರಗೆಲ್ಲಾ ಕಾಣುವನು.

೯೪೬. ಭಗವಂತನ ಸಾಕ್ಷಾತ್ಕಾರವಾದಮೇಲೆ ಒಬ್ಬನು ಅವನನ್ನು ಎಲ್ಲಾ ಕಡೆಯಲ್ಲೂ ಮತ್ತು ಎಲ್ಲಾ ವಸ್ತುಗಳಲ್ಲೂ ಕಾಣುವನು. ಆದರೆ ಮಾನವರಲ್ಲಿ ಅವನ ಆವಿರ್ಭಾವ ಹೆಚ್ಚು. ಅದರಲ್ಲಿಯೂ ಕಾಮಿನಿಕಾಂಚನಗಳ ಮೇಲೆ ಸ್ವಲ್ಪವೂ ಇಚ್ಛೆಯಿಲ್ಲದ ಸತ್ತ್ವಗುಣದಿಂದ ಕೂಡಿದ ಭಕ್ತರಲ್ಲಿ ಅವನು ಅತ್ಯುತ್ತಮವಾಗಿ ಪ್ರಕಾಶಿಸುವನು.

೯೪೭. ಭಕ್ತನು ಭಗವಂತನನ್ನು ನೋಡಿದಮೇಲೆ ಅವನ ಲೀಲೆಯನ್ನು ನೋಡಬೇಕೆಂದು ಬಯಸುವುದು ಸಹಜವೇ ಸರಿ. ರಾವಣನ ಸಂಹಾರದ ನಂತರ ಶ್ರೀ ರಾಮಚಂದ್ರನು ಲಂಕಾನಗರವನ್ನು ಪ್ರವೇಶಿಸಿದಾಗ ರಾವಣನ ತಾಯಿ ಮುದುಕಿಯಾದ ನಿಕಾಶಳು ಓಡಿ

ಹೋಗುವುದಕ್ಕೆ ಪ್ರಯತ್ನಿಸಿದಳು. ಲಕ್ಷ್ಮಣನು ರಾಮನನ್ನು ನೋಡಿ "ಇದೇನು ರಾಮ! ಇವಳಿಗೆ ಇಷ್ಟು ವಯಸ್ಸಾಗಿದೆ. ಮಕ್ಕಳ ಸಾವಿನಿಂದ ಇಷ್ಟೊಂದು ಕಷ್ಟವನ್ನನುಭವಿಸಿರುವಳು. ಆದರೂ ಇವಳು ಪ್ರಾಣಕ್ಕೆ ಅಂಜಿ ಓಡುತ್ತಿರುವಳು" ಎಂದನು. ರಾಮನು ಅವಳಿಗೆ ಅಭಯವನ್ನು ಕೊಟ್ಟು ಓಡಿಹೋಗುವುದಕ್ಕೆ ಕಾರಣವನ್ನು ಕೇಳಿದನು. "ಹೇ ರಾಮ! ನಾನು ಇಷ್ಟು ಕಾಲ ಬದುಕಿರುವ ಹೊತ್ತಿಗೆ ನಿನ್ನ ಲೀಲೆಯನ್ನು ಇಷ್ಟೊಂದು ನೋಡಲು ಸಾಧ್ಯವಾಯಿತು. ನಾನು ನಿನ್ನ ಲೀಲೆಯನ್ನು ಇನ್ನೂ ನೋಡಬೇಕಾಗಿ ಬಯಸುವುದರಿಂದ ಹೆಚ್ಚು ಕಾಲ ಬದುಕಲಿಚ್ಛಿಸುವೆನು" ಎಂದಳು

೯೪೮. ಮುಕ್ತಜೀವಿಗಳಲ್ಲಿ ಮಾಯೆಯಿರುವುದೆ? ಶುದ್ಧ ಚಿನ್ನದಿಂದ ಒಡವೆಗಳನ್ನು ಮಾಡಲಾಗುವುದಿಲ್ಲ. ಅದರೊಂದಿಗೇನಾದರೂ ಬೆರಕೆ ಲೋಹವನ್ನು ಸೇರಿಸಬೇಕು. ಮನುಷ್ಯನಿಗೆ ದೇಹವಿರುವವರೆಗೆ ಅದರ ವ್ಯಾಪಾರಕ್ಕಾಗಿಯಾದರೂ ಸ್ವಲ್ಪ ಮಾಯೆಯಿರಬೇಕು. ಮಾಯೆಯಿಂದ ಸಂಪೂರ್ಣ ಪಾರಾದವನು ಇಪ್ಪತ್ತೊಂದು ದಿನಕ್ಕಿಂತ ಹೆಚ್ಚು ಬದುಕಿರುವುದಿಲ್ಲ.

೯೪೯. ಕತ್ತನ್ನು ಕುರಿಯ ದೇಹದಿಂದ ಬೇರ್ಪಡಿಸಿದ ಮೇಲೆ ಮುಂಡ ಸ್ವಲ್ಪಕಾಲ ಬದುಕಿರುವಂತೆ ಇನ್ನೂ ಒದ್ದಾಡುವುದು. ಇದರಂತೆಯೆ ಸಿದ್ಧನಲ್ಲಿ ಅಹಂಕಾರ ಸಂಪೂರ್ಣ ನಾಶವಾಗಿದ್ದರೂ ಜಗದ ವ್ಯಾಪಾರವನ್ನು ನಡೆಸುವುದಕ್ಕಾಗಿ ಸ್ವಲ್ಪ ಅಹಂಕಾರ ಉಳಿದಿರುವುದು. ಆದರೆ ಅದು ಅವನನ್ನು ಮತ್ತೊಮ್ಮೆ ಪ್ರಪಂಚಕ್ಕೆ ಬಂಧಿಸಲಾರದು.

೯೫೦. ದೇಹ ಹುಟ್ಟಿದೆ. ಅದು ಸಾಯಲೇಬೇಕು. ಆದರೆ ಆತ್ಮನಿಗೆ ಸಾವಿಲ್ಲ. ಅಡಕೆ ಮಾಗಿದ ಮೇಲೆ ಅದು ಮೇಲಿನ ಮುಸುಕಿನಿಂದ ಬೇರೆಯಾಗುವುದು. ಆದರೆ ಇನ್ನೂ ಹಸಿಯಾಗಿರುವಾಗ ಅದನ್ನು ಬೇರ್ಪಡಿಸುವುದು ಕಷ್ಟ. ದೇವರನ್ನು ಹೊಂದಿದಮೇಲೆ ದೇಹ ಆತ್ಮಕ್ಕಿಂತ ಬೇರೆ ಎಂಬ ಭಾವ ಹುಟ್ಟುವುದು

೯೫೧. ಯಹೂದ್ಯರು ಏಸುಕ್ರಿಸ್ತನನ್ನು ಶಿಲುಬೆಗೆ ಮೊಳೆಯಿಂದ ಹೊಡೆದಾಗ ನೋವಿನಿಂದ ಪರಿತಪಿಸುತ್ತಿದ್ದರೂ ಹಾಗೆ ಮಾಡಿದವರನ್ನು ಕ್ಷಮಿಸೆಂದು ಹೇಗೆ ಬೇಡಿದ? ಎಳೆಯ ತೆಂಗಿನಕಾಯನ್ನು ಚುಚ್ಚಿದರೆ ಅದು ಚಿಪ್ಪನ್ನು ಛೇದಿಸಿಕೊಂಡು ಹೋಗುವುದು. ಆದರೆ ಕೊಬ್ಬರಿ,

ಚಿಪ್ಪಿನಿಂದ ಬೇರೆಯಾಗಿರುತ್ತದೆ. ಚಿಪ್ಪನ್ನು ಒಡೆದಾಗ ಕೊಬ್ಬರಿಗೆ ಏನೂ ತಾಕುವುದಿಲ್ಲ. ಏಸುಕ್ರಿಸ್ತನೂ ಹೀಗೆ ಕೊಬ್ಬರಿಯಂತೆ ಇದ್ದನು. ಅವನ ಅಂತರಾತ್ಮವು ದೇಹದ ಹೊದಿಕೆಯಿಂದ ಬೇರೆಯಾಗಿತ್ತು. ಆದ ಕಾರಣವೆ ದೇಹದ ಯಾತನೆ ಅವನನ್ನು ಪೀಡಿಸಲಿಲ್ಲ. ಅವರು ಮೊಳೆಯನ್ನು ದೇಹಕ್ಕೆ ಹೊಡೆದರೂ ಅವನ ವೈರಿಗಳ ಕ್ಷೇಮಾರ್ಥವಾಗಿ ಸಮಾಧಾನದಿಂದ ಪ್ರಾರ್ಥಿಸಲು ಸಾಧ್ಯವಾಯಿತು.

## ಸಿದ್ಧನ ಅನಾಸಕ್ತಿ

೯೫೨. ತೆಂಗಿನ ಮರದ ಗರಿ ಬಿದ್ದಮೇಲೆ ಮರದಲ್ಲಿ ಅದರ ಗುರುತನ್ನು ಬಿಡುತ್ತವೆ ಇದರಿಂದ ಅಲ್ಲಿ ಹಿಂದೆ ಒಂದು ಗರಿ ಇದ್ದಿತು ಎಂದು ಊಹಿಸುವುದಕ್ಕೆ ಸಾಧ್ಯವಾಗುವುದು. ಇದರಂತೆ ಯಾರು ದೇವರನ್ನು ಕಂಡಿರುವರೊ ಅವರಲ್ಲಿ ಕೋಪ ಮತ್ತು ಪಾಪಗಳ ಹಿಂದಿನ ಗುರುತು ಮಾತ್ರ ಇರುತ್ತವೆ. ಮಗುವಿನಂತೆ ಅವನ ಸ್ವಭಾವ ಸತ್ತ್ವ, ರಜ, ತಮೋಗುಣಗಳಿಲ್ಲದೆ ಇರುವುದರಿಂದ ಒಂದು ವಸ್ತುವಿನಲ್ಲಿ ಸುಲಭವಾಗಿ ಆಸಕ್ತರಾಗುವರು. ಮತ್ತು ಅಷ್ಟೇ ಸುಲಭವಾಗಿ ಅನಾಸಕ್ತರಾಗುವರು. ಒಂದು ಮಗುವಿಗೆ ಆಟದ ಸಾಮಾನನ್ನು ಕೊಟ್ಟು, ಹಲವು ರೂಪಾಯಿಗಳಷ್ಟು ಬೆಲೆಬಾಳುವ ಅದರ ಬಟ್ಟೆಗಳನ್ನು ಅದಕ್ಕೆ ಬದಲಾಗಿ ಕೊಡುವಂತೆ ಮಾಡಬಹುದು. ಮಗು ಮೊದಲು "ಇಲ್ಲ ನಾನು ಕೊಡುವುದಿಲ್ಲ. ನಮ್ಮಪ್ಪನು ನನಗೆ ತೆಗೆದುಕೊಟ್ಟನು" ಎಂದು ಹೇಳಿದರೂ ಅದನ್ನು ಒಡಂಬಡಿಸಬಹುದು. ಮಗುವಿಗೆ ಎಲ್ಲರೂ ಒಂದೆ. ಇವರು ಮೇಲು, ಅವರು ಕೀಳೆಂಬ ಭಾವ ಅದಕ್ಕೆ ಇಲ್ಲ ಇದರ ಪರಿಣಾಮವಾಗಿ ಜಾತಿ ಮತಗಳ ಭೇದಭಾವವೂ ಅದಕ್ಕೆ ಇಲ್ಲ. ಇಂತಹವನು ನಿನ್ನ ಅಣ್ಣನೆಂದು ತಾಯಿ ಹೇಳಿದರೆ ಅವನು ಬಡಗಿಯವನ ಮಗನಾದರೂ ಅವನೊಂದಿಗೆ ಒಂದೇ ತಟ್ಟೆಯಲ್ಲಿ ಊಟಮಾಡುವುದು. ಅದಕ್ಕೆ ದೋಷ, ಶುಚಿ ಅಶುಚಿ ಭಾವನೆಯಿಲ್ಲ.

೯೫೩. ಜೀವನ್ಮುಕ್ತನು ಜಗದಲ್ಲಿ ಹೇಗೆ ಬಾಳುತ್ತಾನೆ? ಅವನು ನೀರಿನಲ್ಲಿ ಮುಳುಗುವ ಹಕ್ಕಿಯಂತೆ ಇರುತ್ತಾನೆ. ಅದು ನೀರಿನಲ್ಲಿ ಮುಳುಗುತ್ತದೆ. ಆದರೆ ನೀರು ಅದರ ಗರಿಯನ್ನು ನೆನೆಸುವುದಿಲ್ಲ. ಅದರ ದೇಹಕ್ಕೆ ಅಂಟಿಕೊಂಡಿರುವ ಕೆಲವು ತೊಟ್ಟು ನೀರು ಅದು ಒಂದು ಸಲ ರೆಕ್ಕೆಯನ್ನು ಕೊಡವಿದರೆ ಸುಲಭವಾಗಿ ಜಾರಿಹೋಗುವುದು.

೯೫೪. ಹಾವು ಘೋರ ವಿಷಜಂತು. ಅದನ್ನು ಯಾರಾದರೂ ಹಿಡಿಯಲು ಬಂದರೆ ಅದು ಕಚ್ಚುತ್ತದೆ. ಆದರೆ ಹಾವುಗಳನ್ನು ಮುಗ್ಧಗೊಳಿಸುವ ಗಾರುಡಿಗ ವಿದ್ಯೆಯನ್ನು ಬಲ್ಲವನಾದರೋ ಹಾವುಗಳನ್ನು ಹಿಡಿಯುವುದು ಮಾತ್ರವಲ್ಲ, ಹಲವು ಹಾವುಗಳನ್ನು ಕೊರಳಿಗೆ ಮತ್ತು ಹೆಗಲಿಗೆ ಒಡವೆಯಂತೆ ಸುತ್ತಿಕೊಂಡು ಹೋಗುವನು. ಇದರಂತೆಯೆ ಆಧ್ಯಾತ್ಮಿಕ ಜ್ಞಾನವನ್ನು ಪಡೆದವರು ಕಾಮ ಕಾಂಚನಗಳ ವಿಷಕ್ಕೆ ಎಂದಿಗೂ ಒಳಗಾಗುವುದಿಲ್ಲ.

೯೫೫, ಕಪ್ಪೆಮರಿಯ ಬಾಲ ಹೋದಮೇಲೆ ಅದು ನೆಲದ ಮೇಲೆ ಮತ್ತು ನೀರಿನಲ್ಲಿ ಎರಡು ಕಡೆಯೂ ವಾಸಿಸಬಲ್ಲದು ಮೋಹಗೊಳಿಸುವ ಅಜ್ಞಾನವೆಂಬ ಬಾಲಬಿದ್ದು ಹೋದಮೇಲೆ ಜೀವಿ ಸ್ವತಂತ್ರನಾಗುತ್ತಾನೆ. ಆಗ ಅವನು ದೇವರಲ್ಲಿ ಮತ್ತು ಪ್ರಪಂಚದಲ್ಲಿ ಎರಡು ಕಡೆಯೂ ಇರಬಲ್ಲನು.

೯೫೬. ಗಾಳಿಯು ಚಂದನಮರದ ಸುವಾಸನೆಯನ್ನೂ, ಕೊಳೆತು ನಾರುವ ಹೆಣದ ದುರ್ವಾಸನೆಯನ್ನೂ, ಒಂದೇ ಸಮನಾಗಿ ಹೊತ್ತುಕೊಂಡು ಹೋಗುವುದು. ಆದರೆ ಇದು ಯಾವುದರೊಂದಿಗೂ ಬೆರೆಯುವುದಿಲ್ಲ. ಇದರಂತೆಯೆ ಜೀವನ್ಮುಕ್ತನು ಜಗದಲ್ಲಿ ಬಾಳುತ್ತಾನೆ ಆದರೆ ಅದರೊಂದಿಗೆ ಬೆರೆಯುವುದಿಲ್ಲ

೯೫೭. ಕಬ್ಬಿಣ ಸ್ಪರ್ಶಶಿಲೆಗೆ ತಾಕಿ ಚಿನ್ನವಾದ ಮೇಲೆ ಅದನ್ನು, ಭೂಮಿಯ ಒಳಗೆ ಇಡಬಹುದು ಅಥವಾ ಕಸದ ರಾಶಿಗೆ ಬಿಸಾಡಬಹುದು. ಅದು ಯಾವಾಗಲೂ ಚಿನ್ನವಾಗಿಯೆ ಉಳಿಯುವುದು. ತನ್ನ ಹಿಂದಿನ ಸ್ವಭಾವಕ್ಕೆ ತಿರುಗುವುದಿಲ್ಲ. ಇದರಂತೆಯೆ ಭಗವಂತನ ಪಾದಪದ್ಮಗಳನ್ನು ಒಂದು ಸಾರಿಯಾದರೂ ಮುಟ್ಟಿದವನ ಸ್ಥಿತಿ. ಅವನು ಪ್ರಪಂಚದ ದಾಂಧಲೆಯಲ್ಲಿ ಇರಲಿ, ಅಥವಾ ನಿರ್ಜನಾರಣ್ಯದಲ್ಲಿ ಇರಲಿ ಅವನನ್ನು ಯಾವುದೂ ಕೆಡಿಸುವುದಿಲ್ಲ.

೯೫೮. ನೀರಿಗೆ ಹಾಕಿದ ಹಾಲು ತಕ್ಷಣವೆ ಅದರೊಂದಿಗೆ ಮಿಶ್ರವಾಗುವುದು. ಆದರೆ ಬೆಣ್ಣೆ ಮಾಡಿ ನೀರಿಗೆ ಹಾಕಿದರೆ ಅದರೊಂದಿಗೆ ಮಿಶ್ರವಾಗದೆ ನೀರಿನಮೇಲೆ ತೇಲುತ್ತದೆ. ಭಗವಂತನ ಸ್ಥಿತಿಯನ್ನು ಪಡೆದಮೇಲೆ ಒಬ್ಬನು ಯಾವಾಗಲೂ ಬದ್ಧರಾದ ಪಾಪಿಗಳೊಂದಿಗೆ ಇರಬಹುದು. ಆದರೂ ಇಂತಹವರ ಸಂಗದಿಂದ ಅವನು ಕೆಡುವುದಿಲ್ಲ.

೯೫೯. ಯಾರು ಬ್ರಹ್ಮನಲ್ಲಿ ಜೀವ ಮತ್ತು ಪ್ರಕೃತಿಯನ್ನು ಕಾಣುವರೊ ಅವರನ್ನು ಒಳ್ಳೆಯದು ಮತ್ತು ಕೆಟ್ಟುದು ಬಂಧಿಸಲಾರದು. ಸಿದ್ಧನು ಪಾಪಪುಣ್ಯಗಳನ್ನು ಮೀರುವನು. ಆದರೆ ಪಾಪವನ್ನೆಂದಿಗೂ ಮಾಡುವುದಿಲ್ಲ.

೯೬೦. ಮನುಷ್ಯನು ನೆಲದ ಮೇಲೆ ನಿಂತಿರುವಾಗ ಕ್ಷುದ್ರವಾಗಿರುವ ಹುಲ್ಲನ್ನೂ ಮತ್ತು ಬಹಳ ಎತ್ತರವಾಗಿರುವ ದೇವದಾರುವನ್ನೂ ನೋಡಿ "ಓ ಮರ ಎಷ್ಟು ದೊಡ್ಡದು, ಹುಲ್ಲು ಎಷ್ಟು ಚಿಕ್ಕದು!" ಎನ್ನುತ್ತಾನೆ. ಆದರೆ ಬೆಟ್ಟವನ್ನು ಹತ್ತಿ, ಅದರ ನೆತ್ತಿಯಿಂದ ಕೆಳಗೆ ನೋಡಿದಾಗ ಮರ ಮತ್ತು ಹುಲ್ಲು ಎರಡೂ ಪ್ರತ್ಯೇಕಗೊಳಿಸಲಾಗದ ಸಸ್ಯರಾಶಿಯಲ್ಲಿ ಮಿಶ್ರವಾಗಿ ಹೋಗುವುದು. ಇದರಂತೆಯೆ ಪ್ರಾಪಂಚಿಕ ದೃಷ್ಟಿಯಲ್ಲಿ ಜನರ ಸ್ಥಾನಮಾನಗಳ ಅಂತರವಿದೆ. ಒಬ್ಬನು ರಾಜ ಮತ್ತೊಬ್ಬನು ಮೋಚಿ; ಒಬ್ಬ ತಂದೆ ಮತ್ತೊಬ್ಬ ಮಗ; ಇತ್ಯಾದಿ. ಆದರೆ ದಿವ್ಯದೃಷ್ಟಿ ತೆರೆದಾಗ ಎಲ್ಲರೂ ಸಮನಾಗಿ ಕಾಣುವರು ಆಗ ಒಳ್ಳೆಯವರು ಕೆಟ್ಟವರು, ಮೇಲು ಕೀಳೆಂಬ ತಾರತಮ್ಯವಿರುವುದಿಲ್ಲ.

೯೬೧. ಒಂದುಸಲ ಭಗವತ್‌ಪ್ರೇಮೋನ್ಮತ್ತನಾದ ಸಾಧು ಒಬ್ಬನು ಶ್ರೀರಾಮಕೃಷ್ಣರು ವಾಸವಾಗಿದ್ದ ರಾಣಿ ರಾಸ್ಮಣಿಯ ಕಾಳಿಕಾ ದೇವಾಲಯಕ್ಕೆ ಬಂದನು. ಒಂದು ದಿನ ಅವನಿಗೆ ಆಹಾರವೇನೂ ದೊರೆಯಲಿಲ್ಲ. ಭೋಜನವಾದ ಮೇಲೆ ಮೂಲೆಯಲ್ಲಿ ಎಸೆದ ಎಂಜಲನ್ನು ತಿನ್ನುತ್ತಿದ್ದ ನಾಯಿಯನ್ನು ನೋಡಿ ಅಲ್ಲಿಗೆ ಹೋಗಿ ನಾಯಿಯನ್ನು ಅಪ್ಪಿಕೊಂಡು "ಏನಣ್ಣ! ನನಗೂ ಪಾಲು ಕೊಡದೆ ನೀನೇ ತಿನ್ನುತ್ತಿರುವೆಯಲ್ಲ?" ಎಂದು ಹೇಳುತ್ತ ನಾಯಿಯೊಂದಿಗೆ ಊಟಮಾಡಲು ಉಪಕ್ರಮಿಸಿದನು. ಇಂತಹ ವಿಚಿತ್ರವಾದ ಗೆಳೆಯನೊಂದಿಗೆ ಊಟವನ್ನು ಮುಗಿಸಿದಮೇಲೆ ಸಾಧು ಕಾಳಿಕಾ ದೇವಾಲಯಕ್ಕೆ ಹೋಗಿ ಗುಡಿಯೆಲ್ಲ ಭಕ್ತಿತರಂಗದಿಂದ ತುಂಬಿತುಳುಕಾಡುವಂತೆ ಅತ್ಯಂತ ಭಾವಪರವಶನಾಗಿ ಜಗನ್ಮಾತೆಯನ್ನು ಪ್ರಾರ್ಥಿಸಿದನು. ಪ್ರಾರ್ಥನೆಯಾದಮೇಲೆ ಅವನು ಹೊರಟುಹೋಗುತ್ತಿದ್ದನು. ಶ್ರೀರಾಮಕೃಷ್ಣರು ತಮ್ಮ ಸೋದರಳಿಯನಾದ ಹೃದಯನಿಗೆ, ಅವನೊಂದಿಗೆ ಹೋಗಿ ಮಾತನಾಡುವಂತೆ ಹೇಳಿ ಕಳುಹಿಸಿದರು ಹೃದಯನು ಆತನ ಹಿಂದೆ ಸ್ವಲ್ಪದೂರ ಹೋದಮೇಲೆ ಸಾಧುವು ತಿರುಗಿನೋಡಿ "ಏಕೆ ನನ್ನನ್ನು ಅನುಸರಿಸುತ್ತಿರುವಿ?" ಎಂದು ಕೇಳಿದನು. ಹೃದಯನು "ಸ್ವಾಮಿ! ನನಗೇನಾದರೂ ಉಪದೇಶಕೊಡಿ"

ಎಂದನು. ಆಗ ಸಾಧುವು " ಈ ಗುಂಡಿಯಲ್ಲಿರುವ ಕಶ್ಮಲವಾದ ನೀರು ಅಲ್ಲಿ ಕಾಣುವ ಗಂಗಾ ನದಿಯ ನೀರು ಎರಡೂ ನಿನ್ನ ಕಣ್ಣಿಗೆ ಒಂದೇ ಎಂದು ಕಂಡಾಗ, ಜನರ ಗದ್ದಲ ಮತ್ತು ಕೊಳಲಿನ ನಾದದಲ್ಲಿ ನಿನಗೆ ವ್ಯತ್ಯಾಸ ಕಾಣದೆ ಇರುವಾಗ, ನೀನು ನಿಜವಾದ ಜ್ಞಾನಸ್ಥಿತಿಯನ್ನು ಸೇರುವೆ " ಎಂದನು. ಹೃದಯನು ಹಿಂತಿರುಗಿ ಶ್ರೀರಾಮಕೃಷ್ಣರಿಗೆ ಇದನ್ನು ಹೇಳಿದಮೇಲೆ ಅವರು " ನಿಜವಾಗಿಯೂ ಅವನು ಸಮಾಧಿ ಸ್ಥಿತಿಯನ್ನು, ಜ್ಞಾನವನ್ನು ಪಡೆದಿರುವನು ; ಸಿದ್ಧರು ಮಗುವಿನಂತೆ, ಪಿಶಾಚದಂತೆ, ಅಥವಾ ಉನ್ಮತ್ತರಂತೆ, ಹಲವು ವೇಷಗಳಲ್ಲಿ ಅಲೆಯುತ್ತಾರೆ " ಎಂದರು.

೯೬೨. ಪರಮಹಂಸರ ಸ್ಥಿತಿ ಮಗುವಿನಂತೆ. ಐದು ವರುಷದ ಹುಡುಗನಂತೆ, ಅವರು ಗಂಡಸಿಗೂ ಹೆಂಗಸಿಗೂ ಭೇದವನ್ನು ತಿಳಿಯರು. ಆದರೂ ಜಗತ್ತಿಗೆ ಒಂದು ಮೇಲ್ಪಂಕ್ತಿಯನ್ನು ಹಾಕುವುದಕ್ಕಾಗಿ ಸ್ತ್ರೀಯರ ವಿಷಯದಲ್ಲಿ ಅವರು ಬಹಳ ಜಾಗರೂಕರಾಗಿರಬೇಕು.

೯೬೩. ಒಂದುಸಲ ಸನ್ಯಾಸಿನಿಯೊಬ್ಬಳು ಜನಕನ ಆಸ್ಥಾನಕ್ಕೆ ಬಂದಳು. ರಾಜನು ಅವಳ ಮುಖವನ್ನು ನೋಡದೆ ನಮಸ್ಕಾರ ಮಾಡಿದನು. ಇದನ್ನು ನೋಡಿ ಸನ್ಯಾಸಿನಿ " ಹೇ ಜನಕ ! ಇದೇನು ವಿಚಿತ್ರ, ಇನ್ನೂ ಹೆಂಗಸರನ್ನು ಕಂಡರೆ ಇಷ್ಟು ಅಂಜಿಕೆ ! " ಎಂದಳು. ಪೂರ್ಣಜ್ಞಾನ ಬಂದಮೇಲೆ ಒಬ್ಬನ ಸ್ವಭಾವ ಮಗುವಿನಂತೆ ಸರಳವಾಗುವುದು. ಗಂಡಸು ಹೆಂಗಸರ ಭೇದಭಾವವನ್ನು ಅರಿಯರು.

೯೬೪. ಆದರೆ ಜ್ಞಾನಿಯಲ್ಲಿರುವ ಕೆಲವು ಚುಕ್ಕೆಗಳಿಂದ ಅಪಾಯವಿಲ್ಲ. ಚಂದ್ರನಲ್ಲೂ ಕಳಂಕವಿದೆ. ಆದರೆ ಇದರಿಂದ ಅದರ ಕಾಂತಿಗೆ ಭಂಗವಿಲ್ಲ

೯೬೫. ಸ್ಪರ್ಶಶಿಲೆಗೆ ತಾಕಿದರೆ ಉಕ್ಕಿನ ಕತ್ತಿ ಚಿನ್ನದ ಕತ್ತಿಯಾಗುವುದು. ಹಿಂದಿನ ರೂಪವೇ ಅದಕ್ಕೆ ಇದ್ದರೂ ಉಕ್ಕಿನ ಕತ್ತಿಯಂತೆ ಅದು ನಾಶಮಾಡಲಾರದು. ಇದರಂತೆಯೇ ಭಗವಂತನ ಪಾದ ಸ್ಪರ್ಶ ಮಾಡಿದವನ ಬಾಹ್ಯರೂಪು ಬದಲಾಯಿಸುವುದಿಲ್ಲ. ಆದರೆ ಅವನು ಎಂದಿಗೂ ಕೆಟ್ಟುದನ್ನು ಮಾಡುವುದಿಲ್ಲ.

೯೬೬. ಅದ್ವೈತ ಜ್ಞಾನವನ್ನು ನೀನು ಇಟ್ಟುಕೊಂಡು ಏನು ಬೇಕಾದರೂ ಮಾಡು. ಆಗ ನಿನ್ನಿಂದ ಯಾವ ಪಾಪಕಾರ್ಯವು ಆಗುವುದಿಲ್ಲ.

೯೬೭. ಒಂದುಸಲ ಜನಸಂದಣಿಯಿಂದ ತುಂಬಿದ ರಸ್ತೆಯಲ್ಲಿ ಹೋಗುತ್ತಿದ್ದಾಗ ಸಾಧು ಒಬ್ಬನು, ಒಬ್ಬ ದುಷ್ಟನ ಎಡಗಾಲನ್ನು ತುಳಿದನು. ದುಷ್ಟ ಇದರಿಂದ ರೋಷ ಪರವಶನಾಗಿ ನಿರ್ದಯದಿಂದ ಸಾಧುವನ್ನು ಪ್ರಜ್ಞೆತಪ್ಪಿ ಕೆಳಗೆ ಬೀಳುವ ತನಕ ಹೊಡೆದನು. ಅವನ ಶಿಷ್ಯರು ಬಹಳ ಕಷ್ಟಪಟ್ಟು ಅವನನ್ನು ಜಾಗ್ರತಗೊಳಿಸುವುದಕ್ಕೆ ಯತ್ನಿಸಿದರು. ಸ್ವಲ್ಪ ಚೇತರಿಸಿಕೊಳ್ಳುತ್ತಿರುವುದನ್ನು ಕಂಡು, "ಸ್ವಾಮಿ, ಯಾರು ನಿಮ್ಮ ಸೇವೆ ಮಾಡುತ್ತಿರುವರು ಎಂಬುದನ್ನು ಗುರುತಿಸಲಾಗುವುದೆ?" ಎಂದನು. ಸಾಧು "ನಿಜವಾಗಿ ಯಾರು ನನ್ನನ್ನು ಹೊಡೆದನೊ ಅವನೆ" ಎಂದನು. ನಿಜವಾದ ಸಾಧುವಿಗೆ ಸ್ನೇಹಿತರು ವೈರಿಗಳೆಂಬ ತಾರತಮ್ಯವಿರುವುದಿಲ್ಲ.

## ಮುಕ್ತಾತ್ಮ ಮತ್ತು ಕರ್ಮ

೯೬೮. ಯಾರು ಭಗವಂತನನ್ನು ಸಾಕ್ಷಾತ್ಕಾರಮಾಡಿಕೊಂಡಿರುವರೊ ಅವರು ಕೆಲವುವೇಳೆ ಹುಚ್ಚರಂತೆ ಕೆಲವುವೇಳೆ ಪಿಶಾಚಿಯಂತೆ ಶುಚಿ ಅಶುಚಿಯ ಜ್ಞಾನವಿಲ್ಲದೆ ತಿರುಗಾಡುತ್ತಿರುವರು. ಕೆಲವು ವೇಳೆ ಭಗವಂತನನ್ನು ಒಳಗೆ ಮತ್ತು ಹೊರಗೆ ನೋಡಿ ಮೂಕರಾಗಿ ಜಡವಸ್ತುವಿನಂತೆ ನಿಲ್ಲುವರು ಕೆಲವುವೇಳೆ ಬಾಲಕರಂತೆ ಯಾವ ವಸ್ತುವಿನ ಮೇಲೂ ಆಸಕ್ತರಾಗದೆ ಬಟ್ಟೆಯನ್ನು ಗಂಟುಕಟ್ಟಿ ಬಗಲಿನಲ್ಲಿ ಇಟ್ಟುಕೊಂಡು ಹೋಗುವರು. ಆದರೆ ಅವರು ಪರೋಪಕಾರಕ್ಕೆ ಕೆಲಸ ಮಾಡುವಾಗ ಸಿಂಹದಂತೆ ಧೈರ್ಯಶಾಲಿಗಳು.

೯೬೯. ಸಮಾಧಿ ಸಿದ್ಧಿಸಿದ ಮೇಲೆ ಬಾಹ್ಯಪೂಜೆ, ಜಪ ಮತ್ತು ಸಂಸಾರದ ಕೆಲಸಗಳು ಎಲ್ಲಾ ನಿಲ್ಲುವುವು. ಮೊದಲಲ್ಲಿ ಕರ್ಮದ ಗಲಾಟೆ ಹೆಚ್ಚು. ಆದರೆ ಒಬ್ಬನು ದೇವರನ್ನು ಸಮೀಪಿಸಿದಂತೆಲ್ಲಾ ಇದು ಕಡಿಮೆಯಾಗಿ ಕೊನೆಗೆ ಪ್ರಾರ್ಥನೆ ಮತ್ತು ಭಜನೆ ಕೂಡ ನಿಂತು ಹೋಗುವುದು (ಸಾಧಾರಣ ಬ್ರಹ್ಮಸಮಾಜಕ್ಕೆ ಸೇರಿದ ಶಿವನಾಥಶಾಸ್ತ್ರಿಯನ್ನು ಕುರಿತು) ನೀನು ಉಪನ್ಯಾಸಕ್ಕೆ ಬರುವುದಕ್ಕೆ ಮುಂಚೆ, ನಿನ್ನ ಹೆಸರು, ಪಾಂಡಿತ್ಯ, ಗುಣಗಳು, ಮುಂತಾದುವನ್ನು ಕುರಿತು ಮಾತನಾಡುತ್ತಿರುವರು. ನೀನು ಬಂದೊಡನೆಯೆ ಅದೆಲ್ಲ ನಿಲ್ಲುವುದು. ನಿನ್ನನ್ನು ನೋಡಿ ಎಲ್ಲರೂ ಆನಂದದಿಂದ "ಶಿವನಾಥ ಬಾಬುಗಳು ಇಲ್ಲಿ ಬರು

ತ್ತಿರುವರು" ಎಂದು ಕೂಗಿಕೊಳ್ಳುತ್ತ, ಕೊನೆಗೆ ನಿನ್ನ ವಿಷಯದ ಮಾತೆಲ್ಲ ನಿಲ್ಲುವುದು.

೯೭೦. ಹೊಸದಾಗಿ ಮದುವೆಯಾದ ಹುಡುಗಿ ತನಗೆ ಒಂದು ಮಗು ಆಗುವ ತನಕ ಮನೆಯ ಕೆಲಸದಲ್ಲಿ ನಿರತಳಾಗಿರುವಳು. ಆದರೆ ಒಂದು ಮಗುವಾದೊಡನೆಯೆ ಮನೆಯ ಚಿಲ್ಲರೆ ಕೆಲಸಗಳಮೇಲೆ ಅಷ್ಟು ಮನಸ್ಸನ್ನು ಕೊಡುವುದಿಲ್ಲ. ಅವುಗಳಲ್ಲಿ ಅಷ್ಟು ಸಂತೋಷವೂ ಇರುವುದಿಲ್ಲ. ಅದರ ಬದಲು ದಿನವೆಲ್ಲಾ ಮಗುವನ್ನು ಮುದ್ದಿಸುವಳು, ಅತ್ಯಾನಂದದಿಂದ ಮುತ್ತಿಡುವಳು. ಇದರಂತೆಯೆ ಅಜ್ಞಾನದಲ್ಲಿರುವ ತನಕ ಮನುಷ್ಯನು ಹಲವು ವಿಧದ ಕೆಲಸಗಳಲ್ಲಿ ನಿರತನಾಗಿರುವನು. ಆದರೆ ಪರಮಾತ್ಮನನ್ನು ಹೃದಯದಲ್ಲಿ ಸಂದರ್ಶಿಸಿದೊಡನೆಯೆ ಕೆಲಸಗಳಲ್ಲಿ ಅವನಿಗೆ ಉತ್ಸಾಹವಿರುವುದಿಲ್ಲ. ಅದಕ್ಕೆ ಬದಲು ಈಗ ಅವನ ಆನಂದವೆಲ್ಲ ಭಗವಂತನನ್ನು ಸೇವಿಸುವುದು, ಆತನ ಇಚ್ಛೆಯನ್ನು ಪರಿಪಾಲಿಸುವುದರಲ್ಲಿರುವುದು. ಮತ್ತಾವ ಕೆಲಸದಲ್ಲಿಯೂ ಅವನಿಗೆ ಅಷ್ಟು ಆನಂದವಿಲ್ಲ. ಪರಮಾತ್ಮನ ಸಂದರ್ಶನದ ಆನಂದದಿಂದ ಅವನು ವಿಮುಖನಾಗಲಾರ.

೯೭೧. ಭಗವಂತನ ಸಾಕ್ಷಾತ್ಕಾರವಾದ ಮೇಲೆ ಪ್ರಪಂಚವೆಂದಿಗೂ ಶೂನ್ಯವಾಗಿ ಕಾಣುವುದಿಲ್ಲ. ಯಾರು ಅವನನ್ನು ಹೊಂದುವರೊ ಅವರಿಗೆ ಭಗವಂತನೆ ಜಗತ್ತು ಮತ್ತು ಜೀವಗಳ ರೂಪವನ್ನು ಧಾರಣೆ ಮಾಡಿರುವಂತೆ ಕಾಣುವುದು. ತನ್ನ ಮಕ್ಕಳಿಗೆ ಆಹಾರವನ್ನು ಕೊಡುತ್ತಿರುವಾಗ ಸಾಕ್ಷಾತ್ ಗೋಪಾಲನಿಗೆ ಆಹಾರವನ್ನು ಕೊಡುತ್ತಿರುವಂತೆ ತೋರುವುದು. ತನ್ನ ಮಾತಾಪಿತೃಗಳನ್ನು ದೇವರಂತೆ ಕಾಣುವನು. ಅದೇ ದೃಷ್ಟಿಯಿಂದ ಅವರನ್ನು ಸೇವಿಸುವನು. ಭಗವಂತನ ಸಾಕ್ಷಾತ್ಕಾರವಾದ ಮೇಲೆ ಒಬ್ಬನು ಗೃಹಸ್ಥನಾಗಿ ಜಗದಲ್ಲಿರಬೇಕಾದರೆ, ಅವನು ತನ್ನ ಸತಿಯೊಂದಿಗೆ ಯಾವ ವಿಧವಾದ ದೈಹಿಕ ಸಂಬಂಧವನ್ನು ಇಟ್ಟುಕೊಳ್ಳುವುದಿಲ್ಲ. ಇಬ್ಬರೂ ಭಗವಂತನ ಭಕ್ತರಾಗಿ ತಮ್ಮ ಕಾಲವನ್ನು ಪ್ರಾರ್ಥನೆ ಮತ್ತು ಧ್ಯಾನದಲ್ಲಿ ಕಳೆಯುವರು. ಅವರು ಎಲ್ಲಾ ಜೀವಿಗಳನ್ನೂ ಸತ್ಕರಿಸುವರು. ಭಗವಂತನು ಎಲ್ಲರಲ್ಲಿಯೂ ಇರುವುದರಿಂದ ಅವರು ಎಲ್ಲರಲ್ಲಿಯೂ ಅವನನ್ನು ಆರಾಧಿಸುವರು.

# ಅಧ್ಯಾಯ ೨೦

## ಬಾಲ್ಯದ ಅನುಭವಗಳು

೯೭೨. ಶ್ರೀರಾಮಕೃಷ್ಣರು ಬಾಲ್ಯದಲ್ಲಿ ಪಾಠದಮೇಲೆ ಲಕ್ಷ್ಯ ಕೊಡದೆ ಇದ್ದಾಗ ಇವರ ಅಣ್ಣನು ಇವರನ್ನು ಗದರಿಸಲು, ಶ್ರೀರಾಮ ಕೃಷ್ಣರು ಹೀಗೆ ಹೇಳಿದರು : "ಅಣ್ಣಾ, ಬರೀ ಹೊಟ್ಟೆಹೊರೆಯುವ ವಿದ್ಯೆಯಿಂದ ನಾನೇನು ಮಾಡಲಿ. ಯಾವುದು ನನ್ನ ಹೃದಯಕ್ಕೆ ಅರಿವನ್ನು ತರುವುದೊ, ಯಾವುದನ್ನು ತಿಳಿದರೆ ಎಂದೆಂದಿಗೂ ಸಂಪೂರ್ಣ ಶಾಂತಿ ದೊರೆಯುವುದೊ ಅದನ್ನು ನಾನು ಹೊಂದಬೇಕೆಂದು ಇಚ್ಛಿಸುವೆನು."

೯೭೩. ಇವರ ಸಾಧನೆಯ ಮೊದಲಲ್ಲಿ ರಾತ್ರಿಯ ಹೊತ್ತು ನಿರ್ಜನಾರಣ್ಯದಲ್ಲಿ ಬಟ್ಟೆ ಇಲ್ಲದೆ ಜನಿವಾರವನ್ನು ಕೂಡ ತೆಗೆದುಹಾಕಿ ಧ್ಯಾನಮಾಡುತ್ತಿದ್ದುದನ್ನು ಇವರ ಸೋದರ ಅಳಿಯ ಹೃದಯನು ಗಮನಿಸಿದನು. ಬೆತ್ತಲೆಗೂ ಧ್ಯಾನಕ್ಕೂ ಏನು ಸಂಬಂಧವೆಂದು ಕೇಳಿ ದಾಗ ಅವರು ಹೀಗೆ ಹೇಳಿದರು : "ಎಲ್ಲಾ ಬಂಧನಗಳಿಂದ ಮುಕ್ತ ನಾಗಿ ಒಬ್ಬನು ಧ್ಯಾನಮಾಡಬೇಕು. ಹುಟ್ಟುವಾಗಲೆ ಮಾನವನು, ದ್ವೇಷ, ಗೌರವ, ನಾಚಿಕೆ, ಅಂಜಿಕೆ, ವಂಶದ ಹೆಮ್ಮೆ, ಅಹಂಕಾರ, ಸಮಾಜದ ಪದ್ಧತಿ ಇವುಗಳಿಂದ ಬಂಧಿತನಾಗುವನು. ಜನಿವಾರವೂ ಕೂಡ ಒಂದು ಬಂಧನ. ಇದು ಅಹಂಕಾರದ ಒಂದು ಚಿಹ್ನೆ; ತಾನು ಬ್ರಾಹ್ಮಣನೆಂದೂ ಎಲ್ಲರಿಗಿಂತ ಉತ್ತಮನೆಂದೂ ತಿಳಿಯುವಂತೆ ಮಾಡು ವುದು. ಆದಕಾರಣ ಜಗನ್ಮಾಯಿಯನ್ನು ಒಬ್ಬನು ಧ್ಯಾನಿಸುವಾಗ ಈ ಬಂಧನಗಳನ್ನೆಲ್ಲಾ ತೊಡೆದು ಸ್ವತಂತ್ರನಾಗಬೇಕು."

೯೭೪. ದೇವರನ್ನು ನೋಡಬೇಕೆಂಬ ಕುತೂಹಲವು ಇವರಲ್ಲಿ ಹೆಚ್ಚಿದಾಗ ಅವನ ದರ್ಶನವಿಲ್ಲದೆ ಜೀವನವು ಸಹಿಸುವುದಕ್ಕೆ ಅಸದಳ ವಾಯಿತು. ಆದಕಾರಣವೇ ಅವರು ಜೀವನವನ್ನು ಕೊನೆಗಾಣಿ ಸುವುದರಲ್ಲಿದ್ದರು. ತಕ್ಷಣವೇ ದೇವರು ಪ್ರತ್ಯಕ್ಷನಾದನು. ಇದನ್ನು ವಿವರಿಸುತ್ತಾ ಶ್ರೀ ರಾಮಕೃಷ್ಣರು ಹೀಗೆ ಹೇಳಿದರು : "ನನ್ನ ಸುತ್ತಲೂ ಇರುವ ಕಿಟಕಿ ಬಾಗಿಲುಗಳು ಸಹಿತ ಕೋಣೆ, ದೇವಸ್ಥಾನ, ನನ್ನ ಕಣ್ಣಿಂದ ಮಾಯವಾಯಿತು. ಅಲ್ಲಿ ಏನೂ ಇರದಂತೆ ತೋರಿತು. ಅದರ ಸ್ಥಾನದಲ್ಲಿ ಅಪಾರವಾದ ಕಂಗೊಳಿಸುತ್ತಿರುವ ಚೈತನ್ಯ ಸಾಗರ

ವೊಂದು ತೋರಿತು. ಯಾವ ದಿಕ್ಕಿನಲ್ಲಿ ನಾನು ನೋಡಿದರೂ, ಎಲ್ಲ ಕಡೆಯಿಂದಲೂ ಪ್ರಕಾಶಮಾನವಾದ ಆ ಸಾಗರದ ದೊಡ್ಡ ಅಲೆಗಳೇ ನನ್ನ ಕಡೆಗೆ ಬರುತ್ತಿರುವುದು ಕಂಡಿತು. ಸ್ವಲ್ಪಹೊತ್ತಿನಲ್ಲಿ ಅವೆಲ್ಲ ಧಾವಿಸಿ ನನ್ನ ಮೇಲೆ ಬಿದ್ದು ಆವರಿಸಿತು. ಅವುಗಳ ತಳದಲ್ಲಿ ಸಿಕ್ಕಿ ಕೊಂಡು ಉಸಿರು ಕಟ್ಟಿ ನನ್ನ ಸಾಧಾರಣ ಪ್ರಜ್ಞೆತಪ್ಪಿ ಬಿದ್ದು ಬಿಟ್ಟೆನು '' ಇದೇ ಅನುಭವವನ್ನು ಕುರಿತು ಮತ್ತೊಂದು ಸಲ ಅವರು ಹೀಗೆ ಹೇಳಿದರು : '' ಆ ದೃಶ್ಯವನ್ನು ನೋಡಿ ಸಂಪೂರ್ಣ ಪರವಶನಾಗಿ ನಾನು ನೆಲದ ಮೇಲೆ ಬಿದ್ದುಬಿಟ್ಟೆ. ಹೊರಗೆ ಅಂದು ಮತ್ತು ಮಾರನೇ ದಿನ ಏನಾಯಿತು ಎಂಬ ಅರಿವೇ ನನಗೆ ಇರಲಿಲ್ಲ. ನನಗೆ ಅಂತರಂಗ ದಲ್ಲಿ ಜ್ಞಾಪಕವಿದ್ದ ಸಂಗತಿಯು ಇದೊಂದೆ. ಅದೇ ನಾನು ಹಿಂದೆ ಎಂದೂ ಅನುಭವಿಸದ ಒಂದು ದೊಡ್ಡ ಆನಂದಸಾಗರ ನನ್ನಲ್ಲಿ ಸಂಚ ರಿಸುತ್ತಿತ್ತು ಮತ್ತು ಅದೇ ಕಾಲದಲ್ಲಿ ಸಂಪೂರ್ಣವಾಗಿ ಜಗನ್ಮಾತೆಯ ಇರವನ್ನು ನಾನು ಮನಸಾರ ನೋಡಿದೆನು.”

೯೭೫. ಆದರೆ ದೇವರ ಇಂತಹ ಪ್ರತ್ಯಕ್ಷ ಅನುಭವ ಭಗವಂತನ ನಿರಂತರ ಸಾಕ್ಷಾತ್ಕಾರದ ಅನುಭವವನ್ನು ತರಲಿಲ್ಲ. ಕೆಲವು ವೇಳೆ ಶೂನ್ಯಮಾರ್ಗದಲ್ಲಿ ನಡೆಯಬೇಕಾಯಿತು. ಸರ್ವದಾ ಭಗವಂತನನ್ನು ಪಡೆಯಬೇಕೆಂಬ ಹಂಬಲಿಕೆ, ಜಗನ್ಮಯಿಯನ್ನು ಗದ್ಗದಕಂಠದಿಂದ ಅಳುತ್ತ ಕಂಬನಿದುಂಬಿ ಬೇಡುವಂತೆ ಪ್ರೇರೇಪಿಸಿತು. ಇಂತಹ ಸ್ಥಿತಿಯಲ್ಲಿದ್ದಾಗ ಅವರ ಮಾನಸಿಕ ಸ್ಥಿತಿಯನ್ನು ಕುರಿತು ಶ್ರೀ ರಾಮಕೃಷ್ಣರು ಹೀಗೆ ಹೇಳಿದರು : “ನನ್ನ ಆರ್ತಧ್ವನಿ ಮತ್ತು ಪ್ರಾರ್ಥನೆಗಳಿಂದ ಆಕರ್ಷಿತರಾಗಿ ಜನರ ತಂಡ ನನ್ನ ಸುತ್ತಲೂ ಬಂದು ಮುತ್ತಿದರೆ ಅವರೆಲ್ಲ ನೆರಳಿನಂತೆ ಅಥವಾ ಚಿತ್ರದಲ್ಲಿ ಬರೆದ ಗೊಂಬೆ ಗಳಂತೆ ಅಸತ್ಯವಾದ ಛಾಯೆಯಂತೆ ಕಾಣುತ್ತಿದ್ದರು. ಆದಕಾರಣ ಅವರ ಎದುರಿಗೆ ನನಗೆ ಯಾವ ವಿಧ ನಾಚಿಕೆಯೂ ಆಗುತ್ತಿರಲಿಲ್ಲ. ಹೃದಯದ ವೇದನೆಯಿಂದ ನಾನು ಯಾವಾಗಲಾದರೂ ಬಾಹ್ಯ ಪ್ರಜ್ಞೆಯನ್ನು ಕಳೆದುಕೊಂಡು ಮರುಕ್ಷಣವೇ ಜಗನ್ಮಯಿಯ ದೇದೀಪ್ಯ ಮಾನವಾದ ಆಧ್ಯಾತ್ಮಿಕರೂಪವನ್ನು ಕಾಣುತ್ತಿದ್ದೆನು. ಅವಳು ಕೆಲವು ವೇಳೆ ನಗುತ್ತಲೂ, ಕೆಲವು ವೇಳೆ ಮಾತನಾಡುತ್ತಲೂ, ಕೆಲವು ವೇಳೆ ಬುದ್ಧಿವಾದವನ್ನು ಹೇಳುತ್ತಾ ಸಮಾಧಾನ ಮಾಡುವಂತೆಯೂ ಕಾಣುತ್ತಿತ್ತು.”

೯೭೬. ದೇವರಿಗಾಗಿ ತೀವ್ರ ವ್ಯಾಕುಲಪಟ್ಟ ದಿನಗಳನ್ನು ಕುರಿತು ಶ್ರೀರಾಮಕೃಷ್ಣರು ಹೀಗೆ ಹೇಳಿದರು: "ಆಗ ನಾನು ದೇಹವನ್ನು ಶುಚಿಯಾಗಿ ಇಟ್ಟಿರಬೇಕೆಂಬುದನ್ನು ಲಕ್ಷ್ಯದಲ್ಲೇ ಇಡದಿದ್ದುದರಿಂದ, ಕೂದಲು, ಕೊಳೆ ಮತ್ತು ಧೂಳಿನಿಂದ ಕೂಡಿ ಉದ್ದನಾಗಿ ಬೆಳೆದು ಜಟೆಯಾಯಿತು. ನಾನು ಧ್ಯಾನಕ್ಕೆ ಕುಳಿತಾಗ ಮನಸ್ಸಿನ ಏಕಾಗ್ರತೆಯಿಂದ ದೇಹ ಒಂದು ಮರದಂತೆ ಅಚಲವಾಗಿ ಗಟ್ಟಿಯಾಗಿರುತ್ತಿತ್ತು. ಇದೊಂದು ಜಡವಸ್ತುವೆಂದು ತಿಳಿದು ಹಕ್ಕಿಗಳು ಸರಾಗವಾಗಿ ಬಂದು ತಲೆಯಮೇಲೆ ಕುಳಿತು ಜಟೆಯನ್ನು ಆಹಾರಕ್ಕಾಗಿ ಕೆದಕುತ್ತಿದ್ದವು. ಕೆಲವು ವೇಳೆ ಭಗವಂತನ ಅಗಲಿಕೆಯ ವ್ಯಾಕುಲತೆ ಅತಿ ದಾರುಣವಾದಾಗ ನಾನು ನನ್ನ ಮುಖವನ್ನು ನೆಲದ ಮೇಲೆ ಉಜ್ಜುತ್ತಿದ್ದೆ ಕೆಲವು ವೇಳೆ ಅದು ಗಾಯವಾಗಿ ರಕ್ತ ಸುರಿಯುತ್ತಿತ್ತು. ಧ್ಯಾನ ಪ್ರಾರ್ಥನೆ ಮತ್ತು ಇತರ ಸಾಧನೆಗಳಲ್ಲಿ ದಿನ ನನಗೆ ಗೊತ್ತಾಗದಂತೆ ಕಳೆದುಹೋಗುತ್ತಿತ್ತು. ಸಂಜೆಯ ಹೊತ್ತು ರಾತ್ರಿಯ ಆಗಮನವನ್ನು ಗುಡಿಯ ಜಾಗಟೆ ಮತ್ತು ಶಂಖಧ್ವನಿ ಸಾರಿದಾಗ, ದಿನ ಕಳೆದು ರಾತ್ರಿಯಾಗುತ್ತಿರುವುದೆಂದು ಜ್ಞಾಪಕಕ್ಕೆ ಬರುತ್ತಿತ್ತು. ಇಂತಹ ಸಮಯದಲ್ಲಿ ಒಂದು ನಿರಾಶೆಯ ಹುಚ್ಚು ನನ್ನನ್ನು ಮೆಟ್ಟಿಕೊಳ್ಳುತ್ತಿತ್ತು. ಆಗ ನಾನು ನೆಲದ ಮೇಲೆ ಬಿದ್ದು ಹಣೆಯನ್ನು ಅದರ ಮೇಲೆ ತಿಕ್ಕುತ್ತ, "ತಾಯೀ ಒಂದು ದಿನ ಕಳೆಯಿತು, ಆದರೂ ನೀನು ನನಗೆ ಕಾಣಿಸಿಕೊಳ್ಳಲಿಲ್ಲ" ಎಂದು ಜೋರಾಗಿ ಅಳುತ್ತಿದ್ದೆ. ನನ್ನ ಆತ್ಮವನ್ನು ಆಂತರಿಕ ಸಂಕಟ ಬಾಧಿಸುತ್ತಿತ್ತು. ಅಂತಹ ವ್ಯಥೆಯಿಂದ ನರಳುವುದನ್ನು ನೋಡಿದಾಗ ಜನರು ಯಾವುದಾದರೂ ಉದರರೋಗದಿಂದ ನರಳುತ್ತಿರುವೆನೆಂದು ಭಾವಿಸಿದರು."

೯೭೭. ಶ್ರೀರಾಮಕೃಷ್ಣರಿಗೆ ಲಗ್ನವಾದಮೇಲೆ ದಕ್ಷಿಣೇಶ್ವರಕ್ಕೆ ಬಂದೊಡನೆಯೇ ಅವರಿಗೆ ಹಿಂದೆ ಇದ್ದ ದೇವರ ಹುಚ್ಚು ಪುನಃ ಹಿಡಿಯಿತು. ಆ ದಿನಗಳ ಇವರ ಮನಸ್ಸಿನ ಸ್ವಭಾವವನ್ನು ಕುರಿತು ಅವರು ಹೀಗೆ ಹೇಳಿದರು: "ನನ್ನ ಮನಸ್ಸು ಮತ್ತು ದೇಹ ಆಧ್ಯಾತ್ಮಿಕ ಪರಿವರ್ತನೆಯಲ್ಲಿ ಅನುಭವಿಸಿದ ನಾಲ್ಕನೆ ಒಂದು ಭಾಗ ಸಾಧಾರಣ ಜನರಿಗೆ ಬಂದಿದ್ದರೂ ಅವರು ಬದುಕುತ್ತಿರಲಿಲ್ಲ. ಈ ದೇಹಕ್ಕೆ ಕೂಡ (ತಮ್ಮ ದೇಹ) ಅದೇ ಗತಿಯಾಗುತ್ತಿತ್ತು. ಆದರೆ ಅದೃಷ್ಟವಶಾತ್ ದಿನದ ಬಹುಕಾಲ ಜಗನ್ಮಾಯಿಯ ದಿವ್ಯದರ್ಶನದಲ್ಲಿ ಮೈಮರೆತು

ಇರುತ್ತಿದ್ದೆನು. ಅಂದಿನಿಂದ ಆರು ದೀರ್ಘವರ್ಷಗಳಕಾಲ ಒಂದು ಕ್ಷಣ ವಾದರೂ ನಿದ್ದೆ ಬರಲಿಲ್ಲ. ನಾನು ಎಷ್ಟು ಪ್ರಯತ್ನಪಟ್ಟರೂ ಕಣ್ಣು ರೆಪ್ಪೆಗಳೇ ಮುಚ್ಚುತ್ತಿರಲಿಲ್ಲ, ಕಾಲದ ಯೋಚನೆ ನನ್ನಿಂದ ಸಂಪೂರ್ಣ ಮಾಯವಾಯಿತು. ದೇಹದ ಭಾವನೆ ಲೇಶವೂ ಇಲ್ಲದಂತೆ ಅಳಸಿ ಹೋಯಿತು. ಜಗನ್ಮಯಿಯಿಂದ ದೇಹದ ಕಡೆಗೆ ಮನಸ್ಸು ಸ್ವಲ್ಪ ಹೋದರೂ ಅಸಾಧ್ಯವಾದ ಅಂಜಿಕೆಯಾಗುತ್ತಿತ್ತು. ಹಲವು ವೇಳೆ ನಾನು ನಿಜವಾಗಿ ಹುಚ್ಚನಾಗಿರುವೆನೆ ಎಂಬ ಅಂಜಿಕೆ ತಲೆದೋರುತ್ತಿತ್ತು. ಕನ್ನಡಿಯ ಮುಂದೆ ನಿಂತು, ಕಣ್ಣನ್ನು ತೆರೆದಾಗ ಅದಕ್ಕೆ ಸ್ವಲ್ಪವಾದರೂ ಅರಿವಾಗುತ್ತಿರಲಿಲ್ಲ. ಕಂಬನಿಗರೆಯುತ್ತಾ ನಾನು ಜಗನ್ಮಯಿಗೆ 'ಹೇ ತಾಯಿ! ನಿನ್ನನ್ನು ಪ್ರಾರ್ಥಿಸಿ ನಿನ್ನಲ್ಲಿಯೇ ಶರಣಾದುದರ ಪ್ರತಿಫಲ ವಾಗಿಯೆ ನನಗೆ ಗುಣವಾಗದ ಖಾಯಿಲೆಯನ್ನು ತಂದಿರುವುದು?' ಎಂದು ಬೇಡುತ್ತಿದ್ದೆ. ಆದರೆ ತಕ್ಷಣವೆ ಮತ್ತೊಂದು ಯೋಚನೆ ಬರುತ್ತಿತ್ತು. 'ಹೇ ತಾಯಿ, ಈ ದೇಹಕ್ಕೆ ಏನಾದರೂ ವಿಪತ್ತುಬರಲಿ ನೀನುಮಾತ್ರ ನನ್ನನ್ನೆಂದಿಗೂ ಕೈಬಿಡಬೇಡ. ನಿನ್ನ ದರ್ಶನವನ್ನು ನೀಡು. ನಿನ್ನ ದಯೆಯನ್ನು ತೋರು. ಹೇ ತಾಯಿ! ನಿನ್ನ ದಿವ್ಯ ಪಾದಪದ್ಮಗಳಲ್ಲಿ ನಾನು ಶರಣಾಗಿಲ್ಲವೆ? ನೀನಲ್ಲದೆ ಮತ್ತಾರೂ ಗತಿಯಿಲ್ಲ.' ಹೀಗೆ ಕಂಬನಿದುಂಬಿ ಪ್ರಾರ್ಥಿಸಿದನಂತರ ನನ್ನ ಮನಸ್ಸಿ ನಲ್ಲಿ ಒಂದು ಉತ್ಸಾಹ ತುಂಬಿ ತುಳುಕಾಡುತ್ತಿತ್ತು. ದೇಹದ ಮೇಲೆ ಒಂದು ಅಸಾಧ್ಯವಾದ ಜಿಗುಪ್ಸೆ ಹುಟ್ಟಿ ಜಗನ್ಮಯಿಯ ದರ್ಶನದಲ್ಲಿ ಮತ್ತು ಆವಳ ಸಮಾಧಾನದ ನುಡಿಗಳಲ್ಲಿ ಮನಸ್ಸು ಮೈಮರೆಯು ತ್ತಿತ್ತು."

೯೭೮. ಶ್ರೀರಾಮಕೃಷ್ಣರ ಪರಿಶುದ್ಧವಾದ ಮನಸ್ಸೇ ಅವರ ಪ್ರಥಮ ಮತ್ತು ಮುಖ್ಯವಾದ ಗುರುವಾಯಿತು. "ಅವಕಾಶವಿದ್ದಾಗ ಲೆಲ್ಲ ನನ್ನಂತೆಯೆ ಇರುವ ಒಬ್ಬ ತರುಣ ಸನ್ಯಾಸಿಯು ಈ ದೇಹದಿಂದ ಹೊರಗೆ ಬಂದು ಎಲ್ಲವನ್ನು ನನಗೆ ಹೇಳುತ್ತಿದ್ದನು. ಈರೀತಿ ಅವನು ಬಂದಾಗ ಕೆಲವುವೇಳೆ ಬಾಹ್ಯ ಜಗತ್ತಿನ ಪ್ರಜ್ಞೆಯನ್ನು ಸ್ವಲ್ಪ ಇಟ್ಟು ಕೊಂಡಿರುತ್ತಿದ್ದೆನು. ಮತ್ತೆ ಕೆಲವು ವೇಳೆ ಅವನ ಇರವು ಮತ್ತು ಆವನು ಮಾಡುವುದಲ್ಲದೆ ಉಳಿದುದೆಲ್ಲ ಮಾಯವಾಗುತ್ತಿತ್ತು. ಅವನು ಪುನಃ ದೇಹವನ್ನು ಪ್ರವೇಶಿಸಿದಾಗ ನನಗೆ ಪುನಃ ಬಾಹ್ಯ ಪ್ರಜ್ಞೆ ಅರಿವಾಗು ತ್ತಿತ್ತು. ಮುಂಚೆ ನಾನು ಏನನ್ನು ಅವನಿಂದ ಕಲಿತಿದ್ದೆನೊ ಅದನ್ನೆ

ನಂತರ ಬ್ರಾಹ್ಮಣಿ, ತೋತಾಪುರಿ ಮುಂತಾದವರಿಂದ ಕೇಳಿದೆ. ನಾನು ಮುಂಚೆ ಏನನ್ನು ಅವನಿಂದ ಕಲಿತೆನೊ ಅದನ್ನೆ ನಂತರ ಈ ಗುರುಗಳಿಂದ ಕಲಿತೆನು."

## ತಾಂತ್ರಿಕ ಮತ್ತು ಇತರ ಸಾಧನೆ

೯೭೯. ಭೈರವಿ ಬ್ರಾಹ್ಮಣಿಯ ನೇತೃತ್ವದಲ್ಲಿ ಮಾಡಿದ ತಾಂತ್ರಿಕಸಾಧನೆಯ ವಿಚಾರವಾಗಿ ಶ್ರೀರಾಮಕೃಷ್ಣರು ಹೀಗೆ ಹೇಳಿದರು : "ಹಗಲುಹೊತ್ತಿನಲ್ಲಿ ಬ್ರಾಹ್ಮಣಿಯು ದಕ್ಷಿಣೇಶ್ವರದಿಂದ ಬಹಳ ದೂರಕ್ಕೆ ಹೋಗಿ ತಾಂತ್ರಿಕ ಸಾಧನೆಗೆ ಬೇಕಾದ ಹಲವು ಅಪೂರ್ವ ವಸ್ತುಗಳನ್ನು ಶೇಖರಿಸುವಳು ರಾತ್ರಿಯ ಹೊತ್ತು ಒಂದು ಪೀಠದ ಹತ್ತಿರಕ್ಕೆ ಹೋಗುವಂತೆ ಹೇಳುವಳು. ನಾನು ಹೋಗುತ್ತಿದ್ದೆ. ಕಾಳಿಕಾ ಮಾತೆಯ ಪೂಜೆಯನ್ನು ಮಾಡಿದಮೇಲೆ ಅವಳ ಸಲಹೆಯಂತೆ ನಾನು ಧ್ಯಾನಮಾಡುತ್ತಿದ್ದೆ. ನನಗೆ ಜಪವನ್ನು ಮಾಡಲು ಸಾಧ್ಯವಾಗುತ್ತಿರಲಿಲ್ಲ. ನಾನು ಹಾಗೆ ಪ್ರಯತ್ನಪಟ್ಟಕೂಡಲೇ ಭಕ್ತಿಯಿಂದ ಪರವಶನಾಗಿ ಸಮಾಧಿಸ್ಥನಾಗುತ್ತಿದ್ದೆ. ಆಗ ನನಗೆ ಕಾಣುತ್ತಿದ್ದ ಹಲವು ವಿಧದ ದಿವ್ಯದರ್ಶನಗಳ ವಿಚಾರವಾಗಿ ಈಗ ನಾನು ಹೇಳಲಾರೆ. ಅವು ಜಾಗ್ರತವಾಗಿ ಒಂದಾದ ಮೇಲೊಂದು ಬರುತ್ತಿದ್ದವು. ಆ ಸಾಧನೆಗಳ ಪ್ರತಿಫಲ ನನಗೆ ಸ್ಪಷ್ಟವಾಗಿ ಕಾಣುತ್ತಿತ್ತು. ಮುಖ್ಯವಾದ ಅರವತ್ತು ನಾಲ್ಕು ತಂತ್ರಶಾಸ್ತ್ರದಲ್ಲಿ ಹೇಳಿದ ಎಲ್ಲ ಸಾಧನೆಗಳನ್ನು ಅನುಸರಿಸುವುದರಲ್ಲೂ ಬ್ರಾಹ್ಮಣಿ ಸಹಾಯಮಾಡಿದಳು. ಇವುಗಳಲ್ಲಿ ಹಲವು ಅತ್ಯಂತ ಕಠೋರವಾದ ಸಾಧನೆಗಳು. ಹಲವು ಸಾಧಕರು ಜಾರಿ ಅಧರ್ಮದ ಹಳ್ಳಕ್ಕೆ ಬೀಳುವರು. ಆದರೆ ಜಗನ್ಮಾಯಿಯ ಅಪಾರ ಕರುಣೆ ನನ್ನನ್ನು ಸ್ವಲ್ಪವೂ ಜಾರದಂತೆ ಪಾರುಗಾಣಿಸಿತು"

೯೮೦. ಕುಂಡಲಿನಿ ಜಾಗ್ರತವಾಗುವ ಅನುಭವವನ್ನು ಕುರಿತು ಶ್ರೀರಾಮಕೃಷ್ಣರು ಹೀಗೆ ಹೇಳಿದರು : "ನಾನು ಈ ಭಾವದಲ್ಲಿ ಪರವಶನಾದ ಮೇಲೆ ನನ್ನನ್ನೇ ಹೋಲುವ ಒಬ್ಬ ಮನುಷ್ಯನು ಬಂದು ಇಡ, ಪಿಂಗಳ, ಸುಷುಮ್ನಾ ನಾಡಿಗಳನ್ನು ಚೆನ್ನಾಗಿ ಕೊಡವಿದನು. ಷಟ್ಚಕ್ರಗಳ ಪದ್ಮವನ್ನು ಅವನು ತನ್ನ ನಾಲಿಗೆಯಿಂದ ನೆಕ್ಕಿದನು. ತಕ್ಷಣವೇ ಬಾಡಿದ ಕಮಲಗಳು ಮುಖವನ್ನು ಮೇಲೆ ತಿರುಗಿಸಿದವು. ಕೊನೆಗೆ ಸಹಸ್ರಾರದ ಪದ್ಮ ಪೂರ್ಣ ವಿಕಾಸವಾಯಿತು."

೯೮೧. ಇಸ್ಲಾಂ ಧರ್ಮವನ್ನು ಸಾಧನೆ ಮಾಡಿದಾಗ ಅವರ ಮನೋಭಾವವನ್ನು ಕುರಿತು ಹೀಗೆ ಹೇಳಿದರು : “ ಆಗ ನಾನು ಅಲ್ಲನ ಹೆಸರನ್ನು ಹೇಳುತ್ತಿದ್ದೆ. ಮಹಮ್ಮದೀಯರಂತೆ ಪಂಚೆಯುಡುತ್ತಿದ್ದೆ. ನಮಾಜನ್ನು ಪ್ರತಿದಿನವೂ ತಪ್ಪದೆ ಹೇಳುತ್ತಿದ್ದೆ. ಎಲ್ಲಾ ಹಿಂದೂ ಭಾವನೆಗಳೂ ಸಂಪೂರ್ಣವಾಗಿ ನನ್ನ ಮನಸ್ಸಿನಿಂದ ಮಾಯವಾದವು. ನಾನು ಹಿಂದೂ ದೇವರುಗಳಿಗೆ ನಮಸ್ಕಾರ ಮಾಡದೆ ಇದ್ದುದು ಒಂದೇ ಅಲ್ಲ. ಅವುಗಳ ಹತ್ತಿರ ಹೋಗುವುದಕ್ಕೂ ಮನಸ್ಸಾಗುತ್ತಿರಲಿಲ್ಲ. ಈ ರೀತಿ ಮೂರು ದಿನ ಕಳೆದಮೇಲೆ ಆ ಸಾಧನೆಯ ಗುರಿಯನ್ನು ಸೇರಿದೆನು.”

೯೮೨. “ ನಾನು ಹಿಂದೆ ಹಿಂದೂ, ಇಸ್ಲಾಮ್, ಕ್ರೈಸ್ತ ಮುಂತಾದ ಧರ್ಮಗಳನ್ನೆಲ್ಲ ಅಭ್ಯಾಸಮಾಡಬೇಕಾಗಿತ್ತು. ಮತ್ತು ಹಿಂದೂ ಧರ್ಮದಲ್ಲಿರುವ ಇತರ ಪಂಥಗಳಾದ ಶಾಕ್ತ, ವೈಷ್ಣವ ಮತ್ತು ವೇದಾಂತಮತವನ್ನು ನಾನು ಅನುಸರಿಸಿರುವೆನು. ಎಲ್ಲರೂ ಹೋಗುತ್ತಿರುವುದು ಒಂದೇ ದೇವರ ಕಡೆಗೆ. ಆದರೆ ಹಲವರು ಹಲವು ದಾರಿಗಳ ಮೂಲಕ ಬರುತ್ತಿರುವರು ಅಷ್ಟೆ.”

೯೮೩. ಶ್ರೀರಾಮಕೃಷ್ಣರು ತಮ್ಮ ಪ್ರೀತಿಪಾತ್ರ ಸೋದರಳಿಯನಾದ ಅಕ್ಷಯ ಎಂಬುವನ ಸಾವನ್ನು ನೋಡುವಾಗ ಮನುಷ್ಯ ಹೇಗೆ ಸಾಯುತ್ತಾನೆಂಬುದನ್ನು ಅವರು ಪ್ರತ್ಯಕ್ಷ ಅನುಭವಿಸಿದರು. ತಮ್ಮ ಅನುಭವವನ್ನು ವಿವರಿಸುತ್ತಾ ಅವರು ಹೀಗೆ ಹೇಳಿದರು : “ ಅಕ್ಷಯ ನನ್ನ ಕಣ್ಣೆದುರಿಗೇ ಸತ್ತನು. ಆದರೆ ಇದರಿಂದ ನನಗೆ ಏನೂ ಆಗಲಿಲ್ಲ. ನಾನು ಹತ್ತಿರ ನಿಂತುಕೊಂಡು ಮನುಷ್ಯ ಹೇಗೆ ಸಾಯುತ್ತಾನೆಂಬುದನ್ನು ನೋಡಿದೆನು. ಇದು ಒರೆಯಿಂದ ತೆಗೆದ ಕತ್ತಿಯಂತೆ. ಕತ್ತಿ ಉಳಿಯಿತು. ಆದರೆ ಒರೆ ಮಾತ್ರ ಹಿಂದೆ ಬಿದ್ದಿತು. ನಾನು ಈ ದೃಶ್ಯ ನೋಡಿ ಆನಂದಪಟ್ಟು ಕುಣಿದಾಡಿದೆ, ಹಾಡಿದೆ. ಅವರು ದೇಹವನ್ನು ಹೊತ್ತುಕೊಂಡು ಹೋಗಿ ಉತ್ತರಕ್ರಿಯೆ ಮಾಡಿದರು. ಆದರೆ ಮಾರನೆ ದಿನ ನಾನು ಅಲ್ಲಿ ನಿಂತಾಗ (ತಮ್ಮ ಕೋಣೆಯ ಆಗ್ನೇಯ ದಿಕ್ಕನ್ನು ತೋರುತ್ತ) ಅಕ್ಷಯನು ಕಾಲವಾದದ್ದರಿಂದ ನನಗೆ ಸಹಿಸಲಸಾಧ್ಯವಾದ ವ್ಯಥೆಯುಂಟಾಯಿತು. ಯಾರೋ ಒದ್ದೆಯ ಚೌಕದಂತೆ ನನ್ನ ಎದೆಯನ್ನು ಹಿಂಡಿದಂತೆ ಭಾಸವಾಯಿತು. ನಾನು ಆಶ್ಚರ್ಯಪಟ್ಟು, ಜಗನ್ಮಯಿ ನನಗೆ ಒಂದು ಬುದ್ಧಿವಾದವನ್ನು ಕೊಡುತ್ತಿರುವಳೆಂದು

ತಿಳಿದೆನು. ನನಗೆ ದೇಹದ ಮೇಲೆ ಅಭಿಮಾನವಿರಲಿಲ್ಲ. ಅದರಲ್ಲೂ ಅಳಿಯನ ಮೇಲೆ ಮತ್ತೂ ಕಡಿಮೆ. ಅವನ ಸಾವಿನಿಂದ ನನಗೆ ಇಷ್ಟು ವ್ಯಥೆಯಾದರೆ, ತಮ್ಮ ಪ್ರೀತಿಪಾತ್ರರಾದ ಬಂಧುಬಳಗದವರು ಕಾಲ ವಾದರೆ ಗೃಹಸ್ಥರ ವ್ಯಥೆ ಎಷ್ಟು ಇರಬಹುದು!"

## ನಿರ್ವಿಕಲ್ಪಸ್ಥಿತಿಯ ಅನುಭವ

೯೮೪. ನಿರ್ವಿಕಲ್ಪ ಸಮಾಧಿಯ ತಮ್ಮ ಅನುಭವವನ್ನು ಕುರಿತು ಶ್ರೀರಾಮಕೃಷ್ಣರು ಹೀಗೆ ಹೇಳಿದರು : "ಉಪದೇಶಾನಂತರ ತೋತಾ ಪುರಿ ಹಲವು ಅದ್ವೈತವೇದಾಂತದ ಸಿದ್ಧಾಂತಗಳನ್ನು ನನಗೆ ಬೋಧಿ ಸಲು ಮೊದಲುಮಾಡಿದನು. ಮನಸ್ಸನ್ನು ಎಲ್ಲಾ ಬಾಹ್ಯವಸ್ತುಗಳಿಂದ ಸೆಳೆದು ಆತ್ಮನಮೇಲೆ ಕೇಂದ್ರೀಕರಿಸುವಂತೆ ಹೇಳಿದನು. ಆದರೆ ನಾನು ಎಷ್ಟು ಪ್ರಯತ್ನಪಟ್ಟರೂ ನಾಮರೂಪಗಳ ಎಲ್ಲೆಯನ್ನು ದಾಟಿ ಅವ್ಯ ಕ್ತಸ್ಥಿತಿಗೆ ನನ್ನ ಮನಸ್ಸನ್ನು ತರಲು ಸಾಧ್ಯವಾಗಲಿಲ್ಲ. ಒಂದು ವಸ್ತು ವನ್ನು ಹೊರತು ಉಳಿದ ಎಲ್ಲ ವಸ್ತುಗಳಿಂದಲೂ ನನ್ನ ಮನಸ್ಸನ್ನು ಸೆಳೆಯಲು ಅಷ್ಟು ಕಷ್ಟವಾಗಲಿಲ್ಲ. ಇದೇ ನನಗೆ ಚಿರಪರಿಚಿತವಾದ ಆನಂದಮಯಿಯ ದೇದೀಪ್ಯಮಾನವಾದ ಶುದ್ಧಚೈತನ್ಯಸಾರವಾದ ಜಗನ್ಮಯಿಯ ಆಕಾರ. ಇದು ಸಚೇತನವಾದ ಸತ್ಯದಂತೆ ನನಗೆ ತೋರಿ ನಾಮರೂಪಗಳ ಎಲ್ಲೆಯನ್ನು ಮೀರಿಹೋಗಲು ಅಡ್ಡಿ ತಂದಿತು. ಪುನಃಪುನಃ ನಾನು ಅದ್ವೈತಸಾಧನೆಯ ಮೇಲೆ ಏಕಾಗ್ರಮಾಡಲು ಯತ್ನಿಸಿದೆನು. ಆದರೆ ಪ್ರತಿಸಲವೂ ಜಗನ್ಮಾತೆಯ ರೂಪು ಅಡ್ಡಿ ಬರುತ್ತಿತ್ತು, ನಿರಾಶನಾಗಿ ನಾನು ತೋತಾಪುರಿಗೆ 'ಇದು ಅಸಾಧ್ಯ. ಅವ್ಯಕ್ತಸ್ಥಿತಿಗೆ ನನ್ನ ಮನಸ್ಸನ್ನು ಏರಿಸಿ ಆತ್ಮಸಾಕ್ಷಾತ್ಕಾರ ಮಾಡಿ ಕೊಳ್ಳಲಾರೆ' ಎಂದೆ. ಆತನು ಥಕ್ಕನೆ 'ಏನು? ನೀನು ಅದನ್ನು ಮಾಡಲಾರೆಯಾ? ಆದರೆ ನೀನು ಅದನ್ನು ಮಾಡಲೇಬೇಕು' ಎಂದನು. ಆವನು ಸುತ್ತಲೂ ನೋಡಿ ಕೆಳಗೆ ಬಿದ್ದಿದ್ದ ಒಂದು ಚೂರು ಗಾಜನ್ನು ತೆಗೆದುಕೊಂಡು ನನ್ನ ಹುಬ್ಬಿನ ನಡುವೆ, ಅದನ್ನು ಅಮುಕಿ 'ಇಲ್ಲಿ ಏಕಾಗ್ರಮಾಡು' ಎಂದನು. ನಾನು ಪುನಃ ಶಪಥ ಮಾಡಿ ಧ್ಯಾನಕ್ಕೆ ಕುಳಿತೆನು. ಜಗನ್ಮಾತೆಯ ದಿವ್ಯಸ್ವರೂಪ ಬಂದೊಡನೆಯೆ ವಿಚಾರ ಖಡ್ಗದಿಂದ ಅದನ್ನು ಎರಡಾಗಿ ಸೀಳಿದೆನು. ಆಗ ನನ್ನ ಮನಸ್ಸಿಗೆ ಇನ್ನು ಆವ ಆತಂಕವೂ ಇರಲಿಲ್ಲ. ತಕ್ಷಣವೆ ನನ್ನ ಮನಸ್ಸು ಕಾರ್ಯ

ಕಾರಣ ಪ್ರಪಂಚವನ್ನು ದಾಟಿತು. ನಾನು ಸಮಾಧಿಯಲ್ಲಿ ಮಗ್ನನಾದೆ."

೯೮೫. "ಸಾಧಾರಣ ಮನುಷ್ಯರು ತಿರುಗಿ ಬರಲಾರದಂತಹ ನಿರ್ವಿಕಲ್ಪಸಮಾಧಿಯಲ್ಲಿ ನಾನು ಆರು ತಿಂಗಳಿದ್ದೆನು. (ಸಾಧಾರಣ ಮನುಷ್ಯರಿಗೆ ಇಪ್ಪತ್ತೊಂದು ದಿನಗಳಾದ ಮೇಲೆ ದೇಹ ಒಣಗಿದ ಎಲೆಯಂತೆ ಬಿದ್ದುಹೋಗುವುದು.) ಇಷ್ಟು ದಿನರಾತ್ರಿಗಳು ನನ್ನ ಅರಿವಿಲ್ಲದೆ ಸಾಗಿತ್ತು. ನೊಣಗಳು ನನಗೆ ಯಾವ ವಿಧವಾದ ವೇದನೆಯನ್ನೂ ಉಂಟುಮಾಡದೆ ಹೆಣದ ಮೂಗು ಮತ್ತು ಬಾಯಿಗೆ ಹೋಗುವಂತೆ ಹೋಗುತ್ತಿದ್ದವು. ಧೂಳಿನಿಂದ ಕೂಡಿ ಕೂದಲೆಲ್ಲ ಜಟೆ ಕಟ್ಟಿತು. ಕೆಲವುವೇಳೆ ಪ್ರಜ್ಞೆಯಿಲ್ಲದೆ ದೇಹಬಾಧೆಯೂ ಕೂಡ ಆಗಿ ಹೋಗುತ್ತಿತ್ತು. ಆ ಕಾಲಕ್ಕೆ ಸರಿಯಾಗಿ ಬಂದ ಒಬ್ಬ ಸಾಧುವಿಲ್ಲದೆ ಇದ್ದರೆ ಈ ದೇಹ ಬದುಕುತ್ತಿರಲಿಲ್ಲ. ಅವನಿಗೆ ನನ್ನ ಸ್ಥಿತಿ ತಕ್ಷಣವೇ ಗೊತ್ತಾಯಿತು. ಜಗನ್ಮಾತೆ ಈ ದೇಹದ ಮೂಲಕ ಇನ್ನೂ ಅನೇಕ ಕೆಲಸಗಳನ್ನು ಮಾಡಬೇಕಾಗಿದೆ. ಇದು ಉಳಿದುಕೊಂಡರೆ ಹಲವರು ಉದ್ಧಾರವಾಗುವರು ಎಂದು ತಿಳಿದುಕೊಂಡನು ಆದ ಕಾರಣವೆ ಊಟದ ವೇಳೆಯಲ್ಲಿ ಸ್ವಲ್ಪ ಆಹಾರವನ್ನು ತಂದು, ನನ್ನ ಮನಸ್ಸು ದೇಹದ ಪ್ರಜ್ಞೆಯ ಮೇಲೆ ಬರುವಂತೆ ಈ ದೇಹಕ್ಕೆ ಬೆತ್ತದಿಂದ ಏಟು ಕೊಡುತ್ತಿದ್ದನು. ಸ್ವಲ್ಪ ಜಾಗ್ರತೆಯಾದ ಸುಳಿವು ಕಂಡೊಡನೆಯೆ ಆಹಾರವನ್ನು ಬಾಯಿಯೊಳಕ್ಕೆ ತುರುಕುತ್ತಿದ್ದನು. ಈರೀತಿ ಕೆಲವು ದಿನ ಕೆಲವು ತುತ್ತು ಆಹಾರ ಒಳಗೆ ಹೋಗುತ್ತಿತ್ತು. ಉಳಿದ ದಿನ ಅದೂ ಇಲ್ಲ. ಸರಿಯಾಗಿ ಆರುತಿಂಗಳು ಹೀಗೆ ಕಳೆಯಿತು. ಈ ಸ್ಥಿತಿಯಲ್ಲಿ ಕೆಲವು ತಿಂಗಳು ಇದ್ದಾದಮೇಲೆ ನಂತರ ಜಗನ್ಮಾಯಿಯಿಂದ 'ಜಗದ ಹಿತಕ್ಕಾಗಿ ಭಾವಮುಖದಲ್ಲಿರು' ಎಂಬ ಅಪ್ಪಣೆ ಕೇಳಿದೆನು. ನಂತರ ರಕ್ತಭೇದಿ ಮೊದಲಾಯಿತು. ಹೊಟ್ಟೆಯಲ್ಲಿ ಅಸಾಧ್ಯವಾದ ಯಾತನೆಯಾಗುತ್ತಿತ್ತು. ಹೀಗೆ ಆರುತಿಂಗಳು ಅನುಭವಿಸಿದ ಮೇಲೆ ಸಾಧಾರಣವಾದ ದೇಹದ ಮೇಲಿನ ಪ್ರಜ್ಞೆ ಕ್ರಮೇಣ ಬಂದಿತು. ಇಲ್ಲದೇ ಇದ್ದರೆ ಆಗಿಂದಾಗ್ಗೆ ಮನಸ್ಸು ತನ್ನಷ್ಟಕ್ಕೆ ತಾನೆ ನಿರ್ವಿಕಲ್ಪ ಸಮಾಧಿಯ ಕಡೆಗೆ ಹೋಗುತ್ತಿತ್ತು.

೯೮೬. "ಈ ಮನಸ್ಸಿನ ಸ್ವಭಾವ ಸಾಧಾರಣವಾಗಿ ನಿರ್ವಿಕಲ್ಪ ಸಮಾಧಿಯ ಕಡೆಗೆ ಹೋಗುವುದು. ಒಂದುಸಲ ಆ ಸ್ಥಿತಿಯನ್ನು ತಲುಪಿದರೆ ಇದಕ್ಕೆ ಕೆಳಗೆ ಬರಲು ಇಚ್ಛೆಯಿಲ್ಲ. ನಿಮಗೋಸ್ಕರ

ನಾನು ಅದನ್ನು ಬಲಾತ್ಕಾರದಿಂದ ಕೆಳಗೆ ತರುತ್ತೇನೆ. ಪ್ರಾಪಂಚಿಕ ಆಸೆಯಿಲ್ಲದೆ ಮನಸ್ಸನ್ನು ಕೆಳಗೆ ತರುವುದು ಕಷ್ಟ. ಆದಕಾರಣವೇ ನಾನು ನೀರು ಕುಡಿಯಬೇಕು, ಯಾವುದೋ ತಿಂಡಿ ತಿನ್ನಬೇಕು, ಯಾರನ್ನೋ ನೋಡಬೇಕು, ಎಂಬ ಆಸೆಗಳನ್ನು ಮನಸ್ಸಿಗೆ ಹಚ್ಚಿ ಕೊಳ್ಳುತ್ತಿರುವೆನು. ಆಗ ಮಾತ್ರ ಮನಸ್ಸು ಕ್ರಮೇಣ ದೇಹಾಭಿಮುಖ ವಾಗುವುದು. ಪುನಃ ಕೆಳಗೆ ಬಂದರೂ ಮೇಲೆ ಓಡಿಹೋಗುವುದು. ಪುನಃ ಅದನ್ನು ಇಂತಹ ಆಸೆಗಳ ಮೂಲಕ ಎಳೆದು ತರಬೇಕಾಗಿದೆ.''

೯೮೭. "ಓಂ ತತ್ಸತ್" ಎಂಬ ಮಂತ್ರದಲ್ಲಿ ತತ್ ಎಂಬುದನ್ನು ಹೇಳಿದೊಡನೆಯೆ ಶ್ರೀರಾಮಕೃಷ್ಣರು ನಿರ್ವಿಕಲ್ಪ ಸಮಾಧಿಯ ಅತ್ಯುತ್ತಮ ಸ್ಥಾನಕ್ಕೆ ಏರುತ್ತಿದ್ದರು. ಸತ್ ಎಂಬುದು ಅದಕ್ಕೆ ವಿರುದ್ಧವಾದ ಅಸತ್ ಎಂಬ ಭಾವವನ್ನು ಮನಸ್ಸಿಗೆ ಅಸ್ಪಷ್ಟವಾಗಿ ತರುವುದು. ಎಲ್ಲಕ್ಕಿಂತ ಪವಿತ್ರವಾದ "ಓಂ" ಶಬ್ದವು ಕೂಡ ಗುರಿಗಿಂತ ಕೆಳಗೆ ಇರುತ್ತಿತ್ತು. ಆದರೆ ಅವರು "ತತ್" ಎಂದು ಉಚ್ಚರಿಸಿದೊಡನೆಯೆ ಅವರ ಮನಸ್ಸಿನಿಂದ ಎಲ್ಲ ವಿಧದ ಪರಸ್ಪರ ಸಂಬಂಧದ ಭಾವನೆಗಳೂ ನಶಿಸಿ ಹೋಗುತ್ತಿತ್ತು. ಅಸ್ತಿತ್ವ ಮತ್ತು ನಾಸ್ತಿತ್ವಗಳ ವಿಮರ್ಶೆ ನಿಲ್ಲುತ್ತಿತ್ತು. ಎಲ್ಲ ಉಪಾಧಿಗಳನ್ನು ಮೀರಿರುವ ಅದ್ವೈತದಲ್ಲಿ ತನ್ಮಯರಾಗುತ್ತಿದ್ದರು.

೯೮೮. ಪ್ರಶ್ನೆ:—ಸ್ವಾಮಿ! ಸಮಾಧಿಯಲ್ಲಿರುವಾಗ ನಿಮಗೆ ಸ್ವಲ್ಪವಾದರೂ ನಾನು ಎಂಬ ಅರಿವು ಇರುತ್ತದೆಯೆ?

ಉತ್ತರ:—ಹೌದು, ಸಾಧಾರಣವಾಗಿ ಸ್ವಲ್ಪ ಅಹಂಕಾರ ಉಳಿಯುವುದು. ಚಿನ್ನದ ರೇಖನ್ನು ಚಿನ್ನದಮೇಲೆ ತಿಕ್ಕಿದಾಗ ಅದೆಲ್ಲವೂ ಸಂಪೂರ್ಣವಾಗಿ ಹೇಗೆ ಸವೆದು ಹೋಗುವುದಿಲ್ಲವೊ ಹಾಗೆ ಎಲ್ಲಾ ಬಾಹ್ಯ ಪ್ರಜ್ಞೆ ಮಾಯವಾದರೂ ಭಗವಂತನನ್ನು ನೋಡಿ ಆನಂದಿಸುವುದಕ್ಕಾಗಿ ಅವನು ಅಹಂಕಾರವನ್ನು ಉಳಿಸುವನು.

ಆದರೆ ಕೆಲವು ವೇಳೆ ಅವನು ಇದನ್ನೂ ಓಡಿಸಿ ಬಿಡುವನು. ಇದೇ ಅತ್ಯುತ್ತಮ ಸಮಾಧಿ. ಆ ಸ್ಥಿತಿ ಏನೆಂದು ಯಾರಿಗೂ ಹೇಳಲು ಸಾಧ್ಯವಿಲ್ಲ. ಜೀವಾತ್ಮನು ಸಂಪೂರ್ಣವಾಗಿ ಅವನಂತೆ ಮಾರ್ಪಡುವನು. ಉಪ್ಪಿನಿಂದ ಮಾಡಿದ ಬೊಂಬೆ ಸಮುದ್ರದ ಆಳವನ್ನು ಕಂಡು ಹಿಡಿಯುವುದಕ್ಕಾಗಿ ಅದರೊಳಗೆ ಇಳಿಯಿತು. ಆದರೆ ಅದು ನೀರನ್ನು ಮುಟ್ಟಿದೊಡನೆಯೆ ಕರಗಿಹೋಯಿತು. ನಂತರ ಸಮುದ್ರ ಎಷ್ಟು ಆಳವೆಂದು ಬಂದು ಹೇಳುವವರಾರು.

## ಶ್ರೀಗುರುದೇವರ ಅನವರತ ಭಾವ ಸಮಾಧಿ

೯೮೯. "ಸ್ವಾಮಿ! ನೀವು ದೇವರಲ್ಲಿ ನಂಬುತ್ತೀರ" ಎಂದು ಶ್ರೀರಾಮಕೃಷ್ಣರನ್ನು ಪ್ರಶ್ನಿಸಿದರು.

"ಹೌದು ನಂಬುತ್ತೇನೆ" ಎಂದರು ಶ್ರೀರಾಮಕೃಷ್ಣರು.

"ಸ್ವಾಮಿ ನೀವು ಅದನ್ನು ಸಮರ್ಥಿಸಬಲ್ಲಿರಾ?"

"ಬಲ್ಲೆ"

"ಹೇಗೆ?"

"ಹೇಗೆಂದರೆ ನಾನು ನಿನ್ನನ್ನು ಇಲ್ಲಿ ನೋಡುವಂತೆ ಅವನನ್ನು ನೋಡುತ್ತೇನೆ, ಆದರೆ ಅವನನ್ನು ನಿನಗಿಂತ ಚೆನ್ನಾಗಿ ನೋಡುತ್ತೇನೆ."

೯೯೦. ತಾರ್ಕಿಕನೊಬ್ಬನು ಒಂದು ಸಲ ಶ್ರೀರಾಮಕೃಷ್ಣರನ್ನು ಜ್ಞಾತೃ ಜ್ಞೇಯ ಜ್ಞಾನವೆಂದರೇನು? ಎಂದು ಕೇಳಿದನು.

ಶ್ರೀರಾಮಕೃಷ್ಣರು "ಸಭ್ಯ ಮಹಾಶಯರೇ, ಪಾಂಡಿತ್ಯದ ಇಂತಹ ಕಸರತ್ತು ನನಗೆ ಗೊತ್ತಿಲ್ಲ. ನನ್ನಲ್ಲಿರುವ ಆತ್ಮ ಮತ್ತು ಜಗನ್ಮಾಯಿ ಒಂದೇ ನನಗೆ ಗೊತ್ತಿರುವುದು" ಎಂದರು.

೯೯೧. ನನ್ನ ದೇಹಸ್ಥಿತಿಯನ್ನು ನೋಡಿದಮೇಲೆ ಹೃದಯನು "ಇಂತಹ ದುರ್ಬಲ ದೇಹದಲ್ಲಿ ಇನ್ನೆಲ್ಲೂ ಇಷ್ಟೊಂದು ತಪಸ್ಸು ಮತ್ತು ಇಷ್ಟೊಂದು ಜ್ಞಾನವನ್ನು ನೋಡಿಲ್ಲ" ಎಂದನು. ನನ್ನ ದೇಹ ದುರ್ಬಲ ವಾಗಿದ್ದರೂ ಇತರರೊಂದಿಗೆ ದೇವರ ವಿಚಾರವಾಗಿ ಮಾತಾಡುವುದನ್ನು ಬಿಡುತ್ತಿರಲಿಲ್ಲ. ಒಂದುಸಲ ನಾನು ಕೇವಲ ಅಸ್ಥಿಪಂಜರದಂತೆ ಆಗಿದ್ದದ್ದು ಜ್ಞಾಪಕವಿದೆ. ಆದರೂ ನನಗೆ ದೇಹದ ನೆನಪಿಲ್ಲದೆ ಹಲವು ಗಂಟೆಗಳು ಆಧ್ಯಾತ್ಮಿಕ ವಿಚಾರವಾಗಿ ಸಂಭಾಷಣೆ ಮಾಡುತ್ತಿದ್ದೆ.

## ಶ್ರೀರಾಮಕೃಷ್ಣರು ಹೇಗೆ ಪ್ರಾರ್ಥಿಸುತ್ತಿದ್ದರು

೯೯೨. ನಾನು ಜಗನ್ಮಾಯಿಯನ್ನು ಈ ರೀತಿ ಪ್ರಾರ್ಥಿಸುತ್ತಿದ್ದೆ: "ಆನಂದಮಯಿಯಾದ ಹೇ ಜಗನ್ಮಾತೆ! ನೀನು ನನಗೆ ಪ್ರತ್ಯಕ್ಷವಾಗಲೇಬೇಕು." ಕೆಲವುವೇಳೆ ನಾನು "ಹೇ ಸಾಧುವತ್ಸಲ! ದೀನಬಂಧು! ನಾನು ನಿನ್ನ ಜಗದಿಂದ ಹೊರಗೆ ಇರುವೆನೆ? ನನಗೆ ಜ್ಞಾನವಿಲ್ಲ, ಭಕ್ತಿಯಿಲ್ಲ, ಪುಣ್ಯಫಲಗಳಿಲ್ಲ. ನನಗೆ ಏನೂ ಗೊತ್ತಿಲ್ಲ. ಹೇ

ಅನಂತ ಕರುಣಾಸಿಂಧು! ನಿನ್ನ ದರ್ಶನವನ್ನು ನನಗೆ ದಯಪಾಲಿಸ ಬೇಕು" ಎನ್ನುತ್ತಿದ್ದೆ.

೯೯೩. "ಹೇ ದಿವ್ಯಜನನಿ! ನನಗೆ ಜನರಿಂದ ಕೀರ್ತಿಬೇಡ! ನನಗೆ ದೇಹದ ಸುಖಾಭಿಲಾಷೆ ಬೇಡ! ಗಂಗಾ ಯಮುನಾ ನದಿಗಳ ನಿತ್ಯಸಂಗಮದಂತೆ ನನ್ನ ಹೃದಯ ನಿನ್ನೆಡೆಗೆ ಹರಿಯಲಿ. ಹೇ ಜನನಿ! ಭಕ್ತಿಹೀನ ನಾನು. ಯೋಗಹೀನ ನಾನು, ದೀನ ನಾನು, ನನ್ನವ ರೆಂಬುವರಿಲ್ಲ. ನನಗೆ ಯಾರ ಹೊಗಳಿಕೆಯೂ ಬೇಡ. ನನ್ನ ಮನಸ್ಸು ಮಾತ್ರ ನಿನ್ನ ಪಾದಪದ್ಮಗಳಲ್ಲಿ ಯಾವಾಗಲೂ ನೆಲಸಲಿ."

೯೯೪. "ಹೇ ತಾಯಿ! ನಾನು ಯಂತ್ರ ನೀನು ಯಂತ್ರಿ, ನಾನು ಕೋಣೆ ನೀನು ಅದರಲ್ಲಿರುವವಳು, ನಾನು ಒರೆ ನೀನು ಕತ್ತಿ, ನಾನು ರಥ ನೀನು ರಥಿ, ನೀನು ಮಾಡಿಸಿದಂತೆ ನಾನು ಮಾಡುವೆನು. ನೀನು ಪ್ರೇರೇಪಿಸಿದಂತೆ ನಾನು ಮಾತಾಡುವೆನು. ಅಂತರ್ಯಾಮಿಯಾದ ನೀನು ಚಲಿಸಿದಂತೆ ನಾನು ಚಲಿಸುವೆನು. 'ನಾನಲ್ಲ, ನಾನಲ್ಲ' ಆದರೆ ಎಲ್ಲವೂ 'ನೀನೆ'."

೯೯೫. ಸತ್ಯದ ಪರಮಭಕ್ತನಾದರೆ ಒಬ್ಬನು ದೇವರನ್ನು ಕಾಣುವುದರಲ್ಲಿ ಸಂದೇಹವಿಲ್ಲ. ಅದಲ್ಲದೆ ಅವನು ಸತ್ಯವನ್ನು ಅಲಕ್ಷಿ ಸಿದರೆ ಕ್ರಮೇಣ ಅವನ ಸರ್ವಸ್ವವೂ ನಾಶವಾಗುವುದು. ನಾನು ಇಂತಹ ಸಾಕ್ಷಾತ್ಕಾರದ ಸ್ಥಿತಿಗೆ ಬಂದಾಗ ಕೈಯಲ್ಲಿ ಪುಷ್ಪವನ್ನು ಹಿಡಿದುಕೊಂಡು ಜಗನ್ಮಾಯಿಗೆ, "ಹೇ ತಾಯಿ! ತೆಗೆದುಕೊ ನಿನ್ನ ಜ್ಞಾನ ಮತ್ತು ಅಜ್ಞಾನಗಳನ್ನು, ನಿನ್ನ ಶುದ್ಧ ಮತ್ತು ಅಶುದ್ಧವನ್ನು; ನಿನ್ನ ಒಳ್ಳೆಯದು ಮತ್ತು ಕೆಟ್ಟದನ್ನು, ನಿನ್ನ ಪಾಪಪುಣ್ಯಗಳನ್ನು. ಹೇ ತಾಯಿ! ನನಗೆ ಶುದ್ಧ ಭಕ್ತಿಯನ್ನು ಮಾತ್ರ ನೀಡು" ಎಂದೆನು. ಆದರೆ ನಾನು ಇದನ್ನೆಲ್ಲ ಹೇಳಿದಾಗ ತಾಯಿಗೆ "ನಿನ್ನ ಸತ್ಯ ಮತ್ತು ಅಸತ್ಯಗಳನ್ನು ತೆಗೆದುಕೊ" ಎನ್ನಲಾಗಲಿಲ್ಲ. ಎಲ್ಲವನ್ನೂ ಅವಳಿಗೆ ಕೊಡಲು ಸಾಧ್ಯವಾಯಿತು. ಆದರೆ ಸತ್ಯವನ್ನು ಮಾತ್ರ ಕೊಡಲು ಸಾಧ್ಯವಾಗಲಿಲ್ಲ.

## ಪಾಪಪುಣ್ಯಗಳೆರಡರಲ್ಲೂ ಭಗವಂತ

೯೯೬. ಭಗವಂತನ ಸಾಕ್ಷಾತ್ಕಾರವಾದಮೇಲೆ ಕರ್ಮಗಳೆಲ್ಲ ಬಿದ್ದುಹೋಗುವುವು. ನನ್ನ ಬಾಹ್ಯಾಚಾರ ಪೂಜೆ ಕೊನೆಗೊಂಡದ್ದು

ಹೀಗೆ : ಕಾಳಿಕಾ ಮಂದಿರದಲ್ಲಿ ನಾನು ಪೂಜಿಸುತ್ತಿದ್ದೆ. ಒಂದುದಿನ ಆಕಸ್ಮಾತ್ ಎಲ್ಲವೂ ಚಿನ್ಮಯವೆಂದು ನನಗೆ ವ್ಯಕ್ತವಾಯಿತು. ಪೂಜೆ ಮಾಡುವ ಪಾತ್ರೆಗಳು ವಿಗ್ರಹ ಬಾಗಿಲು ಎಲ್ಲವೂ ಚಿನ್ಮಯ, ಮನುಷ್ಯರು ಪ್ರಾಣಿಗಳು ಪಕ್ಷಿಗಳು ಎಲ್ಲವೂ ಚಿನ್ಮಯ. ಹುಚ್ಚನಂತೆ ನಾನು ಸುತ್ತಲೂ ಹೂವುಗಳನ್ನೆರಚಲು ಮೊದಲುಮಾಡಿದೆ. ಕಣ್ಣಿಗೆ ಕಂಡಿದ್ದನ್ನೆಲ್ಲ ನಾನು ಪೂಜಿಸಿದೆ.

ಒಂದುದಿನ ಶಿವನನ್ನು ಪೂಜಿಸುತ್ತಿದ್ದಾಗ ವಜ್ರವನ್ನು ಶಿವಲಿಂಗದ ಮೇಲೆ ಇಡುತ್ತಿದ್ದೆ. ಆಗ ಸೃಷ್ಟಿಯೆ ಶಿವನೆಂದು ಗೊತ್ತಾಯಿತು. ನಾನು ಇದನ್ನು ವಿಚಾರಿಸಲಿಲ್ಲ, ತಕ್ಷಣವೇ ನನಗೆ ಹೊಳೆಯಿತು. ವಿಗ್ರಹದಲ್ಲಿ ಶಿವನನ್ನು ಪೂಜಿಸುವುದು ಅಂದಿಗೇ ಕೊನೆಗೊಂಡಿತು. ನಾನು ಒಂದುದಿನ ಹೂವನ್ನು ಬಿಡಿಸುತ್ತಿದ್ದೆ. ಆಗ ಪ್ರತಿಯೊಂದು ಹೂವಿನ ಗಿಡವೂ ಸರ್ವವ್ಯಾಪಿಯಾದ ಭಗವಂತನನ್ನು ಅಲಂಕರಿಸಿರುವ ಪುಷ್ಪಗುಚ್ಛವೆಂದು ಕಂಡಿತು. ಅದೇ ನನ್ನ ಕೊನೆಯ ಹೂವನ್ನು ಬಿಡಿಸುವ ದಿನವಾಯಿತು.

೯೯೭. ಒಂದುದಿನ ಹೀಗೆ ದೃಶ್ಯ ಕಂಡಿತು : ಒಂದೇ ವಸ್ತು ವಿಶ್ವದಲ್ಲಿರುವ ಎಲ್ಲ ಜೀವಿಗಳ ರೂಪವನ್ನು ಧಾರಣೆಮಾಡಿದಂತೆ ಕಂಡಿತು. ಅದು ಒಂದೇ ಮೇಣದಿಂದ ಮಾಡಿದ ಮನೆ, ಜನ, ವನ, ಮೃಗ, ಮಾರ್ಗ ಮುಂತಾದವುಗಳನ್ನು ಹೋಲಿತು.

೯೯೮. ನಾನು ಏನನ್ನು ನೋಡುತ್ತೇನೆ ನಿನಗೆ ಗೊತ್ತಿದೆಯೆ ? ಅವನೇ ಎಲ್ಲದರಂತೆ ತೋರುವನು. ಮನುಷ್ಯರು ಮತ್ತು ಇತರ ಪ್ರಾಣಿಗಳೆಲ್ಲ ತಲೆ ಅಲ್ಲಾಡಿಸಿ ಕೈಕಾಲುಗಳನ್ನು ಚಲಿಸುತ್ತಿರುವ ತೊಗಲಿನ ಗೊಂಬೆಗಳಂತೆ ಕಾಣುವುವು. ಆದರೆ ಅವುಗಳಲ್ಲೆಲ್ಲಾ ಭಗವಂತನು ಇರುವನು.

೯೯೯. ಜಗನ್ಮಯಿಯು ನನ್ನನ್ನು ಒಬ್ಬ ಭಕ್ತನ ಸ್ಥಿತಿಯಲ್ಲಿ ವಿಜ್ಞಾನಿಯ ಸ್ಥಿತಿಯಲ್ಲಿ ಇಟ್ಟಿರುವಳು. ಆದಕಾರಣವೆ ನಾನು ರಾಖಾಲ್ ಮತ್ತು ಇತರರೊಂದಿಗೆ ತಮಾಷೆ ಮಾಡಬಲ್ಲೆ. ನಾನು ಜ್ಞಾನಿಯಂತೆ ಇದ್ದರೆ, ಅದು ಸಾಧ್ಯವಾಗುತ್ತಿರಲಿಲ್ಲ. ಈ ಸ್ಥಿತಿಯಲ್ಲಿ ನಾನು ಜಗನ್ಮಯಿಯೆ ಎಲ್ಲವೂ ಆಗಿರುವಂತೆ ನೋಡುತ್ತೇನೆ. ನಾನು ಅವಳನ್ನು ಎಲ್ಲ ಕಡೆಯೂ ನೋಡುತ್ತೇನೆ. ಕಾಳಿಕಾಮಂದಿರದಲ್ಲಿ ಅವಳೇ ದುಷ್ಟನಂತೆ ಇರುವುದನ್ನು ನೋಡಿದೆ. ಅವಳೇ ಭಾಗವತ

ಪಂಡಿತನ ಸಹೋದರನಂತೆ ತೋರಿದಳು. ನಾನು ಎಷ್ಟು ಪ್ರಯತ್ನ ಪಟ್ಟರೂ ರಾಮಲಾಲನ ತಾಯಿಯನ್ನು ದೂರಲು ಆಗಲಿಲ್ಲ. ಅವಳೇ ಇನ್ನೊಂದು ರೂಪದಲ್ಲಿರುವ ತಾಯಿ ಹುಡುಗಿಯರಲ್ಲಿ ನಾನು ಜಗನ್ಮಾಯಿಯನ್ನು ನೋಡುತ್ತೇನೆ. ಅದಕ್ಕೇ ನಾನು ಅವರನ್ನು ಪೂಜಿಸುವುದು ನನ್ನ ಹೆಂಡತಿ ನನ್ನ ಕಾಲನ್ನು ಹಿಸುಕುವಳು. ಆದರೆ ಆಮೇಲೆ ನಾನು ಅವಳಿಗೆ ಕೈಮುಗಿಯುತ್ತೇನೆ. ನಾನು ಇಂತಹ ಅವಸ್ಥೆಯಲ್ಲಿ ಇರುವುದರಿಂದಲೇ ನಾನು ನಿಮಗೆ ಪ್ರತಿನಮಸ್ಕಾರ ಮಾಡುವುದು. ನೋಡಿ! ನಾನೊಬ್ಬ ಪಾಪಿಯನ್ನು ಸಹ ತಾತ್ಸಾರದಿಂದ ಕಾಣಲಾರೆ. ತುಳಸೀ ಪತ್ರ ಎಷ್ಟೇ ಸಣ್ಣವಾಗಿದ್ದರೂ ಎಷ್ಟೇ ಒಣಗಿಹೋಗಿದ್ದರೂ ಅದನ್ನು ದೇವರಿಗೆ ಕೊಡಬಹುದು.

೧೦೦೦. ನಾನು ಹೇಗೆ ನೋಡುತ್ತೇನೆ ನಿಮಗೆ ಗೊತ್ತೆ? ಮರ, ಸಸಿ, ಮನುಷ್ಯ, ಮೃಗ, ಹುಲ್ಲು ಮೊದಲಾದುವನ್ನೆಲ್ಲ ತಲೆದಿಂಬಿನ ಚೀಲದಂತೆ ನೋಡುತ್ತೇನೆ. ಕೆಲವನ್ನು ನುಣುಪಾದ ಹತ್ತಿಯಿಂದ ಮಾಡಿರುವರು, ಮತ್ತೆ ಕೆಲವನ್ನು ಒರಟಾದ ನೂಲಿನಿಂದ ಮಾಡಿರುವರು. ಕೆಲವು ಚೌಕವಾಗಿರುವುವು, ಕೆಲವು ಗುಂಡಾಗಿರುವುವು. ಆದರೆ ಇವುಗಳಲ್ಲೆಲ್ಲಾ ಇರುವುದು ಒಂದೇ ತರಹದ ಹತ್ತಿ. ಇದೇ ರೀತಿಯಲ್ಲಿ ಪ್ರಪಂಚದಲ್ಲಿರುವ ಸರ್ವವೂ ಅವ್ಯಕ್ತ ಸಚ್ಚಿದಾನಂದ ಬ್ರಹ್ಮನಿಂದ ತುಂಬಿರುವುದು. ಜಗನ್ಮಾಯಿ ಹಲವು ಬಟ್ಟೆಗಳನ್ನು ಹೊದೆದುಕೊಂಡು ಅವುಗಳ ಮೂಲಕ ಇಣುಕಿನೋಡುತ್ತಿರುವಂತೆ ನನಗೆ ಕಾಣುವುದು. ಪ್ರತಿಕ್ಷಣವೂ ಇದನ್ನು ಅನುಭವಿಸುವ ಒಂದು ಸ್ಥಿತಿಯಲ್ಲಿ ನಾನು ಹಿಂದೆ ಒಮ್ಮೆಯಿದ್ದೆ. ನನ್ನ ಈ ಸ್ಥಿತಿಯನ್ನು ತಿಳಿಯದೆ ಜನರು ಸಮಾಧಾನ ಮಾಡುವುದಕ್ಕೆ ಬಂದರು. ರಾಮಲಾಲನ ತಾಯಿ ಅತ್ತಳು. ಅವಳನ್ನು ನೋಡಿ ಗುಡಿಯಲ್ಲಿರುವ ದೇವಿ ಈರೀತಿ ಬಂದಿರುವಳೆಂದು ತೋರಿತು. ನಾನು ನಗುವಿನಿಂದ ಹೊರಳಾಡಿ "ಎಷ್ಟು ಸುಂದರವಾಗಿ ನೀನು ಅಲಂಕರಿಸಿಕೊಂಡಿರುವೆ" ಎಂದೆ. ನಾನು ಒಂದು ದಿನ ಕಾಳಿಕಾದೇವಾಲಯದಲ್ಲಿ ಜಗನ್ಮಾಯಿಯ ಮೇಲೆ ಧ್ಯಾನಮಾಡುತ್ತಿದೆ. ಅವಳ ಚಿತ್ರವನ್ನು ಮನಸ್ಸೆದುರಿಗೆ ತರುವುದಕ್ಕೆ ಅಸಾಧ್ಯವಾಯಿತು. ಸ್ವಲ್ಪ ಹೊತ್ತಾದ ಮೇಲೆ ಪೂಜೆಯ ಪಾತ್ರೆಯ ಪಕ್ಕದಿಂದ ಅವಳು ನೋಡುತ್ತಿರುವುದನ್ನು ಕಂಡೆನು. ಅವಳು ಸ್ನಾನಕ್ಕೆ ಬರುವ ವೇಶ್ಯೆ ರಮಣಿಯಂತೆ ಇದ್ದಳು. ನಾನು ಆಶ್ಚರ್ಯದಿಂದ ನಕ್ಕು 'ಒಳ್ಳೆಯದು, ನೀನು ಇವತ್ತು ರಮಣಿ

ಯಾಗಲಿಚ್ಛಿಸುವೆ. ಹಾಗಾದರೆ ಆ ರೂಪದಲ್ಲಿಯೇ ಪೂಜೆಯನ್ನು ಸ್ವೀಕಾರಮಾಡು' ಎಂದೆ. ಈರೀತಿಯಾಗಿ ಜಗನ್ಮಾಯಿ 'ವೇಶ್ಯೆಯು ನಾನೆ. ನಾನಲ್ಲದೆ ಬೇರೊಂದಿಲ್ಲ' ಎಂಬುದನ್ನು ನನಗೆ ಕಲಿಸಿದಳು. ಇನ್ನೊಂದು ದಿನ ಮೆಚುವಬಜಾರಿನ ಮೂಲಕ ಗಾಡಿಯಲ್ಲಿ ಹೋಗುತ್ತಿದ್ದಾಗ, ಜಗನ್ಮಾಯಿ ಪುರುಷರನ್ನು ವಂಚಿಸುವುದಕ್ಕಾಗಿ ಅಲಂಕಾರ ಮಾಡಿಕೊಂಡು ಹಣೆಯಲ್ಲಿ ಕುಂಕುಮವನ್ನಿಟ್ಟು ತಲೆಯಲ್ಲಿ ಚೌರಿಯನ್ನು ಹೆಣೆದುಕೊಂಡು ಹುಕ್ಕವನ್ನು ಸೇದುತ್ತಾ ಕುಳಿತಿರುವಂತೆ ನೋಡಿದೆ. ಆಶ್ಚರ್ಯಪಡುತ್ತಾ ಜಗನ್ಮಾಯಿಯು ಈ ರೂಪವನ್ನು ಧರಿಸಿರುವಳೆ ಎಂದು ನಮಸ್ಕಾರಮಾಡಿದೆ.

೧೦೦೧. ಪರಬ್ರಹ್ಮನೊಬ್ಬನೇ ನಿಜವಾದ ಸತ್ಯವೆಂದು ನನ್ನ ಕಣ್ಣಿಂದಲೇ ನಾನು ನೋಡುತ್ತಿರುವೆನು! ನಾನೇಕೆ ತರ್ಕಿಸಬೇಕು? ಪರಬ್ರಹ್ಮನೇ ನಮ್ಮ ಸುತ್ತಲೂ ಇರುವ ಎಲ್ಲಾ ವಸ್ತುಗಳಾಗಿರುವನು ಎಂಬುದನ್ನು ನಿಜವಾಗಿ ನೋಡುತ್ತೇನೆ. ಅವನೇ ಜೀವನಂತೆ ಮತ್ತು ಜಗತ್ತಿನಂತೆ ಕಾಣುವನು. ಒಬ್ಬನ ಆಂತರಿಕ ಕಣ್ಣುಗಳು ತೆರೆದಿರಬೇಕು, ಇದನ್ನು ನೋಡಬೇಕಾದರೆ. ಅದೊಂದೆ ಸತ್ಯವೆಂದು ಮನುಷ್ಯ ಎಲ್ಲಿಯವರೆವಿಗೆ ನೋಡುವುದಿಲ್ಲವೊ ಅಲ್ಲಿಯವರೆವಿಗೆ ಒಬ್ಬನು ನೇತಿ ನೇತಿ ಎಂದು ವಿಚಾರ ಮಾಡಬೇಕು, ಅಥವಾ ವಿಮರ್ಶೆಮಾಡಬೇಕು. ಆತನೊಬ್ಬನೆ ಇದೆಲ್ಲ ಆಗಿರುವುದು. ನಿಸ್ಸಂಶಯವಾಗಿ ನಾನು ಇದನ್ನು ಬಲ್ಲೆ ಎಂದು ಸುಮ್ಮನೆ ಹೇಳಿದರೆ ಸಾಲದು. ಭಗವಂತನ ಅನುಗ್ರಹದಿಂದ ಜೀವನು ಜಾಗ್ರತನಾಗಬೇಕು. ಆಧ್ಯಾತ್ಮಿಕ ಜಾಗ್ರತಿಯಾದಮೇಲೆ ಸಮಾಧಿ ಬರುವುದು. ಈ ಸ್ಥಿತಿಯಲ್ಲಿ ದೇಹದ ಅರಿವೇ ಇರುವುದಿಲ್ಲ. ಕಾಮಿನಿ ಕಾಂಚನಗಳ ಮೇಲೆ ಯಾವ ಆಸಕ್ತಿಯೂ ಇರುವುದಿಲ್ಲ. ಭಗವಂತನಿಗೆ ಸಂಬಂಧಪಟ್ಟ ಮಾತನ್ನಲ್ಲದೆ ಉಳಿದುದನ್ನು ಅವನು ಪ್ರೀತಿಸುವುದಿಲ್ಲ. ಪ್ರಾಪಂಚಿಕ ವಿಷಯಗಳನ್ನು ಕೇಳುವುದಕ್ಕೆಂದು ಅವನನ್ನು ಕರೆದರೆ ಅವನಿಗೆ ತುಂಬಾ ವ್ಯಥೆಯಾಗುವುದು. ಅಂತರಾತ್ಮನು ಜಾಗ್ರತನಾದಮೇಲೆ ಮುಂದಿನ ಮೆಟ್ಟಲೇ ಸರ್ವಾಂತರ್ಯಾಮಿಯ ಸಾಕ್ಷಾತ್ಕಾರ. ಆತ್ಮ ಆತ್ಮನನ್ನು ಸಾಕ್ಷಾತ್ಕಾರ ಮಾಡಿಕೊಳ್ಳುವುದು.

೧೦೦೨. ಹಲವು ವರ್ಷಗಳ ಕೆಳಗೆ ವೈಷ್ಣವಚರಣನು, ಯಾವಾಗ ಒಬ್ಬನು ಮಾನವನಲ್ಲಿ ದೇವರನ್ನು ನೋಡುತ್ತಾನೆಯೋ ಆಗ ಮಾತ್ರ ಪೂರ್ಣಜ್ಞಾನ ಲಭಿಸುವುದೆಂದು ಹೇಳಿದನು. ದೇವರೆ

ಹಲವು ರೂಪವನ್ನು ಧರಿಸಿ ಸಂಚರಿಸುತ್ತಿರುವುದನ್ನು ಈಗ ನಾನು ನೋಡುತ್ತೇನೆ. ಈಗ ಸತ್ಯವಂತನಂತೆ ಇರುವನು, ಮೋಸಗಾರನಂತೆ ಇರುವನು, ದುರುಳನಂತೆ ಇರುವನು. ಆದಕಾರಣವೆ ನಾನು "ಸತ್ಯವಂತನ ರೂಪಿನಲ್ಲಿರುವ ನಾರಾಯಣ, ಮೋಸಗಾರನಂತಿರುವ ನಾರಾಯಣ, ದುರುಳನಂತಿರುವ ನಾರಾಯಣ, ಪಟಿಂಗನಂತಿರುವ ನಾರಾಯಣ" ಎಂದು ಕರೆಯುತ್ತೇನೆ. ಎಲ್ಲರನ್ನೂ ಈಗ ಬರಮಾಡಿಕೊಳ್ಳುವುದು ಹೇಗೆ ಎಂಬುದೇ ಪ್ರಶ್ನೆ. ನನಗೆ ಎಲ್ಲರಿಗೂ ಊಟವಿಡುವ ಆಸೆ. ಆದಕಾರಣವೇ ಒಂದು ಸಲಕ್ಕೆ ಒಬ್ಬನನ್ನು ನನ್ನ ಹತ್ತಿರ ಇಟ್ಟುಕೊಂಡು ಅವನನ್ನು ಉಪಚರಿಸುತ್ತೇನೆ.

೧೦೦೩. ಗೌರವಸ್ಥರ ಕುಲಕ್ಕೆ ಸೇರಿದ ಶೀಲವಂತರಾದ ನಾರಿಯರನ್ನು ನೋಡಿದಾಗ ಪತಿವ್ರತೆಯಂತೆ ತೋರುವ ಜಗನ್ಮಾಯಿಯನ್ನು ಅಲ್ಲಿ ನೋಡುತ್ತೇನೆ. ಪುನಃ ವಾರಾಂಗನೆಯರು ಲಜ್ಜೆ ತೊರೆದು ಕಾಮೋದ್ರೇಕಗೊಳಿಸುವಂತಹ ವೇಷಭೂಷಣಗಳನ್ನು ತೊಟ್ಟು ಮನೆಯ ಮುಂದೆ ನಿಂತಾಗಲೂ ಅದೇ ಜಗನ್ಮಾಯಿ ಬೇರೊಂದು ರೂಪದಲ್ಲಿ ಆಟವಾಡುತ್ತಿರುವುದನ್ನು ನೋಡುತ್ತೇನೆ.

೧೦೦೪. ದೇವರಲ್ಲಿ ವಿದ್ಯೆ ಮತ್ತು ಅವಿದ್ಯೆ ಎರಡೂ ಇವೆ. ವಿದ್ಯಾಮಾಯೆಯು ಮಾನವರನ್ನು ದೇವರೆಡೆಗೆ ಕರೆದೊಯ್ಯುವುದು. ಅವಿದ್ಯಾಮಾಯೆಯು ಮಾನವರನ್ನು ದೇವರಿಗೆ ವಿಮುಖವಾಗಿ ಕರೆದೊಯ್ಯುವುದು. ಜ್ಞಾನ ಭಕ್ತಿ ವೈರಾಗ್ಯ ದಯೆ ಇವೆಲ್ಲಾ ವಿದ್ಯಾಮಾಯೆ. ಇವುಗಳ ಸಹಾಯದಿಂದ ಮಾತ್ರ ಒಬ್ಬನು ದೇವರನ್ನು ಸೇರಬಹುದು. ಆದರೆ ನೀನು ಒಂದು ಮೆಟ್ಟಲನ್ನು ಮೇಲೆ ಏರಿದರೆ ಬ್ರಹ್ಮಜ್ಞಾನವನ್ನು ಮುಟ್ಟುವೆ. ಈ ಸ್ಥಿತಿಯಲ್ಲಿ ಅವನೇ ಎಲ್ಲವೂ ಆಗಿರುವನು ಎಂದು ಭಾವಿಸುತ್ತೇನೆ. ಅದನ್ನು ನಿಜವಾಗಿ ನೋಡುತ್ತೇನೆ. ಅಲ್ಲಿ ಯಾವುದನ್ನೂ ಸ್ವೀಕರಿಸುವುದಿಲ್ಲ. ಯಾವುದನ್ನೂ ತಿರಸ್ಕರಿಸುವುದೂ ಇಲ್ಲ. ಇನ್ನೊಬ್ಬರೊಂದಿಗೆ ಕೋಪಗೊಳ್ಳುವುದಕ್ಕೆ ಸಾಧ್ಯವೇ ಆಗುವುದಿಲ್ಲ.

ಒಂದು ಸಲ ಗಾಡಿಯಲ್ಲಿ ಹೋಗುತ್ತಿದ್ದಾಗ ಒಂದು ಮನೆಯ ಕೈಸಾಲೆಯಲ್ಲಿ ಇಬ್ಬರು ವಾರಾಂಗನೆಯರು ನಿಂತಿರುವುದನ್ನು ಕಂಡೆನು. ಆವರೆ ನಿಜವಾಗಿಯೂ ನಾನು ಅವರಲ್ಲಿ ಜಗನ್ಮಾಯಿಯನ್ನು ನೋಡಿ ಅವರಿಗೆ ನಮಸ್ಕಾರಮಾಡಿದೆನು.

ಇಂತಹ ಭಾವ ನನಗೆ ಬಂದ ಮೇಲೆ ನಾನು ಕಾಳಿಕಾಮಾತೆಗೆ ಪೂಜೆಯನ್ನಾಗಲೀ ಅಥವಾ ನೈವೇದ್ಯವನ್ನಾಗಲೀ ಮಾಡಲಾಗಲಿಲ್ಲ. ಇದನ್ನು ನೋಡಿ ಗುಡಿಯ ಅಧಿಕಾರಿ ನನ್ನನ್ನು ಬೈಯಲು ಮೊದಲು ಮಾಡಿದನು. ಆದರೆ ಅವನ ಬೈಗಳವನ್ನು ಕೇಳಿ ಸ್ವಲ್ಪವೂ ಅಸಮಾಧಾನಪಡದೆ ನಾನು ನಗಲು ಮೊದಲುಮಾಡಿದೆನು.

೧೦೦೫. ಪ್ರಪಂಚದ ನಿಜಾಂಶವನ್ನು ತಮಗೆ ತೋರಿದ ದರ್ಶನವೊಂದನ್ನು ಕುರಿತು ಶ್ರೀರಾಮಕೃಷ್ಣರು ಹೀಗೆ ಹೇಳಿದರು : "ಈಗ ನಾನು ಏನು ನೋಡಿದೆ ನಿಮಗೆ ಗೊತ್ತೆ? ಒಂದು ದಿವ್ಯದರ್ಶನ ! ಮಹಾಮಾತೆಯ ಒಂದು ದಿವ್ಯದರ್ಶನ ! ಅವಳು ಒಬ್ಬ ಗರ್ಭಿಣಿಯಾಗಿ ತೋರಿದಳು. ಮಗುವನ್ನು ಹೆತ್ತು ಮರುಕ್ಷಣದಲ್ಲೇ ಅದನ್ನು ನುಂಗಿಬಿಟ್ಟಳು. ಅವಳ ಬಾಯಿಗೆ ಹೋಗಿದ್ದೆಲ್ಲ ಶೂನ್ಯವಾಯಿತು. ಎಲ್ಲವೂ ಮಾಯೆಯೆಂದು ಅವಳು ಹೇಳಿದಂತೆ ತೋರಿತು ! "

## ಶ್ರೀ ರಾಮಕೃಷ್ಣರು ತಮ್ಮ ರೋಗವನ್ನು ಕುರಿತು

೧೦೦೬. ಶ್ರೀರಾಮಕೃಷ್ಣರು ಅನಾರೋಗ್ಯವಾಗಿರುವುದನ್ನು ನೋಡಿದ ಪಂಡಿತ ಶಶಿಧರನು, "ಅನಾರೋಗ್ಯವಾದ ಭಾಗದ ಮೇಲೆ ನಿಮ್ಮ ಮನಸ್ಸನ್ನು ಏಕಾಗ್ರಮಾಡಿ ಏತಕ್ಕೆ ಗುಣಮುಖವಾಗಬಾರದು?" ಎಂದು ಕೇಳಿದನು.

ಶ್ರೀರಾಮಕೃಷ್ಣರು "ಯಾವ ಮನಸ್ಸನ್ನು ಭಗವಂತನಿಗೆ ಅರ್ಪಿಸಿರುವೆನೊ ಅದನ್ನು ಕೆಲಸಕ್ಕೆ ಬಾರದ ರಕ್ತಮಾಂಸಗಳ ಗೂಡಿನ ಮೇಲೆ ಹೇಗೆ ಇಡಲಿ ? " ಎಂದರು.

ಶಶಿಧರ—ನಿಮ್ಮ ರೋಗ ವಾಸಿಯಾಗಲೆಂದು ಜಗನ್ಮಾತೆಯನ್ನೇಕೆ ಪ್ರಾರ್ಥಿಸಬಾರದು ?

ಶ್ರೀ ರಾಮಕೃಷ್ಣರು—ನಾನು ಜಗನ್ಮಾತೆಯನ್ನು ಕುರಿತು ಯೋಚಿಸಿದಾಗ ಈ ಶರೀರ ಮಾಯವಾಗುವುದು. ನಾನು ಸಂಪೂರ್ಣ ಇದರಿಂದ ಹೊರಗಿರುವೆನು. ಆದಕಾರಣ ಈ ದೇಹಕ್ಕೆ ಸಂಬಂಧಪಟ್ಟ ಏನನ್ನು ಬೇಡಲೂ ನನಗೆ ಸಾಧ್ಯವಿಲ್ಲ.

೧೦೦೭. ಶ್ರೀ ರಾಮಕೃಷ್ಣರು ತುಂಬಾ ಉಲ್ಬಣಾವಸ್ಥೆಯಲ್ಲಿರುವಾಗ ಆಹಾರವನ್ನು ತೆಗೆದುಕೊಳ್ಳುವುದಕ್ಕೆ ಮತ್ತು ಮಾತನಾಡುವುದಕ್ಕೆ ತುಂಬಾ ಕಷ್ಟವಾಗುತ್ತಿತ್ತು. ಆಗ ಅವರು ಹೀಗೆಂದರು :

"ನಾನೀಗ ಇಷ್ಟೊಂದು ಬಾಯಿಗಳ ಮೂಲಕ ಊಟಮಾಡುತ್ತಿರುವೆನು ಮತ್ತು ಮಾತನಾಡುತ್ತಿರುವೆನು. ನಾನು ಜೀವಿಗಳ ಜೀವ. ನನಗೆ ಅನಂತ ಬಾಯಿಗಳಿವೆ. ಗಂಟಲಿನಲ್ಲಿ ಎಲ್ಲೋ ಒಂದುಕಡೆ ಹುಣ್ಣಾಗಿರುವ ಚರ್ಮದಿಂದ ಮುಚ್ಚಿಕೊಂಡಿರುವ ಅನಂತ ಆತ್ಮ ನಾನು. ದೇಹ ರೋಗದಲ್ಲಿ ನರಳುವಾಗ ಅದು ಮನಸ್ಸಿನ ಮೇಲೆ ಪರಿಣಾಮವನ್ನು ಮಾಡುವುದು. ಬಿಸಿನೀರಿನಿಂದ ಒಬ್ಬನು ಸುಟ್ಟುಕೊಂಡಾಗ "ಈ ನೀರು ನನ್ನನ್ನು ಸುಟ್ಟಿತು" ಎನ್ನುವೆವು. ಆದರೆ ನಿಜವಾಗಿ ಸುಡುವುದು ಶಾಖ, ನೀರಲ್ಲ. ವ್ಯಥೆಯೆಲ್ಲಾ ದೇಹದಲ್ಲಿರುವುದು. ರೋಗವೆಲ್ಲ ದೇಹದಲ್ಲಿರುವುದು. ಆದರೆ ಆತ್ಮವು ನೋವಿನಾಚೆಯಿರುವುದು, ರೋಗದಾಚೆಯಿರುವುದು.

೧೦೦೮. ಇದರಿಂದ ಅಂದರೆ ಗಂಟಲಿನ ಹುಣ್ಣಿನಿಂದ ನಾನೇನನ್ನೂ ತಿನ್ನಲಾರೆನೆಂದು ಜಗನ್ಮಾತೆಗೆ ಹೇಳಿದೆನು. ಸ್ವಲ್ಪ ಆಹಾರವನ್ನು ತೆಗೆದುಕೊಳ್ಳುವುದಕ್ಕೆ ಸಾಧ್ಯವಾಗಲಿ ಎಂದು ಬೇಡಿದೆ. ಆದರೆ ಜಗನ್ಮಾಯಿಯು ನಿಮ್ಮೆಲ್ಲರನ್ನು ತೋರಿ "ಏತಕ್ಕೆ? ಇಷ್ಟೊಂದು ಬಾಯಿಗಳ ಮೂಲಕ ನೀನು ಊಟಮಾಡುತ್ತಿರುವೆ" ಎಂದಳು. ನನಗೆ ತುಂಬಾ ನಾಚಿಕೆಯಾಯಿತು. ಮತ್ತೊಂದು ಮಾತನ್ನಾಡಲಾರದೆ ಹೋದೆ.

೧೦೦೯. ದೇಹದಲ್ಲಿ ತುಂಬಾ ವ್ಯಥೆ ಇರುವಾಗಲೂ ಒಬ್ಬನು ಹೇಗೆ ಆತ್ಮವನ್ನು ಆಲೋಚಿಸಬೇಕು, ಪರಮಾತ್ಮನ ಚಿಂತನೆಯಲ್ಲಿ ಹೇಗೆ ಇರಬೇಕು ಎಂಬುದನ್ನು ತೋರುವುದಕ್ಕಾಗಿ ಜಗನ್ಮಾಯಿ ನನಗೆ ಈ ಖಾಯಿಲೆಯನ್ನು ತಂದಿರುವಳು. ದೇಹ ಅಸಾಧ್ಯವಾದ ನೋವಿನಿಂದ ಮತ್ತು ಹಸಿವಿನಿಂದ ನರಳುತ್ತಿರುವಾಗ, ಗುಣಮುಖ ಮಾಡುವುದಕ್ಕೆ ಮಾನವರ ಕೈಯಿಂದ ಆಗದೆ ಇರುವಾಗಲೂ, ಆತ್ಮವೇ ದೇಹಕ್ಕೆ ಒಡೆಯನು ಎಂಬುದನ್ನು ಜಗನ್ಮಾಯಿ ನನಗೆ ತೋರುತ್ತಾಳೆ. ಸಂಶಯವಾದಿಗಳಿಗೆ, ಆತ್ಮನು ಪರಂಜ್ಯೋತಿಸ್ವರೂಪನು, ಭಗವಂತನ ಭಾವನೆ ಸತ್ಯವಾದುದು, ಒಬ್ಬನು ಮೋಕ್ಷವನ್ನು ಪಡೆದರೆ ಎಲ್ಲಾ ವಿಧದ ಬಂಧನಗಳಿಂದ ಬಿಡುಗಡೆಯಾಗುತ್ತಾನೆ, ಎನ್ನುವುದನ್ನು ತೋರುವುದಕ್ಕಾಗಿ ನನಗೆ ಖಾಯಿಲೆಯನ್ನು ಜಗನ್ಮಾಯಿ ತಂದಿರುವಳು.

೧೦೧೦. ಶ್ರೀ ರಾಮಕೃಷ್ಣರಿಗೆ ಕೊನೆಯ ಸಲ ಖಾಯಿಲೆ ಬಂದಾಗ ಅವರ ಶಿಷ್ಯರು ಅವರನ್ನು ತಮಗೋಸ್ಕರವಾಗಿಯಾದರೂ

ಅವರು ದೇವರನ್ನು ತಮ್ಮ ಬಾಯಿಲೆ ಗುಣಮಾಡಿ ನಮ್ಮೊಂದಿಗೆ ಸ್ವಲ್ಪ ಹೆಚ್ಚು ದಿನಗಳಿರಬೇಕೆಂದು ಕೇಳಿಕೊಳ್ಳಿ ಎಂದು ಬೇಡಿದಾಗ ಶ್ರೀ ರಾಮಕೃಷ್ಣರು ಹೀಗೆ ಹೇಳಿದರು: "ಇದರ ವಿಚಾರವಾಗಿ ನಾನು ದೇವರಿಗೆ ಏನು ಹೇಳಿದರೂ ಪ್ರಯೋಜನವಿಲ್ಲ. ಅವನ ಇಚ್ಛೆ ನೆರವೇರುವುದು. ಜಗನ್ಮಾಯಿ ಮತ್ತು ನಾನು ಇಬ್ಬರೂ ಒಂದೇ ವ್ಯಕ್ತಿಯಾಗಿರುವೆವು ಎಂಬುದನ್ನು ನಾನೀಗ ನೋಡುತ್ತೇನೆ. ರಾಧೆ ಶ್ರೀಕೃಷ್ಣನಿಗೆ "ಹೇ ಪ್ರಿಯತಮನೆ, ನನ್ನ ಹೃದಯದಲ್ಲಿ ನೆಲಸು, ನೀನು ಮಾನವರೂಪಿನಲ್ಲಿ ಇನ್ನು ಮೇಲೆ ಕಾಣಬೇಡ" ಎಂದಳು. ಆದರೆ ತಕ್ಷಣವೇ ಅವಳು ಶ್ರೀಕೃಷ್ಣನನ್ನು ನೋಡಲು ಹಂಬಲಿಸಿದಳು. ತನ್ನ ಪ್ರಿಯತಮನಿಗಾಗಿ ಅವಳ ಹೃದಯ ಕಾತರಿಸತೊಡಗಿತು ಆದರೆ ಭಗವಂತನ ಇಚ್ಛೆ ನೆರವೇರಬೇಕು. ಕೃಷ್ಣನು ಬಹಳ ಕಾಲದವರೆಗೆ ಮಾನವರೂಪಿನಲ್ಲಿ ಕಾಣಿಸಿಕೊಳ್ಳಲಿಲ್ಲ.

## ಶ್ರೀರಾಮಕೃಷ್ಣರು ಮಾನವತ್ವ ಮತ್ತು ದೇವತ್ವದ ಸಮನ್ವಯ

೧೦೧೧. ನಿಜವಾಗಿಯೂ ಮೂರು ಪದಗಳು ನನ್ನ ಹೃದಯವನ್ನು ಕುಕ್ಕುತ್ತವೆ, ೧) ಗುರು, ೨) ಕರ್ತ, ೩) ಬಾಬ (ತಂದೆ). ದೇವರೊಬ್ಬನೆ ಗುರು, ನನ್ನ ಜಗನ್ಮಾತೆಯೊಬ್ಬಳೆ ಕರ್ತೃ, ನಾನು ಅವಳ ಕೈಯಲ್ಲಿ ಒಂದು ಯಂತ್ರ ಮಾತ್ರ. ನಾನು ಯಾವಾಗಲೂ ಅವರ ಮಗುವಾಗಿರಲು ಆಸೆ.

೧೦೧೨ ಪ್ರಖ್ಯಾತನಾದ ಪಂಡಿತನನ್ನು ಇವರು ಕಂಡ ವಿಚಾರವಾಗಿ ಹೀಗೆ ಹೇಳಿದರು: "ಪಂಡಿತನು ನನ್ನನ್ನು ನೋಡಲು ಬರುತ್ತಾನೆ ಎಂದು ಕೇಳಿದಾಗ ನನಗೆ ಅಂಜಿಕೆಯಾಯಿತು. ಏಕೆಂದರೆ ನಾನುಟ್ಟ ಬಟ್ಟೆಯ ಅರಿವೆ ನನಗೆ ಇರುವುದಿಲ್ಲ. ಅವನು ನನ್ನೊಂದಿಗೆ ಮಾತನಾಡುವಾಗ ಏನು ಉತ್ತರ ಕೊಡಬೇಕೆಂಬುದೇ ನನಗೆ ಗೊತ್ತಿರಲಿಲ್ಲ. ಅದಕ್ಕೋಸ್ಕರವೇ ನಾನು ಜಗನ್ಮಾಯಿಗೆ "ನೀನಲ್ಲದೆ ಶಾಸ್ತ್ರಗಳು ಮುಂತಾದುವುಗಳು ಏನೂ ಗೊತ್ತಿಲ್ಲ" ಎಂದೆ. ಆದಕಾರಣವೇ ಅಲ್ಲಿದ್ದ ಜನರಿಗೆ ನೀವೆಲ್ಲ ಇಲ್ಲೆ ಕುಳಿತುಕೊಳ್ಳಿ. ನೀವು ಇಲ್ಲಿದ್ದರೆ ನನಗೆ ಧೈರ್ಯವೆಂದು ಹೇಳಿದೆ. ಪಂಡಿತನು ನಿಜವಾಗಿ ಬಂದ ಮೇಲೆಯೂ ನನಗೆ ಸ್ವಲ್ಪ ಅಂಜಿಕೆಯಾಯಿತು. ನಾನು ಅವನ್ನು ನೋಡುತ್ತಾ, ಅವನ ಮಾತನ್ನು ಕೇಳುತ್ತಾ ಕುಳಿತುಕೊಂಡೆ. ಆಗ

ತಾನೇ ಜಗನ್ಮಾತೆಯು ಪಂಡಿತನ ಮನಸ್ಸನ್ನೆಲ್ಲ ನನಗೆ ತೋರಿದಳು. ವಿವೇಕ ವೈರಾಗ್ಯಗಳಿಲ್ಲದೆ ಸುಮ್ಮನೆ ಶಾಸ್ತ್ರಗಳನ್ನು ಓದಿದರೆ ಏನು ಪ್ರಯೋಜನ. ಇಲ್ಲಿ (ತಮ್ಮ ದೇಹವನ್ನು ತೋರಿ) ಏನೋ ತಲೆಯ ವರೆಗೆ ಹರಿದುಬರುವಂತೆ ತೋರಿತು. ನನ್ನ ಅಂಜಿಕೆ ಎಲ್ಲೋ ಓಡಿ ಹೋಯಿತು. ನನಗೆ ಪ್ರಜ್ಞೆಯೇ ಇರಲಿಲ್ಲ. ನಾನು ನನ್ನ ಮೊಗವ ನ್ನೆತ್ತಿದೆ. ಪದಗಳು ನನ್ನ ಬಾಯಿಂದ ಹೊರಡಲು ಮೊದಲಾದುವು. ನಾನು ಮಾತನಾಡಿದಂತೆಲ್ಲ ಯಾರೋ ಒಬ್ಬರು ಅಲ್ಲಿ ಹೊಸದಾಗಿ ಒದಗಿಸುತ್ತಿದ್ದಂತೆ ತೋರಿತು. ಕಾಮಾರಪುಕುರದಲ್ಲಿ ದವಸವನ್ನಳೆ ವಾಗ ಹಿಂದಿನಿಂದ ಮತ್ತೊಬ್ಬನು ದವಸವನ್ನು ಅವನೆಡೆಗೆ ನೂಕು ತ್ತಿದ್ದನು. ಆದರಂತೆಯಿತ್ತು. ಏನೆಲ್ಲ ಮಾತನಾಡಿದೆನೊ ಅದು ನನಗೆ ಗೊತ್ತಿಲ್ಲ. ನನಗೆ ಸ್ವಲ್ಪ ಬಾಹ್ಯಪ್ರಜ್ಞೆ ಬಂದಮೇಲೆ ಪಂಡಿತನು ಅಳುತ್ತಿರುವುದನ್ನು ಕಂಡೆ. ಅವನ ಮೈಯೆಲ್ಲ ಕಣ್ಣೀರಿನಿಂದ ಒದ್ದೆ ಯಾಗಿತ್ತು. ಕೆಲವುವೇಳೆ ನನಗೆ ಅಂತಹ ಭಾವ ಬರುತ್ತಿತ್ತು. ಕೇಶವ ಚಂದ್ರಸೇನನು ಒಂದು ದಿನ ನನ್ನನ್ನು ಗಂಗಾನದಿಯ ಮೇಲೆ ಕರೆದು ಕೊಂಡುಹೋಗುವೆನೆಂದೂ, ಜತೆಗೆ ಪ್ರವಾಸಮಾಡುತ್ತಿರುವ ಕ್ರೈಸ್ತ ಪಾದ್ರಿ ಕ್ಯಾಪ್ಟನ್ ಕುಕ್ ಎಂಬುವನು ಬರುವನು ಎಂದು ಹೇಳಿ ಕಳುಹಿಸಿದನು. ಇದನ್ನು ಕೇಳಿ ನನಗೆ ತುಂಬಾ ಅಂಜಿಕೆಯಾಯಿತು. ಹಲವು ಬಾರಿ ನಾನು ತೋಟದ ಕಡೆಗೆ ಹೋಗಬೇಕಾಯಿತು. ನಂತರ ಅವರು ಬಂದಮೇಲೆ ನಾನು ದೋಣಿಯಲ್ಲಿ ಕುಳಿತೆ. ತಕ್ಷಣವೇ ನನ್ನಲ್ಲಿ ಒಂದು ಬದಲಾವಣೆಯಾಯಿತು. ನಾನು ಆಗ ಏನೇನನ್ನೋ ಮಾತಾ ಡಿದೆ. ಇವರೆಲ್ಲ (ಭಕ್ತಾದಿಗಳೆಲ್ಲ) ಅತ್ಯುತ್ತಮವಾದ ಬೋಧನೆಯನ್ನು ಮಾಡಿದಿರಿ ಎಂದು ಹೇಳಿದರು. ಆದರೆ ನನಗೆ ಇದು ಯಾವುದೂ ಗೊತ್ತಿರಲಿಲ್ಲ.

೧೧೧೩. ಯಾರು ನನ್ನಲ್ಲಿರುವರೋ ಆತನೆ ಇದೆಲ್ಲವನ್ನೂ ನನ್ನ ಮೂಲಕ ಮಾಡುತ್ತಿರುವನು. ಕೆಲವು ವೇಳೆ ನಾನೇ ದೇವರೆಂಬ ಭಾವ ಬರುತ್ತಿತ್ತು. ಇನ್ನೊಬ್ಬರು ಪೂಜೆಮಾಡುವತನಕ ತೃಪ್ತಿಯಾಗುತ್ತಿರ ಲಿಲ್ಲ. ನಾನು ಯಂತ್ರ. ಅವನು ಇದನ್ನು ಉಪಯೋಗಿಸುವನು. ಅವನು ಹೇಳಿದಂತೆ ನಾನು ಮಾಡುವೆನು.

೧೧೧೪. ಗಿರೀಶಚಂದ್ರಘೋಷನು ತನ್ನ ಜವಾಬ್ದಾರಿಯನ್ನೆಲ್ಲ ಶ್ರೀರಾಮಕೃಷ್ಣರ ಮೇಲೆ ಹಾಕಿದ್ದರೂ ಹಿಂದೆ ತಾನು ಕೂಡಿಹಾಕಿದ್ದ

ಪಾಪ ಸಂಸ್ಕಾರಗಳಿಗಾಗಿ ವ್ಯಥೆಪಡುತ್ತಿದ್ದನು. ಇದನ್ನು ಕುರಿತು ಶ್ರೀರಾಮಕೃಷ್ಣರು ಹೀಗೆಂದರು : "ಇದು ಏನು, ನೀರಹಾವೆ ನಿನ್ನನ್ನು ಹಿಡಿದಿರುವುದು? ಇಲ್ಲ, ವಿಷಸರ್ಪ. ನೀನು ಮನೆಗೆ ಓಡುತ್ತ ಹೋದರೂ ಸಾಯಲೇಬೇಕು. ನೀನು ಅದನ್ನು ನೋಡಲಿಲ್ಲವೆ? ನೀರುಹಾವು ಕಪ್ಪೆಯನ್ನು ಹಿಡಿದುಕೊಂದರೆ ಅದು ಹಲವು ಬಾರಿ ಕಿರಿಚಿದ ಮೇಲೆ ಸಾಯುತ್ತದೆ. ಕೆಲವು ವೇಳೆ ಅದು ತಪ್ಪಿಸಿಕೊಳ್ಳಲೂ ಬಹುದು. ಆದರೆ ವಿಷಸರ್ಪವಾದರೆ ಒಂದೆರಡು ಬಾರಿ ಕಿರುಚುವುದರೊಳಗಾಗಿಯೇ ಕಪ್ಪೆ ಸಾಯುವುದು. ಅದು ತಪ್ಪಿಸಿಕೊಂಡರೂ ಸ್ವಲ್ಪ ದೂರ ನೆಗೆದು ಬಿಲದಲ್ಲಿ ಸಾಯುವುದು. ಯಾರು ಇಲ್ಲಿಗೆ ಬಂದಿರುವರೊ ಅವರ ಸ್ಥಿತಿಯೂ ಇದರಂತೆಯೆ."

೧೦೧೫. ಒಂದು ದಿನ ಶಿಷ್ಯನೊಬ್ಬನು ಇವರ ಕಾಲನ್ನು ಒತ್ತುತ್ತಿದ್ದಾಗ ಶ್ರೀರಾಮಕೃಷ್ಣರು ಈ ಸೇವೆಯನ್ನು ಕುರಿತು "ಇದರಲ್ಲಿ ಬಹಳ ರಹಸ್ಯವಿದೆ" ಎಂದರು. ಅವರು ತಮ್ಮ ಕೈಗಳನ್ನು ಎದೆಯ ಮೇಲಿಟ್ಟುಕೊಂಡು "ಇಲ್ಲಿ ಏನಾದರೂ ಪವಿತ್ರವಾದುದು ಇದ್ದರೆ ಇಂತಹ ಸೇವೆಯಿಂದ ಅವರ ಅಜ್ಞಾನ ಒಂದೇಸಲ ಮಾಯವಾಗುವುದು." ನಂತರ ಅವರು ಸ್ಪಷ್ಟವಾಗಿ ನೋಡುತ್ತಾ ಹೀಗೆ ಹೇಳಿದರು : "ಇಲ್ಲಿ ಹೊರಗಿನದು ಇಲ್ಲವೇ ಇಲ್ಲ. ನನಗೆ ಅಂದು ಒಂದು ದೃಶ್ಯ ಕಂಡಿತು. ಆಗ ಹರೀಶನು ನನ್ನ ಹತ್ತಿರ ಇದ್ದನು. ಸಚ್ಚಿದಾನಂದವು ಈ ದೇಹದ ಮೂಲಕ ಹೊರಬರುವುದನ್ನು ನೋಡಿದೆ. ಹಾಗೆ ಬಂದಾದ ಮೇಲೆ 'ನಾನು ಪ್ರತಿ ಯುಗದಲ್ಲಿಯೂ ಅವತಾರ ಮಾಡುತ್ತೇನೆ' ಎಂದನು. ನನಗೆ ಭ್ರಾಂತಿ ಎಂದು ತೋರಿತು. ಅದಕ್ಕೆ ನಾನು ಸುಮ್ಮನೆ ಇದ್ದೆ. ನಂತರ ಆತನು "ಚೈತನ್ಯ ದೇವನೂ ಶಕ್ತಿಯನ್ನು ಪೂಜಿಸುತ್ತಿದ್ದನು" ಎಂದನು.

೧೦೧೬. ಅನಾರೋಗ್ಯದಲ್ಲಿದ್ದಾಗ ಒಂದು ದಿನ ಶ್ರೀರಾಮಕೃಷ್ಣರು ತಮ್ಮ ಶಿಷ್ಯರಿಗೆ ಹೀಗೆ ಹೇಳಿದರು : ಇಲ್ಲಿ (ಅಂದರೆ ತಮ್ಮ ದೇಹದಲ್ಲಿ) ಇಬ್ಬರು ಇರುವರು. ಒಬ್ಬರು ಜಗನ್ಮಾಯಿ, ಮತ್ತೊಬ್ಬರು ಅವಳ ಭಕ್ತ. ಈಗ ರೋಗದಿಂದಿರುವವನು ಅವಳ ಭಕ್ತ. ಭಗವಂತನು ತನ್ನ ಶಿಷ್ಯರೊಂದಿಗೆ ಅವತಾರದಂತೆ ಬರುವನು. ಅವನು ದೇಹವನ್ನು ಧಾರಣೆಮಾಡುವನು. ಅವನ ಶಿಷ್ಯರು ಅವನೊಂದಿಗೆ ಜಗನ್ಮಾಯಿಯಲ್ಲಿಗೆ ಹಿಂದಿರುಗುತ್ತಾರೆ. ಹಾಡುವ ಬೈರಾಗಿಗಳು ಇದ್ದಕ್ಕಿದ್ದಂತೆಯೆ ಮನೆಗೆ

ಬರುತ್ತಾರೆ. ಅವರು ಭಗವಂತನ ಹೆಸರನ್ನು ಉಚ್ಚರಿಸಿ ಆನಂದದಿಂದ ಕುಣಿಯುವರು. ಅದಾದಮೇಲೆ ತಕ್ಷಣವೇ ಅವರು ಮನೆಯನ್ನು ಬಿಡುವರು. ಹೇಗೆ ಬಂದರೋ ಹೋಗುವುದೂ ಹಾಗೆಯೆ! ಜನರಿಗೆ ಇದು ತಿಳಿಯುವುದಿಲ್ಲ.

೧೦೧೭. ಈ ಮೂರು ಒಂದೇ ವಸ್ತುವೆಂದು ನನಗೆ ತೋರುತ್ತದೆ. ಬಲಿಯನ್ನು ಕೊಡುವ ಸ್ಥಳ, ಬಲಿಗಾಗಿರುವ ಪ್ರಾಣಿ, ಬಲಿ ಕೊಡುವವನು.

೧೦೧೮. ತಮ್ಮ ಕೊನೆಗಾಲದಲ್ಲಿ ತುಂಬಾ ಉತ್ಕಟಾವಸ್ಥೆಯಲ್ಲಿದ್ದಾಗ ಶ್ರೀರಾಮಕೃಷ್ಣರು ನರೇಂದ್ರನನ್ನು "ನನ್ನ ಸ್ವಭಾವ ಹೇಗಿದೆ?" ಎಂದರು.

ನರೇಂದ್ರ "ಏಕೆ ಸ್ವಾಮಿ! ನೀವೇ ಸರ್ವವೂ! ವಿವೇಕದ ಖಡ್ಗದಿಂದ ಪ್ರಪಂಚದಲ್ಲಿ ಅಸಾಧ್ಯವಾದ ಶಕ್ತಿಯನ್ನು ಉಪಯೋಗಿಸಿ ಸತ್ಯದೆಡೆಗೆ ದಾರಿ ಮಾಡಿಕೊಂಡ ವೀರಯೋಧರು ನೀವು! ನಿಮ್ಮಲ್ಲಿ ಸಖಿಯ ಭಾವವೂ ಕೂಡ ಇದೆ. ಭಕ್ತನಿಗೆ ಮಾತ್ರ ಸಾಧ್ಯವಾದ ಅವರ್ಣನೀಯವಾದ ಪ್ರೇಮ ಮತ್ತು ಪ್ರೇಮೋನ್ಮಾದವೂ ಇವೆ. ನಿಮ್ಮ ಭಗವಂತನ ಹಂಬಲಿಕೆಯಲ್ಲಿ ವೀರಯೋಧಭಾವ ಸಖೀಭಾವ ಮುಂತಾದುವೆಲ್ಲ ಐಕ್ಯವಾಗಿವೆ."

ಶ್ರೀರಾಮಕೃಷ್ಣರಲ್ಲಿ ಭಾವೋದ್ದೀಪನವಾಯಿತು. ಅವರು ಕೈಗಳನ್ನು ತಮ್ಮ ಹೃದಯದ ಮೇಲಿಟ್ಟು ನರೇಂದ್ರ ಮತ್ತು ಇತರ ಶಿಷ್ಯರನ್ನು ಕುರಿತು, "ಪ್ರಪಂಚದಲ್ಲಿ ಕಾಣುವ ಎಲ್ಲ ವಸ್ತುಗಳೂ ಇಲ್ಲಿಂದ ಬರುತ್ತವೆಂಬುದನ್ನು ನಾನು ನೋಡುವೆನು. ಇದನ್ನು ನಾನು ಸಾಕ್ಷಾತ್ಕಾರ ಮಾಡಿಕೊಂಡಿರುವೆನು" ಎಂದರು.

೧೦೧೯. ಶ್ರೀರಾಮಕೃಷ್ಣರು ಮಹಾಸಮಾಧಿಗೆ ಕೆಲವು ದಿನಗಳ ಮುಂಚೆ ಘೋರವಾದ ಗಂಟಲಿನ ಹುಣ್ಣಿನಿಂದ ಆರುತಿಂಗಳು ನರಳಿ ದೇಹ ಬರೀ ಅಸ್ಥಿಪಂಜರದಂತೆ ಆದಾಗ, ನರೇಂದ್ರನಿಗೆ ಇವರು ತಾವು ಅವತಾರಪುರುಷರೆಂದು ಹೇಳುತ್ತಿದ್ದುದನ್ನು ಪರೀಕ್ಷಿಸಬೇಕೆಂಬ ಕುತೂಹಲ ಉಂಟಾಯಿತು. ಆದಕಾರಣ "ಇಂತಹ ಅಸಾಧ್ಯವಾದ ದೇಹಯಾತನೆಯಿಂದ ನರಳುತ್ತಿರುವಾಗಲೂ ತಾವು ಅವತಾರವೆಂದು ಹೇಳಿದರೆ ನಾನು ಇದನ್ನು ಸತ್ಯವೆಂದು ತಿಳಿಯುತ್ತೇನೆ" ಎಂದುಕೊಂಡರು. ಇದೊಂದು ವಿಚಿತ್ರವಾದ ಸಂಗತಿ. ಈ ಆಲೋಚನೆ ಅವರ

ಮನಸ್ಸಿನಲ್ಲಿ ಹೊಳೆಯಿತೊ ಇಲ್ಲವೊ ತಕ್ಷಣವೆ ಶ್ರೀರಾಮಕೃಷ್ಣರು ತಮ್ಮ ಶಕ್ತಿಯನ್ನೆಲ್ಲ ಒಟ್ಟುಗೂಡಿಸಿ ಸ್ಪಷ್ಟವಾಗಿ " ಯಾರು ರಾಮನೊ ಮತ್ತು ಕೃಷ್ಣನೊ ಅವನೆ ಈ ದೇಹದಲ್ಲಿ ರಾಮಕೃಷ್ಣ. ಆದರೆ ನಿನ್ನ ವೇದಾಂತ ದೃಷ್ಟಿಯಿಂದಲ್ಲ " ಎಂದರು.

# ಅಧ್ಯಾಯ ೨೧

## ನೈತಿಕ ಸೂಕ್ತಿ

೧೦೨೦. ಅಗಸರವನು ಬೇಕಾದಷ್ಟು ಕೊಳೆ ಬಟ್ಟೆಯನ್ನು ತನ್ನ ಮನೆಯಲ್ಲಿಟ್ಟುಕೊಂಡಿರುವನು, ಆದರೆ ಅವು ಇವನವಲ್ಲ. ಬಟ್ಟೆಗಳನ್ನು ಒಗೆದ ತಕ್ಷಣವೆ ಅವನ ಕೋಣೆ ಬರಿದಾಗುವುದು. ಸ್ವಂತ ಆಲೋಚನೆ ಇಲ್ಲದ ಮನುಷ್ಯರು ಅಗಸರವನಂತೆ. ಆಲೋಚನೆಯಲ್ಲಿ ಅವರಂತೆ ಆಗಬೇಡ.

೧೦೨೧. ಮತ್ತೊಬ್ಬರು ಏನನ್ನು ಮಾಡಬೇಕೆಂದು ನೀನು ಆಶಿಸುವೆಯೊ ಅದನ್ನು ನೀನೇ ಮಾಡು.

೧೦೨೨. ಯಾಚನೆಯಿಂದ ಮಾನವನು ಕ್ಷುದ್ರನಾಗುವನು. ಸಾಕ್ಷಾತ್ ಭಗವಂತನೇ ಬಲಿಯ ಹತ್ತಿರ ಬೇಡುವುದಕ್ಕೆ ಹೋದಾಗ ವಾಮನನಾಗಬೇಕಾಯಿತು. ಇತರರಿಂದ ನಾವು ಏನನ್ನಾದರೂ ಬೇಡಿದೊಡನೆಯೆ ನಾವು ಕೀಳಾಗುವೆವು. ಎಂಬುದನ್ನು ಈ ಉದಾಹರಣೆಯಿಂದ ತಿಳಿದುಕೊಳ್ಳಬಹುದು.

೧೦೨೩. ಮನುಷ್ಯರು ಹೊಗಳುವುದೂ ಬೇಗ, ನಿಂದಿಸುವುದೂ ಬೇಗ. ಆದಕಾರಣವೇ ಯಾರು ನಿನ್ನ ವಿಚಾರವಾಗಿ ಏನೂ ಹೇಳಿದರೂ ಲೆಕ್ಕಿಸಬೇಡ.

೧೦೨೪. ಶಾಂತಿ ಮತ್ತು ನಿರ್ಮಲವಾದ ಜೀವವನ್ನು ನೀನು ನಡೆಸುವಾಗ ಮನುಷ್ಯರ ಸ್ತುತಿ ಮತ್ತು ನಿಂದೆಯನ್ನು ಅಲಕ್ಷ್ಯದಿಂದ ಕಾಣು.

೧೦೨೫. ಕೆಲವರಿರುವರು, ಅವರೊಂದಿಗೆ ಬಹಳ ಜಾಗ್ರತೆಯಿಂದ ಇರಬೇಕು. ೧ ಮೊದಲನೆಯವರು ಐಶ್ವರ್ಯವಂತರು ಅವರಿಗೆ

ಐಶ್ವರ್ಯವಿದೆ. ಬೇಕಾದ ಜನರಿರುವರು. ಅವರ ಮಾತು ನಡೆಯುವುದು. ಇಚ್ಛೆಪಟ್ಟರೆ ನಿನಗೆ ತೊಂದರೆ ಮಾಡಬಹುದು. ಅವರೊಂದಿಗೆ ನೀನು ಬಹಳ ಜೋಪಾನವಾಗಿರಬೇಕು. ಅವರು ಹೇಳುವುದಕ್ಕೆಲ್ಲ ನೀನು ತಲೆಯನ್ನು ಅಲ್ಲಾಡಿಸಬೇಕಾದೀತು. ಎರಡನೆಯದು ನಾಯಿ. ಅದು ಅಟ್ಟಿಸಿಕೊಂಡು ಬಂದಾಗ ಅಥವಾ ಬಗುಳಿದಾಗ ನೀನು ನಿಂತು ಸಿಳ್ಳಿ ಹಾಕಿ ಅದನ್ನು ಸಮಾಧಾನ ಪಡಿಸಬೇಕು. ಮೂರನೆಯದು ಎತ್ತು. ಅದು ನಿನ್ನನ್ನು ತಿವಿಯಲು ಬಂದಾಗ ನೀನು ಅದನ್ನು ಸ್ವಲ್ಪ ಶಬ್ದ ಮಾಡಿ ಸಮಾಧಾನಪಡಿಸಬೇಕು. ನಾಲ್ಕನೆಯವನೆ ಹೆಂಡಕುಡುಕ. ನೀನು ಅವನನ್ನು ರೇಗಿಸಿದರೆ ಎಲ್ಲಾ ಪೋಲಿಮಾತುಗಳಿಂದಲೂ ಅವನು ನಿನ್ನನ್ನು ಬಯ್ಯುವನು. ಆದರೆ ಪ್ರೀತಿಯಿಂದ ನೀನು ಅವನನ್ನು "ಏನು ಮಾವ ಹೇಗಿರುವೆ?" ಎಂದು ಕೇಳಿದರೆ ಅವನಿಗೆ ತುಂಬಾ ಸಂತೋಷವಾಗಿ ಬಂದು ನಿನ್ನೊಂದಿಗೆ ಗುಡುಗುಡಿ ಸೇದಿ ಹೋಗುವನು.

೧೦೨೬. ಯಾರು ಮೂಲಂಗಿಯನ್ನು ತಿಂದಿರುವರೊ ಅವರ ತೇಗಿನಲ್ಲಿ ಮೂಲಂಗಿಯ ವಾಸನೆ ಇರುವುದು. ಸೌತೆಕಾಯಿ ತಿಂದವನೂ ಅದರಂತೆಯೆ ತೇಗುವನು. ಯಾವುದನ್ನು ಹೃದಯ ಇಟ್ಟುಕೊಂಡಿರುವುದೊ ಅದನ್ನೆ ಕೆಲವು ವೇಳೆ ಬಾಯಿ ಮಾತನಾಡುವುದು.

೧೦೨೭. ಯಾರ ಸಂಗದಲ್ಲಿರುವನೊ ಅವನ ಚಾಳಿಯನ್ನೆ ಒಬ್ಬನು ಕಲಿಯುತ್ತಾನೆ. ಮತ್ತು ಒಬ್ಬನು ತನ್ನ ಚಾಳಿಗೆ ತಕ್ಕಂತೆ ಸಂಗವನ್ನು ಹುಡುಕುತ್ತಾನೆ.

೧೦೨೮. ಸರ್ಪದಂತಹ ಸ್ವಭಾವದ ಕೆಲವರಿರುವರು. ಅವರು ನಿಮ್ಮನ್ನು ಯಾವಾಗ ಕಚ್ಚುತ್ತಾರೊ ಗೊತ್ತಿಲ್ಲ. ಅವರ ವಿಷವನ್ನು ತಡೆಯುವುದಕ್ಕೆ ನೀನು ಬಹಳ ಪ್ರಯತ್ನಪಡಬೇಕು. ಇಲ್ಲದೆ ಇದ್ದರೆ ಅವರ ಮೇಲೆ ಸೇಡು ತೀರಿಸಿಕೊಳ್ಳಬೇಕೆಂದು ನಿನಗೆ ರೇಗುವುದು.

೧೦೨೯. ಕೋಪ ತಾಮಸಿಕ ಚಿಹ್ನೆ. ಕೋಪ ಬಂದಾಗ ಮನುಷ್ಯ ವಿವೇಚನಾಶಕ್ತಿಯನ್ನು ಕಳೆದುಕೊಳ್ಳುವನು. ಹನುಮಂತನು ಲಂಕೆಗೆ ಬೆಂಕಿಯನ್ನಿಟ್ಟನು. ಆದರೆ ಅವನಿಗೆ ಆಗ ಸೀತೆ ಇದ್ದ ಕಡೆಯೂ ಬೆಂಕಿ ತಗಲಬಹುದೆಂದು ಯೋಚನೆ ಹೊಳೆಯಲಿಲ್ಲ.

೧೦೩೦. "ನೂರುಗಟ್ಲೆ, ಸಾವಿರಗಟ್ಲೆ ಗುರುಗಳು ಸಿಕ್ಕುತ್ತಾರೆ. ಆದರೆ ಶಿಷ್ಯನೊಬ್ಬನೂ ಇಲ್ಲ" ಎಂಬುದು ಹಳೆಯ ಗಾದೆ.

ಅಂದರೆ ಬುದ್ಧಿವಾದವನ್ನು ಹೇಳುವರು ಹಲವು ಮಂದಿ, ಆದರೆ ಅದನ್ನು ಅನುಸರಿಸುವವರು ಬಹಳ ವಿರಳ.

೧೦೩೧. ಧರ್ಮಗಳು ಏಕೆ ಅಧೋಗತಿಗೆ ಬರುತ್ತವೆ? ಮಳೆಯ ನೀರು ಶುದ್ಧವಾಗಿರುವುದು. ಆದರೆ ಅದು ಭೂಮಿಗೆ ಬೀಳುವ ಹೊತ್ತಿಗೆ ಕೊಳೆಯಿಂದ ಕೂಡಿರುವ ಮಾರ್ಗದ ಮೂಲಕ ಬರುವುದರಿಂದ ಅದು ಮಲಿನವಾಗುವುದು. ಮಾಳಿಗೆಯ ನೀರಕೊಳವಿ ಕೊಳೆಯಾಗಿದ್ದರೆ ಅವುಗಳ ಮೂಲಕ ಬರುವ ನೀರು ಕೊಳೆಯಾಗಿರುವುದು. (ಆದಕಾರಣ ಧರ್ಮಗಳು ಯಾವುದರ ಮೂಲಕ ವ್ಯಕ್ತವಾಗಬೇಕೊ ಅಂತಹ ವಾಹಕಗಳಿಂದ ಮಲಿನವಾಗುವುದು.)

೧೦೩೨. ಪಾಪ ಮತ್ತು ಪಾದರಸಗಳನ್ನು ಅರಗಿಸಿಕೊಳ್ಳುವುದು ಬಹಳ ಕಷ್ಟ.

೧೦೩೩. ಗುಡಿ ಅಥವಾ ಮಹಾತ್ಮರನ್ನು ನೋಡಲು ಬರಿಯ ಕೈಯಲ್ಲಿ ಹೋಗಬಾರದು. ಎಷ್ಟೇ ಸಣ್ಣ ವಸ್ತುವನ್ನಾದರೂ ಆಗಲಿ ನೀನು ಅವರಿಗೆ ಅರ್ಪಿಸಲು ತೆಗೆದುಕೊಂಡು ಹೋಗಬೇಕು.

೧೦೩೪. ಮನೆಯಲ್ಲಿರುವವರು ಎಚ್ಚರವಾಗಿದ್ದರೆ ಕಳ್ಳರು ಹೇಗೆ ಅಂತಹ ಮನೆಗೆ ನುಗ್ಗಲಾರರೊ, ಹಾಗೆಯೆ ನೀನು ಯಾವಾಗಲೂ ಜಾಗರೂಕನಾಗಿದ್ದರೆ ಮನಸ್ಸಿನೊಳಗೆ ಅಲ್ಲಿರುವ ಒಳ್ಳೆಯದನ್ನು ಕದಿಯಲು ಯಾವ ಕೆಟ್ಟ ಆಲೋಚನೆಯೂ ಬರಲಾರದು.

೧೦೩೫. ಒಬ್ಬನ ಸ್ವಂತ ನೆಂಟರಾದ, ತಂದೆ ತಾಯಿ ಸಹೋದರರು ಹೆಂಡತಿ ಮಕ್ಕಳು ಚಿಕ್ಕಪ್ಪ ಇವರುಗಳಮೇಲೆ ಇರುವ ಆಸಕ್ತಿಗೆ ಮಾಯೆಯೆಂದು ಹೆಸರು. ಎಲ್ಲರ ಮೇಲೂ ಒಂದೇಸಮನಾಗಿರುವ ಪ್ರೀತಿಗೆ ದಯೆಯೆಂದು ಹೆಸರು.

೧೦೩೬. ನಾನು ಇರುವ ತನಕ ಕಲಿಯುತ್ತೇನೆ.

೧೦೩೭. ನೀನು ಎಲ್ಲಿಯವರೆಗೆ ಜೀವಿಸಿರುವೆಯೋ ಅಲ್ಲಿಯವರೆವಿಗೂ ಭಗವಂತನ ರಹಸ್ಯ ಮತ್ತು ಆತನ ಮೇಲೆ ಭಕ್ತಿಯನ್ನು ಕಲಿತುಕೊ. ಅದರಿಂದ ನಿನಗೇ ಉಪಯೋಗ.

೧೦೩೮. ಉಳಿದವರು ಎಲ್ಲಿ ನಮಸ್ಕಾರ ಮಾಡುತ್ತಾರೊ ಅಲ್ಲಿ ನಿನ್ನ ತಲೆಯನ್ನು ತಗ್ಗಿಸು. ಭಕ್ತಿ ಎಂದಿಗೂ ನಿಷ್ಪ್ರಯೋಜನವಾಗುವುದಿಲ್ಲ.

೧೦೩೯. ಯಾವಾಗಲೂ ನಿನ್ನ ಧರ್ಮದಲ್ಲಿ ಅಚಲವಾದ ಶ್ರದ್ಧೆಯಿಡು. ಆದರೆ ಇತರರ ಧರ್ಮದ ಮೇಲೆ ಅಸಹಿಷ್ಣುತೆ ಮತ್ತು ಮತಾಂಧತೆ ಬೇಡ.

೧೦೪೦. ಭರತ ಪ್ರಹ್ಲಾದ ಶುಕದೇವ ಪರಶುರಾಮ ಬಲಿ ಮತ್ತು ಬೃಂದಾವನದ ಗೋಪಿಯರು ಭಗವಂತನಿಗಾಗಿ ತಮ್ಮ ಹಿರಿಯರ ಮಾತು ಮೀರಿದರು.

೧೦೪೧. ಆಸೆಯನ್ನು ತೊರೆದು ಅನಾಸಕ್ತನಾಗಿ ಕೆಲಸ ಮಾಡುವುದೇ ನಿನಗೆ ಉತ್ತಮವಾದ ದಾರಿ.

## ಆಧ್ಯಾತ್ಮಿಕ ಸೂಕ್ತಿ

೧೦೪೨. ಭಗವಂತನು ಕೆಲವು ವೇಳೆ ಹುಚ್ಚರು ಕುಡುಕರು ಮತ್ತು ಮಕ್ಕಳ ಮೂಲಕ ಮಾತನಾಡುವನು.

೧೦೪೩. ಯಾವಾಗಲೂ ಹರಿಭಜನೆಯನ್ನು ಮಾಡುವ ಮನೆಗೆ ದೆವ್ವಗಳು ಎಂದಿಗೂ ನುಗ್ಗುವುದಿಲ್ಲ.

೧೦೪೪. ಧನ್ಯರು ಗಂಗಾನದಿಯ ತೀರದ ಮೇಲೆ ವಾಸಿಸುವರು.

೧೦೪೫. ಗಂಗಾನದಿಯ ನೀರನ್ನು ನೀರೆಂದು ಭಾವಿಸಬಾರದು. ಬೃಂದಾವನದ ಧೂಳನ್ನು ಧೂಳೆಂದು ಭಾವಿಸಬಾರದು. ಜಗನ್ನಾಥ ದೇವರ ಮಹಾಪ್ರಸಾದವನ್ನು ಅನ್ನವೆಂದು ಭಾವಿಸಬಾರದು. ಇವು ಮೂರೂ ಸಾಕ್ಷಾತ್ ಪರಬ್ರಹ್ಮಸ್ವರೂಪ.

೧೦೪೬. ದೇವರು ಇಚ್ಛಿಪಟ್ಟರೆ ಅವನು ಒಂದು ಒಂಟೆಯನ್ನು ಬೇಕಾದರೂ ಸೂಜಿಯ ಕಣ್ಣಿನಲ್ಲಿ ದಾಟಿಸಬಲ್ಲ. ಅವನಿಗೆ ತೋರಿದುದನ್ನು ಮಾಡಬಲ್ಲ.

೧೦೪೭. ಯಾರು ಭಗವಂತನಲ್ಲಿ ಶರಣಾಗತರಾಗಿರುವರೊ ಅವರು ತಪ್ಪುಹೆಜ್ಜೆಯನ್ನು ಇಡುವುದಿಲ್ಲ.

೧೦೪೮. ಹರಿ ಎಂದರೆ ಯಾರು ನಮ್ಮ ಹೃದಯವನ್ನು ಅಪಹರಿಸುವನೊ ಅವನು. ಹರಿಬಲವೆಂದರೆ ಸಾಕ್ಷಾತ್ ಹರಿಯೆ ನಮ್ಮ ಶಕ್ತಿ ಎಂದು.

೧೦೪೯. ಮಾನವನ ಅಂತರಾತ್ಮ ಜಾಗ್ರತವಾಗುವವರೆಗೆ ಅವನು ದೇವರನ್ನು ತಿಳಿಯಲಾರ.

೧೦೫೦. ದೇವರಲ್ಲಿ ಶರಣಾಗತನಾಗು. ನಾಚಿಕೆ ಅಂಜಿಕೆಗಳನ್ನು ತೊರೆ. "ದೇವರ ಹೆಸರಿನಲ್ಲಿ ನಾನು ಕುಣಿದರೆ ಜನರು ಏನು ತಿಳಿದುಕೊಳ್ಳುವರು ?" ಎಂಬ ಆಲೋಚನೆಗಳನ್ನೆಲ್ಲ ಆಚೆಗೆಸೆಯಿರಿ.

೧೦೫೧. ಒಬ್ಬರಿಗೆ ಶ್ರೀರಾಮಕೃಷ್ಣರು ಹೀಗೆ ಹೇಳಿದರು: "ನಿನ್ನ ಆಯುಸ್ಸಿನಲ್ಲಿ ಮುಕ್ಕಾಲುಪಾಲನ್ನೆಲ್ಲ ಪ್ರಪಂಚದಲ್ಲಿ ಕಳೆದ ಮೇಲೆ ಈಗ ದೇವರನ್ನು ಹುಡುಕುವುದಕ್ಕೆ ಬಂದಿರುವೆಯಲ್ಲ. ದೇವರನ್ನು ಕಂಡಾದ ಮೇಲೆ ನೀನು ಪ್ರಪಂಚಕ್ಕೆ ಹೋಗಿದ್ದರೆ ನಿನಗೆ ಎಂತಹ ಶಾಂತಿ ಮತ್ತು ಸಂತೋಷ ದೊರಕುತ್ತಿತ್ತು!"

೧೦೫೨. ನಿನ್ನಲ್ಲಿ ಶ್ರದ್ಧೆ ಇದ್ದರೆ ಯಾವುದನ್ನು ನೀನು ಆಶಿಸುವೆಯೊ ಅದು ನಿನಗೆ ದೊರಕೇ ದೊರಕುವುದು.

೧೦೫೩. ಮೊದಲು ಭಗವಂತನ ಸಾಕ್ಷಾತ್ಕಾರ, ನಂತರ ಅವನ ಸೃಷ್ಟಿಯ ವಿಚಾರ. ವಾಲ್ಮೀಕಿಗೆ ರಾಮಮಂತ್ರವನ್ನು ಧ್ಯಾನ ಮಾಡುವುದಕ್ಕೆ ಕೊಟ್ಟರು. ಆದರೆ ಅದನ್ನು ತಲೆಕೆಳಗಾಗಿ "ಮರಾ" ಎಂದು ಉಚ್ಚರಿಸುವಂತೆ ಹೇಳಿದರು. ಮರಾ ಎಂದರೆ, ಮ ಎಂದರೆ ಈಶ್ವರನೆಂದು ರಾ ಎಂದರೆ ಜಗತ್ತೆಂದು ಅರ್ಥ. ಮೊದಲು ದೇವರು, ನಂತರ ಪ್ರಪಂಚ.

೧೦೫೪. ಹೆಚ್ಚು ದೇವರಲ್ಲಿ ಆಸಕ್ತನಾಗಿರುವುದರಿಂದ ಅಪಾಯವೆಂದು ಹೇಳುವುದು ಹುಚ್ಚುತನ. ವಜ್ರದ ಕಾಂತಿ ಪ್ರಕಾಶಮಾನವಾಗಿ ತಂಪಾಗಿರುವುದು. ಆದರೆ ಎಂದಿಗೂ ಸುಡುವುದಿಲ್ಲ.

೧೦೫೫. ಲೀಲೆಯ ಮೂಲಕ ನಿತ್ಯವನ್ನು ತಿಳಿಯುವುದಕ್ಕೆ ಯತ್ನಿಸು.

೧೦೫೬. "ಸತ್" ಪಡೆಯುವುದಕ್ಕೆ ಚಿತ್ (ಶುದ್ಧಮನಸ್ಸಿನ) ಆಶ್ರಯವನ್ನು ಪಡೆ.

೧೦೫೭. ಅನಿತ್ಯದ ಮೂಲಕ ನಿತ್ಯವನ್ನು ಪಡೆಯಬೇಕು. ಮಿಥ್ಯದ ಸಹಾಯದಿಂದ ಸತ್ಯವನ್ನು ಹೊಂದಬೇಕು. ವ್ಯಕ್ತದ ಮೂಲಕ ಅವ್ಯಕ್ತವನ್ನು ಪಡೆಯಬೇಕು,

೧೦೫೮. ಅವನ ಹೆಸರು ಚಿನ್ಮಯ, ಅವನ ನೆಲೆ ಚಿನ್ಮಯ, ಆ ಭಗವಂತಸ್ವರೂಪ ಚಿನ್ಮಯ.

# ಅಧ್ಯಾಯ ೨೨

## ದೃಷ್ಟಾಂತ ಕಥೆಗಳು

### ಸಂಸಾರ ವ್ಯಥೆ

೧೦೫೯. ಭಗವಂತ ಏನು ಕೇಳಿದರೆ ಅದನ್ನು ಕೊಡಬಲ್ಲ ಕಲ್ಪತರುವಿನಂತೆ. ಆದಕಾರಣ ಸಾಧನೆಯ ಮೂಲಕ ಒಬ್ಬನ ಮನಸ್ಸು ಶುದ್ಧವಾದ ಮೇಲೆ ಎಲ್ಲಾ ಪ್ರಾಪಂಚಿಕ ಆಸೆಯನ್ನು ತೊರೆಯಬೇಕು. ಒಂದು ಕಥೆಯನ್ನು ಕೇಳಿ: ಪ್ರಯಾಣಿಕನೊಬ್ಬನು ನಡೆಯುತ್ತಿದ್ದಾಗ ಒಂದು ದೊಡ್ಡ ಬಯಲು ಪ್ರದೇಶಕ್ಕೆ ಬಂದನು. ಹಲವು ಗಂಟೆಗಳು ಅವನು ಬಿಸಿಲಿನಲ್ಲಿ ನಡೆಯುತ್ತಿದ್ದುದರಿಂದ ಬಹಳ ಸಾಕಾಗಿ ಬೆವರು ಸುರಿಸುತ್ತಿದ್ದನು. ಒಂದು ಮರದ ಕೆಳಗೆ ವಿಶ್ರಾಂತಿಗೆಂದು ಕುಳಿತನು. ಮನಸ್ಸಿನಲ್ಲಿ ಅಲ್ಲೇ ಮಲಗಿಕೊಳ್ಳುವುದಕ್ಕೆ ಒಂದು ಮೆತ್ತಗಿರುವ ಹಾಸಿಗೆ ಸಿಕ್ಕಿದರೆ ಎಷ್ಟು ಚೆನ್ನಾಗಿರುವುದು ಎಂದು ಆಲೋಚಿಸಿದನು. ಅವನು ಕಲ್ಪತರುವಿನ ಕೆಳಗೆ ಕುಳಿತಿದ್ದನು ಎಂದು ಅವನಿಗೆ ಗೊತ್ತಿರಲಿಲ್ಲ. ಈ ಆಲೋಚನೆ ಹೊಳೆದ ತಕ್ಷಣವೆ ಒಂದು ಚೆನ್ನಾಗಿರುವ ಹಾಸಿಗೆಯನ್ನು ಪಕ್ಕದಲ್ಲಿ ಕಂಡನು. ಇದನ್ನು ನೋಡಿ ತುಂಬಾ ಆಶ್ಚರ್ಯವಾಯಿತು. ಅವನು ಅದರ ಮೇಲೆ ಮಲಗಿಕೊಂಡನು. ನಂತರ ಒಬ್ಬ ತರುಣಿ ಬಂದು ಮೆಲ್ಲಗೆ ಕಾಲನ್ನು ಹಿಸುಕಿದರೆ ಎಷ್ಟು ಸಂತೋಷವಾಗುವುದೆಂದು ಕೊಂಡನು. ಈ ಆಲೋಚನೆ ಹೊಳೆದ ತಕ್ಷಣವೆ ಸುಂದರ ತರುಣಿ ಯೊಬ್ಬಳು ತನ್ನ ಬಳಿ ಕುಳಿತು ಕಾಲನ್ನು ಹಿಸುಕುತ್ತಿದ್ದಳು. ಪ್ರಯಾಣಿಕನಿಗೆ ಅತ್ಯಾನಂದವಾಯಿತು. ಆಗ ಹಸಿವಾಯಿತು. "ನಾನು ಬಯಸಿದ್ದೆಲ್ಲಾ ಸಿಕ್ಕಿತು. ನನಗೆ ಸ್ವಲ್ಪ ಆಹಾರ ಸಿಕ್ಕಬಾರದೆ" ಎಂದುಕೊಂಡನು. ತಕ್ಷಣವೆ ಅವನೆದುರಿಗೆ ಹಲವು ಬಗೆಯ ರುಚಿ ರುಚಿಯಾದ ಆಹಾರದ ತಟ್ಟೆಗಳನ್ನು ಕಂಡನು. ಇದನ್ನೆಲ್ಲಾ ಊಟ ಮಾಡಲು ಮೊದಲು ಮಾಡಿದನು. ಮನದಣಿಯೆ ಊಟವಾದ ಮೇಲೆ ಪುನಃ ಹಾಸಿಗೆಯ ಮೇಲೆ ಮಲಗಿದನು. ಆಗ ಆ ದಿನದ ಸಂಗತಿ ಯನ್ನೆಲ್ಲಾ ಯೋಚಿಸತೊಡಗಿದನು. ಹೀಗೆ ಇರುವಾಗ ಅವನು "ಇದ್ದಕ್ಕಿದ್ದಂತೆಯೆ ಒಂದು ಹುಲಿ ನನ್ನನ್ನು ಅಟ್ಟಿಸಿಕೊಂಡು ಬಂದುಬಿಟ್ಟರೆ ಗತಿಯೇನು" ಎಂದು ಯೋಚಿಸತೊಡಗಿದನು. ತಕ್ಷ

ಣವೆ ಒಂದು ದೊಡ್ಡ ಹುಲಿ ಅವನ ಮೇಲೆ ನೆಗೆದು ಕುತ್ತಿಗೆಯನ್ನು ಸೀಳಿ ರಕ್ತಹೀರಲು ಮೊದಲುಮಾಡಿತು. ಪ್ರಯಾಣಿಕನು ಪ್ರಾಣವನ್ನು ಕಳೆದುಕೊಂಡನು. ಸಾಧಾರಣವಾಗಿ ಮಾನವರ ಸ್ಥಿತಿಯು ಹೀಗೆ. ನೀನು ಧ್ಯಾನಮಾಡುವಾಗ ಜನ, ಹಣ, ಕೀರ್ತಿಗಳಿಗೆ ಪ್ರಾರ್ಥಿಸಿದರೆ ಸ್ವಲ್ಪಮಟ್ಟಿಗಾದರೂ ನಿನ್ನ ಪ್ರಾರ್ಥನೆ ನೆರವೇರುವುದರಲ್ಲಿ ಸಂಶಯವಿಲ್ಲ. ಆದರೆ ಜೋಪಾನವಾಗಿರಿ! ನಿಮಗೆ ಬರುವ ಬಹುಮಾನದ ಹಿಂದೆ ಹುಲಿ ಅವಿತುಕೊಂಡಿರುವ ಭಯವಿದೆ. ರೋಗ, ಬಂಧುಬಳಗದವರ ಸಾವು, ದ್ರವ್ಯ ಮತ್ತು ಕೀರ್ತಿಗಳ ನಾಶವೇ ಹುಲಿ. ಇವು ನಿಜವಾಗಿ ಬದುಕಿರುವ ಹುಲಿಗಿಂತ ಸಾವಿರಪಾಲು ಉಗ್ರವಾಗಿರುವುವು.

೧೦೬೨. ಮಧ್ಯಾಹ್ನದ ಹೊತ್ತು ದೂರದಲ್ಲಿ ಸಂತೆಯಾಗುತ್ತಿದ್ದ ಕಡೆಯಿಂದ ತಮ್ಮ ಊರಿಗೆ ಬೆಸ್ತರ ಹೆಂಗಸರ ತಂಡವೊಂದು ಹಿಂತಿರುಗುತ್ತಿತ್ತು. ಸಂಜೆಹೊತ್ತಿಗೆ ದೊಡ್ಡ ಆನೆಕಲ್ಲಿನ ಮಳೆಗೆ ಅವರು ಸಿಕ್ಕಿಬಿದ್ದರು. ಹತ್ತಿರದಲ್ಲಿದ್ದ ಹೂವಾಡಿಗರವನ ಮನೆಯಲ್ಲಿ ಅವರು ಅಂದು ತಂಗಬೇಕಾಯಿತು. ಒಳ್ಳೆಯ ಸ್ವಭಾವದ ಆ ಮನೆಯ ಯಜಮಾನನು ಅಂದಿನರಾತ್ರಿ, ತಾನು ಬೆಳಿಗ್ಗೆ ತನ್ನ ಗಿರಾಕಿಗಳ ಮನೆಗೆ ಕೊಡಬೇಕಾದ ಸುವಾಸನೆಯಿಂದ ಕೂಡಿದ ಹೂವಿನ ಬುಟ್ಟಿ ಇದ್ದ ಕೊಠಡಿಯಲ್ಲಿ ಮಲಗಲು ಅವರಿಗೆ ಅವಕಾಶಕೊಟ್ಟನು. ಹೂವಿನ ಸುವಾಸನೆಯಿಂದ ಕೂಡಿದ ಆ ಕೋಣೆಯ ವಾತಾವರಣ ಅವರಿಗೆ ಸರಿಬೀಳಲಿಲ್ಲ. ಆದಕಾರಣ ಅವರಿಗೆ ಒಂದುಸ್ವಲ್ಪವೂ ನಿದ್ದೆ ಬರಲೇ ಇಲ್ಲ. ಕೊನೆಗೆ ಅವರಲ್ಲಿ ಒಬ್ಬಳು ಒಂದು ಉಪಾಯವನ್ನು ಸೂಚಿಸಿದಳು. ಖಾಲಿ ಮೀನಿನ ಬುಟ್ಟಿಯೊಳಗೆ ಸ್ವಲ್ಪ ನೀರನ್ನು ಚುಮುಕಿಸಿ ನಮ್ಮ ಹತ್ತಿರ ಇಟ್ಟುಕೊಳ್ಳೋಣ. ಇದರಿಂದ ಈ ಅನಿಷ್ಟ ಹೂವಿನ ವಾಸನೆಯಿಂದ ನಮ್ಮ ನಿದ್ದೆಗೆ ಭಂಗ ಬರುವುದು ತಪ್ಪುವುದು" ಎಂದಳು. ಪ್ರತಿಯೊಬ್ಬರು ಈ ಸಲಹೆಯನ್ನು ಸಂತೋಷದಿಂದ ಒಪ್ಪಿಕೊಂಡು ಅದರಂತೆಯೆ ಮಾಡಿದರು. ಕ್ರಮೇಣ ಎಲ್ಲರೂ ಗೊರಕೆ ಹೊಡೆಯುವುದಕ್ಕೆ ಆರಂಭಿಸಿದರು! ನಿಜವಾಗಿಯೂ ನಮ್ಮ ಅಭ್ಯಾಸಗಳ ಶಕ್ತಿ ಮತ್ತು ಪ್ರಭಾವ ಇದು. ಪ್ರಾಪಂಚಿಕ ಆಲೋಚನೆ ಮತ್ತು ವಾತಾವರಣದಲ್ಲಿ ಬೆಳೆದು ಅದರಲ್ಲೇ ಪಳಗಿದವರು, ಪರಿಶುದ್ಧತೆ

ಮತ್ತು ವೈರಾಗ್ಯದಿಂದ ಕೂಡಿದ ವಾತಾವರಣದಲ್ಲಿ ಚಂಚಲರಾಗದೆ ಸುಖವಾಗಿ ಬಹಳ ಕಾಲ ಇರಲಾರರು.

೧೦೬೧. ಒಂದು ಸಲ ದಾರಿಯ ಪಕ್ಕದಲ್ಲಿ ಋಷಿಯೊಬ್ಬನು ಗಾಢ ಸಮಾಧಿಯಲ್ಲಿ ಮಗ್ನನಾಗಿದ್ದನು. ಆ ದಾರಿಯಲ್ಲಿ ಹೋಗುತ್ತಿದ್ದ ಕಳ್ಳ ಅದನ್ನು ನೋಡಿ, "ಇವನು ಕಳ್ಳನಾಗಿರಬೇಕು. ರಾತ್ರಿ ಯಾರ ಮನೆಯಲ್ಲೋ ಕಳ್ಳತನ ಮಾಡಿ ಈಗ ಸಾಕಾಗಿ ಮಲಗಿರುವನು. ಅವನನ್ನು ಹಿಡಿಯುವುದಕ್ಕೆ ಪೋಲೀಸಿನವರು ಬೇಗ ಬರುವರು. ಅದಕ್ಕೆ ಮುಂಚೆಯೆ ನಾನು ತಪ್ಪಿಸಿಕೊಳ್ಳಬೇಕು" ಎಂದು ಯೋಚಿಸುತ್ತ ಓಡಿ ಹೋದನು. ಇದಾದಮೇಲೆ ಒಬ್ಬ ಕುಡುಕನು ಆ ದಾರಿಯಲ್ಲಿ ಬಂದನು. ಋಷಿಯನ್ನು ನೋಡಿ, "ಓ, ತುಂಬ ಕುಡಿದು ನೀನು ಹಳ್ಳಕ್ಕೆ ಬಿದ್ದಿರುವೆ, ಓ, ನೋಡು ನಾನು ನಿನಗಿಂತ ಸ್ಥಿರವಾಗಿರುವೆನು; ಬೀಳುವುದಿಲ್ಲ" ಎಂದನು. ಕೊನೆಗೆ ಋಷಿಯೊಬ್ಬನು ಬಂದಾಗ, "ಯಾರೋ ಋಷಿ ಗಾಢಸಮಾಧಿಯಲ್ಲಿರುವನು" ಎಂದು ತಿಳಿದು, ಅವನ ಪಕ್ಕದಲ್ಲಿ ಕುಳಿತು ಪವಿತ್ರ ಪಾದಗಳನ್ನು ಮೆಲ್ಲನೆ ಒತ್ತಲು ಮೊದಲುಮಾಡಿದನು. (ಹೀಗೆ ನಿಜವಾದ ಪವಿತ್ರತೆ ಮತ್ತು ಧಾರ್ಮಿಕತೆಯನ್ನು ಕಂಡುಹಿಡಿಯುವುದಕ್ಕೆ ನಮ್ಮ ಪ್ರಾಪಂಚಿಕ ಆಸೆಗಳು ಅಡ್ಡಬರುವುವು.)

೧೦೬೨. ಪುರೋಹಿತರನ್ನು ಕುರಿತು ಶ್ರೀರಾಮಕೃಷ್ಣರು ಚೈತನ್ಯದೇವನ ಜೀವನದಿಂದ ಒಂದು ಘಟನೆಯನ್ನು ಹೇಳುತ್ತಿದ್ದರು. ಶ್ರೀ ಚೈತನ್ಯ ಭಾವ ಸಮಾಧಿಯಲ್ಲಿ ಪೂರ್ಣವಾಗಿ ತಲ್ಲೀನನಾಗಿದ್ದಾಗ ಸಮುದ್ರಕ್ಕೆ ಬಿದ್ದನು. ಬೆಸ್ತರು ಅವನನ್ನು ಬಲೆಯಿಂದ ಮೇಲಕ್ಕೆ ತಂದರು. ಆದರೆ ಬಲೆಯ ಮೂಲಕ ಈ ಮಹಾತ್ಮನ ಸಂಪರ್ಕವಾದೊಡನೆಯೇ ಇವರೂ ಭಾವಸಮಾಧಿಯಲ್ಲಿ ತಲ್ಲೀನರಾದರು. ತಮ್ಮ ಕೆಲಸಗಳನ್ನು ಬಿಟ್ಟು ಇವರು ಹುಚ್ಚರಂತೆ ಹರಿನಾಮವನ್ನು ಹೇಳುತ್ತ ಸಂಚರಿಸತೊಡಗಿದರು. ಇವರ ನೆಂಟರಿಗೆ ಏನು ಮಾಡಿದರೂ ಇವರ ಖಾಯಿಲೆಯನ್ನು ಗುಣಮಾಡಲು ಆಗಲಿಲ್ಲ. ಕೊನೆಗೆ ಏನು ಮಾಡುವುದಕ್ಕೂ ತೋಚದೆ ಅವರು ಚೈತನ್ಯದೇವನ ಹತ್ತಿರ ಬಂದು ತಮ್ಮ ವ್ಯಥೆಯನ್ನು ಹೇಳಿಕೊಂಡರು. ಆಗ ಚೈತನ್ಯದೇವನು ಅವರಿಗೆ "ಪುರೋಹಿತರ ಮನೆಯಿಂದ ಸ್ವಲ್ಪ ಅಕ್ಕಿಯನ್ನು ತಂದು ಅವರ ಬಾಯಿಗೆ ಹಾಕಿ ನೋಡಿ; ಸ್ವಲ್ಪ ಹೊತ್ತಿನಲ್ಲೇ ಗುಣವಾಗುವುದು"

ಎಂದನು. ಅವರು ಹೇಳಿದಂತೆ ಮಾಡಿದರು. ಬೆಸ್ತರಿಗೆ ಭಾವಸಮಾಧಿ ಬಿಟ್ಟುಹೋಯಿತು. (ಅಧ್ಯಾತ್ಮಿಕತೆಯನ್ನು ನಾಶಮಾಡುವಂತಹ ಪ್ರಾಪಂಚಿಕತೆ ಮತ್ತು ಮಲಿನತೆಯ ಪ್ರಭಾವ ಇದು.)

೧೦೬೩. ಒಬ್ಬ ಶ್ರೀಮಂತನ ಆಸ್ತಿಯ ಮೇಲ್ವಿಚಾರಣೆ ನೋಡಿಕೊಳ್ಳಲು ಒಬ್ಬ ಗುಮಾಸ್ಥನನ್ನು ನೇಮಿಸಿದರು. ಗುಮಾಸ್ಥನನ್ನು ಇದು ಯಾರ ಜಮೀನೆಂದು ಕೇಳಿದರೆ "ಇದೆಲ್ಲಾ ನನ್ನ ಆಸ್ತಿ ಸ್ವಾಮಿ, ಈ ಮನೆ ಆ ಮನೆ ಇದೆಲ್ಲಾ ನನ್ನದು" ಎನ್ನುತ್ತಿದ್ದನು. ಈ ರೀತಿ ಮಾತನಾಡಿ ಜಂಬ ಕೊಚ್ಚಿಕೊಳ್ಳುತ್ತಿದ್ದನು. ಒಂದು ದಿನ ಇವನ ಯಜಮಾನನ ತೋಟದ ಮನೆಯಲ್ಲಿ ಅವನ ಅಪ್ಪಣೆ ಇಲ್ಲದೆ ಮೀನನ್ನು ಕದ್ದನು. ಗ್ರಹಚಾರವಶಾತ್ ಯಜಮಾನನು ಆ ಸಮಯಕ್ಕೆ ಸರಿಯಾಗಿ ಬಂದು ಈ ಅಯೋಗ್ಯ ಪಾರುಪತ್ಯಗಾರನು ಮಾಡುತ್ತಿರುವುದನ್ನು ನೋಡಿದನು. ಗುಮಾಸ್ತನ ವಂಚಕತನವನ್ನು ನೋಡಿ ಅವನನ್ನು ಅವಮಾನಮಾಡಿ ಹಿಂದೆ ಸಂಪಾದನೆ ಮಾಡಿದ್ದನ್ನೆಲ್ಲಾ ಕಿತ್ತುಕೊಂಡು ಮನೆಗೆ ಕಳುಹಿಸಿಬಿಟ್ಟನು. ಪಾಪ ಈ ಮನುಷ್ಯನು ತನ್ನ ಏಕಮಾತ್ರ ಆಸ್ತಿಯಾದ ಪಾತ್ರೆ ಇಡುವ ಒಂದು ಹಳೆಯ ಪೆಟ್ಟಿಗೆಯನ್ನು ಕೂಡ ತೆಗೆದುಕೊಂಡು ಹೋಗುವುದಕ್ಕೆ ಆಗಲಿಲ್ಲ. ಅಹಂಕಾರಕ್ಕೆ ಸಲ್ಲುವ ಶಿಕ್ಷೆ ಇದು.

೧೦೬೪. ಕ್ಷೌರಿಕನೊಬ್ಬನು ಯಕ್ಷನಿರುವನು ಎಂದು ಕೇಳಿದ ಒಂದು ಮರದ ಕೆಳಗೆ ನಡೆಯುತ್ತಿರುವಾಗ, "ಏಳು ಕೊಪ್ಪರಿಗೆ ತುಂಬ ಧನವನ್ನು ತೆಗೆದುಕೊಳ್ಳುತ್ತೀಯಾ ?" ಎಂದು ಧ್ವನಿಯನ್ನು ಕೇಳಿದನು. ಕ್ಷೌರಿಕನು ಸುತ್ತಲೂ ತಿರುಗಿನೋಡಿದನು. ಆದರೆ ಏನೂ ಕಾಣಲಿಲ್ಲ. ಆದರೆ ಏಳು ಕೊಪ್ಪರಿಗೆಯ ಚಿನ್ನದ ಮೇಲೆ ಅವನಿಗೆ ಆಸೆಹುಟ್ಟಿತು. ಅವನು ಘಟ್ಟಿಯಾಗಿ "ಆಗಲಿ ನಾನು ಏಳು ಕೊಪ್ಪರಿಗೆ ಹಣವನ್ನು ತೆಗೆದುಕೊಳ್ಳುತ್ತೇನೆ" ಎಂದನು. ತಕ್ಷಣವೇ "ಮನೆಗೆ ಹೋಗು ನಾನು ಆಗಲೇ ಹಣವನ್ನು ನಿನ್ನ ಮನೆಗೆ ಸಾಗಿಸಿರುವೆನು" ಎಂದು ಉತ್ತರ ಬಂದಿತು. ಕ್ಷೌರಿಕನು ಈ ಕೌತುಕದ ಸುದ್ದಿ ನಿಜವೇ ಎಂದು ನೋಡುವುದಕ್ಕಾಗಿ ಅವಸರದಿಂದ ಮನೆಗೆ ಓಡಿದನು. ಮನೆಗೆ ಹೋದಾಗ ಕೊಪ್ಪರಿಗೆಗಳನ್ನು ತನ್ನ ಮುಂದೆಯೇ ಕಂಡನು. ಅವನ್ನೆಲ್ಲಾ ತೆರೆದು ನೋಡಿದಾಗ ಎಲ್ಲದರಲ್ಲೂ ತುಂಬಾ ಚಿನ್ನವಿತ್ತು. ಆದರೆ ಕೊನೆಯ ಕೊಪ್ಪರಿಗೆಯಲ್ಲಿ ಮಾತ್ರ ಅರ್ಧ ಚಿನ್ನವಿತ್ತು. ಕೊನೆಯ ಕೊಪ್ಪರಿಗೆಯ

ಮೇಲೆ ಇವನ ಮನಸ್ಸು ಹೋಯಿತು. ಅದು ಪೂರ್ತಿಯಾಗದಿದ್ದರೆ ಇವನ ಮನಸ್ಸಿಗೆ ಸಮಾಧಾನವಿರಲಿಲ್ಲ. ಅವನು ತನ್ನ ಚಿನ್ನದ ಒಡವೆಗಳನ್ನೆಲ್ಲ ನಾಣ್ಯಮಾಡಿ ಕೊಪ್ಪರಿಗೆಗೆ ಹಾಕಿದನು. ಆದರೆ ಆ ವಿಚಿತ್ರ ಕೊಪ್ಪರಿಗೆ ಹಿಂದೆ ಇದ್ದಂತೆಯೇ ಇತ್ತು. ಕ್ಷೌರಿಕನಿಗೆ ತಡೆಯಲು ಅಸಾಧ್ಯವಾಯಿತು. ತನಗೆ ಮತ್ತು ತನ್ನ ಸಂಸಾರದವರಿಗೆ ಅನ್ನವನ್ನು ಕಡಿಮೆಮಾಡಿ ಹಣ ಉಳಿಸಿ ಅದಕ್ಕೆ ಹಾಕಿದನು. ಆದರೆ ಆ ಕೊಪ್ಪರಿಗೆ ಹಾಗೆಯೇ ಇದ್ದಿತು. ಒಂದುದಿನ ದೊರೆಯನ್ನು ವಿನಯದಿಂದ ತನಗೆ ಬರುವ ಸಂಬಳ ಸಾಲದೆಂದು, ಅದನ್ನು ಹೆಚ್ಚಿಸಬೇಕೆಂದು ಬೇಡಿಕೊಂಡನು. ದೊರೆಗೆ ಇವನನ್ನು ಕಂಡರೆ ಇಷ್ಟ. ಇವನು ಕೇಳಿದೊಡನೆಯೆ ದೊರೆ ಸಂಬಳವನ್ನು ಎರಡರಷ್ಟು ಹೆಚ್ಚುಮಾಡಿದನು. ಈ ಸಂಬಳವನ್ನೆಲ್ಲಾ ಮಿಗಿಸಿಕೊಪ್ಪರಿಗೆಗೆ ಹಾಕಿದನು. ಆದರೆ ಈ ಅತಿಯಾಸೆಯ ಕೊಪ್ಪರಿಗೆ ತುಂಬುವ ಸೂಚನೆಯನ್ನೇ ತೋರಿಸಲಿಲ್ಲ. ಕೊನೆಗೆ ಮನೆಯಿಂದ ಮನೆಗೆ ಭಿಕ್ಷೆ ಬೇಡುವುದಕ್ಕೆ ಮೊದಲುಮಾಡಿದನು. ಕಸಬಿನ ಸಂಬಳ, ಭಿಕ್ಷೆಯಿಂದ ಬರುವ ವರಮಾನ, ಎಲ್ಲವನ್ನೂ ಉಳಿಸಿ ಎಂದಿಗೂ ತುಂಬದ ಕೊಪ್ಪರಿಗೆಗೆ ಹಾಕಿದನು. ಕೆಲವು ತಿಂಗಳು ಕಳೆಯಿತು. ಈ ಜಿಪುಣನಾದ ದುರದೃಷ್ಟ ಕ್ಷೌರಿಕನ ಸ್ಥಿತಿ ಬರಬರುತ್ತಾ ಕೆಡುತ್ತಾ ಬಂದಿತು. ಇದನ್ನು ನೋಡಿ ರಾಜನು ಒಂದುದಿನ “ ಏನು ನಿನಗೆ ಈಗ ಬರುವುದಕ್ಕಿಂತ ಅರ್ಧ ಸಂಬಳವಿದ್ದಾಗ ನೀನು ತೃಪ್ತನಾಗಿದ್ದೆ ಮತ್ತು ಸಂತೋಷವಾಗಿದ್ದೆ : ಆದರೆ ಈಗ ಅದಕ್ಕೆ ಎರಡರಷ್ಟು ಸಂಬಳವಾದರೂ ಸಪ್ಪೆಮುಖಹಾಕಿಕೊಂಡು ತಾಪತ್ರಯಕ್ಕೆ ಸಿಕ್ಕಿ ನರಳುತ್ತಿರುವಂತೆ ಕಾಣುವುದಲ್ಲ. ಏನು ನಿನ್ನ ವಿಚಾರ, ನಿನಗೆ ಏನಾದರೂ ಯಕ್ಷನ ಏಳು ಕೊಪ್ಪರಿಗೆ ಹಣ ಸಿಕ್ಕಿದೆಯೆ ? ” ಎಂದನು. “ ಮಹಾರಾಜರೆ, ಯಾರು ನಿಮಗೆ ಇದನ್ನು ಹೇಳಿದರು ? ” ಎಂದು ಕ್ಷೌರಿಕನು ಕೇಳಿದನು. ಅದಕ್ಕೆ ರಾಜನು “ ಯಾರಿಗೆ ಯಕ್ಷನು ಏಳು ಕೊಪ್ಪರಿಗೆ ಹಣ ಕೊಟ್ಟಿರುವನೊ ಅವನ ರೀತಿ ಹೀಗೆ ಎನ್ನುವುದು ನನಗೆ ಗೊತ್ತಿಲ್ಲವೆ ? ಅವನು ನನಗೂ ಈ ಹಣವನ್ನು ಕೊಡಬಂದನು. ನಾನು ಅವನನ್ನು ಈ ಹಣವನ್ನು ಖರ್ಚುಮಾಡಬಹುದೋ ಅಥವಾ ಸುಮ್ಮನೆ ಇಡಬೇಕೊ ” ಎಂದು ಕೇಳಿದೆನು. ನಾನು ಈ ಪ್ರಶ್ನೆಯನ್ನು ಹಾಕಿದೊಡನೆಯೇ ಯಕ್ಷನು ಜವಾಬನ್ನು ಹೇಳದೆ ಪರಾರಿಯಾದನು. ಯಾರಿಗೂ ಆ ದುಡ್ಡನ್ನು ಖರ್ಚುಮಾಡುವುದಕ್ಕೆ ಆಗುವುದಿಲ್ಲ ಎಂಬುದು ನಿನಗೆ

ಗೊತ್ತಿಲ್ಲ? ಅದು ಬಂದೊಡನೆಯೆ ಕೂಡಿಹಾಕಬೇಕೆಂಬ ಆಸೆಮಾತ್ರ ಬರುವುದು. ಈ ಕ್ಷಣವೆ ಅವನಿಗೆ ದುಡ್ಡನ್ನು ಹಿಂದಕ್ಕೆ ಕೊಟ್ಟುಬಿಡು " ಎಂದು ರಾಜನು ಹೇಳಿದನು. ಈ ಒಳ್ಳೆಯ ಮಾತಿನಿಂದ ಕ್ಷೌರಿಕನಿಗೆ ಬುದ್ಧಿ ಬಂದು ಆ ಮರದ ಹತ್ತಿರ ಹೋಗಿ " ಯಕ್ಷನೆ, ನಿನ್ನ ಚಿನ್ನವನ್ನು ತೆಗೆದುಕೊ " ಎಂದನು. ಯಕ್ಷನು 'ಆಗಲಿ' ಎಂದನು. ಕ್ಷೌರಿಕನು ಮನೆಗೆ ಬಂದೊಡನೆ ಆ ಹಣವೆಲ್ಲ ಹೇಗೆ ಬಂತೋ ಹಾಗೆಯೆ ಮಾಯ ವಾಗಿತ್ತು. ಮತ್ತು ಜೊತೆಗೆ ಇವನು ಸಂಪಾದಿಸಿ ಹಾಕಿದ್ದೆಲ್ಲವೂ ಅದರ ಜೊತೆಗೆ ಹೋಗಿತ್ತು. ಸ್ವರ್ಗದಲ್ಲಿರುವ ಕೆಲವು ಜನರ ಸ್ಥಿತಿ ಹೀಗೆ. ಯಾರಿಗೆ ಯಾವುದು ನಿಜವಾದ ಖರ್ಚು ಮತ್ತು ಯಾವುದು ನಿಜವಾದ ಜಮಾ ಎಂಬುದು ಗೊತ್ತಿಲ್ಲವೊ ಅವರು ತಮ್ಮಲ್ಲಿ ಇರುವುದನ್ನೆಲ್ಲ ಕಳೆದುಕೊಳ್ಳುವರು.

೧೮೬೫. ಜೂನ್ ತಿಂಗಳಲ್ಲಿ ಒಂದುದಿನ ಕುರಿಮರಿಯೊಂದು ತನ್ನ ತಾಯಿಯಹತ್ತಿರ ಆಡುತ್ತಿತ್ತು. ನಗುತ್ತ ತನ್ನ ತಾಯಿಗೆ ನಾನು ರಾಸಹೂವನ್ನು ತಿನ್ನಬೇಕೆಂದು ಕೇಳಿತು. (ಅದು ನವೆಂಬರ್ ತಿಂಗಳಲ್ಲಿ ಬಿಡುವ ಒಂದು ಬಗೆಯ ಹೂ.) " ನೀನು ಯೋಚಿಸುವಷ್ಟು ಅದು ಸುಲಭವಲ್ಲ, ನೀನು ರಾಸಹೂವನ್ನು ತಿನ್ನುವುದಕ್ಕೆ ಮುಂಚೆ ಎಷ್ಟೋ ಅಪಾಯಗಳಿಂದ ಪಾರಾಗಬೇಕಾಗಿದೆ. ಬರುವ ಸೆಪ್ಟೆಂಬರ್ ಮತ್ತು ಅಕ್ಟೋಬರ್ ತಿಂಗಳು ನಿನ್ನ ಅದೃಷ್ಟ ಒಳ್ಳೆಯದಲ್ಲ. ಏಕೆಂದರೆ ಯಾರಾ ದರೂ ನಿನ್ನನ್ನು ದುರ್ಗಾದೇವಿಗೆ ಬಲಿಕೊಡುವುದಕ್ಕೆ ಕರೆದುಕೊಂಡು ಹೋಗಬಹುದು. ನಂತರ ಕಾಳಿ ಪೂಜೆಯ ಭಯಂಕರ ದಿನಗಳು ಬೇರೆ ಇವೆ. ಅದರಿಂದಲೂ ನೀನು ತಪ್ಪಿಸಿಕೊಳ್ಳುವಷ್ಟು ಅದೃಷ್ಟಶಾಲಿಯಾ ಗಿದ್ದರೆ ನಂತರ ಜಗದ್ಧಾತ್ರಿ ಪೂಜೆ ಬರುವುದು. ಆಗ ನಮ್ಮ ಜಾತಿಯಲ್ಲಿ ಮಿಕ್ಕಿರುವ ಗಂಡು ಮರಿಗಳನ್ನೆಲ್ಲ ಬಲಿಕೊಡುವರು. ಏನೋ ನೀನು ಇವುಗಳೆಲ್ಲದರಿಂದ ಪಾರಾಗುವಷ್ಟು ಅದೃಷ್ಟಶಾಲಿಯಾಗಿದ್ದರೆ ನವೆಂಬರ್ ಮಾಸದಲ್ಲಿ ಅರಳುವ ರಾಸಹೂವನ್ನು ತಿನ್ನಬಹುದು " ಎಂದಿತು ತಾಯಿ. ಕಥೆಯಲ್ಲಿ ಬರುವ ಕುರಿಮರಿಯಂತೆ ನಾವು ಪ್ರಾಯದಕಾಲದಲ್ಲಿ ಬರುವ ಎಲ್ಲಾ ಸವಿಕನಸುಗಳನ್ನು ವಿಚಾರಮಾಡದೆ ಬೇಗ ಒಪ್ಪಿಕೊಳ್ಳ ಕೂಡದು. ನಮ್ಮ ಜೀವನದಲ್ಲಿ ನಾವು ಪಾರಾಗಿ ಹೋಗಬೇಕಾಗಿರುವ ಅನೇಕ ಕಷ್ಟಗಳನ್ನು ಗಣನೆಗೆ ತೆಗೆದುಕೊಳ್ಳಬೇಕು.

## ಕಾಮ ಬಂಧನ

೧೦೬೬. ಈಗಿನಕಾಲದ ವಿದ್ಯಾವಂತನೊಬ್ಬನು ಶ್ರೀರಾಮಕೃಷ್ಣರೊಂದಿಗೆ ಗೃಹಸ್ಥರು ಪ್ರಾಪಂಚಿಕತೆಯಿಂದ ಕೆಡದೆ ಇರುವುದು ಸಾಧ್ಯವೆಂದು ವಾದಿಸುತ್ತಿದ್ದನು. ಅವನಿಗೆ ಶ್ರೀರಾಮಕೃಷ್ಣರು ಹೀಗೆ ಹೇಳಿದರು : "ನೀನು ಹೇಳುವ ಇಂದಿನಕಾಲದ 'ಕೆಡದೆ ಇರುವ ಗೃಹಸ್ಥರು' ಎಂತಹವರು ಎಂಬುದು ನಿನಗೆ ಗೊತ್ತಿದೆಯೇನು? ಪ್ರಾಪಂಚಿಕತೆಯಿಂದ ಅವರು ದೂರವಿರುವುದರಿಂದ ಅವರಿಗೆ ಹಣಕಾಸಿನ ವಿಷಯಕ್ಕೆ ಸಂಬಂಧವಿಲ್ಲ. ಆದಕಾರಣ ಅವನ ಹಣಕಾಸಿನ ವಿಚಾರ ಮತ್ತು ಮನೆ ಆಡಳಿತ ಎಲ್ಲವನ್ನು ಅವನ ಹೆಂಡತಿ ನೋಡಿಕೊಳ್ಳುವಳು." ಯಾರಾದರು ಒಬ್ಬ ದರಿದ್ರಬ್ರಾಹ್ಮಣ ಮನೆಯ ಯಜಮಾನನನ್ನು ಭಿಕ್ಷೆ ಕೇಳುವುದಕ್ಕೆ ಬಂದರೆ ಅವನು "ಸ್ವಾಮಿ, ನಾನು ದುಡ್ಡನ್ನೆ ಮುಟ್ಟುವುದಿಲ್ಲ. ನನ್ನನ್ನು ಕಂಡು ನೀವು ಯಾತಕ್ಕೆ ಕಾಲಕಳೆಯುತ್ತೀರಿ?" ಎನ್ನುವನು. ಆ ಬ್ರಾಹ್ಮಣನಾದರೊ ಹಟಮಾಡಿದರೆ ಈ ಪರಿಶುದ್ಧನಾದ ಗೃಹಸ್ಥನು ಇವನಿಗೆ ಏನಾದರೂ ಕೊಡಬೇಕೆಂದು ಯೋಚಿಸುತ್ತಾನೆ. ಆಗ "ಸ್ವಾಮಿ, ನಾಳೆ ಬನ್ನಿ. ನನಗೆ ತೋಚಿದ್ದನ್ನು ಕೊಡುತ್ತೇನೆ" ಎನ್ನುವನು. ಒಳಗೆ ಹೋಗಿ ಈ ಆದರ್ಶ ಗೃಹಸ್ಥ, ತನ್ನ ಹೆಂಡತಿಗೆ "ಲೇ ನೋಡು! ಒಬ್ಬ ಬಡಬ್ರಾಹ್ಮಣ ತುಂಬ ಸಂಕಟಕ್ಕೆ ಬಿದ್ದಿರುವನು. ಅವನಿಗೆ ನಾವು ಒಂದು ರೂಪಾಯಿಯನ್ನು ಕೊಡೋಣ" ಎನ್ನುವನು. ರೂಪಾಯಿ ಎಂಬ ಶಬ್ದವನ್ನು ಕೇಳಿದೊಡನೆ ಕೋಪದಿಂದ ರೇಗಿ ಅಣಕಿಸುತ್ತ "ಎಷ್ಟು ಧಾರಾಳಿಗಳು ನೀವು! ರೂಪಾಯಿ ಎಂದರೆ ನಿಮಗೆ ಎಲೆ ಮತ್ತು ಕಲ್ಲುಗಳಂತೆ, ಸ್ವಲ್ಪವೂ ಆಲೋಚನೆಮಾಡದೆ ಎಸೆಯುತ್ತೀರಿ!" ಎನ್ನುವಳು. ಯಜಮಾನನು ಕ್ಷಮೆಬೇಡುವ ಧ್ವನಿಯಿಂದ "ಅಲ್ಲಕಣೆ, ನೋಡು, ಬ್ರಾಹ್ಮಣ ಬಹಳ ಬಡವ. ಅವನಿಗೆ ನಾವು ಕಡಿಮೆ ಕೊಡಕೂಡದು" ಎನ್ನುತ್ತಾನೆ. "ಇಲ್ಲ ನಾನು ಅಷ್ಟು ಕೊಡೋದಿಲ್ಲ. ಇಲ್ಲಿ ಎರಡು ಆಣೆ ಇದೆ. ಬೇಕಾದರೆ ನೀವು ಅದನ್ನು ಅವನಿಗೆ ಕೊಡಿ" ಎನ್ನುವಳು. ಆದರೆ ಪ್ರಾಪಂಚಿಕತೆಯಿಂದ ದೂರವಿರುವ ಈ ಗೃಹಸ್ಥಬಾಬುವಾದರೊ ಹೆಂಡತಿ ಕೊಟ್ಟಷ್ಟನ್ನೆ ಪಾಪ ತೆಗೆದುಕೊಳ್ಳುತ್ತಾನೆ. ಮಾರನೆದಿನ ಭಿಕ್ಷುಕನಿಗೆ ಸಿಕ್ಕುವುದು ಎರಡೇ ಆಣೆ. ನೋಡು ಈಗ ಗೊತ್ತಾಯಿತೆ.

ಪ್ರಾಪಂಚಿಕ ದೂರರಾದ ಇಂತಹ ಆದರ್ಶ ಗೃಹಸ್ಥರು ನಿಜವಾಗಿ ತಾವು ಯಜಮಾನರಲ್ಲ. ತಾವು ಸಂಸಾರವನ್ನು ನೋಡಿಕೊಳ್ಳುವುದಿಲ್ಲ. ಅದಕ್ಕೋಸ್ಕರ ತಾವು ಬಹಳ ಒಳ್ಳೆಯವರೆಂದೂ ಸಭ್ಯರೆಂದೂ ತಿಳಿಯುವರು. ಆದರೆ ನಿಜವಾಗಿ ಅವರು ಹೆಂಡತಿ ಹೇಳಿದಂತೆ ಕೇಳುವವರು. ಆದಕಾರಣ ಅವರು ಸಾಧಾರಣ ದರ್ಜೆಗೆ ಸೇರಿದ ಮಾನವರು ಕೂಡಾ ಅಲ್ಲ.

೧೦೬೭. ಹಿಂದಿನಕಾಲದಲ್ಲಿ ಜಯಪುರದಲ್ಲಿರುವ ಗೋವಿಂದಜಿ ದೇವಸ್ಥಾನದ ಪೂಜಾರಿಗಳು ಮದುವೆಮಾಡಿಕೊಳ್ಳುತ್ತಿರಲಿಲ್ಲ. ಆಗ ಅವರು ತಮ್ಮ ಆತ್ಮಬಲದಿಂದ ಬಹಳ ಪ್ರಬಲರಾಗಿದ್ದರು. ಒಂದುದಿನ ದೊರೆ ಅವರನ್ನು ಹೇಳಿಕಳುಹಿಸಿದನು. ಆದರೆ ಅವರು ಹೋಗಲಿಲ್ಲ. ದೊರೆಯನ್ನೆ ಇಲ್ಲಿಗೆ ಬರುವಂತೆ ಹೇಳಿ ಎಂದರು. ನಂತರ ಅವರು ಮದುವೆಮಾಡಿಕೊಳ್ಳಲು ಮೊದಲುಮಾಡಿದರು. ನಂತರ ದೊರೆಯು ಅವರಿಗೆ ಹೇಳಿಕಳುಹಿಸಲೇ ಬೇಕಾಗಿರಲಿಲ್ಲ. ತಾವೆ ದೊರೆಯ ಹತ್ತಿರ ಹೋಗಿ, “ಮಹಾರಾಜ ನಿನಗೆ ಆಶೀರ್ವಾದಮಾಡುವುದಕ್ಕೆ ಬಂದಿರುವೆವು. ದೇವಸ್ಥಾನದಿಂದ ಫಲಮಂತ್ರಾಕ್ಷತೆ ತಂದಿರುವೆವು. ದಯವಿಟ್ಟು ಅದನ್ನು ಸ್ವೀಕರಿಸಿ” ಎನ್ನುತ್ತಿದ್ದರು. ಏಕೆಂದರೆ ಅವರು ಈಗ ಹಾಗೆ ಮಾಡಬೇಕಾಯಿತು. ಪಾಪ ಇನ್ನು ಏನುಮಾಡಿಯಾರು ಅವರು? ಒಂದು ದಿನ ಅವರು ತಮ್ಮಮನೆ ಕಟ್ಟಬೇಕಾಗಿತ್ತು; ಮತ್ತೊಂದುದಿನ ಅವರು ತಮ್ಮ ಮಕ್ಕಳಿಗೆ ಅನ್ನಪ್ರಾಶನ ಮಾಡಬೇಕಾಗಿತ್ತು; ಇನ್ನೊಂದು ಸಲ ತಮ್ಮಮಗಳಿಗೆ ಮದುವೆ ಮಾಡಬೇಕಾಗಿತ್ತು ಇತ್ಯಾದಿ. ಇವುಗಳಿಂದ ಅವರಿಗೆ ಯಾವಾಗಲೂ ಹಣದ ಆವಶ್ಯಕತೆ ಇರುತ್ತಿತ್ತು.

ಮತ್ತೊಬ್ಬರ ಕೆಳಗೆ ಚಾಕರಿಮಾಡಿ ಏನಾಗಿರುವೆ ಎನ್ನುವುದನ್ನು ನೀನೆ ನೋಡಿಕೊಳ್ಳಬಹುದು. ಪಾಶ್ಚಾತ್ಯರಂತೆ ಇಂಗ್ಲೀಷಿನಲ್ಲಿ ನುರಿತ ನಿಮ್ಮಂತಹ ಯುವಕರು ತಮ್ಮ ಯಜಮಾನರ ಬೈಗಳನ್ನು ಸಾವಧಾನದಿಂದ ಕೇಳಬೇಕು. ಇಂತಹ ದೀನತನ ಮತ್ತು ಗುಲಾಮಗಿರಿಯ ಬವಣೆಯ ಹಿಂದೆ ಇರುವುದು ಏನು, ನಿನಗೆ ಗೊತ್ತಿದೆಯೆ? ಅದೇ ಕಾಮಿನಿ. ಕಾಮದಾಸೆಗೆ ಅಡಿಯಾಳಾಗಿರುವುದು.

೧೦೬೮. ಕೆಲಸ ಸಿಕ್ಕದೆ ಬಡವನೊಬ್ಬನು ದುಃಸ್ಥಿತಿಯಲ್ಲಿದ್ದನು. ಒಂದು ಖಚೇರಿಗೆ ಹೋಗಿ ಹಲವುವೇಳೆ ಬಡಾಬಾಬುವನ್ನು ಕಾಯುತ್ತಿದ್ದನು. ಅವನು ಪ್ರತಿದಿನವೂ “ಈವತ್ತಿಲ್ಲ ನಾಳೆಬಾ,

ಆಗಿಂದಾಗ್ಯೆ ನನ್ನನ್ನು ಬಂದುನೋಡುತ್ತಿರು" ಎಂದು ಹೇಗಾದರೂ ತಪ್ಪಿಸಿಕೊಳ್ಳುವ ಜವಾಬನ್ನು ಕೊಡುತ್ತಿದ್ದನು. ಪಾಪ ಆ ಬಡ ಮನುಷ್ಯ ಹೀಗೆ ಎಷ್ಟೋದಿನ ಕಳೆದನು. ಒಂದು ದಿನ ಇವನು ತನ್ನ ದುಃಸ್ಥಿತಿಯನ್ನು ಸ್ನೇಹಿತನೊಬ್ಬನಿಗೆ ಹೇಳಿದನು. ಸ್ನೇಹಿತ ತಕ್ಷಣವೆ "ಎಂತಹ ಮೂರ್ಖ ನೀನು! ಅವನ ಹತ್ತಿರ ನಡೆದು ನಡೆದು ಏಕೆ ಕಾಲನ್ನು ಸವೆಸಿದೆ ಗುಲಾಬಳ ಹತ್ತಿರ ಹೋಗಿ ಅವಳನ್ನು ಬೇಡಿಕೊ, ನನ್ನ ಮಾತನ್ನು ಕೇಳು. ನಿನಗೆ ನಾಳೆ ಕೆಲಸ ಸಿಕ್ಕುವುದು" ಎಂದನು. ಬಡವನು ಅತ್ಯಾಶ್ಚರ್ಯದಿಂದ "ಇದು ಹೀಗೆ! ಹಾಗಾದರೆ ನಾನು ಈಗಲೇ ಅವಳ ಹತ್ತಿರ ಓಡುತ್ತೇನೆ" ಎಂದನು. ಗುಲಾಬಳು ಖಚೇರಿಯ ಮ್ಯಾನೇಜರ ಹೆಂಡತಿ. ಬಡವನು ಅವಳ ಹತ್ತಿರ ಹೋಗಿ, "ತಾಯಿ ನಾನು ಬಹಳ ಕಷ್ಟದಲ್ಲಿ ಇರುವೆನು, ನೀವಲ್ಲದೆ ಯಾರೂ ನನ್ನನ್ನು ಕಾಪಾಡುವುದಕ್ಕೆ ಆಗುವುದಿಲ್ಲ. ನಾನು ಬ್ರಾಹ್ಮಣ. ನನಗೆ ಏನೂ ಗತಿಯಿಲ್ಲ. ಬಹಳ ದಿನಗಳಿಂದ ನನಗೆ ಏನೂ ಕೆಲಸವಿಲ್ಲ. ಮನೆಯಲ್ಲಿ ಹೆಂಡತಿಮಕ್ಕಳು ಉಪವಾಸದಿಂದ ನರಳುತ್ತಿರುವರು. ನೀವು ಒಂದು ಮಾತನ್ನು ಹೇಳಿದರೆ ನನಗೆ ಕೆಲಸ ಸಿಕ್ಕುವುದು" ಎಂದನು. ಗುಲಾಬಳು "ಆಗಲಿ ಹಾಗಾದರೆ ಯಾರಿಗೆ ಹೇಳಬೇಕು?" ಎಂದು ಕೇಳಿದಳು. ಅವಳು ಬಹಳ ಕರುಣೆಯಿಂದ "ಅಯ್ಯೋ ಪಾಪ, ಈ ಬ್ರಾಹ್ಮಣ ಬಹಳ ಕಷ್ಟದಲ್ಲಿ ಇರುವನು" ಎಂದು ಆಲೋಚಿಸಿದಳು. ಬಡವನು ತಕ್ಷಣವೆ "ನನ್ನ ಪರವಾಗಿ ನೀವು ಬಡಾಬಾಬುವಿಗೆ ಒಂದು ಮಾತು ಹೇಳಿದರೆ ನನಗೆ ಕೆಲಸ ಖಂಡಿತ ಸಿಕ್ಕುವುದು" ಎಂದನು. ಆಗ ಗುಲಾಬಳು ಅಂದಿನ ರಾತ್ರಿಯೇ ಬಡಾಬಾಬುವಿಗೆ, "ಇವನಿಗೊಂದು ಚಾಕರಿಯನ್ನು ಕೊಡಬೇಕೆಂದು ಹೇಳುತ್ತೇನೆ" ಎಂದಳು. ನೋಡಿ! ಮಾರನೇ ದಿನ ಬೆಳಗ್ಗೆಯೇ ಬಡಾಬಾಬುವಿನ ಮನೆಯಿಂದ ಜವಾನನೊಬ್ಬನು ಬಡವನ ಮನೆಗೆ ಬಂದು ಅಂದಿನಿಂದಲೇ ಆಫೀಸಿಗೆ ಬರಬೇಕಂತೆ ಎಂದನು. ಬಡಾಬಾಬು ತನ್ನ ಮೇಲಿನ ಮುಖ್ಯ ಅಧಿಕಾರಿಗೆ ಹೀಗೆ ಶಿಫಾರಸು ಮಾಡಿದನು: "ಮಹಾಸ್ವಾಮಿ, ಈ ಮನುಷ್ಯ ಬಹಳ ವಿದ್ಯಾವಂತ. ಇವನಿಂದ ನನ್ನ ಆಫೀಸಿಗೆ ಬಹಳ ಉಪಯೋಗವೆಂದು ತಿಳಿದು ನಾನು ಇವನಿಗೆ ಕೆಲಸವನ್ನು ಕೊಟ್ಟಿರುವೆನು." ಗಂಡಸಿನಮೇಲೆ ಹೆಂಗಸಿನ ಪ್ರಭಾವ ಇಷ್ಟು. ಪ್ರಪಂಚವೆ ಕಾಮಿನಿಯ ಮೇಲೆ ಹುಚ್ಚಾಗಿರುವುದು.

೧೦೬೯. ಒಬ್ಬ ಬಡ ಬ್ರಾಹ್ಮಣನಿಗೆ ಶ್ರೀಮಂತ ಬಟ್ಟೆ ವ್ಯಾಪಾರಿ ಶಿಷ್ಯನಿದ್ದನು. ಸ್ವಭಾವತಃ ವರ್ತಕ ಬಹಳ ಜಿಪುಣ. ಒಂದುದಿನ ಆ ಬ್ರಾಹ್ಮಣನಿಗೆ ತನ್ನ ಪುಸ್ತಕವನ್ನು ಕಟ್ಟುವುದಕ್ಕೆ ಒಂದು ಚೂರು ಬಟ್ಟೆ ಬೇಕಾಗಿತ್ತು. ಅವನು ತನ್ನ ಶಿಷ್ಯನಹತ್ತಿರ ಹೋಗಿ ಬೇಕಾದ ಒಂದುಚೂರು ಬಟ್ಟೆಯನ್ನು ಕೇಳಿದನು. ಅದಕ್ಕೆ ವರ್ತಕನು "ಸ್ವಾಮಿ! ನನಗೆ ತುಂಬಾ ವ್ಯಥೆಯಾಗುವುದು ಕೆಲವು ಗಂಟೆಗಳ ಹಿಂದೆ ಕೇಳಿದ್ದರೆ ಬೇಕಾದ ಬಟ್ಟೆಯನ್ನು ಕೊಡುತ್ತಿದ್ದೆ. ಈಗ ಸದ್ಯಕ್ಕೆ ದುರದೃಷ್ಟವಶಾತ್ ನಿಮಗೆ ಬೇಕಾಗುವ ಬಟ್ಟೆತುಂಡು ಇಲ್ಲ. ಏನಾದರೂ ಆಗಲಿ, ನಾನು ನಿಮಗೆ ಬೇಕಾದುದನ್ನು ನೆನಪಿನಲ್ಲಿಟ್ಟಿರುತ್ತೇನೆ. ಆದರೆ ನನಗೆ ಮಧ್ಯೆಮಧ್ಯೆ ಬಂದು ಹೇಳುತ್ತಿರಿ" ಎಂದನು. ಬ್ರಾಹ್ಮಣನು ನಿರಾಶನಾಗಿ ಹಿಂತಿರುಗಬೇಕಾಯಿತು. ಗುರುವಿಗೂ ಮತ್ತು ಪ್ರಖ್ಯಾತನಾದ ವರ್ತಕ ಶಿಷ್ಯನಿಗೂ ಆದ ಸಂಭಾಷಣವನ್ನು ಅಲ್ಲಿ ತೆರೆಹಿಂದೆ ಇದ್ದ ವರ್ತಕನ ಹೆಂಡತಿ ಕೇಳಿದಳು. ಅವಳು ತಕ್ಷಣವೆ ಬ್ರಾಹ್ಮಣನ ಹಿಂದೆ ಒಬ್ಬ ಆಳನ್ನು ಕಳುಹಿಸಿ ಅವನನ್ನು ಮನೆಗೆ ಕರೆದು "ಮಹಾಸ್ವಾಮಿ! ತಾವು ಏನು ಮನೆಯ ಯಜಮಾನರಿಂದ ಕೇಳುತ್ತಿದ್ದುದು?" ಎಂದಳು. ಬ್ರಾಹ್ಮಣ ನಡೆದುದನ್ನೆಲ್ಲಾ ಹೇಳಿದನು. ಹೆಂಡತಿ, "ಸ್ವಾಮಿ ಮನೆಗೆ ಹೋಗಿ. ನಾಳೆ ಬೆಳಿಗ್ಗೆ ನಿಮಗೆ ಬಟ್ಟೆಸಿಗುತ್ತದೆ" ಎಂದಳು. ರಾತ್ರಿ ವರ್ತಕನು ಮನೆಗೆ ಬಂದಮೇಲೆ ಗಂಡನನ್ನು "ಅಂಗಡಿಯ ಬಾಗಿಲನ್ನು ಹಾಕಿಬಿಟ್ಟಿರಾ?" ಎಂದು ಕೇಳಿದಳು. ವರ್ತಕನು "ಹೌದು ಏನು ಸಮಾಚಾರ?" ಎಂದನು. ಅವಳು "ಈಗಲೇ ಹೋಗಿ ಎರಡು ಅತ್ಯುತ್ತಮ ವಸ್ತ್ರಗಳನ್ನು ತೆಗೆದುಕೊಂಡು ಬನ್ನಿ" ಎಂದಳು. ಅವನು "ಏನು ಇಷ್ಟು ಅವಸರ, ಅತ್ಯುತ್ತಮ ವಸ್ತ್ರವನ್ನು ನಾಳೆ ಬೆಳಿಗ್ಗೆ ಕೊಡುತ್ತೇನೆ" ಎಂದನು. ಹೆಂಡತಿ "ನನಗೆ ಈಗಲೇಬೇಕು. ಇಲ್ಲದೆ ಇದ್ದರೆ ಬೇಡವೇಬೇಡ" ಎಂದು ಹಟಹಿಡಿದಳು. ಪಾಪ ವರ್ತಕ ಮಾಡುವುದೇನು. ಈಗ ಸಮಾಧಾನ ಮಾಡಬೇಕಾಗಿರುವುದು ನಿರ್ಲಕ್ಷ್ಯವಾಗಿ ಹೋಗಿಬಾ ಎಂದು ಕಳುಹಿಸಿದ ತನ್ನ ಆಧ್ಯಾತ್ಮಿಕ ಗುರುವನ್ನಲ್ಲ. ಇವನ ತೆರೆಹಿಂದೆ ಇರುವ ಗುರು. ಅವಳ ಅಪ್ಪಣೆಯನ್ನು ತಕ್ಷಣವೆ ನಡೆಸಿಕೊಡಬೇಕು. ಇಲ್ಲದೆ ಇದ್ದರೆ ಮನೆಯಲ್ಲಿ ಅವನಿಗೆ ಶಾಂತಿಯಿಲ್ಲ, ಕೊನೆಗೆ ವ್ಯಾಪಾರಿ ಅಂತೂ ಇಂತೂ ಆವೇಳೆ ಹೊತ್ತಿನಲ್ಲಿ ಅಂಗಡಿಯ ಬಾಗಿಲನ್ನು ತೆರೆದು ವಸ್ತ್ರವನ್ನು ತೆಗೆದು

ಕೊಟ್ಟನು. ಮೂರನೇದಿನ ಅಷ್ಟು ಹೊತ್ತಿಗೆ ಇವಳು ಗುರುವಿನ ಮನೆಗೆ ಬಟ್ಟೆಯನ್ನು ಕೊಟ್ಟು ಹೀಗೆ ಹೇಳಿಕಳುಹಿಸಿದಳು : "ಮುಂದೆ ನಿಮಗೆ ನಮ್ಮಿಂದ ಏನಾದರೂ ಬೇಕಾದರೆ ನಮ್ಮನ್ನು ಕೇಳಿ. ನಿಮಗೆ ದೊರೆಯುತ್ತದೆ." (ನಿಷ್ಠುರನಾದ ತಂದೆಯಂತೆ ದೇವರನ್ನು ಕಾಣುವುದಕ್ಕಿಂತ, ಕರುಣಾಮಯಿಯಾದ ತಾಯಿಯಂತೆ ಪ್ರಾರ್ಥಿಸಿದರೆ ನಮ್ಮ ಕೋರಿಕೆ ಈಡೇರುವುದು ಸುಲಭ.)

೧೦೭೦. ತಾವು ಏತಕ್ಕೆ ತಮ್ಮ ಪತ್ನಿಯೊಂದಿಗೆ ಗೃಹಸ್ಥರಂತೆ ಜೀವಿಸಲಿಲ್ಲವೆಂದು ಕೇಳಿದಾಗ ಶ್ರೀರಾಮಕೃಷ್ಣರು ಹೀಗೆ ಹೇಳಿದರು : "ಕಾರ್ತಿಕೇಯನು (ಶಿವನ ಮಗ) ಒಂದುದಿನ ಬೆಕ್ಕನ್ನು ಉಗುರಿನಿಂದ ಪರಚಿದನು. ಮನೆಗೆ ಹೋದಮೇಲೆ ತನ್ನ ತಾಯಿಯಾದ ಪಾರ್ವತಿಯ ಕೆನ್ನೆಯಮೇಲೆ ಒಂದು ಗುರುತು ಇತ್ತು. ಇದನ್ನು ನೋಡಿ "ಅಮ್ಮ ನಿನ್ನ ಕೆನ್ನೆಯಮೇಲೆ ಏತಕ್ಕೆ ವಿಕಾರವಾದ ಗೀರುಬಂದಿತು ?" ಎಂದು ಕೇಳಿದಾಗ ಜಗನ್ಮಯಿ ಹೀಗೆ ಉತ್ತರಕೊಟ್ಟಳು : "ಇದೆಲ್ಲಾ ನೀನೆ ಮಾಡಿದ್ದು. ಇದು ನಿನ್ನ ಉಗುರಿನ ಗೀರು." ಕಾರ್ತಿಕೇಯನು ಆಶ್ಚರ್ಯದಿಂದ "ಓ ನಾನು ನಿನ್ನನ್ನು ಯಾವಾಗಲೂ ಗೀರಿದ ಜ್ಞಾಪಕವೆ ಇಲ್ಲವಲ್ಲ" ಎಂದನು. ಜಗನ್ಮಯಿ "ನೀನು ಇಂದಿನ ಬೆಳಿಗ್ಗೆ ಬೆಕ್ಕನ್ನು ಗೀರಿದುದನ್ನು ಮರೆತಿರುವಂತೆ ಕಾಣುವುದು" ಎಂದಳು. ಕಾರ್ತಿಕೇಯನು "ಇಂದು ನಾನೇನೊ ಬೆಕ್ಕನ್ನು ಪರಚಿದೆನು, ಆದರೆ ನಿನ್ನ ಕೆನ್ನೆಗೆ ಹೇಗೆ ಗುರುತು ಬಂದಿತು ?" ಜಗನ್ಮಯಿ "ಮಗು, ನಾನಲ್ಲದೆ ಪ್ರಪಂಚದಲ್ಲಿ ಯಾವುದೂ ಇಲ್ಲ. ಈ ಸೃಷ್ಟಿಯೆಲ್ಲವೂ ನಾನೆ ; ನೀನು ಯಾರಿಗೆ ತೊಂದರೆ ಮಾಡಿದರೂ ನನಗೆ ತೊಂದರೆ ಮಾಡಿದಂತೆ" ಎಂದಳು. ಕಾರ್ತಿಕೇಯನಿಗೆ ಇದೆಲ್ಲ ಕೇಳಿ ತುಂಬ ಆಶ್ಚರ್ಯವಾಯಿತು. ಎಂದೆಂದಿಗೂ ಮದುವೆ ಮಾಡಿಕೊಳ್ಳುವುದಿಲ್ಲವೆಂದು ಶಪಥ ಮಾಡಿದನು. ಅವನು ಯಾರನ್ನು ಮದುವೆ ಮಾಡಿಕೊಂಡಾನು ? ಪ್ರತಿಯೊಬ್ಬ ಹೆಂಗಸೂ ಅವನಿಗೆ ತಾಯಿಯಂತೆ. ಸ್ತ್ರೀ ತಾಯಿಯೆಂಬ ಭಾವನೆಯಿಂದ ಅವನು ಮದುವೆಮಾಡಿಕೊಳ್ಳಲಿಲ್ಲ. ನಾನೂ ಕಾರ್ತಿಕೇಯನಂತೆ. ಪ್ರತಿಯೊಬ್ಬ ಹೆಂಗಸನ್ನೂ ಜಗನ್ಮಯಿಯಂತೆ ಭಾವಿಸುತ್ತೇನೆ.

## ಆಧ್ಯಾತ್ಮಿಕ ಪುರೋಗಮನ ಮನಸ್ಸಿನಮೇಲೆ ಇರುವುದು

೧೦೭೧. ಒಬ್ಬನ ಆಧ್ಯಾತ್ಮಿಕ ಉನ್ನತಿ ಅವನ ಮಾನಸಿಕ ಮತ್ತು ಆಲೋಚನಾ ಜೀವನದ ಮೇಲಿದೆ. ಇದು ಅವನ ಅಂತರಾಳದಿಂದ ಬರುವುದು. ಬಾಹ್ಯಾಚಾರಗಳಿಂದ ಅಲ್ಲ. ಇಬ್ಬರು ಸ್ನೇಹಿತರು ಹೋಗುತ್ತಿರುವಾಗ ಭಾಗವತ ಪುರಾಣ ಹೇಳುತ್ತಿದ್ದ ಸ್ಥಳಕ್ಕೆ ಬಂದರು. ಅವರಲ್ಲಿ ಒಬ್ಬನು "ಅಲ್ಲಿಹೋಗಿ ಸ್ವಲ್ಪ ಹೊತ್ತು ಪುರಾಣ ಕೇಳೋಣ" ಎಂದನು. ಮತ್ತೊಬ್ಬನು "ಬೇಡ ನನ್ನ ಪರಮಮಿತ್ರನೆ, ಭಾಗವತವನ್ನು ಕೇಳುವುದರಿಂದ ಏನು ಪ್ರಯೋಜನ? ದೂರದಲ್ಲಿರುವ ಸೂಳೆಗೇರಿಗೆ ಹೋಗಿ ಸಂತೋಷದಿಂದ ಕಾಲವನ್ನು ಕಳೆಯೋಣ" ಎಂದನು. ಮೊದಲನೆಯವನು ಈ ಸಲಹೆಗೆ ಒಪ್ಪಲಿಲ್ಲ. ಭಾಗವತ ಓದುತ್ತಿದ್ದ ಕಡೆಗೆ ಹೋಗಿ ಅದನ್ನು ಕೇಳುವುದಕ್ಕೆ ಕುಳಿತುಕೊಂಡನು. ಮತ್ತೊಬ್ಬನು ಸೂಳೆಯ ಮನೆಗೆ ಹೋದನು. ಆದರೆ ಯಾವ ಸುಖವನ್ನು ಅವನು ಅಲ್ಲಿ ಸಿಕ್ಕುವುದೆಂದು ಭಾವಿಸಿದ್ದನೊ ಅದು ಸಿಕ್ಕಲಿಲ್ಲ. ಅದಕ್ಕೆ ಅವನು ಹೀಗೆ ಆಲೋಚಿಸಿದನು: "ಅಯ್ಯೋ ನಾನು ಏತಕ್ಕೆ ಇಲ್ಲಿಗೆ ಬಂದೆ, ಭಗವಂತನ ಲೀಲೆಯನ್ನು ಕೇಳುತ್ತಿರುವ ನನ್ನ ಸ್ನೇಹಿತ ಎಷ್ಟು ಆನಂದದಲ್ಲಿರಬಹುದು" ಎಂದು ಅವನು ಅಯೋಗ್ಯವಾದ ಸ್ಥಳದಲ್ಲಿದ್ದರೂ ಭಗವಂತನನ್ನು ಆಲೋಚಿಸತೊಡಗಿದನು. ಭಾಗವತವನ್ನು ಕೇಳುತ್ತಿದ್ದ ಮತ್ತೊಬ್ಬನಿಗೂ ಕೂಡ ಅದರಲ್ಲಿ ಅಭಿರುಚಿಹುಟ್ಟಲಿಲ್ಲ. ಅಲ್ಲೇ ಕುಳಿತುಕೊಂಡು ತನ್ನನ್ನು ನಿಂದಿಸಿಕೊಳ್ಳತೊಡಗಿದನು. "ಅಯ್ಯೊ, ನನ್ನ ಸ್ನೇಹಿತನೊಂದಿಗೆ ಸೂಳೆಗೇರಿಗೆ ಹೋಗದೆ ಎಂತಹ ಮೂಢನಾದೆ! ಈ ಸಮಯದಲ್ಲಿ ಅವನು ಎಂತಹ ಸುಖವನ್ನು ಅನುಭವಿಸುತ್ತಿರುವನು" ಎಂದುಕೊಂಡನು. ಇದರ ಪರಿಣಾಮ ಏನಾಯಿತೆಂದರೆ ಅವನೇನೊ ಭಾಗವತ ಓದುವಕಡೆ ಕುಳಿತುಕೊಂಡಿದ್ದನು. ಆದರೆ ಯಾವಾಗಲೂ ಸೂಳೆಯ ಮನೆಯಲ್ಲಿ ಎಂತಹ ಸುಖವನ್ನು ಅನುಭವಿಸಬಹುದಾಗಿತ್ತೊ ಅದನ್ನೇ ಆಲೋಚಿಸುತ್ತಿದ್ದನು. ಈ ಆಲೋಚನೆಗಳಿಂದ ಅವನ ಮನಸ್ಸು ಮಲಿನವಾದಮೇಲೆ ಅವನು ಅಲ್ಲಿಗೆ ಹೋಗದೆ ಇದ್ದರೂ ಅಲ್ಲಿಗೆ ಹೋದಷ್ಟೆ ಪಾಪಬಂದಿತು. ಸೂಳೆಗೇರಿಗೆ ಹೋದವನು ತಾನು ಅಯೋಗ್ಯವಾದ ಸ್ಥಳದಲ್ಲಿದ್ದರೂ

ಮನಸ್ಸು ಭಾಗವತವನ್ನೆ ಕುರಿತು ಆಲೋಚನೆ ಮಾಡುತ್ತಿದ್ದುದರಿಂದ ಭಾಗವತವನ್ನು ಕೇಳಿದ ಪುಣ್ಯಬಂದಿತು.

೧೦೭೨. ಸನ್ಯಾಸಿಯೊಬ್ಬನು ಒಂದು ದೇವಸ್ಥಾನದ ಹತ್ತಿರ ಇದ್ದನು. ಅವನ ಮನೆಯಹತ್ತಿರ ವೇಶ್ಯೆಯ ಮನೆಯೊಂದು ಇತ್ತು. ವೇಶ್ಯೆಯ ಮನೆಯಲ್ಲಿ ಯಾವಾಗಲೂ ಇರುವ ಜನರ ತಂಡವನ್ನು ನೋಡಿ ಒಂದು ದಿನ ಅವಳನ್ನು ಕರೆದು, "ನೀನು ದೊಡ್ಡಪಾಪಿಷ್ಟ. ಹಗಲುರಾತ್ರಿ ಪಾಪ ಮಾಡುತ್ತಿರುವೆ ಅಯ್ಯೋ, ಮುಂದೆ ನಿನಗೆ ಎಷ್ಟು ದುಃಖವಾಗುವುದು" ಎಂದು ನಿಂದಿಸಿದನು. ಪಾಪ, ಈ ವೇಶ್ಯೆ ತನ್ನ ತಪ್ಪಿಗೆ ತುಂಬಾ ವ್ಯಥೆಪಟ್ಟು ನಿಜವಾದ ಪಶ್ಚಾತ್ತಾಪದಿಂದ ತನ್ನನ್ನು ಕ್ಷಮಿಸೆಂದು ಭಗವಂತನನ್ನು ಬೇಡಿಕೊಂಡಳು. ವೇಶ್ಯಾವೃತ್ತಿ ತನ್ನ ಕಸಬಾದುದರಿಂದ ಜೀವನೋಪಾಯಕ್ಕೆ ಮತ್ತಾವಮಾರ್ಗವನ್ನೂ ಅವಳು ಸುಲಭವಾಗಿ ಅನುಸರಿಸುವುದಕ್ಕೆ ಆಗಲಿಲ್ಲ. ಆದಕಾರಣ ತನ್ನ ದೇಹ ತಪ್ಪಿತಕ್ಕೆ ಗುರಿಯಾದಾಗಲೆಲ್ಲ ಪಶ್ಚಾತ್ತಾಪದಿಂದ ಹೃತ್ಪೂರ್ವಕ ತನ್ನನ್ನು ನಿಂದಿಸಿಕೊಂಡು ಭಗವಂತನನ್ನು ಕ್ಷಮೆಗಾಗಿ ಹೆಚ್ಚುಹೆಚ್ಚು ಬೇಡಿದಳು ಸನ್ಯಾಸಿಗೆ ತನ್ನ ಬುದ್ಧಿವಾದದಿಂದ ಅವಳಮೇಲೆ ಪರಿಣಾಮವಾಗಿಲ್ಲವೆಂದು ನೋಡಿ "ನೋಡೋಣ ಎಷ್ಟುಜನರು ಇವಳು ಬದುಕಿರುವತನಕ ಇವಳ ಮನೆಗೆ ಬರುತ್ತಾರೆ" ಎಂದು ಯೋಚಿಸಿದನು. ಅಂದಿನಿಂದ ವೇಶ್ಯೆಯ ಮನೆಗೆ ಯಾರಾದರೂ ಹೋದಾಗಲೆಲ್ಲ ಅವರನ್ನು ಎಣಿಸುವುದಕ್ಕಾಗಿ ಒಂದು ಕಲ್ಲನ್ನು ಹಾಕುತ್ತಿದ್ದನು. ಹೀಗೆ ಕೆಲವು ದಿನಗಳಾದಮೇಲೆ ಹಾಕಿದ ಕಲ್ಲು ಒಂದು ದೊಡ್ಡರಾಶಿ ಯಾಯಿತು. ಒಂದು ದಿನ ಸನ್ಯಾಸಿ ವೇಶ್ಯೆಗೆ ಈ ರಾಶಿಯನ್ನು ತೋರಿ "ಎಲೆ ಹೆಂಗಸೆ, ಈ ಕಲ್ಲಿನ ರಾಶಿ ಕಾಣುವುದಿಲ್ಲವೆ, ಇದರಲ್ಲಿರುವ ಪ್ರತಿಯೊಂದು ಕಲ್ಲುಕೂಡ ನಾನು ನಿನಗೆ ಹಿಂದೆ ಹೀನಮಾರ್ಗವನ್ನು ಬಿಡಬೇಕೆಂದು ಬುದ್ಧಿವಾದ ಹೇಳಿದ ದಿನದಿಂದ ಮಾಡಿದ ಒಂದೊಂದು ಮಹಾಪಾಪಕ್ಕೆ ಗುರುತಾಗಿದೆ. ನಾನು ನಿನಗೆ ಈಗಲಾದರೂ ಹೇಳುತ್ತೀನೆ, ನಿನ್ನ ಪಾಪಕಾರ್ಯಗಳನ್ನು ಗಣನೆಗೆ ತೆಗೆದುಕೊ" ಎಂದನು. ಪಾಪ, ಆ ಬಡಹೆಂಗಸು ತಾನು ಮಾಡಿದ ಪಾಪದ ರಾಶಿಯನ್ನು ನೋಡಿ ನಡುಗಲಾರಂಭಿಸಿದಳು. ತನಗೆ ಇನ್ನು ದಿಕ್ಕು ಯಾರೆಂದು ಕಣ್ಣೀರು ಸುರಿಸುತ್ತಾ ಭಗವಂತನನ್ನು ಮನಸ್ಸಿನಲ್ಲಿಯೆ "ದೇವರೆ ಈ ದುರ್ಮಾರ್ಗದಿಂದ ನನ್ನನ್ನು ಪಾರುಮಾಡಲಾರೆಯ" ಎಂದು ಬೇಡಿ

ದಳು. ಈಕೆಯ ಪ್ರಾರ್ಥನೆ ಸಫಲವಾಯಿತು. ಅಂದೆ ಮೃತ್ಯುದೇವತೆ ಅವಳ ಮನೆಗೆ ಬಂದಳು. ವೇಶ್ಯೆ ಈ ಜಗತ್ತನ್ನು ಬಿಟ್ಟಳು. ಲೀಲಾ ಮಯನಾದ ಭಗವಂತನ ಇಚ್ಛೆಯಂತೆ ಸನ್ಯಾಸಿಯೂ ಅಂದು ಕಾಲ ವಾದನು. ವೈಕುಂಠದಿಂದ ವಿಷ್ಣುದೂತರು ಬಂದು ಪತಿತಳಾದ ವೇಶ್ಯೆಯ ಸೂಕ್ಷ್ಮದೇಹವನ್ನು ವೈಕುಂಠಕ್ಕೆ ಕರೆದುಕೊಂಡು ಹೋದರು. ಯಮದೂತರು ಸನ್ಯಾಸಿಯ ಪ್ರಾಣವನ್ನು ಕಟ್ಟಿ ಯಮಲೋಕಕ್ಕೆ ನಾಗಿಸಿದರು. ಸನ್ಯಾಸಿ ವೇಶ್ಯೆಯ ಅದೃಷ್ಟವನ್ನು ನೋಡಿ, ಜೋರಾಗಿ, "ಏನು, ಇದೇ ದೇವರ ಶ್ರೇಷ್ಠನ್ಯಾಯ? ನನ್ನ ಜೀವನವನ್ನೆಲ್ಲ ನಾನು ಬಡತನ ಮತ್ತು ತಪಸ್ಸಿನಲ್ಲಿ ಕಳೆದೆನು. ನನ್ನನ್ನು ನರಕಕ್ಕೆ ಕರೆದು ಕೊಂಡು ಹೋಗುವರು. ಆದರೆ ಯಾವ ವೇಶ್ಯೆಯ ಜೀವನವೇ ಒಂದು ಪಾಪದ ಮುದ್ದೆಯಾಗಿತ್ತೊ ಅವಳನ್ನು ವೈಕುಂಠಕ್ಕೆ ಕರೆದುಕೊಂಡು ಹೋಗುವರು" ಎಂದು ಕಿರುಚಿಕೊಂಡನು. ಇದನ್ನು ಕೇಳಿ ವಿಷ್ಣು ದೂತರು "ದೇವರ ತೀರ್ಪು ಯಾವಾಗಲೂ ನ್ಯಾಯವೆ. ನೀನು ಆಲೋಚಿಸಿದಂತೆ ಅನುಭವಿಸುವೆ ಕೀರ್ತಿಗೌರವಗಳಿಂದ ನೀನು ಬಾಹ್ಯಾಚಾರ ಮತ್ತು ಆಡಂಬರದಲ್ಲಿ ಕಳೆದೆ. ನಿನಗೆ ದೇವರು ಅದನ್ನು ಕೊಟ್ಟನು. ಹೃತ್ಪೂರ್ವಕ ಎಂದೂ ನೀನು ಅವನನ್ನು ಬೇಡಲಿಲ್ಲ. ಈ ವೇಶ್ಯೆಯ ದೇಹ ಯಾವಾಗಲೂ ಪಾಪಕಾರ್ಯದಲ್ಲಿ ನಿರತವಾಗಿದ್ದರೂ ಅವಳು ಹಗಲುರಾತ್ರಿ ಮನಸಾರ ಭಗವಂತನನ್ನು ಪ್ರಾರ್ಥಿಸಿದಳು. ನೋಡು ಕೆಳಗೆ, ನಿನ್ನ ಮತ್ತು ಅವಳ ದೇಹವನ್ನು ಜನರು ಯಾವ ರೀತಿ ನೋಡುತ್ತಿರುವರು. ನೀನು ನಿನ್ನದೇಹದಿಂದ ಎಂದೂ ತಪ್ಪನ್ನು ಮಾಡದೆ ಇದ್ದುದರಿಂದ ಅದನ್ನು ಹೂವಿನ ಹಾರಗಳಿಂದ ಅಲಂಕರಿಸಿ ಪವಿತ್ರನದಿಗೆ ಎಸೆಯುವುದಕ್ಕಾಗಿ ಭಜನೆ ಸಹಿತ ಹೋಗುತ್ತಿರುವರು. ಆದರೆ ಪಾಪವನ್ನು ಮಾಡಿದ ಈ ವೇಶ್ಯೆಯ ದೇಹವನ್ನಾದರೊ ಈ ಸಮಯದಲ್ಲಿ ನರಿ ಮತ್ತು ಹದ್ದುಗಳು ಕಿತ್ತು ತಿನ್ನುತ್ತಿರುವುವು. ಆದರೂ ಅವಳ ಹೃದಯ ಪರಿಶುದ್ಧವಾಗಿತ್ತು. ಅದಕ್ಕೆ ಅವಳು ಪವಿತ್ರಲೋಕಕ್ಕೆ ಹೋಗುತ್ತಿರುವಳು. ಅವಳು ಮಾಡಿದ ಪಾಪದ ಆಲೋಚನೆಯಲ್ಲಿಯೆ ಯಾವಾಗಲೂ ನಿನ್ನ ಮನಸ್ಸು ನಿರತವಾಗಿದ್ದುದರಿಂದ ನೀನು ಪಾಪಿ ಯಾದೆ. ಅದಕ್ಕೆ ನೀನು ನರಕಕ್ಕೆ ಹೋಗುವುದು. ನಿಜವಾಗಿಯೂ ನೀನೆ ವೇಶ್ಯೆ ಅವಳಲ್ಲ" ಎಂದರು.

## ತಪ್ಪು ತಿಳಿದ ತತ್ತ್ವದಿಂದಾಗುವ ಅನಾಹುತ

೧೦೭೩. ಹಿಂದೆ ಒಂದುದಿನ ಒಬ್ಬ ರಾಜನಿಗೆ ಅವನ ಗುರು ಎಲ್ಲವೂ ಬ್ರಹ್ಮಮಯವೆಂಬ ಅದ್ವೈತವನ್ನು ಉಪದೇಶಿಸಿದನು. ದೊರೆಗೆ ಈ ಸಿದ್ಧಾಂತದಿಂದ ಬಹಳ ಆನಂದವಾಯಿತು. ಒಳಗೆಹೋಗಿ ತನ್ನ ರಾಣಿಗೆ, "ರಾಣಿಗೂ ರಾಣಿಯ ಸೇವಕಳಿಗೂ ಯಾವ ವ್ಯತ್ಯಾಸವೂ ಇಲ್ಲ. ಆದಕಾರಣ ಇಂದಿನಿಂದ ಸೇವಕಳು ನನ್ನ ರಾಣಿ" ಎಂದನು. ಗಂಡನ ಈ ವಿಚಿತ್ರ ವಾದವನ್ನು ಕೇಳಿ ರಾಣಿ ದಿಗ್ಭ್ರಾಂತಳಾದಳು. ಗುರುಗಳಿಗೆ ಹೇಳಿಕಳುಹಿಸಿ ಅವರ ಮುಂದೆ ಬಹಳ ದೈನ್ಯದಿಂದ "ಸ್ವಾಮಿ, ನೋಡಿ ನಿಮ್ಮ ಬೋಧನೆಯ ಕ್ರೂರಪರಿಣಾಮವನ್ನು !" ಎಂದು ನಡೆದುದನ್ನು ವಿಸ್ತರಿಸಿದಳು. ಗುರು ರಾಣಿಯನ್ನು ಸಮಾಧಾನ ಮಾಡಿ ದೊರೆಗೆ ಊಟಕ್ಕೆ ಬಡಿಸುವಾಗ ಅನ್ನದೊಂದಿಗೆ ಒಂದು ಪಾತ್ರೆ ಸಗಣಿಯನ್ನು ಬಡಿಸು ಎಂದನು. ಊಟದಸಮಯದಲ್ಲಿ ಗುರು ಮತ್ತು ರಾಜ ಇಬ್ಬರೂ ಒಟ್ಟಿಗೆ ಕುಳಿತುಕೊಂಡರು. ಊಟದಲ್ಲಿ ಒಂದುತಟ್ಟೆ ಸಗಣಿ ಬಡಿಸಿರುವುದನ್ನು ನೋಡಿದಾಗ ರಾಜನಿಗೆ ಆದ ಕೋಪವನ್ನು ಯಾರು ವರ್ಣಿಸಬಲ್ಲರು ! ಇದನ್ನು ನೋಡಿ ಗುರು ಸಮಾಧಾನದಿಂದ "ಪ್ರಭುಗಳೆ, ನೀವು ಅದ್ವೈತಜ್ಞಾನದಲ್ಲಿ ತುಂಬ ನುರಿತಿರುವಿರಿ. ಹಾಗಾದರೆ ಅನ್ನಕ್ಕೂ ಮತ್ತು ಸಗಣಿಗೂ ವ್ಯತ್ಯಾಸವನ್ನೇಕೆ ನೋಡುವಿರಿ ?" ಎಂದು ಪ್ರಶ್ನಿಸಿದನು. ರಾಜನಿಗೆ ಸಹನೆ ಮೀರಿ ಕೋಪದಿಂದ "ದೊಡ್ಡ ಅದ್ವೈತಿ ಎಂದು ಜಂಬಕೊಚ್ಚಿಕೊಳ್ಳುವ ನೀವು ಸಾಧ್ಯವಾದರೆ ತಿನ್ನಿ ನೋಡೋಣ ಈ ಸಗಣಿಯನ್ನು" ಎಂದನು. ಗುರು ಆಗಲಿ ಎಂದು ತನ್ನ ರೂಪವನ್ನು ಬದಲಾಯಿಸಿ ಒಂದು ಹಂದಿಯಾಗಿ ಸಗಣಿಯನ್ನು ಅತಿ ಆದರದಿಂದ ತಿಂದು ಪುನಃ ಮಾನವರೂಪವನ್ನು ಧರಿಸಿದನು. ದೊರೆಗೆ ತುಂಬಾ ನಾಚಿಕೆಯಾಗಿ, ಹುಚ್ಚು ವಾದವನ್ನು ತನ್ನ ರಾಣಿ ಎದುರಿಗೆ ಮತ್ತೊಮ್ಮೆ ಪ್ರಸ್ತಾಪಿಸಲಿಲ್ಲ.

೧೦೭೪. ಬ್ರಾಹ್ಮಣನೊಬ್ಬನು ಒಂದು ತೋಟವನ್ನು ಮಾಡುತ್ತಿದ್ದನು. ಹಗಲುರಾತ್ರಿ ಅದನ್ನು ನೋಡಿಕೊಳ್ಳುತ್ತಿದ್ದನು. ಒಂದು ದಿನ ಯಾವುದೊ ಹಸುವೊಂದು ಒಳಗೆ ನುಗ್ಗಿ ತಾನು ಬಹಳ ಮುತುವರ್ಜಿಯಿಂದ ನೋಡಿಕೊಳ್ಳುತ್ತಿದ್ದ ಮಾವಿನಸಸಿಯನ್ನು ಮೇಯಿತು. ತನ್ನ ಪ್ರೀತಿಪಾತ್ರ ಗಿಡವನ್ನು ಮೇಯುತ್ತಿರುವ ಹಸುವನ್ನು ಕಂಡಾಗ

ಬ್ರಾಹ್ಮಣ ಕೋಪದಿಂದ ಹೋಗಿ ಹಸುವಿಗೆ ಬಹಳ ಬಲವಾಗಿ ಹೊಡೆದನು. ಇದರ ಪರಿಣಾಮವಾಗಿ ಆ ಹಸು ಸತ್ತುಹೋಯಿತು. ಬ್ರಾಹ್ಮಣನು ಪವಿತ್ರವಾದ ಗೋವನ್ನು ವಧಿಸಿದನು ಎಂಬ ಸುದ್ದಿ ಕಾಡುಗಿಚ್ಚಿನಂತೆ ಹಬ್ಬಿತು. ಯಾರಾದರೂ ಇವನು ಮಾಡಿದ ಪಾಪಕ್ಕೆ ಇವನನ್ನು ಗುರಿಮಾಡಿದರೆ ವೇದಾಂತಿಯೆಂದು ಜಂಭ ಕೊಚ್ಚಿಕೊಳ್ಳುತ್ತಿದ್ದ ಬ್ರಾಹ್ಮಣನು ತಾನು ತಪ್ಪಿತಸ್ಥನೆಂಬ ಆರೋಪವನ್ನು ಹೀಗೆ ವಿರೋಧಿಸುತ್ತಿದ್ದನು : " ಇಲ್ಲ ನಾನು ಹಸುವನ್ನು ಕೊಂದವನಲ್ಲ. ಅದನ್ನು ಮಾಡಿರುವುದು ನನ್ನ ಕೈ. ದೇವೇಂದ್ರನು ಕೈಗೆ ಅಧಿಪತಿಯಾಗಿರುವುದರಿಂದ ಗೋಹತ್ಯ ಮಾಡಿದ ಪಾಪ ಅವನ ಪಾಲಿಗೆ ಸೇರಿದುದೆ ಹೊರತು ನನಗೆ ಸೇರಿದುದಲ್ಲ." ಸ್ವರ್ಗದಲ್ಲಿದ್ದ ಇಂದ್ರನು ಇದನ್ನು ಕೇಳಿದನು. ಅವನು ಒಬ್ಬ ಬ್ರಾಹ್ಮಣನ ವೇಷವನ್ನು ತಾಳಿ ತೋಟದ ಮಾಲೀಕನ ಹತ್ತಿರ ಬಂದು " ಅಯ್ಯಾ, ಇದು ಯಾರ ತೋಟ ? " ಎಂದನು.

ಬ್ರಾಹ್ಮಣ :—ನನ್ನದು.

ಇಂದ್ರ:—ಇದು ಬಹಳ ಸುಂದರ ತೋಟ. ನಿನ್ನ ಹತ್ತಿರ ಬಹಳ ಬುದ್ಧಿವಂತನಾದ ತೋಟಗಾರನಿರುವನು. ನೋಡು ಎಷ್ಟು ಸುಂದರವಾಗಿ ಚೊಕ್ಕಟವಾಗಿ ಸಸಿಗಳನ್ನು ನೆಟ್ಟಿರುವನು.

ಬ್ರಾಹ್ಮಣ :—ಒಳ್ಳೆಯದು ಸ್ವಾಮಿ, ಅದು ಕೂಡ ನನ್ನ ಕೆಲಸವೆ. ನನ್ನ ಕಣ್ಣೆದುರಿಗೆ ನನ್ನ ಸ್ವಂತ ಸಲಹೆಯಂತೆ ಈ ಗಿಡಗಳನ್ನು ನೆಟ್ಟದ್ದು.

ಇಂದ್ರ:—ನಿಜವಾಗಿಯೂ ಬಹಳ ಚೆನ್ನಾಗಿರುವುದು. ಆ ದಾರಿಯನ್ನು ಯಾರು ಮಾಡಿದರು. ಇದನ್ನು ಬಹಳ ಚೆನ್ನಾಗಿ ಆಲೋಚಿಸಿ ಶುಭ್ರವಾಗಿ ಪೂರೈಸಿರುವರು.

ಬ್ರಾಹ್ಮಣ :—ಅದೆಲ್ಲ ನನ್ನಿಂದಲೇ ಮಾಡಲ್ಪಟ್ಟಿತು.

ನಂತರ ಇಂದ್ರನು ಕೈಮುಗಿದು, " ಇದೆಲ್ಲವೂ ನಿನ್ನದಾಗಿರುವಾಗ ಈ ತೋಟದಲ್ಲಿ ಮಾಡಿರುವ ಕೆಲಸಕ್ಕೆಲ್ಲ ನೀನೇ ಹಕ್ಕುದಾರನಾಗಿರುವಾಗ, ಗೋಹತ್ಯಕ್ಕೆ ಪಾಪ ಆ ಇಂದ್ರನನ್ನು ತಪ್ಪಿತಸ್ಥನನ್ನಾಗಿ ಮಾಡುವುದು ಸರಿಯಲ್ಲ " ಎಂದನು.

೧೦೭೫. ಒಂದು ಸರ್ಪ ಒಂದು ಕಡೆ ವಾಸವಾಗಿತ್ತು. ಯಾರಿಗೂ ಆ ದಾರಿಯಲ್ಲಿ ಹೋಗುವುದಕ್ಕೆ ಧೈರ್ಯವಿರಲಿಲ್ಲ. ಯಾರು ಆ ದಾರಿಯಲ್ಲಿ

ಹೋದರೂ ಇದು ಅವರನ್ನು ಕಚ್ಚಿ ಸಾಯಿಸುತ್ತಿತ್ತು. ಒಂದು ದಿನ ಒಬ್ಬ ಸಾಧು ಅಲ್ಲಿ ಹೋಗುತ್ತಿದ್ದನು. ಹಿಂದಿನಂತೆ ಆ ಸರ್ಪ ಅವನನ್ನು ಕಚ್ಚಬೇಕೆಂದು ಅಟ್ಟಿಸಿಕೊಂಡು ಹೋಗುತ್ತಿತ್ತು. ಆದರೆ ಇದು ಪುಣ್ಯಾತ್ಮನನ್ನು ಸಮೀಪಿಸಿದಾಗ ತನ್ನ ಧೈರ್ಯವನ್ನೆಲ್ಲ ಕಳೆದುಕೊಂಡು ಅವನ ಸಾಧುತ್ವಕ್ಕೆ ವಶವಾಯಿತು. ಹಾವನ್ನು ನೋಡಿ ಆ ಸಾಧು "ಏನು ಸ್ನೇಹಿತನೆ, ನೀನು ನನ್ನನ್ನು ಕಚ್ಚಬೇಕೆ?" ಎಂದು ಕೇಳಿದನು. ಸರ್ಪಕ್ಕೆ ನಾಚಿಕೆಯಾಗಿ ಜವಾಬನ್ನು ಕೊಡಲಿಲ್ಲ. ಸಾಧು "ಸ್ನೇಹಿತನೆ, ಕೇಳು. ಇನ್ನು ಮುಂದೆ ಯಾರಿಗೂ ಹಿಂಸೆ ಕೊಡಬೇಡ" ಎಂದನು. ಹಾವು ಅವನಿಗೆ ನಮಸ್ಕಾರಮಾಡಿ ಒಪ್ಪಿಕೊಂಡಿತು. ಸಾಧು ತನ್ನ ದಾರಿಯನ್ನು ಹಿಡಿದು ಹೋದಮೇಲೆ ಹಾವು ತನ್ನ ಬಿಲವನ್ನು ಸೇರಿತು. ಅಂದಿನಿಂದ ಸರ್ಪ ಮತ್ತೊಬ್ಬರಿಗೆ ಹಿಂಸೆ ಕೊಡುವ ಯೋಚನೆಯನ್ನು ಕೂಡ ಮಾಡದೆ ಬಹಳ ಸಾಧುಪ್ರಾಣಿಯಾಗಿ ಒಳ್ಳೆಯ ಮನಸ್ಸಿನಿಂದ ಬಾಳತೊಡಗಿತು. ಕೆಲವು ದಿನಗಳಲ್ಲಿ ಸುತ್ತಮುತ್ತಲಿರುವ ಜನರಿಗೆ ಹಾವು ವಿಷವನ್ನೆಲ್ಲಾ ಕಳೆದುಕೊಂಡಿದೆ, ಇನ್ನು ಮೇಲೆ ಅದರಿಂದ ಅಪಾಯವೇನೂ ಇಲ್ಲವೆಂದು ತಿಳಿದು ಜನರು ಅದನ್ನು ಹಿಂಸಿಸತೊಡಗಿದರು. ಕೆಲವರು ಅದನ್ನು ಕಲ್ಲಿನಿಂದ ಹೊಡೆಯತೊಡಗಿದರು; ಮತ್ತೆ ಕೆಲವರು ನಿರ್ದಯದಿಂದ ಅದರ ಬಾಲವನ್ನು ಹಿಡಿದುಕೊಂಡು ಎಳೆದರು. ಹೀಗೆ ಅದರ ಕಷ್ಟಕ್ಕೆ ಕೊನೆ ಇರಲಿಲ್ಲ. ಅದೃಷ್ಟವಶಾತ್ ಕೆಲವು ಕಾಲವಾದ ಮೇಲೆ ಹಿಂದಿನ ಸಾಧು ಅದೇ ಮಾರ್ಗದಲ್ಲಿ ಬಂದನು. ಆ ಸರ್ಪದ ಜಜ್ಜಿಹೋದ ದೇಹವನ್ನು ನೋಡಿ ಬಹಳ ವ್ಯಸನಪಟ್ಟು ಹಾಗೆ ಆಗುವುದಕ್ಕೆ ಕಾರಣವೇನೆಂದು ವಿಚಾರಿಸತೊಡಗಿದನು. ಅದಕ್ಕೆ ಸರ್ಪ "ಮಹಾಸ್ವಾಮಿ, ನಿಮ್ಮಿಂದ ನಾನು ಬುದ್ಧಿವಾದವನ್ನು ಕೇಳಿದ ಮೇಲೆ ನಾನು ಯಾರಿಗೂ ಹಿಂಸೆಮಾಡದೆ ಇದ್ದುದರಿಂದ ಈ ಸ್ಥಿತಿಗೆ ಬಂದೆ. ಆದರೆ ಅಯ್ಯೋ! ಅವರಿಗೆ ಎಳ್ಳಷ್ಟೂ ಕರುಣವಿಲ್ಲ" ಎಂದಿತು. ಸಾಧು ನಗುತ್ತ "ಪ್ರಿಯ ಸ್ನೇಹಿತನೆ, ನಾನು ನಿನಗೆ ಮತ್ತೊಬ್ಬರನ್ನು ಕಚ್ಚಬೇಡ ಎಂದು ಮಾತ್ರ ಹೇಳಿದೆ. ಬುಸುಗುಟ್ಟಿ ಅವರನ್ನು ಹೆದರಿಸಬೇಡ ಎಂದು ಹೇಳಲಿಲ್ಲವಲ್ಲ. ನೀನು ಯಾರನ್ನೂ ಕಚ್ಚಕೂಡದಾದರೂ ಬುಸುಗುಟ್ಟಿ ಎಲ್ಲರನ್ನು ನಿನ್ನಿಂದ ಸ್ವಲ್ಪ ದೂರದಲ್ಲಿ ಇರುವಂತೆ ಮಾಡಬೇಕು" ಎಂದನು. ಇದರಂತೆಯೆ ನೀವು ಪ್ರಪಂಚದಲ್ಲಿರಬೇಕಾದರೆ ಉಳಿದವರು ನಿಮಗೆ ಅಂಜಿ ಗೌರವಿಸುವಂತೆ ಮಾಡಬೇಕು. ಯಾರಿಗೂ

ನೀನು ಹಿಂಸೆಯನ್ನು ಕೊಡಬೇಡ. ಆದರೆ ಮತ್ತೊಬ್ಬರು ನಿನ್ನನ್ನು ಹಿಂಸಿಸುವುದಕ್ಕೆ ಅವಕಾಶ ಕೊಡಬೇಡ.

೧೦೭೬. ಗುರು ಒಂದುಸಲ ತನ್ನ ಶಿಷ್ಯನಿಗೆ ಇರುವುದೆಲ್ಲ ದೇವರು ಎಂದು ಉಪದೇಶಿಸಿದರು. ಶಿಷ್ಯನು ಇದನ್ನು ಅಕ್ಷರಶಃ ತಿಳಿದುಕೊಂಡನೆ ಹೊರತು ಅದರ ಭಾವವನ್ನು ಗ್ರಹಿಸಲಿಲ್ಲ. ಒಂದುದಿನ ಅವನು ದಾರಿಯಲ್ಲಿ ಹೋಗುತ್ತಿದ್ದಾಗ ಒಂದು ಆನೆ ಬಂದಿತು. ಆನೆಯ ಮೇಲೆ ಕುಳಿತಿದ್ದ ಮಾಹುತನು ಜೋರಾಗಿ "ದಾರಿಬಿಡಿ, ದಾರಿಬಿಡಿ" ಎಂದು ಕೂಗಿಕೊಳ್ಳುತ್ತಿದ್ದನು. ಆದರೂ, ಶಿಷ್ಯನು ತನ್ನಲ್ಲಿಯೆ ತರ್ಕಿಸಿದನು :— "ನಾನು ಏತಕ್ಕೆ ಅತ್ತಕಡೆ ಹೋಗಬೇಕು? ನಾನೂ ದೇವರು, ಆನೆಯೂ ದೇವರು. ದೇವರಿಗೆ ದೇವರಿಂದ ಏನು ಭಯ" ಹೀಗೆ ಆಲೋಚಿಸುತ್ತಾ ಅವನು ಕದಲಲಿಲ್ಲ. ಆನೆ ಅವನನ್ನು ಸೊಂಡಲಿನಿಂದ ಹಿಡಿದು ದೂರಕ್ಕೆ ಎಸೆಯಿತು. ಅವನಿಗೆ ತುಂಬ ಗಾಯವಾಯಿತು. ಗುರುವಿನ ಹತ್ತಿರ ಹೋಗಿ ನಡೆದುದನ್ನೆಲ್ಲ ಹೇಳಿದನು. ಗುರು "ನೀನೂ ದೇವರೆ, ಆನೆಯೂ ದೇವರೆ, ಅದೇನೋ ಸರಿ. ಮಾಹುತನಂತಿರುವ ದೇವರು ನಿನಗೆ ದಾರಿ ಬಿಡುವುದಕ್ಕೆ ಹೇಳುತ್ತಿದ್ದನಲ್ಲ, ಅವನ ಮಾತನ್ನು ಏತಕ್ಕೆ ಕೇಳಲಿಲ್ಲ?" ಎಂದನು.

## ಮತಭ್ರಾಂತಿಯ ಮೌಢ್ಯತೆ

೧೦೭೭. ಘಂಟಾಕರ್ಣನಂತೆ ಇರಬೇಡಿ. ಹಿಂದೆ ಒಬ್ಬ ಭಕ್ತನಿದ್ದನು. ಅವನು ಶಿವನನ್ನು ಮಾತ್ರ ಪೂಜಿಸುತ್ತಿದ್ದನು. ಉಳಿದ ಎಲ್ಲಾ ದೇವರನ್ನೂ ದ್ವೇಷಿಸುತ್ತಿದ್ದನು. ಒಂದು ದಿನ ಶಿವ ಅವನಿಗೆ ಕಾಣಿಸಿಕೊಂಡು "ನೀನು ಮಿಕ್ಕದೇವರನ್ನು ಎಲ್ಲಿಯ ವರೆಗೆ ದ್ವೇಷಿಸುವೆಯೊ ಅಲ್ಲಿಯವರೆಗೆ ನನಗೆ ನಿನ್ನ ಮೇಲೆ ಸಮಾಧಾನವಿಲ್ಲ" ಎಂದನು. ಆದರೆ ಆ ಮನುಷ್ಯನು ಶಿವನ ಮಾತನ್ನು ಕೇಳಲಿಲ್ಲ. ಕೆಲವು ದಿನಗಳಾದ ಮೇಲೆ ಶಿವನು ಅವನಿಗೆ ಪುನಃ ಕಾಣಿಸಿಕೊಂಡನು. ಈ ಸಲ ಶಿವನು ಅರ್ಧ ಹರಿಯಂತೆ ಮತ್ತು ಅರ್ಧ ಹರನಂತೆ ಇದ್ದನು. ಇದರಿಂದ ಭಕ್ತನಿಗೆ ಅರ್ಧ ಸಮಾಧಾನವೂ ಅರ್ಧ ಅಸಮಾಧಾನವೂ ಆಯಿತು. ಶಿವನರೂಪು ಇರುವ ಕಡೆ ಅವನಿಗೆ ನೈವೇದ್ಯವನ್ನು ಕೊಟ್ಟನು. ವಿಷ್ಣುವಿಗೆ ಏನನ್ನೂ ಕೊಡಲಿಲ್ಲ. ತನ್ನ ಇಷ್ಟದೈವವಾದ ಶಿವನ ಮುಂದೆ ಊದಿನಕಡ್ಡಿಯನ್ನು ಹಚ್ಚಿದಾಗ ಹೊಗೆ ಎಲ್ಲಿ ವಿಷ್ಣುವಿನ ಮೂಗಿಗೆ

ಹೋಗುವುದೊ ಎಂದು ಅವನ ಮೂಗಿನಹೊಳ್ಳೆಯನ್ನು ಮುಚ್ಚುವಷ್ಟು ಸಾಹಸ ಮಾಡಿದನು. ಆಗ ಶಿವನು "ನಿನ್ನ ಮತಾಂಧತೆಯನ್ನು ತಿದ್ದುವುದಕ್ಕೆ ಆಗುವುದಿಲ್ಲ. ಈ ದಿವ್ಯಸ್ವರೂಪವನ್ನು ಧಾರಣಮಾಡಿ ನಾನು ನಿನಗೆ ಎಲ್ಲಾ ದೇವತೆಗಳೂ ಕೂಡ ಒಬ್ಬ ಭಗವಂತನ ಅನೇಕ ರೂಪುಗಳು ಎಂಬುವನ್ನು ತೋರಲು ಯತ್ನಿಸಿದೆ. ಆದರೆ ನೀನು ಅದನ್ನು ಗಮನಿಸಲಿಲ್ಲ, ನೀನು ನಿನ್ನ ಮತಾಂಧತೆಗೆ ಬಹಳಕಾಲ ದುಃಖ ಅನುಭವಿಸಬೇಕಾಗಿದೆ" ಎಂದು ಹೇಳಿ ಅಂತರ್ಧಾನನಾದನು. ಆ ಮನುಷ್ಯನು ಅಲ್ಲಿಂದ ಒಂದು ಹಳ್ಳಿಗೆಹೋಗಿ ವಾಸಮಾಡುತ್ತಿದ್ದನು. ಕ್ರಮೇಣ ಇವನು ದೊಡ್ಡ ವಿಷ್ಣುವಿರೋಧಿಯಾದನು. ಇವನ ವಿಚಿತ್ರ ರೀತಿಯನ್ನು ಕಂಡು ಆ ಊರಿನ ಹುಡುಗರು ಇವನಿಗೆ ಕೇಳಿಸುವಂತೆ ವಿಷ್ಣುವಿನ ಹೆಸರನ್ನು ಹೇಳಿ ಇವನಿಗೆ ಉಪದ್ರವಕೊಡಲು ಮೊದಲು ಮಾಡಿದರು. ಇದರಿಂದ ತುಂಬಾ ಖಿನ್ನನಾಗಿ ಅವನು ತನ್ನ ಕಿವಿಗೆ ಎರಡು ಗಂಟೆಗಳನ್ನು ತಗಲಿಹಾಕಿಕೊಂಡನು. ಹುಡುಗರು 'ವಿಷ್ಣು ವಿಷ್ಣು' ಎಂದು ಕಿರಚಿಕೊಂಡಾಗ ಅವನು ಘಂಟೆಯನ್ನು ಅಲ್ಲಾಡಿಸಿ ವಿಷ್ಣುವಿನ ಹೆಸರು ಕಿವಿಗೆ ಮುಟ್ಟದಂತೆ ಮಾಡುತ್ತಿದ್ದನು. ಅವನಿಗೆ ಘಂಟಾಕರ್ಣ, ಗಂಟೆಯನ್ನು ಕಿವಿಗೆ ಕಟ್ಟಿಕೊಂಡವನು ಎಂಬ ಹೆಸರು ಬಂದಿತು.

೧೦೭೮. ನಾಲ್ಕುಜನ ಕುರುಡರು ಒಂದು ಆನೆಯನ್ನು ನೋಡುವುದಕ್ಕೆ ಹೋದರು. ಒಬ್ಬನು ಅದರ ಕಾಲನ್ನು ಮುಟ್ಟಿ ಆನೆ ಒಂದು ಕಂಬದಂತೆ ಇದೆ ಎಂದನು. ಎರಡನೆಯವನು ಅದರ ಸೊಂಡಿಲನ್ನು ಮುಟ್ಟಿ ಅದು ಒಂದು ದೊಡ್ಡ ಗದೆಯಂತೆ ಇದೆ ಎಂದನು. ಮೂರನೆಯವನು ಅದರ ಹೊಟ್ಟೆಯನ್ನು ಮುಟ್ಟಿ ಅದು ಒಂದು ದೊಡ್ಡ ಗುಡಾಣದಂತೆ ಇದೆ ಎಂದನು. ನಾಲ್ಕನೆಯವನು ಅದರ ಕಿವಿಯನ್ನು ಮುಟ್ಟಿ ಅದು ಒಂದು ದೊಡ್ಡ ಕೇರುವ ಮೊರದಂತೆ ಇದೆ ಎಂದನು. ಹೀಗೆ ಆ ನಾಲ್ವರು ಆನೆ ಹೇಗಿದೆ ಎಂಬ ವಿಚಾರವನ್ನು ಕುರಿತು ತಮ್ಮಲ್ಲಿಯೆ ವಾದಮಾಡತೊಡಗಿದರು. ದಾರಿಯಲ್ಲಿ ಹೋಗುತ್ತಿದ್ದ ಇನ್ನೊಬ್ಬನು ಅವರು ವಾದಿಸುತ್ತಿರುವುದನ್ನು ನೋಡಿ "ಯಾವುದನ್ನು ಕುರಿತು ನೀವು ಚರ್ಚಿಸುತ್ತಿರುವಿರಿ?" ಎಂದು ಕೇಳಿದನು. ಅವರು ಅವನಿಗೆ ಎಲ್ಲವನ್ನು ಹೇಳಿ ಅವನಿಗೆ ತೀರ್ಪನ್ನು ಕೊಡುವಂತೆ ಕೇಳಿಕೊಂಡರು. ಅವನು "ನಿಮ್ಮಲ್ಲಿ ಯಾರೂ ಆನೆಯನ್ನು ಕಂಡಿಲ್ಲ. ಆನೆ

ಕಂಬದಂತೆ ಇಲ್ಲ; ಅದರ ಕಾಲು ಕಂಬದಂತೆ ಇದೆ. ಅದು ಮೊರದಂತೆ ಇಲ್ಲ; ಅದರ ಕಿವಿ ಮೊರದಂತೆ ಇದೆ. ಅದು ಗದೆಯಂತೆ ಇಲ್ಲ; ಅದರ ಸೊಂಡಿಲು ಗದೆಯಂತೆ ಇದೆ. ಆನೆ ಕಾಲು, ಕಿವಿ, ಹೊಟ್ಟೆ, ಸೊಂಡಿಲು ಇವುಗಳೆಲ್ಲವನ್ನು ಕೂಡಿಕೊಂಡಿದೆ'' ಎಂದನು. ಇದರಂತೆಯೆ ಚರ್ಚಿಸುವರೆಲ್ಲ ದೇವರ ಯಾವುದೊ ಒಂದು ಅಂಶವನ್ನು ಮಾತ್ರ ನೋಡಿರುವರು.

೧೦೭೯. ಕಪ್ಪೆಯೊಂದು ಬಾವಿಯಲ್ಲಿ ವಾಸಮಾಡುತ್ತಿತ್ತು. ಅದು ಅಲ್ಲಿ ಬಹಳ ಕಾಲವಿತ್ತು. ಅದು ಅಲ್ಲೇ ಹುಟ್ಟಿ ಬೆಳೆದಿತ್ತು. ಅದೊಂದು ಸಣ್ಣ ಕಪ್ಪೆ. ಸಮುದ್ರದಲ್ಲಿ ವಾಸಿಸುತ್ತಿದ್ದ ಮತ್ತೊಂದು ಕಪ್ಪೆ ಒಂದು ದಿನ ಬಂದು ಇದರಲ್ಲಿ ಬಿದ್ದಿತು. ಬಾವಿಯ ಕಪ್ಪೆ ಹೊಸ ಕಪ್ಪೆಯನ್ನು ಕುರಿತು ನೀನೆಲ್ಲಿಂದಬಂದೆ? ಎಂದಿತು.

ಸಮುದ್ರದ ಕಪ್ಪೆ :--ನಾನು ಸಮುದ್ರದಿಂದ ಬಂದೆ.

ಬಾವಿ ಕಪ್ಪೆ :—ಸಮುದ್ರ ! ಅದು ಎಷ್ಟು ದೊಡ್ಡದು.

ಸಮುದ್ರದ ಕಪ್ಪೆ : —ಅದು ಬಹಳ ದೊಡ್ಡದು.

ಬಾವಿ ಕಪ್ಪೆ (ತನ್ನ ಕಾಲನ್ನು ವಿಸ್ತರಿಸಿ) :—ನಿನ್ನ ಸಮುದ್ರ ಇಷ್ಟು ದೊಡ್ಡದಾಗಿರುವುದೊ ?

ಸಮುದ್ರದ ಕಪ್ಪೆ :—ಇದಕ್ಕಿಂತಲೂ ದೊಡ್ಡದಾಗಿರುವುದು.

ಬಾವಿಯ ಕಪ್ಪೆ :—(ಒಂದು ಕಡೆಯಿಂದ ಮತ್ತೊಂದುಕಡೆಗೆ ನೆಗೆದು) ನನ್ನ ಬಾವಿಯಷ್ಟು ದೊಡ್ಡದೆ?

ಸಮುದ್ರದ ಕಪ್ಪೆ :—ಸ್ನೇಹಿತನೆ ಸಮುದ್ರವನ್ನು ಹೇಗೆ ಬಾವಿಗೆ ಹೋಲಿಸುವುವಕ್ಕೆ ಆದೀತು.

ಬಾವಿ ಕಪ್ಪೆ:—'' ಇಲ್ಲ ನನ್ನ ಬಾವಿಗಿಂತ ದೊಡ್ಡದಾಗಿ ಯಾವುದೂ ಇರಲಾರದು. ಇದಕ್ಕೂ ದೊಡ್ಡದು ಎಂದೆಂದಿಗೂ ಇರಲಾರದು. ಇವನು ಸುಳ್ಳುಗಾರ ಇವನನ್ನು ಇಲ್ಲಿಂದ ಓಡಿಸಬೇಕು'' ಎಂದಿತು.

ಎಲ್ಲಾ ಮತ ಭ್ರಾಂತರೂ ಹೀಗೆಯೆ ತಮ್ಮ ಬಾವಿಯಲ್ಲಿ ಕುಳಿತುಕೊಂಡು ಪ್ರಪಂಚದಲ್ಲಿ ತಮ್ಮ ಬಾವಿಗಿಂತ ದೊಡ್ಡದು ಯಾವುದೂ ಇಲ್ಲವೆನ್ನುವರು.

# ಶ್ರದ್ಧೆ, ಭಕ್ತಿ, ಶರಣಾಗತಿ

೧೦೮೦. ಅಗಸರವನೊಬ್ಬನು ಭಕ್ತನೊಬ್ಬನನ್ನು ಬಹಳವಾಗಿ ಹೊಡೆಯುತ್ತಿದ್ದನು. ಭಕ್ತನು, "ನಾರಾಯಣ, ನಾರಾಯಣ" ಎಂದು ಕಿರಿಚಿಕೊಳ್ಳುತ್ತಿದ್ದನು. ನಾರಾಯಣ ವೈಕುಂಠದಲ್ಲಿ ಲಕ್ಷ್ಮಿಯೊಂದಿಗೆ ಕುಳಿತುಕೊಂಡಿದ್ದನು. ಭಕ್ತನ ಮೊರೆಯನ್ನು ಕೇಳಿದೊಡನೆಯೆ ಅವನು ಅವನನ್ನು ಕಾಪಾಡುವುದಕ್ಕಾಗಿ ತಕ್ಷಣವೆ ಎದ್ದು ಹೊರಟನು. ಆದರೆ ಕೆಲವು ಹೆಜ್ಜೆಗಳು ಹೋಗಿ ಪುನಃ ಹಿಂತಿರುಗಿದನು. ಇದನ್ನು ನೋಡಿ ಲಕ್ಷ್ಮಿ "ಏತಕ್ಕೆ ಇಷ್ಟು ಬೇಗ ಬಂದಿದ್ದು?" ಎಂದು ಕೇಳಿದಳು. ನಾರಾಯಣನು "ನಾನು ಅಲ್ಲಿಗೆ ಹೋಗುವ ಅವಶ್ಯಕವಿರಲಿಲ್ಲ. ಅವನು ತನ್ನನ್ನು ತಾನೆ ರಕ್ಷಿಸಿಕೊಳ್ಳುತ್ತಿರುವನು. ಹಿಂದೆ ಇವನನ್ನು ಹೊಡೆಯುತ್ತಿದ್ದವನಿಗೆ ಈಗ ಇವನೇ ಹೊಡೆಯುತ್ತಿರುವನು. ಹೀಗಿರುವಾಗ ನಾನು ಅಲ್ಲಿಗೆ ಹೋಗುವ ಆವಶ್ಯಕತೆಯೇನು" ಎಂದನು. ಭಗವಂತನು ಯಾರು ತನಗೆ ಪೂರ್ಣ ಶರಣಾಗತರಾಗುತ್ತಾರೆಯೊ ಅವರನ್ನು ಮಾತ್ರ ರಕ್ಷಿಸುತ್ತಾನೆ.

೧೦೮೧. ಗೋಪಾಲನ ಸುದ್ದಿ ಗೊತ್ತಾಗದಕಾರಣ ಯಶೋದೆ ಒಂದುಸಲ ರಾಧೆಯ ಹತ್ತಿರ ಬಂದು ಕೃಷ್ಣನಿಂದ ಅವಳಿಗೆ ಏನಾದರೂ ಸುದ್ದಿ ಬಂದಿದೆಯೆ? ಎಂದು ಕೇಳಿದಳು. ಆಗ ರಾಧೆ ಗಾಢ ಧ್ಯಾನದಲ್ಲಿ ಇದ್ದಳು. ಆದಕಾರಣ ಯಶೋದೆಯ ಮಾತು ಕೇಳಲಿಲ್ಲ. ಅವಳ ಧ್ಯಾನ ಪೂರೈಸಿದ ಮೇಲೆ ನಂದನರಾಣಿಯಾದ ಯಶೋದೆ ತನ್ನ ಹತ್ತಿರ ಕುಳಿತುಕೊಂಡಿದ್ದುದನ್ನು ನೋಡಿದಳು. ರಾಧೆ ತಕ್ಷಣವೆ ಅವಳಿಗೆ ನಮಸ್ಕಾರಮಾಡಿ ಬಂದವಿಚಾರವೇನೆಂದು ಕೇಳಿದಳು. ಯಶೋದೆ ಬಂದ ಸಮಾಚಾರವನ್ನು ಹೇಳಿದಮೇಲೆ ಅವಳು ಯಶೋದೆಗೆ "ತಾಯಿ ನೀವು ಕಣ್ಣುಮುಚ್ಚಿಕೊಂಡು ಗೋಪಾಲನನ್ನು ಧ್ಯಾನಿಸಿ, ಆಗ ನೀವು ಅವನನ್ನು ನೋಡಬಹುದು" ಎಂದಳು. ಯಶೋದೆಯು ಕಣ್ಣು ಮುಚ್ಚಿದ ತಕ್ಷಣವೆ ಆಧ್ಯಾತ್ಮಿಕ ಶಕ್ತಿಯ ಆವಿರ್ಭಾವದಂತಿರುವ ರಾಧೆ ತನ್ನ ಪ್ರಭಾವವನ್ನು ಅವಳಮೇಲೆ ಬೀರಿದಳು. ಯಶೋದೆಯು ಇಂತಹ ಅತೀಂದ್ರಿಯ ಅವಸ್ಥೆಯಲ್ಲಿದ್ದಾಗ ಗೋಪಾಲನನ್ನು ಕಂಡಳು. ಆಗ ಯಶೋದೆ ರಾಧೆಯನ್ನು "ತಾಯಿ ನಾನು ಕಣ್ಣುಮುಚ್ಚಿಕೊಂಡಾಗ

ಲೆಲ್ಲಾ ನನ್ನ ಪ್ರೀತಿಯ ಗೋಪಾಲನನ್ನು ಕಾಣುವಂತೆ ಅನುಗ್ರಹಿಸು" ಎಂದು ಬೇಡಿಕೊಂಡಳು.

೧೦೮೨. ಶ್ರೀರಾಮಚಂದ್ರನು ದಂಡಕಾರಣ್ಯದಲ್ಲಿ ಸಂಚರಿಸುತ್ತಿದ್ದಾಗ ನೀರನ್ನು ಕುಡಿಯುವುದಕ್ಕಾಗಿ ಬಿಲ್ಲು ಬಾಣಗಳನ್ನು ನೆಲದ ಮೇಲೆ ನೆಟ್ಟು ಪಂಪಾ ಸರೋವರಕ್ಕೆ ಇಳಿದನು. ಮೇಲೆ ಬಂದಾಗ ಒಂದು ಕಪ್ಪೆಗೆ ಮೈಯೆಲ್ಲಾ ರಕ್ತವಾಗಿ ಹೋಗಿತ್ತು. ಅವನ ಬಿಲ್ಲು ಅದರ ದೇಹಕ್ಕೆ ನಾಟಿತ್ತು. ತುಂಬಾ ವ್ಯಥೆಪಟ್ಟು ಕಪ್ಪೆಗೆ "ನೀನು ನಾನಿಲ್ಲಿರುವೆನೆಂದು ಏನಾದರೂ ಧ್ವನಿಯನ್ನು ಮಾಡಿದ್ದರೆ ಈ ಸ್ಥಿತಿಗೆ ಬರುತ್ತಿರಲಿಲ್ಲ" ಎಂದನು. ಅದಕ್ಕೆ ಕಪ್ಪೆ "ಹೇ ರಾಮ! ನಾನು ಅಪಾಯದಲ್ಲಿರುವಾಗ ನನ್ನನ್ನು ಕಾಪಾಡು ಎಂದು ನಿನಗೆ ಬೇಡಿಕೊಳ್ಳುತ್ತೇನೆ ಈಗ ನೀನೆ ನನ್ನನ್ನು ಕೊಲ್ಲುತ್ತಿರುವೆ, ಯಾರನ್ನು ಪ್ರಾರ್ಥಿಸಲಿ ಎಂದಿತು.

೧೧೮೩. ಒಂದುದಿನ ಶ್ರೀಮಂತನ ಆಳೊಬ್ಬನು ಬಂದು ದೂರದಲ್ಲಿ ಗೌರವದಿಂದ ಅತಿದೈನ್ಯದಿಂದ ನಿಂತನು. ತನ್ನ ಕೈಯಲ್ಲಿ ಏನನ್ನೊ ವಸ್ತ್ರದಿಂದ ಕಟ್ಟಿ ಇಟ್ಟುಕೊಂಡಿದ್ದನು. ಧಣಿಯು "ನಿನ್ನ ಕೈಯಲ್ಲಿ ಇರುವುದೇನು" ಎಂದು ಕೇಳಿದನು. ಆಳು ವಸ್ತ್ರದಿಂದ ಒಂದು ಸಣ್ಣ ಸೀತಾಫಲದ ಹಣ್ಣನ್ನು ತೆಗೆದು ಅತಿವಿನಯದಿಂದ ಧಣಿಯ ಎದುರಿಗೆ ಇಟ್ಟು, ಅದನ್ನು ಧಣಿ ಸ್ವೀಕರಿಸಿದರೆ ತಾನು ಕೃತಜ್ಞನೆಂದು ಯೋಚಿಸಿದನು. ಧಣಿಗೆ ಆಳಿನ ವಿಶ್ವಾಸಪೂರ್ವಕ ಭಕ್ತಿಯನ್ನು ನೋಡಿ ತುಂಬಾ ಆನಂದವಾಯಿತು. ಅದು ಏನು ಕೆಲಸಕ್ಕೆ ಬಾರದಿದ್ದರೂ ಅದನ್ನು ಸ್ವೀಕರಿಸಿ "ಓ, ಇದು ಎಷ್ಟು ಚೆನ್ನಾಗಿದೆ. ಇದು ನಿನಗೆ ಎಲ್ಲಿ ಸಿಕ್ಕಿತು ?" ಎಂದು ಕೇಳಿದನು. ದೇವರೂ ಕೂಡ ಭಕ್ತನ ಹೃದಯವನ್ನು ನೋಡುವುದು ಹೀಗೆ. ಭಗವಂತನಿಗೆ ಅನಂತ ಐಶ್ವರ್ಯ ಇರುವುದು ಆದರೂ ಭಕ್ತರ ಪ್ರೇಮ ಮತ್ತು ಭಕ್ತಿಯ ಪ್ರಭಾವಕ್ಕೆ ಒಲಿಯುವನು.

೧೦೮೪. ಶ್ರೀರಾಮಕೃಷ್ಣರು ಪ್ರತಾಪಚಂದ್ರಮಜುಂದಾರನನ್ನು ಕುರಿತು ಹೀಗೆಂದರು : "ನೀನು ಬಹಳ ವಿದ್ಯಾವಂತ ಮತ್ತು ಬುದ್ಧಿವಂತ, ಅದೂ ಅಲ್ಲದೆ ಬಹಳ ದೂರಾಲೋಚನೆ ಮಾಡುವವನೂ ಆಗಿರುವಿ. ಕೇಶವ ಚಂದ್ರಸೇನ ಮತ್ತು ನೀನು ಇಬ್ಬರೂ ಗೌರಾಂಗ ಮತ್ತು ನಿತಾಯಿಯಂತೆ ಸಹೋದರರಾಗಿದ್ದೀರಿ. ನೀವಿಬ್ಬರೂ ಬೇಕಾ

ದಷ್ಟು ಪ್ರಪಂಚವನ್ನು ಅನುಭವಿಸಿದ್ದೀರಿ. ಅಂದರೆ ಉಪನ್ಯಾಸ, ವಾದ, ಮನಸ್ತಾಪ ಮುಂತಾದುವುಗಳನ್ನೆಲ್ಲಾ ಅನುಭವಿಸಿರುವಿರಿ. ನೀವು ಅವುಗಳನ್ನು ಇನ್ನೂ ಆಶಿಸುವಿರೇನು? ಚದುರಿಹೋದ ನಿಮ್ಮ ಮನಸ್ಸನ್ನು ಏಕಾಗ್ರಗೊಳಿಸಿ ದೇವರನ್ನು ಕುರಿತು ಆಲೋಚಿಸುವುದಕ್ಕೆ ಕಾಲ ಆಗಲೆ ಯೋಗ್ಯವಾಗಿದೆ. ಭಗವತ್‌ಸಾಗರದಲ್ಲಿ ಮುಳುಗಿ."

ಮಂಜುದಾರ್ :—ಹೌದು ಮಹಾಸ್ವಾಮಿ, ನಾನೇನೊ ಹಾಗೆ ಮಾಡಬೇಕು. ಅದರಲ್ಲಿ ಸಂಶಯವೇನೂ ಇಲ್ಲ. ಆದರೆ ನಾನು ಇವುಗಳನ್ನೆಲ್ಲ ಮಾಡುವುದು ಕೇಶವಚಂದ್ರಸೇನನ ಕೀರ್ತಿ ಮತ್ತು ಹೆಸರನ್ನು ಉಳಿಸುವುದಕ್ಕೆ ಮಾತ್ರ,

ಶ್ರೀರಾಮಕೃಷ್ಣರು (ನಗುತ್ತ) :—ನಾನು ನಿನಗೊಂದು ಕಥೆಯನ್ನು ಹೇಳುತ್ತೇನೆ ಒಬ್ಬನು ಬೆಟ್ಟದ ತುದಿಯಮೇಲೆ ಒಂದು ಗುಡಿಸಿಲನ್ನು ಕಟ್ಟಿದನು. ಅವನಿಗೆ ಇದರಿಂದ ತುಂಬಾ ಶ್ರಮವೂ ಬೇಕಾದಷ್ಟು ದುಡ್ಡೂ ಖರ್ಚಾಯಿತು. ಕೆಲವು ದಿನಗಳಾದಮೇಲೆ ಒಂದು ದೊಡ್ಡ ಬಿರುಗಾಳಿ ಬಂದಿತು. ಆಗ ಗುಡಿಸಲು ಅಲ್ಲಾಡುವುದಕ್ಕೆ ಪ್ರಾರಂಭಿಸಿತು. ಮನುಷ್ಯ ಅದನ್ನು ಉಳಿಸಿಕೊಳ್ಳುವುದರಲ್ಲಿ ಆತುರನಾಗಿ ವಾಯುದೇವರಿಗೆ "ದೇವರೆ, ನಾನು ನಿನ್ನನ್ನು ಬೇಡಿಕೊಳ್ಳುತ್ತೇನೆ. ದಯವಿಟ್ಟು ಗುಡಿಸಲನ್ನು ಹಾಳುಮಾಡಬೇಡ" ಎಂದು ಬೇಡಿಕೊಂಡನು. ಆದರೆ ವಾಯುದೇವರು ಇದನ್ನು ಕೇಳಲಿಲ್ಲ. ಅವನು ಪುನಃ ಪ್ರಾರ್ಥಿಸಿದನು. ಆದರೆ ಗುಡಿಸಲು ಅಲ್ಲಾಡಲು ಮೊದಲಾಯಿತು. ಅವನು ನಂತರ ಇದನ್ನು ಉಳಿಸುವುದಕ್ಕೆ ಮತ್ತೊಂದು ಉಪಾಯವನ್ನು ಹುಡುಕಿದನು. ಪುರಾಣದ ಪ್ರಕಾರ ಹನುಮಂತನು ವಾಯುದೇವರ ಮಗನೆಂಬುದನ್ನು ಜ್ಞಾಪಿಸಿಕೊಂಡನು. ಅವನು "ವಾಯುದೇವರೆ, ನಾನು ನಿನ್ನನ್ನು ಪ್ರಾರ್ಥಿಸಿಕೊಳ್ಳುತ್ತೇನೆ, ದಯವಿಟ್ಟು ಈ ಗುಡಿಸಿಲನ್ನು ಉಳಿಸು. ಇದು. ನಿನ್ನ ಮಗನಾದ ಹನುಮಂತನಿಗೆ ಸೇರಿದುದು" ಎಂದು ಕಿರುಚಿಕೊಂಡನು. ಆದರೆ ವಾಯುದೇವರು ಇದನ್ನೂ ಕೇಳಲಿಲ್ಲ. ಅವನು ಪುನಃ "ವಾಯುದೇವರೆ, ನಾನು ನಿನ್ನನ್ನು ಪ್ರಾರ್ಥಿಸಿಕೊಳ್ಳುತ್ತೇನೆ. ದಯವಿಟ್ಟು ಈ ಗುಡಿಸಿಲನ್ನು ಉಳಿಸು, ಇದು ನಿನ್ನ ಮಗ ಹನುಮಂತನ ದೇವರಾದ ರಾಮಚಂದ್ರನಿಗೆ ಸೇರಿದುದು" ಎಂದನು. ಆದರೂ ವಾಯುದೇವರು ಕೇಳಲಿಲ್ಲ. ನಂತರ ಇನ್ನೇನು ಗುಡಿಸಲು ಬೀಳುವಂತೆ ಆದಾಗ

ಮನುಷ್ಯ ತನ್ನ ಪ್ರಾಣವನ್ನು ಉಳಿಸಿಕೊಳ್ಳುವುದಕ್ಕಾಗಿ ಹೊರಗೆ ಓಡಿ ಬಂದು "ಈ ಅನಿಷ್ಟ ಗುಡಿಸಲು ಹಾಳಾಗಿಹೋದರೆ ಹೋಗಲಿ ಇದರಿಂದ ನನಗೇನಂತೆ" ಎಂದುಕೊಂಡನು.

ಈಗ ನೀನೇನೋ ಕೇಶವಚಂದ್ರಸೇನನ ಹೆಸರನ್ನು ಉಳಿಸಬೇಕೆಂದು ಕಾತರನಾಗಿರಬಹುದು. ಆದರೆ ದೇವರ ಇಚ್ಛೆಯಿಂದ ಅವನ ಹೆಸರಿನಿಂದ ಸ್ಥಾಪಿತವಾದ ಧಾರ್ಮಿಕ ಸಂಸ್ಥೆ ಮೊದಲಾಯಿತು. ಮತ್ತು ಈ ಸಂಸ್ಥೆ ಕೊನೆಗೊಂಡಿದ್ದರೆ ಇದೂ ಕೂಡ ಅವನ ಇಚ್ಛೆಯಂತೆ ಎಂದು ತಿಳಿದು ಸಮಾಧಾನಹೊಂದು. ಅಮೃತಸಾಗರದಲ್ಲಿ ಆಳ ಆಳಕ್ಕೆ ಮುಳುಗು.

೧೦೮೫. ಮನುಷ್ಯನೊಬ್ಬನು ಸಾಧು ಹತ್ತಿರ ಹೋಗಿ ಬಹಳ ಕಪಟ ವಿನಯದಿಂದ "ಸ್ವಾಮಿ, ನಾನೊಬ್ಬ ಬಹಳ ಕೀಳು ಪ್ರಾಣಿ. ನಾನು ಉದ್ಧಾರವಾಗುವುದು ಹೇಗೆ, ದಯವಿಟ್ಟು ಹೇಳಿ" ಎಂದು ಕೇಳಿಕೊಂಡನು. ಸಾಧು ಇವನ ಮನಸ್ಸಿನಲ್ಲಿರುವುದನ್ನು ಅರಿತು "ಹೋಗು, ನಿನಗಿಂತ ಕೀಳಾದ ವಸ್ತುವನ್ನು ತೆಗೆದುಕೊಂಡು ಬಾ" ಎಂದು ಹೇಳಿ ಕಳುಹಿಸಿದನು. ಮನುಷ್ಯನು ಮನೆಗೆ ಹೋಗಿ ಸುತ್ತಲೂ ನೋಡಿದನು. ತನಗಿಂತ ಕೀಳಾದುದು ಯಾವುದೂ ಸಿಕ್ಕಲಿಲ್ಲ. ಕೊನೆಗೆ ಅವನು ತನ್ನ ಅಮೇಧ್ಯವನ್ನು ನೋಡಿ "ಆಗಲಿ ನನಗಿಂತ ಕೀಳಾದ ವಸ್ತುವೊಂದು ಇಲ್ಲಿದೆ" ಎಂದು ಅದನ್ನು ಸಾಧುವಿಗೆ ತೆಗೆದುಕೊಂಡು ಹೋಗುವುದಕ್ಕಾಗಿ ತನ್ನ ಕೈಯನ್ನು ಒಡ್ಡಿದನು. ಆಗ ಅದರ ಒಳಗಿಂದ ಒಂದು ಧ್ವನಿ ಹೀಗೆ ಕೇಳಿತು. "ಎಲೆ ಪಾಪಿ! ನನ್ನನ್ನು ಮುಟ್ಟಬೇಡ. ನಾನು ಮೊದಲು ದೇವರಿಗೆ ಅರ್ಪಿಸುವುದಕ್ಕೆ ಯೋಗ್ಯವಾದಂತಹ ಮತ್ತು ಎಲ್ಲರಿಗೂ ನೋಡುವುದಕ್ಕೆ ಬಹಳ ಸುಂದರವಾದ ದೋಸೆಯಾಗಿದ್ದೆ. ಆದರೆ ನನ್ನ ದುರದೃಷ್ಟವಶದಿಂದ ನಿನ್ನ ಹತ್ತಿರ ಬರಬೇಕಾಯಿತು. ನಿನ್ನ ಕೆಟ್ಟ ಸಂಗದಿಂದ ನನ್ನನ್ನು ನೋಡಿದೊಡನೆಯೆ ಎಲ್ಲರೂ ಮೊಗವನ್ನು ತಿರುಗಿಸಿಕೊಂಡು, ಮೂಗನ್ನು ಮುಚ್ಚಿಕೊಂಡು ಹೋಗುವಂತಹ ಸ್ಥಿತಿಗೆ ಬಂದೆನು. ಎಲ್ಲೋ ಒಂದು ಸಲ ನಾನು ನಿನ್ನ ಹತ್ತಿರ ಬಂದೆ. ಆದರಿಂದ ನನಗೆ ಇಂತಹ ಸ್ಥಿತಿಯಾಯಿತು. ನೀನು ಪುನಃ ನನ್ನನ್ನು ಮುಟ್ಟಿದರೆ ನಾನು ಇನ್ನೆಷ್ಟು ಪಾಪದ ಪಾತಾಳಕ್ಕೆ ಇಳಿಯಬೇಕಾಗುವುದೊ!" ಎಂದಿತು. ಮನುಷ್ಯನು ಹೀಗೆ ವಿನಯವನ್ನು

ಕಲಿತುಕೊಂಡು ವಿನಯಿಗಳಲ್ಲಿ ಅತಿ ವಿನಯಿಯಾದನು. ಇದರ ಪರಿಣಾಮವಾಗಿ ಪರಿಪೂರ್ಣಾವಸ್ಥೆಯನ್ನು ಪಡೆದನು.

೧೦೮೬. ಒಂದಾನೊಂದು ಸಮಯದಲ್ಲಿ ನಾರದನ ಮನಸ್ಸಿನಲ್ಲಿ ಅಹಂಕಾರವೆದ್ದಿತು. ತನಗಿಂತ ದೊಡ್ಡ ಭಕ್ತನು ಯಾರೂ ಇಲ್ಲ ಎಂದು ತಿಳಿದುಕೊಂಡನು. ಇದನ್ನು ತಿಳಿದು ಭಗವಂತನು ಅವನಿಗೆ "ನಾರದ, ಆ ಹಳ್ಳಿಗೆ ಹೋಗು. ಅಲ್ಲಿ ನನ್ನ ಪರಮಭಕ್ತ ವಾಸಿಸುತ್ತಿರುವನು. ಅವನ ಪರಿಚಯವನ್ನು ಮಾಡಿಕೊ. ಅವನು ನಿಜವಾಗಿಯೂ ನನ್ನ ಭಕ್ತ" ಎಂದನು ನಾರದನು ಅಲ್ಲಿಗೆ ಹೋಗಿ ಒಬ್ಬ ರೈತನ್ನು ನೋಡಿದನು. ಅವನು ಬೆಳಿಗ್ಗೆ ಹೊತ್ತಿಗೆಮುಂಚೆ ಎದ್ದೊಡನೆಯೆ ಹರಿಯ ಹೆಸರನ್ನು ಒಂದು ಸಲ ಮಾತ್ರ ಹೇಳಿ, ನೇಗಿಲನ್ನು ತೆಗೆದುಕೊಂಡು ದಿನವೆಲ್ಲಾ ಉಳುತ್ತಿದ್ದನು ರಾತ್ರಿ ಹರಿಯ ಹೆಸರನ್ನು ಒಂದುಸಲ ಹೇಳಿ ನಿದ್ದೆಮಾಡುತ್ತಿದ್ದನು ನಾರದನು ತನ್ನಲ್ಲಿಯೆ "ಈ ಹಳ್ಳಿಯವನು ಹೇಗೆ ದೇವರ ದೊಡ್ಡ ಭಕ್ತನಾದನು? ಇವನು ಪ್ರಾಪಂಚಿಕ ಕೆಲಸದಲ್ಲಿ ನಿರತನಾಗಿರುವುದನ್ನು ನಾನು ನೋಡುತ್ತಿರುವೆನು ಭಕ್ತನ ಲಕ್ಷಣವೆ ಇವನಲ್ಲಿ ಇಲ್ಲ" ಎಂದು ಆಲೋಚಿಸತೊಡಗಿದನು. ನಂತರ ನಾರದನು ದೇವರ ಹತ್ತಿರ ಹೋಗಿ ಈ ಭಕ್ತನ ವಿಚಾರವಾಗಿ ತನ್ನ ಅಭಿಪ್ರಾಯವನ್ನು ಹೇಳಿದನು. ಆಗ ಭಗವಂತನು "ನಾರದ ಈ ಎಣ್ಣೆಯ ಬಟ್ಟಲನ್ನು ತೆಗೆದುಕೊಂಡು ಊರ ಸುತ್ತಲೂ ಹೋಗಿ ಬಾ. ಆದರೆ ಜೋಕೆ, ಒಂದು ತೊಟ್ಟು ಎಣ್ಣೆಯೂ ಕೆಳಗೆ ಬೀಳಬಾರದು!" ಎಂದನು. ನಾರದನು ಹೇಳಿದಂತೆ ಮಾಡಿದನು. ಅವನು ಹಿಂತಿರುಗಿ ಬಂದ ಮೇಲೆ ಭಗವಂತ "ನಾರದ, ನೀನು ಊರಿನಲ್ಲಿ ನಡೆಯುತ್ತಿದ್ದಾಗ ಎಷ್ಟು ಸಲ ನನ್ನನ್ನು ಸ್ಮರಿಸಿದೆ?" ಎಂದು ಕೇಳಿದನು. ನಾರದನು "ಒಂದು ಸಲವೂ ಇಲ್ಲ. ಈ ಎಣ್ಣೆ ಎಲ್ಲಿ ಚೆಲ್ಲಿಹೋಗುವುದೊ ಎಂದು ನೋಡಿಕೊಳ್ಳುತ್ತಿದ್ದಾಗ ಹೇಗೆ ಸಾಧ್ಯ?" ಎಂದನು. ಆಗ ಭಗವಂತನು "ಈ ಒಂದು ತೊಟ್ಟು ಎಣ್ಣೆ ನಿನ್ನ ಮನಸ್ಸನ್ನು ಸಂಪೂರ್ಣ ಬೇರೆ ಕಡೆ ತಿರುಗಿಸಿತು. ನಿನಗೆ ಒಂದು ಸಲವೂ ನನ್ನನ್ನು ಸ್ಮರಣೆ ಮಾಡಲು ಆಗಲಿಲ್ಲ. ಆದರೆ ಆ ಹಳ್ಳಿಯ ರೈತನನ್ನು ನೋಡು. ಒಂದು ಸಂಸಾರದ ಜವಾಬ್ದಾರಿಯನ್ನೆಲ್ಲ ಹೊತ್ತುಕೊಂಡಿದ್ದರೂ ನನ್ನನ್ನು ಎರಡು ವೇಳೆ ಜ್ಞಾಪಿಸಿಕೊಳ್ಳುವನು" ಎಂದನು.

೧೦೮೭. ಒಂದಾನೊಂದು ಕಾಲದಲ್ಲಿ ಭಗವಂತನನ್ನು ಸಾಕ್ಷಾ

ತ್ಕಾರ ಮಾಡಿಕೊಳ್ಳಬೇಕೆಂದು ಇಬ್ಬರು ಯೋಗಿಗಳು ಸಾಧನೆ ಮಾಡು ತ್ತಿದ್ದರು. ಒಂದು ದಿನ ನಾರದ ಮಹರ್ಷಿ ಅವರ ಪರ್ಣಶಾಲೆಯ ಸಮೀಪದಲ್ಲಿ ಹೋಗುತ್ತಿದ್ದರು. ಅವರಲ್ಲಿ ಒಬ್ಬನು "ನೀವು ದೇವ ಲೋಕದಿಂದ ಬರುತ್ತಿರುವಿರೇನು?" ಎಂದು ಕೇಳಿದನು. ನಾರದನು "ಹೌದು ನಿಜ" ಎಂದನು. "ದಯವಿಟ್ಟು ಹೇಳಿ, ದೇವರು ದೇವ ಲೋಕದಲ್ಲಿ ಏನು ಮಾಡುತ್ತಿರುವನು?" ಎಂದು ಕೇಳಿದನು. ನಾರದನು "ದೇವರು ಆನೆ ಮತ್ತು ಒಂಟೆಗಳನ್ನು ಸೂಜಿಯ ಕಣ್ಣಿನ ಮೂಲಕ ತೂರಿಸುವ ಆಟದಲ್ಲಿ ನಿರತನಾಗಿದ್ದನು" ಎಂದನು. ಆ ಯೋಗಿ "ಇದರಲ್ಲಿ ಆಶ್ಚರ್ಯವೇನೂ ಇಲ್ಲ. ದೇವರಿಗೆ ಯಾವುದೂ ಅಸಾಧ್ಯ ವಿಲ್ಲ" ಎಂದನು. ಮತ್ತೊಬ್ಬನು "ಓ, ಇದಕ್ಕೆ ಅರ್ಥವಿಲ್ಲ. ಅದು ಎಂದಿಗೂ ಸಾಧ್ಯವಿಲ್ಲ. ನೀನು ದೇವರ ಹತ್ತಿರವೆ ಹೋಗಲಿಲ್ಲ ಎಂಬು ದನ್ನು ಇದು ತೋರಿಸುತ್ತದೆ" ಎಂದನು.

ಮೊದಲನೆಯವನು ಭಕ್ತ. ಅವನ ಮನಸ್ಸು ಮಗುವಿನಂತೆ ಸರಳವಾಗಿತ್ತು. ದೇವರಿಗೆ ಯಾವುದೂ ಅಸಾಧ್ಯವಿಲ್ಲ. ಅವನನ್ನು ಯಾರೂ ಸಂಪೂರ್ಣವಾಗಿ ತಿಳಿಯಲಾರರು, ಏನುಬೇಕಾದರೂ ಅವನು ಮಾಡಬಲ್ಲ ಎನ್ನಬಹುದು.

೧೦೮೮. ಒಂದುಸಲ ಒಬ್ಬ ಮನುಷ್ಯನ ಮಗ ಸಾಯುವ ಸ್ಥಿತಿಯಲ್ಲಿದ್ದನು. ಯಾರೂ ಅವನ ಪ್ರಾಣವನ್ನು ಉಳಿಸುವಂತೆ ಕಾಣ ಲಿಲ್ಲ. ಒಬ್ಬ ಸಾಧು ಅವನ ತಂದೆಯನ್ನು ಕುರಿತು, "ಇನ್ನೊಂದು ಭರವಸೆ ಇದೆ. ನರ ಕಪಾಲದಲ್ಲಿ ಸರ್ಪದ ವಿಷವನ್ನು ಕೆಲವು ತೊಟ್ಟು ಸ್ವಾತೀನಕ್ಷತ್ರದಲ್ಲಿ ಬಿದ್ದ ಮಳೆಯ ನೀರಿನಲ್ಲಿ ಬೆರಸಿಕೊಟ್ಟರೆ ನಿನ್ನ ಮಗನ ಪ್ರಾಣವನ್ನು ಉಳಿಸಬಹುದು" ಎಂದನು. ತಂದೆ ಪಂಚಾಂಗ ವನ್ನು ನೋಡಿದನು. ಸ್ವಾತೀನಕ್ಷತ್ರ ನಾಳೆ ಮೊದಲಾಗುವುದೆಂದು ಗೊತ್ತಾಯಿತು. ಆಗ ಅವನು ದೇವರನ್ನು "ಹೇ ಭಗವಂತ, ಶರತ್ತುಗಳ ನ್ನೆಲ್ಲ ಪೂರ್ಣಗೊಳಿಸಿ ನನ್ನ ಮಗನ ಪ್ರಾಣವನ್ನು ಉಳಿಸು" ಎಂದು ಬೇಡಿಕೊಂಡನು. ಮಾರನೆದಿನ ಸಾಯಂಕಾಲ ಬಹಳ ಉತ್ಸಾಹಿ ಯಾಗಿ ಶ್ರದ್ಧೆಯಿಂದ ನಿರ್ಜನಪ್ರದೇಶದಲ್ಲಿ ಒಂದು ನರಕಪಾಲವನ್ನು ಹುಡುಕಲು ಮೊದಲುಮಾಡಿದನು. ಕೊನೆಗೆ ಒಂದು ಮರದ ಕೆಳಗೆ ನರಕಪಾಲ ಸಿಕ್ಕಿತು. ಅದನ್ನು ಕೈಯಲ್ಲಿ ಹಿಡಿದುಕೊಂಡು ಮಳೆಗಾಗಿ ಪ್ರಾರ್ಥಿಸುತ್ತ ನಿಂತನು. ತಕ್ಷಣವೆ ಮಳೆ ಬಂತು. ಬಟ್ಟಲಂತಿದ್ದ

ಕಪಾಲದಲ್ಲಿ ಕೆಲವು ಹನಿಗಳು ನಿಂತವು. ಆಗ ಮನುಷ್ಯನು ಸರಿಯಾದ ನಕ್ಷತ್ರದಲ್ಲಿ ಮಳೆನೀರು ಸಿಕ್ಕಿತು ಎಂದುಕೊಂಡನು. ಅನಂತರ ಅವನು “ಹೇ ಭಗವಂತ, ಮಿಕ್ಕಿರುವುದು ಪೂರ್ಣವಾಗುವಂತೆ ಅನುಗ್ರಹಿಸು” ಎಂದು ಬೇಡಿಕೊಂಡನು. ಕೆಲವು ಹೊತ್ತಿನಲ್ಲಿ ಅಲ್ಲೆ ಆ ನದಿತೀರದಲ್ಲಿ ಒಂದು ಕಪ್ಪೆಯನ್ನು ಕಂಡನು. ಅದನ್ನು ಹಿಡಿಯುವುದಕ್ಕೆ ಒಂದು ಹಾವು ನೆಗೆಯುತ್ತಿತ್ತು. ತಕ್ಷಣವೆ ಕಪ್ಪೆ ಕಪಾಲದೊಳಗೆ ನೆಗೆಯಿತು. ಹಾವು ಅದನ್ನೆ ಅನುಸರಿಸಿತು. ವಿಷ ಕಪಾಲಕ್ಕೆ ಬಿತ್ತು. ಕಾತುರನಾದ ತಂದೆ ಬಹಳ ಕೃತಜ್ಞತೆಯಿಂದ “ಹೇ ಭಗವಂತ, ನಿನ್ನ ದಯೆಯಿಂದ ಅಸಾಧ್ಯವಾದುದೂ ಕೂಡ ಸಾಧ್ಯವಾಗುವುದು. ಈಗ ನನ್ನ ಮಗನ ಪ್ರಾಣ ಉಳಿಯುವುದು ಎಂದು ಗೊತ್ತಾಯಿತು” ಎಂದನು. ಅದಕ್ಕೇ ನಾನು ನಿಮಗೆ ಹೇಳುವುದು ನಿಮ್ಮಲ್ಲಿ ನಿಜವಾದ ಶ್ರದ್ಧೆ ಮತ್ತು ಭಕ್ತಿ ಇದ್ದರೆ ಭಗವಂತನ ದಯೆಯಿಂದ ನಿಮಗೆ ಎಲ್ಲವೂ ಲಭಿಸುವುದು.

೧೧೮೯. ಆತ್ಮಸಾಕ್ಷಾತ್ಕಾರಕ್ಕೆ ಸಾಧನೆ ಅತ್ಯಾವಶ್ಯಕ. ಆದರೆ ಸಂಪೂರ್ಣ ಶ್ರದ್ಧೆ ಇದ್ದರೆ ಸ್ವಲ್ಪ ಸಾಧನೆ ಸಾಕು. ವ್ಯಾಸಋಷಿ ಯಮುನಾ ನದಿಯನ್ನು ದಾಟುವುದರಲ್ಲಿದ್ದರು. ಆಗತಾನೆ ಅವರಿದ್ದ ಸ್ಥಳಕ್ಕೆ ಗೋಪಿಯರು ಬಂದರು. ಅವರೂ ಯಮುನಾನದಿಯನ್ನು ದಾಟಬೇಕಾಗಿತ್ತು. ಆದರೆ ದೋಣಿ ಇರಲಿಲ್ಲ. ಅವರು ವ್ಯಾಸರನ್ನು “ಸ್ವಾಮಿ ನಾವು ಈಗ ಏನು ಮಾಡಬೇಕು?” ಎಂದು ಕೇಳಿದರು. ವ್ಯಾಸರು “ನೀವು ಆಲೋಚನೆ ಮಾಡಬೇಡಿ. ನಾನು ನಿಮ್ಮನ್ನು ನದಿಯ ಆಚೆಕಡೆಗೆ ಕರೆದುಕೊಂಡು ಹೋಗುತ್ತೇನೆ. ಆದರೆ ಅದಕ್ಕೆ ಮುಂಚೆ ನನಗೆ ಏನಾದರೂ ತಿನ್ನುವುದಕ್ಕೆ ಕೊಡುತ್ತೀರಾ? ನನಗೆ ಹಸಿವಾಗಿದೆ” ಎಂದರು. ಗೋಪಿಯರ ಹತ್ತಿರ ಆಗ ಸ್ವಲ್ಪ ಹಾಲು, ಕೆನೆ ಮತ್ತು ಹೊಸ ಬೆಣ್ಣೆ ಇತ್ತು. ಅವರು ಅದನ್ನು ವ್ಯಾಸರಿಗೆ ಕೊಟ್ಟರು. ಅವರು ಇದೆಲ್ಲವನ್ನು ತಿಂದರು. ಗೋಪಿಯರು ನಂತರ ವ್ಯಾಸರನ್ನು “ನದಿಯನ್ನು ದಾಟುವ ವಿಚಾರ ಏನಾಯಿತು” ಎಂದು ಕೇಳಿದರು. ವ್ಯಾಸರು ನದಿ ಹತ್ತಿರ ನಿಂತುಕೊಂಡು “ಹೇ ಯಮುನಾ, ಇವತ್ತು ನಾನು ಏನನ್ನೂ ತಿನ್ನದೇ ಇದ್ದರೆ ಆ ಸತ್ಯದ ಪ್ರಭಾವದಿಂದ ನೀನು ನಮಗೆ ನಡೆದು ಆಚೆಕಡೆ ಸೇರುವುದಕ್ಕೆ ದಾರಿಯನ್ನು ಬಿಡು” ಎಂದರು. ಇದನ್ನು ಹೇಳಿದ ತಕ್ಷಣವೆ ನದಿ ದಾರಿಯನ್ನು ಬಿಟ್ಟಿತು.

ಒಣಗಿದ ತಳ ಕಾಣಿಸಿಕೊಂಡಿತು. ಗೋಪಿಯರಿಗೆ ಆಶ್ಚರ್ಯವಾಯಿತು. "ನಾನು ಏನನ್ನೂ ತಿನ್ನದೆ ಇದ್ದರೆ, ಎಂದು ಅವರು ಹೇಗೆ ಹೇಳಿದರು; ಆಗಲೇ ಇಷ್ಟೊಂದು ತಿಂದಿರುವಾಗ" ಎಂದು ಯೋಚಿಸತೊಡಗಿದರು. ವ್ಯಾಸಋಷಿಗಳ ದೃಢ ಭಕ್ತಿಗೆ ಇದೊಂದು ನಿದರ್ಶನವೆಂದು ಅವರಿಗೆ ತಿಳಿಯಲಿಲ್ಲ. ಅವರು ಏನನ್ನೂ ತಿನ್ನಲಿಲ್ಲ. ಅವರ ಹೃದಯದಲ್ಲಿದ್ದ ಭಗವಂತ ನಿಜವಾಗಿ ತಿಂದನು.

೧೦೯೦. ಒಂದು ದೇವಾಲಯದಲ್ಲಿ ಬ್ರಾಹ್ಮಣ ಪೂಜಾರಿ ಇದ್ದನು. ಒಂದು ಸಲ ಅವನು ಏನೊ ಕೆಲಸದ ಮೇಲೆ ಗುಡಿಯ ಪೂಜೆಯನ್ನು ತನ್ನ ಚಿಕ್ಕ ಮಗನಿಗೆ ಮಾಡುವುದಕ್ಕೆ ಹೇಳಿ ಹೋದನು. ಪ್ರತಿದಿನವೂ ನೈವೇದ್ಯವನ್ನು ದೇವರ ಮುಂದೆ ಇಟ್ಟು ಅದನ್ನು ಅವನು ತಿನ್ನುವಂತೆ ನೋಡಿಕೊಳ್ಳಬೇಕೆಂದು ಹೇಳಿದನು. ತಂದೆಯ ಆಜ್ಞೆಯಂತೆ ಮಗ ದೇವರ ಮುಂದೆ ನೈವೇದ್ಯವನ್ನು ಇಟ್ಟು ಸಾವಧಾನವಾಗಿ ಕಾದು ಕುಳಿತನು. ಆದರೆ ವಿಗ್ರಹ ಮಾತನಾಡಲೂ ಇಲ್ಲ, ತಿನ್ನಲೂ ಇಲ್ಲ. ಹುಡುಗನು ಬಹಳ ಹೊತ್ತು ಕಾದನು. ದೇವರು ಅಲ್ಲಿಂದ ಬಂದು ನೈವೇದ್ಯದ ಮುಂದೆ ಕುಳಿತು ಅದನ್ನು ತಿನ್ನುವನು ಎಂದು ಮಗ ದೃಢವಾಗಿ ನಂಬಿದ್ದನು. ಅದಕ್ಕೆ ಅವನು "ಹೇ ದೇವರೆ, ನೀನು ನೈವೇದ್ಯವನ್ನು ಊಟಮಾಡುವಂತೆ ನೋಡಿಕೊ ಎಂದು ನನ್ನ ತಂದೆ ನನಗೆ ಹೇಳಿದ್ದನು. ನೀನು ಯಾತಕ್ಕೆ ಬರುವುದಿಲ್ಲ? ನೀನು ನನ್ನ ತಂದೆ ಇಟ್ಟ ನೈವೇದ್ಯವನ್ನು ಊಟ ಮಾಡುತ್ತೀಯೆ. ನಾನೇನು ಮಾಡಿರುವೆನು, ನಾನಿಟ್ಟ ನೈವೇದ್ಯವನ್ನು ನೀನು ಊಟಮಾಡದೆ ಇರುವುದೇತಕ್ಕೆ?" ಎಂದು ಅಳಲು ಮೊದಲು ಮಾಡಿದನು. ಅವನು ಬಹಳ ಹೊತ್ತು ಅತ್ತನು. ನಂತರ ಪೀಠದ ಹತ್ತಿರ ನೋಡಿದಾಗ ದೇವರು ಮನುಷ್ಯನಂತೆ ಊಟಮಾಡುತ್ತಿದ್ದುದನ್ನು ಕಂಡನು. ಪೂಜೆಯಾದ ಮೇಲೆ ಹುಡುಗನು ಹೊರಗೆ ಬಂದಾಗ ಮನೆಯವರು "ಪೂಜೆಯಾಗಿದ್ದರೆ ನೈವೇದ್ಯವನ್ನು ತೆಗೆದುಕೊಂಡು ಬಾ" ಎಂದರು. ಹುಡುಗನು "ಪೂಜೆಯಾಯಿತು, ಆದರೆ ದೇವರು ನೈವೇದ್ಯವನ್ನೆಲ್ಲಾ ತಿಂದುಬಿಟ್ಟಿರುವನು" ಎಂದನು. ಅವರು ಆಶ್ಚರ್ಯದಿಂದ "ನೀನು ಏನು ಹೇಳುವುದು?" ಎಂದು ಕೇಳಿದರು. ಬಹಳ ಸಾಧುವಾಗಿ ಮಗು "ಏತಕ್ಕೆ, ನಾನು ಕೊಟ್ಟಿದ್ದನ್ನೆಲ್ಲ ದೇವರು ತಿಂದಿರುವನು" ಎಂದನು. ಅವರು ಗರ್ಭಗುಡಿಗೆ ಹೋಗಿ ಬರಿಯ ತಟ್ಟೆಯನ್ನು ನೋಡಿದಾಗ

ವಿಸ್ಮಯದಿಂದ ಮೌನವಾದರು. ನಿಜವಾದ ಶ್ರದ್ಧೆ ಮತ್ತು ಭಕ್ತಿಯ ಮಹಿಮೆ ಇಂತಹುದು.

೧೮೯೧. ಭಗವಂತನಿಗಾಗಿ ತೀವ್ರ ಹಂಬಲಿಸುವುದೇ ಅವನನ್ನು ಸೇರುವುದಕ್ಕೆ ನಿಶ್ಚಯವಾದ ದಾರಿ. ಏನೂ ಅರಿಯದ ಎಳೆ ಹಸುಳೆಯಂತೆ ಇರಬೇಕು ಅವನ ವಿಶ್ವಾಸ. ತಾಯಿಗಾಗಿ ಕಾತರಿಸುವ ಮಗುವಿನಂತೆ ಇರಬೇಕು.

ಜಟಿಲನೆಂಬ ಒಬ್ಬ ಹುಡುಗನಿದ್ದನು. ಕಾಡಿನ ಮೂಲಕ ಅವನೊಬ್ಬನೆ ಶಾಲೆಗೆ ಹೋಗುತ್ತಿದ್ದನು. ಅನೇಕವೇಳೆ ಅವನಿಗೆ ತಾನು ಒಂಟಿ ಎಂದು ಅಂಜಿಕೆಯಾಗುತ್ತಿತ್ತು. ಅವನು ತನ್ನ ತಾಯಿಗೆ ಇದನ್ನು ಹೇಳಿದನು. ಅವಳು "ಮಗು, ಅದಕ್ಕೆ ಯಾತಕ್ಕೆ ನಿನಗೆ ಇಷ್ಟು ಅಂಜಿಕೆ? ನಿನಗೆ ಅಂಜಿಕೆಯಾದಾಗ ಕೃಷ್ಣನನ್ನು ಗಟ್ಟಿಯಾಗಿ ಕೂಗು" ಎಂದಳು. ಮಗನು "ಕೃಷ್ಣ ಯಾರು" ಎಂದು ಕೇಳಿದನು. "ಅವನು ನಿನ್ನ ಅಣ್ಣ" ಎಂದಳು. ಇದಾದಮೇಲೆ ಜಟಿಲ ಕಾಡಿನಲ್ಲಿ ಒಬ್ಬನೇ ಹೋಗುತ್ತಿದ್ದಾಗ ಅಂಜಿಕೆಯಾಗಲು "ಅಣ್ಣಾ, ಕೃಷ್ಣಾ!" ಎಂದು ಜೋರಾಗಿ ಕೂಗಿಕೊಂಡನು. ಯಾರೂ ಬರಲಿಲ್ಲ. ಆದರೂ ಜೋರಾಗಿ "ಲೋ, ಅಣ್ಣ ಕೃಷ್ಣ, ನೀನು ಎಲ್ಲಿರುವೆ? ಬಾ, ಬಂದು ನನ್ನನ್ನು ರಕ್ಷಿಸು, ನನಗೆ ಅಂಜಿಕೆಯಾಗುತ್ತಿದೆ" ಎಂದನು. ಇಷ್ಟೊಂದು ಶ್ರದ್ಧೆಯಿಂದ ಮಗು ಕೂಗಿದಾಗ ಕೃಷ್ಣ ಬರದೆ ಇರುವುದಕ್ಕೆ ಆಗಲಿಲ್ಲ. ಒಬ್ಬ ಸಣ್ಣ ಹುಡುಗನಂತೆ ಅವನಿಗೆ ಕಾಣಿಸಿಕೊಂಡು "ನೋಡು ಇಲ್ಲಿ ನಿನ್ನ ಅಣ್ಣ! ಯಾತಕ್ಕೆ ನಿನಗೆ ಅಂಜಿಕೆ. ಬಾ, ನಾನು ನಿನ್ನನ್ನು ಪಾಠಶಾಲೆಗೆ ಕರೆದುಕೊಂಡು ಹೋಗುತ್ತೇನೆ" ಎಂದನು. ಅವನನ್ನು ಶಾಲೆಗೆ ಕರೆದುಕೊಂಡುಹೋಗಿ ಬಿಟ್ಟಮೇಲೆ "ನೀನು ನನ್ನನ್ನು ಕರೆದಾಗಲೆಲ್ಲ ಬರುತ್ತೇನೆ. ನೀನು ಅಂಜಬೇಡ" ಎಂದನು. ಭಗವಂತನಲ್ಲಿ ನಾವು ಇಡುವ ಭಕ್ತಿಮತ್ತು ಶ್ರದ್ಧೆಯ ಸಾಮರ್ಥ್ಯವಿದು.

೧೮೯೨. ಹಾಲು ಮಾರುವಳೊಬ್ಬಳು ನದಿಯ ಆಚೆಯ ದಡದಲ್ಲಿರುವ ಬ್ರಾಹ್ಮಣ ಪೂಜಾರಿಗೆ ಹಾಲನ್ನು ಕೊಡುತ್ತಿದ್ದಳು. ವೇಳೆಗೆ ಸರಿಯಾಗಿ ದೋಣಿ ಸಿಕ್ಕದೆ ಇದ್ದ ಕಾರಣ ಪೂಜಾರಿಗೆ ಕಾಲಕ್ಕೆ ಸರಿಯಾಗಿ ಹಾಲನ್ನು ಕೊಡುವುದಕ್ಕೆ ಆಗುತ್ತಿರಲಿಲ್ಲ. ಬಹಳ ಹೊತ್ತಾಗಿ ಹಾಲನ್ನು ತಂದುದಕ್ಕೆ ಅವಳನ್ನು ಗದರಿಸಿದಾಗ ಅವಳು "ನಾನೇನು ಮಾಡಲಿ. ಮನೆಯಿಂದ ಬೆಳಗ್ಗೆ ಅಷ್ಟುಹೊತ್ತಿಗೆ ನಾನು ಹೊರಡು

ತ್ತೇನೆ. ಆದರೆ ನದಿಯ ತೀರದಲ್ಲಿ ಪ್ರಯಾಣಿಕರಿಗೆ ಮತ್ತು ದೋಣಿಯವರಿಗಾಗಿ ಕಾಯಬೇಕಾಗಿದೆ'' ಎಂದಳು. ಪೂಜಾರಿ, ''ಎಲೆ ಹೆಂಗಸೆ! ಭಗವಂತನ ನಾಮೋಚ್ಚಾರಣೆ ಮಾಡಿ ಜನರು ಭವಸಾಗರವನ್ನೆ ದಾಟುವರು. ನೀನು ಈ ಸಣ್ಣ ನದಿಯನ್ನು ದಾಟಲಾರೆಯ?'' ಎಂದನು. ಆ ಸರಳ ಮನಸ್ಸಿನ ಹೆಂಗಸಿಗೆ ನದಿಯನ್ನು ದಾಟುವ ಇಂತಹ ಸುಲಭೋಪಾಯ ತಿಳಿದು ತುಂಬ ಸಂತೋಷವಾಯಿತು. ಮಾರನೆ ದಿನದಿಂದ ಹಾಲು ಬೆಳಗ್ಗೆ ಅಷ್ಟುಹೊತ್ತಿಗೆ ಬರುತ್ತಿತ್ತು. ಒಂದು ದಿನ ಪೂಜಾರಿಯು ಹಾಲಿನವಳಿಗೆ ''ಇದೇನು ಈ ನಡುವೆ ನೀನು ಹೊತ್ತಾಗಿ ಬರುವುದಿಲ್ಲವಲ್ಲ?'' ಎಂದು ಕೇಳಿದನು. ಅದಕ್ಕೆ ಅವಳು ''ನೀವು ಹೇಳಿದಂತೆ ನಾನು ಭಗವಂತನ ಹೆಸರನ್ನು ಹೇಳಿ ನದಿಯನ್ನು ದಾಟುತ್ತೇನೆ. ಈಗ ದೋಣಿಯವನ ಆವಶ್ಯಕತೆ ನನಗೆ ಬೇಕಾಗಿಲ್ಲ'' ಎಂದಳು. ಪೂಜಾರಿಗೆ ಇದನ್ನು ನಂಬಲು ಆಗಲಿಲ್ಲ. ''ನೀನು ಹೇಗೆ ದಾಟುತ್ತಿ, ನನಗೆ ತೋರಿಸುತ್ತೀಯ?'' ಎಂದು ಕೇಳಿದನು. ಹಾಲಿನವಳು ಅವನನ್ನು ಜತೆಗೆ ಕರೆದುಕೊಂಡು ಹೋಗಿ ನದಿಯ ಮೇಲೆ ನಡೆಯುತ್ತೊಡಗಿದಳು. ಹಿಂದಿರುಗಿ ನೋಡಿದಾಗ ಪೂಜಾರಿ ಬಹಳ ದುರವಸ್ಥೆಯಲ್ಲಿದ್ದನು. ''ಏನು ಸ್ವಾಮಿ ನೀವು ಬಾಯಿಂದ ದೇವರ ಹೆಸರನ್ನು ಹೇಳುತ್ತ ಇದ್ದೀರಿ. ಆದರೆ ಕೈಯಿಂದ ಪಂಚೆ ಒದ್ದೆಯಾಗದಿರಲಿ ಎಂದು ಸರಿಮಾಡಿಕೊಳ್ಳುತ್ತಿರುವಿರಿ? ನೀವು ಸಂಪೂರ್ಣ ದೇವರನ್ನು ನಂಬುವುದಿಲ್ಲ'' ಎಂದಳು. ಭಗವಂತನಲ್ಲಿ ಸಂಪೂರ್ಣ ಶರಣಾಗತಿ ಮತ್ತು ಗಾಢಶ್ರದ್ಧೆಯೆ ಎಲ್ಲಾ ಅದ್ಭುತ ಕಾರ್ಯಗಳ ಹಿಂದೆ ಇರುವುದು.

೧೧೯೩. ಒಂದು ಸಲ ಪರಮಹಂಸರ ಇಬ್ಬರು ಶಿಷ್ಯರು ಮಾನವನ ಸ್ವಾತಂತ್ರ್ಯ ಮತ್ತು ದೇವರ ದಯೆ ಇವುಗಳನ್ನು ರಾಜಿ ಮಾಡುವುದಕ್ಕೆ ಕಷ್ಟವಾಗಿ ಒಂದು ಇತ್ಯರ್ಥಕ್ಕೆ ಬರುವುದಕ್ಕಾಗಿ ಪರಮಹಂಸರ ಹತ್ತಿರ ಹೋದರು. ಪರಮಹಂಸರು ''ಸ್ವಾತಂತ್ರ್ಯದ ವಿಚಾರವನ್ನೇಕೆ ಎತ್ತುವಿರಿ? ಎಲ್ಲವೂ ಈಶ್ವರೇಚ್ಛೆಯ ಮೇಲೆ ಇರುವುದು. ಹಸುವನ್ನು ಗೂಟಕ್ಕೆ ಕಟ್ಟಿಹಾಕಿರುವಂತೆ ನಮ್ಮ ಇಚ್ಛೆ ಈಶ್ವರನ ಇಚ್ಛೆಗೆ ಗಂಟುಬಿದ್ದಿರುವುದು. ನಮಗೇನೋ ಸ್ವಲ್ಪ ಸ್ವಾತಂತ್ರ್ಯವಿದೆ ನಿಜ. ಕಟ್ಟಿಹಾಕಿದ ಹಸುವಿಗೆ ಇರುವ ಸ್ವಾತಂತ್ರ್ಯದಷ್ಟು ಅದು. ಮನುಷ್ಯ ತಾನು ಸ್ವತಂತ್ರನೆಂದು ಭಾವಿಸುತ್ತಾನೆ.

ಆದರೆ ಅವನ ಇಚ್ಛೆ ಭಗವಂತನ ಇಚ್ಛೆಯ ಮೇಲೆ ಇರುವುದು ಎಂಬುದನ್ನು ಅರಿ" ಎಂದರು.

ಶಿಷ್ಯ:—ಹಾಗಾದರೆ ತಪಸ್ಸು, ಧ್ಯಾನ ಮುಂತಾದ ಸಾಧನೆಗಳನ್ನು ಮಾಡುವ ಆವಶ್ಯಕತೆ ಇಲ್ಲವೆ? ಒಬ್ಬನು ಸುಮ್ಮನೆ ಕುಳಿತುಕೊಂಡು ಇದೆಲ್ಲ ದೇವರ ಇಚ್ಛೆ. ಏನು ಮಾಡಿದರೂ ಇದೆಲ್ಲ ಅವನ ಇಚ್ಛೆ ಎಂದು ಸುಮ್ಮನೆ ಕುಳಿತುಕೊಳ್ಳಬಹುದಲ್ಲ?

ಶ್ರೀರಾಮಕೃಷ್ಣರು:—ಓ, ಸುಮ್ಮನೆ ಬಾಯಿನಲ್ಲಿ ಹೇಳಿದರೆ ಬಂತೇನು? ಬಾಯಿನಲ್ಲಿ ಮುಳ್ಳಿಲ್ಲವೆಂದು ನೀನು ಎಷ್ಟು ಹೇಳಿದರೂ ಕೈಯನ್ನು ಅದರ ಮೇಲೆ ಇಟ್ಟಾಗ ವ್ಯಥೆಯಿಂದ ಪಾರಾಗುವುದಿಲ್ಲ. ಮನುಷ್ಯ ತಾನು ಇಚ್ಛಿಸಿದಂತೆ ಸಾಧನೆಯನ್ನು ಮಾಡುವುದಕ್ಕೆ ಸಾಧ್ಯವಾಗಿದ್ದರೆ ಎಲ್ಲರೂ ಹಾಗೆ ಮಾಡುತ್ತಿದ್ದರು. ಆದರೆ ಎಲ್ಲರಿಗೂ ಹಾಗೆ ಮಾಡಲು ಸಾಧ್ಯವಿಲ್ಲ. ಇದು ಏತಕ್ಕೆ? ಆದರೆ ಒಂದು ವಿಷಯ ಇದೆ. ನಿನಗೆ ಕೊಟ್ಟಿರುವ ಶಕ್ತಿಯನ್ನು ಸರಿಯಾಗಿ ಉಪಯೋಗಿಸಿಕೊಳ್ಳದೆ ಇದ್ದರೆ ಅವನು ಜಾಸ್ತಿ ಶಕ್ತಿಯನ್ನು ಕೊಡುವುದಿಲ್ಲ. ಆದಕಾರಣವೆ ಸ್ವಪ್ರಯತ್ನ ಆವಶ್ಯಕ. ಭಗವಂತನ ಅನುಗ್ರಹವನ್ನು ಪಡೆಯುವುದಕ್ಕೆ ಎಲ್ಲರೂ ಶ್ರಮಪಡಬೇಕು. ಅಂತಹ ಶ್ರಮದಿಂದ ಮತ್ತು ಅವನ ದಯೆಯಿಂದ ಹಲವು ಜನ್ಮಗಳ ಕರ್ಮವನ್ನು ಒಂದು ಜನ್ಮದಲ್ಲಿ ಪೂರೈಸಬಹುದು. ಆದರೆ ಸ್ವಲ್ಪ ಸ್ವಪ್ರಯತ್ನ ಅತ್ಯಂತ ಆವಶ್ಯಕ, ಒಂದು ಕಥೆಯನ್ನು ಕೇಳಿ.

ಒಂದು ಸಲ ಗೋಲೋಕದ ಒಡೆಯನಾದ ವಿಷ್ಣು ನಾರದನನ್ನು ನರಕಕ್ಕೆ ತಳ್ಳುವೆನೆಂದು ಶಪಿಸಿದನು. ಇದರಿಂದ ನಾರದನಿಗೆ ತುಂಬಾ ವ್ಯಾಕುಲವಾಯಿತು. ಅವನು ವಿಷ್ಣುವಿಗೆ ಭಕ್ತಿಯ ಕೀರ್ತನೆಗಳನ್ನು ಹಾಡಿ, ನರಕವೆಲ್ಲಿದೆ? ಅಲ್ಲಿಗೆ ಹೋಗುವುದು ಹೇಗೆ? ಎಂದು ಪ್ರಾರ್ಥಿಸಿದನು. ಆಗ ವಿಷ್ಣು ಒಂದು ಸೀಮೆಸುಣ್ಣದಿಂದ ನೆಲದ ಮೇಲೆ ವಿಶ್ವದ ಚಿತ್ರವನ್ನು ಬರೆದು ಸರಿಯಾಗಿ ನರಕ ಸ್ವರ್ಗಗಳೆಲ್ಲಿದೆ ಎನ್ನುವುದನ್ನು ತೋರಿಸಿದನು. ಆಗ ನಾರದನು ನರಕವೆಂದು ಬರೆದುದನ್ನು ತೋರುತ್ತ "ಅದು ಹೀಗೆಯೇ? ಇದೇ ಹಾಗಾದರೆ ನರಕ!" ಎಂದು ಹೇಳುತ್ತ ಅದರ ಮೇಲೆ ಹೊರಳಾಡಿ ತಾನು ನರಕಯಾತನೆಯನ್ನೆಲ್ಲ ಅನುಭವಿಸಿದೆನು ಎಂದು ಹೇಳಿದನು. ವಿಷ್ಣು ಅದು ಹೇಗೆ ಎಂದು ಕೇಳಿದನು. ನಾರದನು "ಸ್ವರ್ಗ ನರಕಗಳೆಲ್ಲ ನಿನ್ನ ಸೃಷ್ಟಿ ತಾನೆ. ನೀನೆ ಪ್ರಪಂಚದ

ನಕ್ಷೆಯನ್ನು ಬರೆದು ಅದು ನರಕವೆಂದು ತೋರಿದ ಮೇಲೆ ಆ ಸ್ಥಳ ನಿಜವಾಗಿ ನರಕವಾಯಿತು, ಅದಕ್ಕೆ ನಾನು ಅಲ್ಲಿ ಹೊರಳಾಡಿದೆನು. ನನ್ನ ಯಾತನೆ ಅತಿ ತೀವ್ರವಾಗಿತ್ತು. ಆದಕಾರಣವೆ ನಾನು ನರಕ ಯಾತನೆಯನ್ನು ಪೂರೈಸಿರುವೆನು ಎಂದು ಹೇಳುತ್ತೇನೆ'' ಎಂದನು. ನಾರದನು ಇದೆಲ್ಲವನ್ನೂ ಹೃತ್ಪೂರ್ವಕ ಹೇಳಿದನು. ಈ ವಿವರಣೆ ವಿಷ್ಣುವಿಗೆ ಸಮರ್ಪಕವಾಯಿತು.

೧೦೯೪. ಶ್ರೀ ಕೃಷ್ಣನ ಪರಮ ಮಿತ್ರನಾದ ಅರ್ಜುನನಿಗೆ ಒಂದುಸಲ ಅಹಂಕಾರ ಬಂದಿತು. ಅರ್ಜುನನು ತನ್ನ ಸ್ನೇಹಿತ ಮತ್ತು ಭಗವಂತನಾದ ಕೃಷ್ಣನನ್ನು ತನ್ನಷ್ಟು ಯಾರೂ ಪ್ರೀತಿಸುವುದಿಲ್ಲವೆಂದು ತಿಳಿದನು. ಸರ್ವಜ್ಞನಾದ ಕೃಷ್ಣಪರಮಾತ್ಮನು ಇದನ್ನು ತಿಳಿದು ಅವನನ್ನು ಒಂದುದಿನ ಸಂಚಾರಕ್ಕೆ ಕರೆದುಕೊಂಡು ಹೋದನು. ಅವರು ಇನ್ನೂ ತುಂಬಾ ದೂರ ಹೋಗಿರಲಿಲ್ಲ. ಒಬ್ಬ ವಿಚಿತ್ರನಾದ ಬ್ರಾಹ್ಮಣನು ಒಣಗಿದ ಹುಲ್ಲನ್ನು ತಿನ್ನುತ್ತ ಸೊಂಟಕ್ಕೆ ಒಂದು ಕತ್ತಿಯನ್ನು ನೇತು ಹಾಕಿಕೊಂಡಿರುವುದನ್ನು ಅರ್ಜುನನು ನೋಡಿದನು. ಅಹಿಂಸೆಯೆ ಪರಮ ಧರ್ಮವೆಂದು ಭಾವಿಸಿರುವ ವಿಷ್ಣುವಿನ ಭಕ್ತನು ಇವನು ಎಂದು ಅರ್ಜುನನಿಗೆ ಗೊತ್ತಾಯಿತು. ಹುಲ್ಲಿಗೂ ಜೀವವಿರುವುದರಿಂದ ಅವನು ಹಸಿಯ ಹುಲ್ಲನ್ನು ತಿನ್ನುತ್ತಿರಲಿಲ್ಲ. ಅದೆಲ್ಲ ಒಣಗಿ ನಿರ್ಜೀವವಾದ ಮೇಲೆ ಅದನ್ನು ತಿಂದು ತನ್ನ ಜೀವನವನ್ನು ನೂಕುತ್ತಿದ್ದನು. ಆದರೂ ಅವನು ಒಂದು ಕತ್ತಿಯನ್ನು ಇಟ್ಟುಕೊಂಡಿದ್ದನು. ಇಂತಹ ಅಸಂಬದ್ಧತೆಯನ್ನು ನೋಡಿ ಅರ್ಜುನ ಶ್ರೀಕೃಷ್ಣನನ್ನು ಕುರಿತು ''ಇದೇನು ವಿಚಿತ್ರ? ಒಂದು ಹಸೀ ಹುಲ್ಲಿನವರೆವಿಗೂ ಯಾರಿಗೂ ಹಿಂಸೆಯನ್ನು ಕೊಡಬಾರದು ಎಂಬ ವ್ರತಧಾರಿಯಾಗಿರುವನು. ಆದರೂ ಅವನು ದ್ವೇಷ ಮತ್ತು ಸಾವಿನ ಚಿಹ್ನೆಯಾದ ಕತ್ತಿಯನ್ನು ಇಟ್ಟುಕೊಂಡಿರುವನಲ್ಲ!'' ಎಂದನು. ಶ್ರೀಕೃಷ್ಣ ಅರ್ಜುನನಿಗೆ "ನೀನೆ ಅವನನ್ನು ಕೇಳು" ಎಂದನು. ಅರ್ಜುನ ಬ್ರಾಹ್ಮಣನ ಹತ್ತಿರ ಹೋಗಿ ''ಮಹಾಸ್ವಾಮಿ ನೀವು ಯಾವುದನ್ನೂ ಹಿಂಸಿಸುವುದಿಲ್ಲ. ಒಣಗಿದ ಹುಲ್ಲನ್ನು ತಿಂದು ಜೀವಿಸುತ್ತೀರಿ. ಆದರೂ ಈ ಮೊನಚಾದ ಕತ್ತಿಯನ್ನು ಏತಕ್ಕೆ ಹೊತ್ತುಕೊಂಡು ತಿರುಗುತ್ತೀರಿ?''

ಬ್ರಾಹ್ಮಣ:—ನಾನೇನಾದರೂ ಕಂಡರೆ ಆ ನಾಲ್ಕು ಜನರನ್ನು ಶಿಕ್ಷಿಸುವುದಕ್ಕೆ.

ಅರ್ಜುನ :—ಅವರು ಯಾರು ?

ಬ್ರಾಹ್ಮಣ :—ಮೊದಲನೆಯವನು ಆ ನೀಚ ನಾರದ.

ಅರ್ಜುನ :—ಯಾತಕೆ. ಅವನೇನು ಮಾಡಿರುವನು ?

ಬ್ರಾಹ್ಮಣ :—ನೋಡು ಅವನ ದಿಟ್ಟತನವನ್ನು. ಯಾವಾಗಲೂ ಅವನು ತನ್ನ ಕೀರ್ತನೆ ಮತ್ತು ಭಜನೆಗಳಿಂದ ನನ್ನ ದೇವರನ್ನು ಎಚ್ಚರವಾಗಿಟ್ಟಿರುವನು. ದೇವರ ಸುಖದ ಮೇಲೆ ಅವನಿಗೆ ಸ್ವಲ್ಪವೂ ಗಮನವಿಲ್ಲ. ಹಗಲೂ ರಾತ್ರಿ ಸಕಾಲದಲ್ಲಿ ಮತ್ತು ಅಕಾಲದಲ್ಲಿ ಅವನು ತನ್ನ ಪ್ರಾರ್ಥನೆ ಮತ್ತು ಹೊಗಳಿಕೆ ಗಳಿಂದ ದೇವರ ಶಾಂತಿಗೆ ಭಂಗತರುವನು.

ಅರ್ಜುನ :—ಎರಡನೆಯವರು ಯಾರು ?

ಬ್ರಾಹ್ಮಣ :—ಆ ತಿಳಿಗೇಡಿ ದ್ರೌಪದಿ.

ಅರ್ಜುನ :—ಅವಳ ತಪ್ಪೇನು ?

ಬ್ರಾಹ್ಮಣ :—ನೋಡು ಅವಳ ಅವಿವೇಕದ ಧೂರ್ತತನವನ್ನು. ಅವನು ಊಟ ಮಾಡುವುದಕ್ಕೆ ಹೋಗುವ ಸಮಯಕ್ಕೆ ಸರಿಯಾಗಿ ಅವಳು ಅವಿವೇಕದಿಂದ ಅವನನ್ನು ಕರೆದಳು. ಅವನು ತನ್ನ ಊಟವನ್ನು ಬಿಟ್ಟು ಪಾಂಡವರನ್ನು ದೂರ್ವಾಸರ ಶಾಪದಿಂದ ಪಾರುಮಾಡುವುದಕ್ಕೆ ಕಾಮ್ಯಕವನಕ್ಕೆ ಹೋಗಬೇಕಾಯಿತು. ಅವಳ ಅವಿವೇಕಕ್ಕೆ ಮೇರೆಯೆ ಇಲ್ಲ. ಅವಳು ತನ್ನ ಎಂಜಲನ್ನು ನನ್ನ ದೇವರು ತಿನ್ನುವಂತೆ ಮಾಡಿದಳು.

ಅರ್ಜುನ :—ಮೂರನೆಯವನಾರು ?

ಬ್ರಾಹ್ಮಣ :—ಆ ನಿಷ್ಕರುಣಿ ಪ್ರಹ್ಲಾದ. ಅವನು ಅಷ್ಟೊಂದು ನಿರ್ದಯನಾಗಿದ್ದನು ! ನನ್ನ ಭಗವಂತನನ್ನು ಬಾಂಡಲೆಯಲ್ಲಿ ಕಾಯುತ್ತಿದ್ದ ಎಣ್ಣೆಯೊಳಕ್ಕೆ ಹೋಗು ಎನ್ನುವುದಕ್ಕೆ, ಆನೆಯಿಂದ ತುಳಿಸಿಕೊ ಎನ್ನುವುದಕ್ಕೆ, ವಜ್ರದಂತಿರುವ ಗಟ್ಟಿಯಾದ ಕಂಬದಿಂದ ಸೀಳಿ ಬರಬೇಕೆಂದು ಕೇಳಿಕೊಳ್ಳು ವುದಕ್ಕೆ, ಒಂದು ಕ್ಷಣವೂ ಆಲೋಚಿಸಲಿಲ್ಲ.

ಅರ್ಜುನ :—ನಾಲ್ಕನೆಯವನಾರು ?

ಬ್ರಾಹ್ಮಣ :—ಆ ದುರುಳ ಅರ್ಜುನ.

ಅರ್ಜುನ :—ಏತಕ್ಕೆ, ಅವನೇನು ತಪ್ಪು ಮಾಡಿರುವನು ?

ಬ್ರಾಹ್ಮಣ :—ಅವನ ಮಹಾಪಾತಕವನ್ನು ನೋಡು. ಕುರುಕ್ಷೇತ್ರದ ಮಹಾಯುದ್ಧದಲ್ಲಿ ನನ್ನ ಪರಮ ಇಷ್ಟದೇವರಾದ ಶ್ರೀಕೃಷ್ಣನಿಗೆ ಅತಿ ಅವಮಾನಕರವಾದಂತಹ ತನ್ನ ರಥವನ್ನು ನಡೆಸುವ ಸಾರಥಿಯ ಕೆಲಸವನ್ನು ಕೊಟ್ಟನು.

ಆ ಬ್ರಾಹ್ಮಣನ ಭಕ್ತಿ ಮತ್ತು ಪ್ರೇಮದ ಆಳವನ್ನು ನೋಡಿ ಅರ್ಜುನನಿಗೆ ಅತ್ಯಾಶ್ಚರ್ಯವಾಯಿತು. ಅಂದಿನಿಂದ ಅವನ ಅಹಂಕಾರ ಮಾಯವಾಯಿತು. ತಾನೆ ದೇವರ ಪರಮ ಭಕ್ತನೆಂದು ತಿಳಿದುಕೊಳ್ಳುವುದನ್ನು ಬಿಟ್ಟುಬಿಟ್ಟನು.

೧೧೯೫. ಒಂದು ಹಳ್ಳಿಯಲ್ಲಿ ಒಳ್ಳೆಯ ಭಕ್ತ ನೆಯ್ಗೆಯವನಿದ್ದನು. ಎಲ್ಲರೂ ಅವನನ್ನು ಪ್ರೀತಿಸುತ್ತಿದ್ದರು ಮತ್ತು ಅವನನ್ನು ನಂಬುತ್ತಿದ್ದರು. ನೆಯ್ಗೆಯವನು ತನ್ನ ಬಟ್ಟೆಯನ್ನು ಮಾರುವುದಕ್ಕೆ ಪೇಟೆಗೆ ಹೋಗುತ್ತಿದ್ದನು. ಯಾರಾದರೂ ಗಿರಾಕಿ ಅವನ ಹತ್ತಿರ ಇದ್ದ ಒಂದು ತುಂಡು ಬಟ್ಟೆಯ ಬೆಲೆಯನ್ನು ಕೇಳಿದಾಗ ಅವನು "ರಾಮನ ಇಚ್ಛೆಯಿಂದ ದಾರಕ್ಕೆ ಬೆಲೆ ಒಂದು ರೂಪಾಯಿ; ರಾಮನ ಇಚ್ಛೆಯಿಂದ ಇದರ ಕೂಲಿ ನಾಲ್ಕಾಣೆ; ರಾಮನ ಇಚ್ಛೆಯಿಂದ ಇದರ ನಫೆ ಎರಡು ಆಣೆ; ರಾಮನ ಇಚ್ಛೆಯಿಂದ ಬಟ್ಟೆಯ ಈಗಿನ ಬೆಲೆ ಒಂದು ರೂಪಾಯಿ ಆರು ಆಣೆ" ಎನ್ನುತ್ತಿದ್ದನು. ಜನರಿಗೆ ಅವನಲ್ಲಿ ಅಷ್ಟೊಂದು ನಂಬಿಕೆ ಇತ್ತು. ಅವನು ಹೇಳಿದಷ್ಟನ್ನು ಕೊಟ್ಟು ಕೊಂಡುಹೋಗುತ್ತಿದ್ದರು. ಅವನು ನಿಜವಾದ ಭಕ್ತ. ರಾತ್ರಿ ಊಟವಾದಮೇಲೆ ಬಹಳ ಹೊತ್ತು ಕುಳಿತುಕೊಂಡು ಧ್ಯಾನ ಜಪ ಮಾಡುತ್ತಿದ್ದನು.

ಒಂದು ದಿನ ರಾತ್ರಿ ಹೊತ್ತಾಗಿತ್ತು. ನೆಯ್ಗೆಯವನು ಇನ್ನೂ ನಿದ್ದೆ ಮಾಡುವುದಕ್ಕೆ ಹೋಗಿರಲಿಲ್ಲ. ಬಾಗಿಲಿನಹತ್ತಿರದ ವರಾಂಡದಲ್ಲಿ ಅವನೊಬ್ಬನೆ ಕುಳಿತುಕೊಂಡು ಗುಡಿಗುಡಿ ಸೇದುತ್ತಿದ್ದನು. ಡಕಾಯಿತರ ಒಂದು ಗುಂಪು ಆ ಮಾರ್ಗದಲ್ಲಿ ಹೋಗುತ್ತಿತ್ತು. ಅವರಿಗೆ ಸಾಮಾನನ್ನು ಹೊರುವವನೊಬ್ಬನು ಬೇಕಾಗಿತ್ತು. ಇವನನ್ನು ನೋಡಿ ತಮ್ಮೊಂದಿಗೆ ಇವನನ್ನು ಬಲಾತ್ಕಾರದಿಂದ ಎಳೆದುಕೊಂಡು ಹೋದರು. ಅವರು ಒಂದು ಮನೆಗೆ ನುಗ್ಗಿ ಕನ್ನಹಾಕಿ ಬೇಕಾದಷ್ಟನ್ನು ಕದ್ದು ಕೆಲವು ಸಾಮಾನನ್ನು ಪಾಪ ಈ ನೆಯ್ಗೆಯವನ ತಲೆಯಮೇಲೆ ಹೇರಿದರು. ಆ ಸಮಯದಲ್ಲಿ ತಳವಾರನು ಬಂದನು. ಡಕಾಯಿತರು ತಕ್ಷಣವೆ ಓಡಿಹೋದರು. ಆದರೆ ಈ ಬಡ ನೆಯ್ಗೆಯವನು ಸಾಮಾನಿನ ಸಹಿತ ಸಿಕ್ಕಿಕೊಂಡನು. ಅವನು

ಅಂದಿನ ರಾತ್ರಿ ಸೆರೆಮನೆಯಲ್ಲಿ ಕಳೆಯಬೇಕಾಯಿತು. ಮಾರನೆದಿನ ಬೆಳಗ್ಗೆ ಅವನನ್ನು ನ್ಯಾಯಾಧಿಪತಿಯ ಮುಂದೆ ಕರೆತಂದರು. ಹಳ್ಳಿಯ ಜನರು ನಡೆದ ಪ್ರಸಂಗವನ್ನು ಕೇಳಿ ನೋಡಲು ಬಂದರು. ಅವರೆಲ್ಲರೂ ಒಟ್ಟಿಗೆ "ನ್ಯಾಯಮೂರ್ತಿಗಳೆ, ಈತನು ಎಂದಿಗೂ ಏನನ್ನೂ ಕದಿಯಲಾರ" ಎಂದರು. ನ್ಯಾಯಾಧಿಪತಿ ನಂತರ ನೆಯ್ಗೆಯವನನ್ನು "ಏನಾಯಿತೊ ಅದನ್ನು ವಿವರವಾಗಿ ಹೇಳು" ಎಂದನು. ನೆಯ್ಗೆಯವನು ಹೀಗೆ ಹೇಳಿದನು: "ಮಹಾಸ್ವಾಮಿ, ರಾಮನ ಇಚ್ಛೆಯಿಂದ ನಾನು ಅಂಗಳದಲ್ಲಿ ಕುಳಿತುಕೊಂಡಿದ್ದೆ. ರಾಮನ ಇಚ್ಛೆಯಿಂದ ಆಗ ಬಹಳ ಕತ್ತಲಾಗಿತ್ತು. ರಾಮನ ಇಚ್ಛೆಯಂತೆ ನಾನು ಆಗ ದೇವರನ್ನು ಧ್ಯಾನಿಸುತ್ತ ಅವನ ಹೆಸರನ್ನು ಜಪಿಸುತ್ತ ಕುಳಿತುಕೊಂಡಿದ್ದೆನು. ರಾಮನ ಇಚ್ಛೆಯಂತೆ ಅವರು ನನ್ನನ್ನು ಎಳೆದುಕೊಂಡು ಹೋದರು. ರಾಮನ ಇಚ್ಛೆಯಂತೆ ಅವರು ಮನೆಗೆ ಕನ್ನ ಹಾಕಿದರು. ರಾಮನ ಇಚ್ಛೆಯಂತೆ ಅವರು ನನ್ನ ತಲೆಯ ಮೇಲೆ ಹೊರೆಯನ್ನು ಹೇರಿದರು. ರಾಮನ ಇಚ್ಛೆಯಂತೆ ನಾನು ಸಿಕ್ಕಿಬಿದ್ದೆ. ರಾಮನ ಇಚ್ಛೆಯಂತೆ ನನ್ನನ್ನು ಸೆರೆಮನೆಯಲ್ಲಿಟ್ಟು ನಿಮ್ಮ ಮುಂದೆ ಇವತ್ತು ಕರೆದುಕೊಂಡು ಬಂದಿರುವರು, ಪ್ರಭು." ನ್ಯಾಯಾಧಿಪತಿ ಇವನ ನಿರಪರಾಧ ಮತ್ತು ಭಕ್ತಿಯನ್ನು ಕಂಡು ಅವನನ್ನು ಬಿಟ್ಟುಬಿಡುವಂತೆ ಅಪ್ಪಣೆಮಾಡಿದರು. ಹೊರಗೆ ಬಂದು ನೆಯ್ಗೆಯವನು ತನ್ನ ಸ್ನೇಹಿತರಿಗೆ "ರಾಮನ ಇಚ್ಛೆಯಂತೆ ನನ್ನನ್ನು ಖುಲಾಸೆ ಮಾಡಿದರು" ಎಂದನು.

ನೀನು ಸಂಸಾರದಲ್ಲಿದ್ದರೂ ಅಥವಾ ಅದನ್ನು ತ್ಯಜಿಸಿದರೂ ಅದೆಲ್ಲವೂ ರಾಮನ ಇಚ್ಛೆಯ ಮೇಲೆ ಇರುವುದು. ನಿನ್ನ ಜವಾಬ್ದಾರಿಯನ್ನೆಲ್ಲ ದೇವರ ಮೇಲೆ ಹಾಕಿ ನಿನ್ನ ಕೆಲಸವನ್ನು ಮಾಡು

೧೧೯೬. ಕಳ್ಳನೊಬ್ಬನು ಒಂದು ಸಲ ಅರ್ಧರಾತ್ರಿ ಸಮಯದಲ್ಲಿ ರಾಜನ ಅರಮನೆಯನ್ನು ಪ್ರವೇಶಿಸಿದನು. ಆಗ ರಾಜನು ರಾಣಿಗೆ "ನಾನು ನಾಳೆ ನನ್ನ ಮಗಳನ್ನು ನದಿಯ ತೀರದಲ್ಲಿರುವ ಸಾಧುಗಳಲ್ಲೊಬ್ಬರಿಗೆ ಮದುವೆಮಾಡಿಕೊಡುತ್ತೇನೆ" ಎಂದು ಹೇಳಿದುದನ್ನು ಕೇಳಿದನು. ಕಳ್ಳನು ತನ್ನೊಳಗೆ "ಒಳ್ಳೆ ಅದೃಷ್ಟ ಇದೆ ಈಗ, ನಾಳೆ ಸಾಧುಗಳ ಮಧ್ಯದಲ್ಲಿ ನಾನೂ ಸಾಧುವಂತೆ ಕುಳಿತುಕೊಳ್ಳುವೆನು. ಏನೋ ಅಕಸ್ಮಾತ್ ನನಗೆ ರಾಜರ ಮಗಳು ಸಿಕ್ಕಿದರೂ ಸಿಕ್ಕಬಹುದು" ಎಂದುಕೊಂಡನು. ಮಾರನೆ ದಿನ ಹಾಗೆಯೆ ಮಾಡಿದನು. ರಾಜ

ದೂತರು ಬಂದು ಸಾಧುಗಳನ್ನು ರಾಜರ ಮಗಳನ್ನು ಮದುವೆಮಾಡಿಕೊಳ್ಳಿ ಎಂದು ಕೇಳಲು ಯಾರೂ ಒಪ್ಪಿಕೊಳ್ಳಲಿಲ್ಲ. ಕೊನೆಗೆ ಸಾಧುವಿನಂತೆ ಕುಳಿತಿದ್ದ ಕಳ್ಳನ ಹತ್ತಿರ ಬಂದು ಅವನನ್ನೂ ಹಾಗೆಯೆ ಕೇಳಿದರು. ಕಳ್ಳ ಸುಮ್ಮನೆ ಇದ್ದ. ದೂತರು ರಾಜನ ಹತ್ತಿರಕ್ಕೆ ಹೋಗಿ ಒಬ್ಬ ತರುಣ ಸನ್ಯಾಸಿಯು ಇರುವನು. ಸಾಧ್ಯವಾದರೆ ಮಗಳನ್ನು ಮದುವೆ ಮಾಡಿಕೊಳ್ಳುವಂತೆ ಅವನನ್ನು ಒಪ್ಪಿಸಬಹುದು ಎಂದು ಹೇಳಿದರು. ನಂತರ ರಾಜನೆ ಹೋಗಿ ದಯವಿಟ್ಟು ತನ್ನ ಮಗಳನ್ನು ಸ್ವೀಕರಿಸಿ ತನ್ನನ್ನು ಧನ್ಯನನ್ನಾಗಿ ಮಾಡಬೇಕೆಂದು ಕಳ್ಳ ಸಾಧುವನ್ನು ಬೇಡಿಕೊಂಡನು. ಆದರೆ ರಾಜನೆ ಬಂದಮೇಲೆ ಕಳ್ಳ ಸಾಧುವಿನ ಮನಸ್ಸು ಬದಲಾಯಿಸಿತು. ಅವನು ಮನಸ್ಸಿನಲ್ಲಿ “ನಾನು ಕೇವಲ ಸಾಧುವಿನ ಬಟ್ಟೆಯನ್ನು ಮಾತ್ರ ಧರಿಸಿರುವೆನು. ಆದರೆ ಆಗಲೆ ನೋಡಿ! ರಾಜನೆ ಬಂದು ನನ್ನನ್ನು ಬೇಡಿಕೊಳ್ಳುತ್ತಾನೆ. ನಿಜವಾಗಿಯೂ ನಾನು ಸಾಧುವಾದರೆ ಇನ್ನು ಎಷ್ಟು ಒಳ್ಳೆ ವಸ್ತುಗಳು ಸಿಕ್ಕಬಹುದೊ ಯಾರು ಬಲ್ಲರು?” ಎಂಬ ಆಲೋಚನೆ ಅವನ ಮನಸ್ಸಿನ ಮೇಲೆ ಪರಿಣಾಮವನ್ನು ಉಂಟುಮಾಡಿತು. ಅವನು ಕಪಟಿಯಂತೆ ಮದುವೆಮಾಡಿಕೊಳ್ಳದೆ ತನ್ನ ಜೀವನವನ್ನು ಬದಲಾಯಿಸಿ ನಿಜವಾದ ಸಾಧುವಂತೆ ತನ್ನ ಬಾಳನ್ನು ತಿದ್ದಲು ಯತ್ನಿಸಿದನು. ಕೊನೆಗೂ ಅವನು ಮದುವೆಯಾಗಲಿಲ್ಲ. ಕೊನೆಗೆ ಆಗಿನ ಕಾಲದ ಬಹಳ ಪ್ರಖ್ಯಾತನಾದ ಒಬ್ಬ ಸಾಧುವಾದನು. ಕೆಲವು ವೇಳೆ ಒಳ್ಳೆಯವರನ್ನು ಅನುಕರಿಸುವುದರಿಂದ ಅನಿರೀಕ್ಷಿತ ಒಳ್ಳೆಯ ಪರಿಣಾಮಗಳು ಉಂಟಾಗುವುವು.

## ತ್ಯಾಗ ಮತ್ತು ವೈರಾಗ್ಯ

೧೦೯೭. ಚಾಕರಿಯಿಲ್ಲದವನ ಹೆಂಡತಿಯೊಬ್ಬಳು ತನ್ನ ಗಂಡನನ್ನು ಪದೇಪದೇ ಕೆಲಸವನ್ನು ಹುಡುಕಿ ಎಂದು ಬಲಾತ್ಕರಿಸುತ್ತಿದ್ದಳು. ಒಂದುದಿನ ಅವನ ಮಗ ತುಂಬಾ ಖಾಯಿಲೆಯಾಗಿ ಪಂಡಿತರು ಅವನು ಗುಣವಾಗುವಹಾಗಿಲ್ಲ ಎಂದು ಹೇಳಿದಾಗ ಅವನು ಒಂದು ಕೆಲಸವನ್ನು ಹುಡುಕಲು ಹೊರಟನು. ಇಷ್ಟುಹೊತ್ತಿಗೆ ಮಗನು ಸತ್ತುಹೋದನು. ತಂದೆಯನ್ನು ಹುಡುಕಾಡಿದರು. ಆದರೆ ಅವನು ಸಿಕ್ಕಲಿಲ್ಲ. ಕೊನೆಗೆ ಸಂಜೆಹೊತ್ತಿಗೆ ಅವನು ಮನೆಗೆ ಹಿಂದಿರುಗಿದನು. ಹೆಂಡತಿ ತನ್ನ

ಮಗನು ಅಷ್ಟು ಉತ್ಕಟಾವಸ್ಥೆಯಲ್ಲಿರುವಾಗ ಸ್ವಲ್ಪವೂ ಲೆಕ್ಕಿಸದೆ ಮನೆಯಿಂದ ಹೊರಟುಹೋದುದಕ್ಕೆ ಅವನನ್ನು ತರಾಟೆಗೆ ತೆಗೆದು ಕೊಂಡಳು. ಗಂಡನು ನಗುತ್ತ ಹೆಂಡತಿಗೆ ಹೀಗೆ ಹೇಳಿದನು: "ನೋಡು, ಒಂದುಸಲ ನಾನು ದೊರೆಯಾದಂತೆ ಕನಸುಕಂಡೆ. ಆಗ ನನಗೆ ಏಳು ಜನ ಮಕ್ಕಳು ಇದ್ದರು. ಅವರೊಂದಿಗೆ ಸುಖವಾಗಿ ನಾನು ಕಾಲವನ್ನು ಕಳೆಯುತ್ತಿದ್ದೆನು. ಆದರೆ ಎದ್ದಾಗ ಯಾರೂ ಇರಲಿಲ್ಲ. ಅದೆಲ್ಲ ಒಂದು ಕನಸಾಗಿತ್ತು. ನನಗೆ ಈಗ ಹೇಳು! ಕನಸಿನ ಏಳು ಜನ ಮಕ್ಕಳಿಗೆ ಅಳಲೆ ಅಥವಾ ಈಗ ಇದ್ದ ಒಬ್ಬ ಮಗನಿಗೆ ಅಳಲೆ?" ಯಾರು ಈ ಜಗತ್ತನ್ನು ಕನಸಿನಂತೆ ಕಾಣುತ್ತಾರೆಯೊ ಅವರಿಗೆ ಸಾಧಾರಣ ಮನುಷ್ಯರಂತೆ ಪ್ರಪಂಚದ ಸಂಸರ್ಗದಿಂದ ಬರುವ ಸುಖ, ದುಃಖಗಳ ಮೇಲೆ ಮನಸ್ಸಿರುವುದಿಲ್ಲ.

೧೧೯೮. ಒಂದು ದಿನ ಒಬ್ಬ ತರುಣ ಸನ್ಯಾಸಿ ಒಂದು ಮನೆಗೆ ಭಿಕ್ಷವನ್ನು ಬೇಡುವುದಕ್ಕೆ ಹೋಗಿದ್ದನು. ಅವನು ಬಾಲ್ಯದಿಂದ ಸನ್ಯಾಸಾಶ್ರಮವನ್ನು ಸ್ವೀಕಾರಮಾಡಿದ್ದುದರಿಂದ ಅವನಿಗೆ ಪ್ರಪಂಚದ ಅನುಭವ ಇರಲಿಲ್ಲ. ಅವನಿಗೆ ಭಿಕ್ಷವನ್ನು ನೀಡುವುದಕ್ಕೆ ಒಬ್ಬ ತರುಣಿ ಬಂದಳು. ಅವಳ ಎದೆಯ ಮೇಲೆ ಎತ್ತರವಾಗಿದ್ದುದನ್ನು ನೋಡಿ ಏನಾದರೂ ಹುಣ್ಣು ಎದ್ದಿದೆಯೆ ಎಂದು ಕೇಳಿದನು. ಇದಕ್ಕೆ ಅವಳ ತಾಯಿ "ಇಲ್ಲ ಮಗು! ಅವಳಿಗೆ ಹುಣ್ಣೇನು ಇಲ್ಲ, ಶೀಘ್ರದಲ್ಲಿಯೆ ಅವಳು ಮಗುವನ್ನು ಹೆರುವಳು ಅದರ ಆಹಾರಕ್ಕಾಗಿ ದೇವರು ಅವಳಿಗೆ ಎರಡು ಮೊಲೆಯನ್ನು ಮಾಡಿಟ್ಟಿರುವನು. ಮಗು ಹುಟ್ಟಿದ ಮೇಲೆ ಇದರಿಂದ ಹಾಲನ್ನು ಕುಡಿಯುವುದು" ಎಂದಳು. ಇದನ್ನು ಕೇಳಿದ ತಕ್ಷಣವೆ ಸನ್ಯಾಸಿ "ನಾನು ಇನ್ನು ಮೇಲೆ ಭಿಕ್ಷಕ್ಕೆ ಹೋಗುವುದಿಲ್ಲ. ಯಾರು ನನ್ನನ್ನು ಹುಟ್ಟಿಸಿರುವನೊ ಅವನೇ ಆಹಾರವನ್ನು ಕೊಡುತ್ತಾನೆ" ಎಂದನು.

೧೧೯೯. ಗಂಡಹೆಂಡತಿಯರಿಬ್ಬರೂ ಸಂಸಾರವನ್ನು ತ್ಯಜಿಸಿ ಒಟ್ಟಿಗೆ ತೀರ್ಥಯಾತ್ರಾಸ್ಥಳಗಳಿಗೆ ಹೊರಟರು. ಒಂದುಸಲ ಅವರು ನಡೆಯುತ್ತಿದ್ದಾಗ ಗಂಡ ಸ್ವಲ್ಪ ಮುಂದೆ ಇದ್ದನು. ಅವನ ಕಣ್ಣಿಗೆ ನೆಲದ ಮೇಲೆ ಒಂದು ವಜ್ರದ ಹರಳು ಕಂಡಿತು. ತಕ್ಷಣವೆ ಅವನು ನೆಲವನ್ನು ಕೆರೆದು ಅದನ್ನು ಮುಚ್ಚಲು ಯತ್ನಿಸಿದನು. ಎಲ್ಲಿ ತನ್ನ ಹೆಂಡತಿ ನೋಡಿದರೆ ಪುನಃ ಆಸೆ ಅವಳಲ್ಲಿ ಅಂಕುರಿಸಿ ಇದನ್ನು ತೆಗೆದು

ಕೊಳ್ಳುವುದಕ್ಕೆ ಹೋಗುವಳೊ ಮತ್ತು ಆದರಿಂದ ಎಲ್ಲಿ ತೀರ್ಥ ಯಾತ್ರೆಯ ಪುಣ್ಯಹೋಗುವುದೊ ಎಂದು ಆವನಿಗೆ ಅಂಜಿಕೆ. ಗಂಡನು ನೆಲವನ್ನು ಕೆರೆಯುತ್ತಿದ್ದಾಗ ಹೆಂಡತಿ ಹತ್ತಿರ ಬಂದು ಏನನ್ನು ಮಾಡು ತ್ತಿರುವಿರಿ ಎಂದು ಕೇಳಿದಳು. ಏನೂ ಇಲ್ಲ ಎಂದು ತಪ್ಪಿಸಿಕೊಳ್ಳುವ ಜವಾಬನ್ನು ಹೇಳಿದನು. ಅವಳು ವಜ್ರವನ್ನು ನೋಡಿ ಅವನ ಮನ ಸ್ಸನ್ನು ಗ್ರಹಿಸಿ, ಗಂಡನನ್ನು "ನಿಮಗೆ ಇನ್ನೂ ವಜ್ರಕ್ಕೂ ಮಣ್ಣಿಗೂ ವ್ಯತ್ಯಾಸ ತೋರಿದರೆ ಸಂಸಾರವನ್ನು ತ್ಯಜಿಸಿದ್ದು ಏತಕ್ಕೆ?" ಎಂದು ಕೇಳಿದಳು.

೧೧೦೦. ಮನುಷ್ಯನಿಗೆ ವೈರಾಗ್ಯ ಹೇಗೆ ಬರುವುದು? ಹೆಂಡತಿ ತನ್ನ ಗಂಡನಿಗೆ ಒಂದುಸಲ ಹೀಗೆ ಹೇಳಿದಳು: "ನನ್ನ ತಮ್ಮನ ವಿಚಾರ ವಾಗಿ ನನಗೆ ತುಂಬಾ ಯೋಚನೆಯಾಗಿದೆ. ಕಳೆದ ಒಂದು ವಾರದಿಂದ ಅವನು ಸನ್ಯಾಸಿಯಾಗಬೇಕೆಂದು ಆಲೋಚಿಸುತ್ತಿರುವನು. ಅದಕ್ಕಾಗಿ ಅಣಿಮಾಡಿಕೊಳ್ಳುತ್ತಿರುವನು. ಕ್ರಮೇಣ ಅವನು ಆಸೆಗಳನ್ನೆಲ್ಲ ಕಡಿಮೆ ಮಾಡಿಕೊಳ್ಳುವುದಕ್ಕೆ ಯತ್ನಿಸುತ್ತಿರುವನು." ಅದಕ್ಕೆ ಗಂಡನು, "ನೀನೇನು ಅವನ ವಿಚಾರವಾಗಿ ಆತಂಕಪಡಬೇಕಾಗಿಲ್ಲ. ಅವನೆಂದಿಗೂ ಸನ್ಯಾಸಿಯಾಗುವುದಿಲ್ಲ. ಯಾರೂ ಹಾಗೆ ಸನ್ಯಾಸಿಯಾಗಲಾರರು" ಎಂದನು. ಹೆಂಡತಿಯು "ಹಾಗಾದರೆ ಒಬ್ಬನು ಹೇಗೆ ಸನ್ಯಾಸಿ ಯಾಗುತ್ತಾನೆ?" ಎಂದಳು. ಗಂಡನು "ಹೀಗೆ" ಎಂದು ಹೇಳುತ್ತ ಅವನು ನೇತಾಡುತ್ತಿರುವ ತನ್ನ ಬಟ್ಟೆಯನ್ನು ಹರಿದು ಅದರಲ್ಲಿ ಒಂದು ಚೂರನ್ನು ತನ್ನ ಕೌಪೀನಕ್ಕೆ ಕಟ್ಟಿಕೊಂಡು ತನ್ನ ಹೆಂಡತಿಗೆ, ಇಂದಿನಿಂದ ಅವಳು ಮತ್ತು ಉಳಿದ ಎಲ್ಲಾ ಸ್ತ್ರೀಯರು ತಾಯಿ ಸಮಾನ ವೆಂದು ಹೇಳಿ ಒಂದೇಸಲ ಮನೆಯನ್ನು ಬಿಟ್ಟು ಹೊರಟುಹೋದನು.

೧೧೦೧. "ಕ್ರಮೇಣ ಇದನ್ನು ನಾನು ಮಾಡುತ್ತೇನೆ ನಾನು ಇನ್ನೇನು ಆ ಕೆಲಸವನ್ನು ತೆಗೆದುಕೊಳ್ಳುವುದರಲ್ಲಿ ಇರುವೆನು, ಇನ್ನೇನು ಇದನ್ನು ಶುರು ಮಾಡುವೆನು"—ಇವುಗಳೆಲ್ಲ ಸೋಮಾರಿತನದ ಚಿಹ್ನೆ. ಇವುಗಳಿಂದ ಸ್ವಲ್ಪ ಮಂದ ವೈರಾಗ್ಯ ಬರಬಹುದು. ಆದರೆ ಯಾರ ಹೃದಯದಲ್ಲಿ ತೀವ್ರ ವೈರಾಗ್ಯ ಜ್ವಾಲೆಯಾಡುತ್ತಿರುವುದೊ, ಯಾರ ಹೃದಯ ತಾಯಿ ಮಗುವಿಗೆ ಹೇಗೆ ತವಕಪಡುವಳೊ ಹಾಗೆ ದೇವರಿ ಗಾಗಿ ತವಕಪಡುತ್ತಿರುವುದೊ, ಅವರಿಗೆ ದೇವರಲ್ಲದೆ ಮತ್ತಾವುದೂ ಬೇಡ. ಅವರ ಪಾಲಿಗೆ ಪ್ರಪಂಚ ಒಂದು ನೆಲಭಾವಿಯಂತೆ

ಇರುವುದು. ಎಲ್ಲಿ ಅದರಲ್ಲಿ ತಾನು ಬೀಳುವೆನೊ ಎಂದು ಅವನು ಯಾವಾಗಲೂ ಜೋಪಾನವಾಗಿರುವನು. ಅವನು ಉಳಿದವರಂತೆ "ಮೊದಲು ಮನೆಕೆಲಸಗಳನ್ನು ಇತ್ಯರ್ಥ ಮಾಡೋಣ, ನಂತರ ದೇವರನ್ನು ಧ್ಯಾನಮಾಡುವೆನು" ಎಂದು ಹೇಳುವುದಿಲ್ಲ. ಅವನಲ್ಲಿ ವಜ್ರದಂತಹ ಒಂದು ಸ್ಥಿರಸಂಕಲ್ಪವಿರುವುದು.

ಒಂದು ಸಲ ಯಾವುದೋ ಕಡೆ ಎಂದಿನಂತೆ ಮಳೆ ಬರಲಿಲ್ಲ. ರೈತರೆಲ್ಲ ಕಾಲುವೆತೋಡಿ ತಮ್ಮ ಗದ್ದೆಗೆ ನೀರು ತರುವುದರಲ್ಲಿ ನಿರತರಾಗಿದ್ದರು ಅವರಲ್ಲಿ ಒಬ್ಬನು ಸ್ಥಿರಸಂಕಲ್ಪದವನು. ನದಿಯೊಂದಿಗೆ ಸೇರಿಸುವತನಕ ಕಾಲುವೆಯನ್ನು ತೋಡಿಯೇ ತೋಡುವೆನು ಎಂದು ಶಪಥ ಮಾಡಿದನು. ಅದರಂತೆಯೆ ಅವನು ಸ್ನಾನ ಮತ್ತು ಊಟಕ್ಕೆ ಹೊತ್ತಾದರೂ ಅಗೆಯುತ್ತಾ ಹೋದನು, ಅವನ ಹೆಂಡತಿ ಮಗಳ ಕೈಯಲ್ಲಿ ಎಣ್ಣೆಯನ್ನು ಕಳುಹಿಸಿದಳು. ಅವಳು ಬಂದು "ಅಪ್ಪ ಆಗಲೆ ಹೊತ್ತಾಗಿದೆ. ಎಣ್ಣೆ ಹಚ್ಚಿಕೊಂಡು ಸ್ನಾನಮಾಡು" ಎಂದಳು. ತಂದೆ "ತಡಿ, ಇನ್ನೂ ಮಾಡುವ ಕೆಲಸವಿದೆ" ಎಂದನು. ಆಗಲೆ ಎರಡು ಗಂಟೆಯಾಯಿತು. ಆದರೂ ರೈತ ಸ್ನಾನ ಊಟದ ಕಡೆಗೆ ಮನಸ್ಸನ್ನೇ ಕೊಡಲಿಲ್ಲ. ಕೊನೆಗೆ ಹೆಂಡತಿಯೆ ಹೊಲದ ಹತ್ತಿರ ಬಂದು "ಏತಕ್ಕೆ ನೀವು ಇನ್ನೂ ಸ್ನಾನ ಮಾಡಿಲ್ಲ. ಅಡಿಗೆ ಎಲ್ಲಾ ಆರಿಹೋಗಿ ಹಳಸುತ್ತಿದೆ. ನಿಮ್ಮದು ಯಾವಾಗಲೂ ಒಂದು ಅತಿ. ಈವಾಗಲಾದರೂ ಬನ್ನಿ. ಮಿಕ್ಕಿರುವ ಕೆಲಸವನ್ನು ನಾಳೆಯೊ ಅಥವಾ ಊಟವಾದ ಮೇಲೆಯೋ ಮಾಡುವಿರಂತೆ" ಎಂದಳು. ರೈತನಿಗೆ ರೇಗಿ ಅವಳನ್ನು ಬೈಯುತ್ತ ಪಿಕಾಸಿಯನ್ನು ತೋರಿ "ಬುದ್ಧಿಯಿಲ್ಲದ ಮೂಢೆ, ಬೆಳೆಯೆಲ್ಲ ಒಣಗಿ ಹೋಗುತ್ತಿರುವುದು ಕಾಣುವುದಿಲ್ಲವೆ? ನೀವೆಲ್ಲರೂ ಉಪವಾಸದಿಂದ ಸಾಯಬೇಕಾಗುವುದು. ಮೊದಲು ನೀರನ್ನು ಗದ್ದೆಗೆ ತರುವಂತೆ ಶಪಥ ಮಾಡಿರುವೆನು. ನಂತರ ಮಿಕ್ಕ ಆಲೋಚನೆ" ಎಂದನು ಇದನ್ನು ಕೇಳಿ ಹೆಂಡತಿ ಹೊರಟುಹೋದಳು. ರಾತ್ರಿ ಬಹಳ ಹೊತ್ತಾಗುವ ತನಕ ಭೀಮಸಾಹಸ ಮಾಡಿ ಕೊನೆಗೆ ತನ್ನ ಸ್ಥಿರಸಂಕಲ್ಪದಿಂದ ಕೆಲಸವನ್ನು ಸಾಧಿಸಿದನು. ನದಿಯ ನೀರು ಕಾಲುವೆಯ ಮೂಲಕ ಮಂಜುಳ ಧ್ವನಿಯಿಂದ ಬರುತ್ತಿರುವುದನ್ನು ನೋಡಿದಾಗ ಅವನ ಆನಂದಕ್ಕೆ ಪಾರವಿರಲಿಲ್ಲ. ಮನೆಗೆ ಬಂದು ಸ್ನಾನಕ್ಕೆ ಹೆಂಡತಿಯಿಂದ ಎಣ್ಣೆ ತೆಗೆದುಕೊಂಡು ನಂತರ ಸೇದುವುದಕ್ಕೆ ಗುಡುಗುಡಿಯನ್ನು ಸಿದ್ಧ

ಮಾಡು ಎಂದನು. ಸ್ನಾನ ಊಟವಾದ ಮೇಲೆ ಅವನು ಸುಖವಾಗಿ ನಿದ್ರಿಸಿದನು. ಇಂತಹ ಸ್ಥಿರಸಂಕಲ್ಪ ತೀವ್ರವೈರಾಗ್ಯಕ್ಕೆ ಉದಾಹರಣೆ.

ಮತ್ತೊಬ್ಬ ರೈತನೂ ಕೂಡ ಇದೇ ಕೆಲಸದಲ್ಲಿ ನಿರತನಾಗಿದ್ದನು. ಆದರೆ ಅವನ ಹೆಂಡತಿ ಬಂದು ಮನೆಗೆ ಬನ್ನಿ ಎಂದು ಕರೆದಾಗ ಮಾತಿಲ್ಲದೆ ಗುದ್ದಲಿಯನ್ನು ಹೆಗಲಮೇಲೆ ಹಾಕಿಕೊಂಡು "ಆಗಲಿ, ನೀನು ಬಂದಮೇಲೆ ನಾನು ಹೋಗದೆ ವಿಧಿಯಿಲ್ಲ" ಎಂದು ಅವಳನ್ನು ಹಿಂಬಾಲಿಸಿದನು. ಅವನಿಗೆ ಸಕಾಲದಲ್ಲಿ ಗದ್ದೆಗೆ ನೀರನ್ನು ತರುವುದಕ್ಕೆ ಸಾಧ್ಯವೇ ಆಗಲಿಲ್ಲ. ಇದು ನೋಮಾರಿತನ ಅಥವಾ ಮಂದವೈರಾಗ್ಯವನ್ನು ತೋರುತ್ತದೆ. ಸ್ಥಿರಸಂಕಲ್ಪವಿಲ್ಲದೆ ಗದ್ದೆಗೆ ನೀರನ್ನು ಹಾಯಿಸುವುದು ಸಾಧ್ಯವಿಲ್ಲ. ಹಾಗೆಯೆ ಪರಮಾತ್ಮನನ್ನು ನೋಡುವುದಕ್ಕೆ ಉತ್ಕಟ ಆಕಾಂಕ್ಷೆ ಇಲ್ಲದೆ ಅವನ ದರ್ಶನಭಾಗ್ಯ ಯಾರಿಗೂ ಸಿಕ್ಕುವುದಿಲ್ಲ.

೧೧೦೨. ಒಂದುರಾತ್ರಿ ಬೆಸ್ತನೊಬ್ಬನು ಕಳ್ಳತನದಿಂದ ಒಬ್ಬ ಗೃಹಸ್ಥನ ತೋಟಕ್ಕೆ ನುಗ್ಗಿ ಅಲ್ಲಿ ಮೀನನ್ನು ಹಿಡಿಯುತ್ತಿದ್ದನು. ಗೃಹಸ್ಥನಿಗೆ ಇದು ಗೊತ್ತಾಗಿ ಅವನು ತನ್ನ ಆಳುಗಳಿಗೆ ಸುತ್ತಲೂ ಆ ಭಾಗವನ್ನು ಕಾಯುತ್ತ ಇರಿ ಎಂದು ಹೇಳಿ ತಾನು ಪಂಜನ್ನು ಹತ್ತಿಸಿ ಇವನನ್ನು ಹಿಡಿಯುವುದಕ್ಕೆ ಬಂದನು. ಬೆಸ್ತರವನಿಗೆ ತಪ್ಪಿಸಿಕೊಳ್ಳುವುದಕ್ಕೆ ಉಪಾಯವಿಲ್ಲದೆ ಅಲ್ಲೇ ಒಂದು ಮರದ ಕೆಳಗೆ ಬೂದಿಯನ್ನು ಬಳಿದುಕೊಂಡು ಸಾಧುವಿನಂತೆ ಕುಳಿತುಕೊಂಡನು. ಜನರು ಅಲ್ಲಿಗೆ ಬಂದಾಗ ಅವರಿಗೆ ಕಳ್ಳ ಎಲ್ಲಿಯೂ ಕಾಣಲಿಲ್ಲ. ವಿಭೂತಿ ಬಳಿದುಕೊಂಡು ಗಾಢಧ್ಯಾನದಲ್ಲಿ ಒಬ್ಬ ಸಾಧು ಮಾತ್ರ ಇದ್ದನು. ಮಾರನೆ ದಿನ ಒಬ್ಬ ದೊಡ್ಡ ಸಾಧು ಇಂತಹವನ ತೋಟಕ್ಕೆ ಬಂದಿರುವನೆಂಬ ಸುದ್ದಿ ಹರಡಿತು. ನೂರಾರು ಜನ ತಮ್ಮ ಭಕ್ತಿಯನ್ನು ಅರ್ಪಿಸುವುದಕ್ಕೆ ಹಣ್ಣು, ಮಿಠಾಯಿ ಮುಂತಾದುವುಗಳನ್ನು ತಂದರು. ಚಿನ್ನ ಬೆಳ್ಳಿಯ ನಾಣ್ಯಗಳು ಕೂಡ ಅವನ ಮುಂದೆ ಒಂದು ರಾಶಿಯಾಯಿತು. ಬೆಸ್ತರವನು ಮನಸ್ಸಿನಲ್ಲಿ ಹೀಗೆ ಆಲೋಚಿಸಿದನು: "ಏನು ಆಶ್ಚರ್ಯ, ನಾನು ನಿಜವಾದ ಸಾಧುವಲ್ಲ. ಆದರೂ ಜನರು ಇಷ್ಟು ಗೌರವವನ್ನು ತೋರುತ್ತಿರುವರು. ನಿಜವಾಗಿ ನಾನು ಸಾಧುವಾದರೆ ದೇವರನ್ನು ಕಾಣುವುದರಲ್ಲಿ ಸಂದೇಹವಿಲ್ಲ." ಹೀಗೆ ಕೇವಲ

ನಟನೆ ಕೂಡ ಅವನ ಮನಸ್ಸಿನಲ್ಲಿ ಒಂದು ನಿಜವಾದ ಪರಿವರ್ತನೆಯನ್ನು ತಂದಿತು.

೧೧೦೩. ಒಂದು ಸಲ ಒಬ್ಬ ಸಾಧು ಯಾವುದೋ ಮಹಾಸಿದ್ಧಿಯನ್ನು ಪಡೆದುಕೊಂಡನು. ಇದರಿಂದ ಅವನಿಗೆ ತುಂಬ ಅಹಂಕಾರ ಬಂದಿತು ಆದರೆ ಒಟ್ಟಿನಲ್ಲಿ ಆ ಮನುಷ್ಯ ಬಹಳ ಒಳ್ಳೆಯವನಾಗಿದ್ದನು. ಹಿಂದೆ ತುಂಬ ತಪಸ್ಸನ್ನು ಮಾಡಿದ್ದನು. ಅವನನ್ನು ತಿದ್ದುವುದಕ್ಕಾಗಿ ದೇವರು ಒಬ್ಬ ಸನ್ಯಾಸಿಯಂತೆ ಬಂದು "ಸ್ವಾಮಿ, ನಿಮಗೆ ಮಹಾಸಿದ್ಧಿ ಲಭಿಸಿದೆಯಂತೆ" ಎಂದನು. ಸಾಧು ಗೌರವದಿಂದ ಅವನನ್ನು ಬರಮಾಡಿಕೊಂಡು ಅವನನ್ನು ಕುಳಿತುಕೊಳ್ಳುವಂತೆ ಹೇಳಿದನು. ಆಗ ತಾನೆ ಒಂದು ಆನೆ ಅಲ್ಲಿ ಹೋಗುತಿತ್ತು. ಅದನ್ನು ನೋಡಿ ಸನ್ಯಾಸಿ ಸಾಧುವನ್ನು ಕುರಿತು "ಸ್ವಾಮಿ, ನೀವು ಇಚ್ಛೆಪಟ್ಟರೆ ಈ ಆನೆಯನ್ನು ಕೊಲ್ಲಬಲ್ಲಿರಾ?" ಎಂದನು. ಸಾಧು "ಹೌದು ಅದು ಸಾಧ್ಯ" ಎಂದು ಹೇಳಿ ಒಂದು ಹಿಡಿ ಮಣ್ಣನ್ನು ತೆಗೆದುಕೊಂಡು ಮಂತ್ರೋಚ್ಚಾರಣೆ ಮಾಡಿ ಅದನ್ನು ಆನೆಗೆ ಎಸದನು. ತಕ್ಷಣವೆ ಆನೆ ನರಳುತ್ತ ನೆಲದ ಮೇಲೆ ಬಿದ್ದು ಸತ್ತುಹೋಯಿತು ಸನ್ಯಾಸಿ "ಓ ನಿಮ್ಮ ಶಕ್ತಿ ಎಷ್ಟು ಅದ್ಭುತವಾದುದು! ಎಷ್ಟು ಸುಲಭವಾಗಿ ನೀವು ಆನೆಯನ್ನು ಕೊಂದು ಬಿಟ್ಟಿರಲ್ಲ!" ಸಾಧು ಈ ಹೊಗಳಿಕೆಯನ್ನು ಕೇಳಿ ನಸುನಕ್ಕನು. ಸನ್ಯಾಸಿ ಪುನಃ "ನೀವು ಆನೆಗೆ ಜೀವವನ್ನು ಬರಿಸಬಲ್ಲಿರಾ" ಎಂದನು. "ಹೌದು ಅದು ಸಾಧ್ಯ" ಎಂದು ಹೇಳಿ ಸತ್ತ ಆನೆಯ ಮೇಲೆ ಪುನಃ ಸ್ವಲ್ಪ ಮಣ್ಣನ್ನು ಎರಚಲಾಗಿ ಅದಕ್ಕೆ ಪುನಃ ಜೀವ ಬಂದು ಎದ್ದಿತು. ಇದನ್ನು ನೋಡಿ ಸನ್ಯಾಸಿ "ಬಹಳ ಅದ್ಭುತ! ನಿಮ್ಮ ಶಕ್ತಿ! ಆದರೆ ನಿಮ್ಮನ್ನು ನಾನು ಒಂದು ಪ್ರಶ್ನೆ ಕೇಳಬೇಕೆಂದಿರುವೆನು. ಈಗ ತಾನೆ ನೀವು ಆನೆಯನ್ನು ಕೊಂದಿರಿ, ಅದಕ್ಕೆ ಪುನಃ ಜೀವ ಬರೆಸಿದಿರಿ. ಆದರೆ ಇದರಿಂದ ನಿಮಗೆ ಏನು ಲಾಭ ಬಂತು? ಇದರಿಂದ ನಿಮಗೆ ಏನು ಮೇಲಾಯಿತು? ದೇವರನ್ನು ನೋಡುವುದಕ್ಕೆ ಇದು ನಿಮಗೆ ಸಹಾಯ ಮಾಡಿತೆ?" ಎಂದು ಹೇಳಿ ಅಂತರ್ಧಾನನಾದನು.

೧೧೦೪. ಸೌದೆ ಮಾರುವವನೊಬ್ಬನು ಪ್ರತಿದಿನವೂ ತನ್ನ ಕೈಲಾದಷ್ಟು ಸೌದೆಯನ್ನು ಹತ್ತಿರದ ಕಾಡಿನಿಂದ ಕಡಿದು ತಂದು ಮಾರಿ ಜೀವಿಸುತ್ತಿದ್ದನು. ಒಂದು ಸಲ ಆ ಕಾಡಿನ ಮೂಲಕ ಪ್ರಯಾಣ ಮಾಡುತ್ತಿದ್ದ ಸನ್ಯಾಸಿ ಇವನನ್ನು ಕಂಡು ಇನ್ನೂ ಕಾಡಿನ ಒಳಗೆ

ಹೋದರೆ ಇವನಿಗೆ ಒಳ್ಳೆಯದಾಗುವುದೆಂದು ಹೇಳಿದನು. ಸೌದೆ ಮಾರುವವನು ಹಾಗೆಯೆ ಅವನು ಹೇಳಿದ ಮಾತನ್ನು ಕೇಳಿದನು. ಅವನಿಗೆ ಆಗ ಗಂಧದ ಮರ ಸಿಕ್ಕಿತು. ಇದನ್ನು ನೋಡಿ ಅವನಿಗೆ ತುಂಬಾ ಸಂತೋಷವಾಯಿತು. ಸಾಧ್ಯವಾದಷ್ಟು ಗಂಧದ ಮರವನ್ನು ಹೊತ್ತುಕೊಂಡು ಹೋಗಿ ಬಹಳ ಲಾಭಕ್ಕೆ ಮಾರಿದನು. ಆಗ ಅವನು ಆ ಸಾಧುಪುರುಷನು ತನಗೆ ಗಂಧದ ಮರದ ವಿಚಾರ ಏತಕ್ಕೆ ಹೇಳಲಿಲ್ಲ. ಸುಮ್ಮನೆ ಮುಂದೆ ಮುಂದೆ ಹೋಗು ಎಂದು ಮಾತ್ರ ಏತಕ್ಕೆ ಹೇಳಿದನು ಎಂದು ಆಲೋಚಿಸತೊಡಗಿದನು. ಮಾರನೆ ದಿನ ಅವನು ಗಂಧದ ಮರವನ್ನು ಕೂಡ ದಾಟಿಹೋದನು. ಆಗ ಒಂದು ತಾಮ್ರದ ಗಣಿ ಹತ್ತಿರಕ್ಕೆ ಬಂದನು. ತನಗೆ ಸಾಧ್ಯವಾದಷ್ಟು ತಾಮ್ರವನ್ನು ಹೊತ್ತುಕೊಂಡು ಹೋಗಿ ಮಾರಿ ತುಂಬಾ ದುಡ್ಡನ್ನು ಸಂಪಾದಿಸಿದನು. ಮಾರನೆ ದಿನ ಅಲ್ಲಿಗೆ ತೃಪ್ತನಾಗದೆ ಸಾಧು ಹೇಳಿದಂತೆ ಮತ್ತೂ ಮುಂದಕ್ಕೆ ಹೋದನು. ಆಗ ಒಂದು ಬೆಳ್ಳಿಯ ಗಣಿಯ ಹತ್ತಿರ ಬಂದನು. ತನಗೆ ಸಾಧ್ಯವಾದಷ್ಟು ಬೆಳ್ಳಿಯನ್ನು ಹೊತ್ತುಕೊಂಡು ಹೋಗಿ ಬೇಕಾದಷ್ಟು ಲಾಭವನ್ನು ಸಂಪಾದಿಸಿದನು. ಹೀಗೆ ಪ್ರತಿದಿನವೂ ಮುಂದು ಮುಂದಕ್ಕೆ ಹೋದಂತೆಲ್ಲ ಚಿನ್ನದ ಗಣಿ ನಂತರ ವಜ್ರದ ಗಣಿ ಸಿಕ್ಕಲು ಮೊದಲಾಯಿತು. ಇದರಿಂದ ಅವನು ಬಹಳ ಶ್ರೀಮಂತನಾದನು. ನಿಜವಾದ ಜ್ಞಾನವನ್ನು ಆಶಿಸುವವನ ಸ್ಥಿತಿಯೂ ಹೀಗೆಯೆ. ಕೆಲವು ಅತೀಂದ್ರಿಯ ಶಕ್ತಿಗಳನ್ನು ಹೊಂದಿ ಅಲ್ಲೇ ತೃಪ್ತನಾಗಿ ನಿಂತುಬಿಡದೆ ಇದ್ದರೆ, ಅವನು ನಿಜವಾಗಿಯೂ ಪರಮಾತ್ಮನಿಗೆ ಸಂಬಂಧಪಟ್ಟ ಆಧ್ಯಾತ್ಮಿಕ ವಿದ್ಯೆಯಲ್ಲಿ ಬಹಳ ಶ್ರೀಮಂತನಾಗುವನು.

೧೧೧೫. ಅಕ್ಬರನ ಕಾಲದಲ್ಲಿ ಡೆಲ್ಲಿಯ ಹತ್ತಿರವಿದ್ದ ಒಂದು ಕಾಡಿನಲ್ಲಿ ಒಬ್ಬ ಫಕೀರನು ಇದ್ದನು. ಹಲವರು ಇವನ ಪರ್ಣಶಾಲೆಗೆ ಹೋಗುತ್ತಿದ್ದರು. ಇವರನ್ನು ಸತ್ಕರಿಸುವುದಕ್ಕೆ ಈತನ ಹತ್ತಿರ ಏನೂ ಇಲ್ಲದೆ ಇದ್ದುದರಿಂದ ಇವನಿಗೆ ಸ್ವಲ್ಪ ಹಣ ಬೇಕಾಗಿತ್ತು. ಇದಕ್ಕಾಗಿ ಅವನು, ಸಾಧುಸಂತರನ್ನು ಅತಿಗೌರವದಿಂದ ಕಾಣುತ್ತಿದ್ದ ಅಕ್ಬರನ ಹತ್ತಿರ ಹೋದನು. ಅಕ್ಬರನು ಆಗ ಪ್ರಾರ್ಥನೆಮಾಡುತ್ತಿದ್ದನು. ಫಕೀರನು ಪ್ರಾರ್ಥನಾಮಂದಿರದಲ್ಲಿ ಕುಳಿತುಕೊಂಡನು. ಪ್ರಾರ್ಥಿಸುತ್ತಿದ್ದಾಗ ಅಕ್ಬರನು "ಹೇ ದೇವರೆ, ಇನ್ನೂ ಹೆಚ್ಚು ಐಶ್ವರ್ಯ ಕೊಡು. ಹೆಚ್ಚು ರಾಜ್ಯ ಕೊಡು, ಹೆಚ್ಚು ಶಕ್ತಿ ಕೊಡು"

ಎಂದು ಬೇಡುತ್ತಿದ್ದುದು ಇವನಿಗೆ ಕೇಳಿಬಂತು. ತಕ್ಷಣವೆ ಫಕೀರನು ಮಂದಿರವನ್ನು ಬಿಡುವುದರಲ್ಲಿದ್ದನು. ಆದರೆ ಅಕ್ಬರನು ಅವನನ್ನು ಪುನಃ ಕುಳಿತುಕೊಳ್ಳುವಂತೆ ಹೇಳಿದನು.

ಪ್ರಾರ್ಥನೆಯಾದ ಮೇಲೆ ಅಕ್ಬರನು, "ಸ್ವಾಮಿ, ನೀವು ನನ್ನನ್ನು ನೋಡುವುದಕ್ಕೆ ಬಂದಿರಿ. ನನಗೆ ಏನನ್ನೂ ಹೇಳದೆ ನೀವು ಆಗಲೆ ಹೊರಡುವುದರಲ್ಲಿ ಇದ್ದಿರಲ್ಲ. ಏತಕ್ಕೆ?" ಎಂದು ಕೇಳಿದನು. ಫಕೀರನು "ಮಹಾಪ್ರಭುಗಳೆ, ನಾನು ಬಂದ ವಿಚಾರವಾಗಿ....ನಿಮಗೆ ತೊಂದರೆ ಕೊಡಲು ಬಯಸುವುದಿಲ್ಲ" ಎಂದನು. ಅಕ್ಬರನು ಬಲಾತ್ಕಾರ ಪಡಿಸಿದ ಮೇಲೆ ಫಕೀರನು "ಹಲವರು ವಿದ್ಯಾಭ್ಯಾಸಕ್ಕಾಗಿ ನನ್ನ ಹತ್ತಿರ ಬರುವರು. ಆದರೆ ಹಣವಿಲ್ಲದೆ ಇರುವುದರಿಂದ ನಾನು ಅವರ ಸೌಖ್ಯವನ್ನು ನೋಡಿಕೊಳ್ಳಲಾರೆ. ಅದಕ್ಕೆ ಪ್ರಭುಗಳಿಂದ ಏನನ್ನಾದರೂ ಸಹಾಯವನ್ನು ಪಡೆಯೋಣ ಎಂದು ಬಂದೆ" ಎಂದನು. "ಹಾಗಾದರೆ ನನಗೆ ಅದನ್ನು ಹೇಳದೆ ನೀವು ಹೋಗುವುದರಲ್ಲಿದ್ದಿರಲ್ಲ" ಎಂದನು. ಫಕೀರನು "ನೀವೆ ದೇವರನ್ನು ಐಶ್ವರ್ಯ, ಶಕ್ತಿ, ರಾಜ್ಯವನ್ನು ಕೊಡೆಂದು ಬೇಡುತ್ತಿದ್ದುದನ್ನು ನೋಡಿದಾಗ, ನಾನು ಆಗಲೆ ಭಿಕ್ಷೆ ಬೇಡುವವನ ಹತ್ತಿರ ನಾನೇಕೆ ಭಿಕ್ಷೆ ಬೇಡಲಿ: ಭಿಕ್ಷೆ ಬೇಡದೆ ಇರುವುದಕ್ಕೆ ಸಾಧ್ಯವಿಲ್ಲದೆ ಇದ್ದರೆ ದೇವರನ್ನು ಬೇಡುವ ಎಂದು ಆಲೋಚಿಸಿದೆ" ಎಂದನು.

೧೧೧೬. ಬ್ರಾಹ್ಮಣನೊಬ್ಬನು ಸನ್ಯಾಸಿಯನ್ನು ಕಂಡನು. ಇಬ್ಬರೂ ಪ್ರಾಪಂಚಿಕ ಮತ್ತು ಧಾರ್ಮಿಕ ವಿಷಯಗಳ ಮೇಲೆ ಬಹಳ ಹೊತ್ತು ಮಾತನಾಡಿದರು. ಕೊನೆಗೆ ಸನ್ಯಾಸಿ ಬ್ರಾಹ್ಮಣನಿಗೆ "ನೋಡಪ್ಪ, ಮಗು ಯಾರನ್ನು ನಿನ್ನವರು ಎಂದು ಹೇಳುತ್ತೀಯೊ ಅವರಾರೂ ನಿನ್ನವರಲ್ಲ" ಎಂದನು. ಬ್ರಾಹ್ಮಣ ಇದನ್ನು ನಂಬಲಿಲ್ಲ. ಯಾರಿಗೋಸ್ಕರ ಇವನು ಹಗಲು ರಾತ್ರಿ ದುಡಿಯುತ್ತಿದ್ದನೊ (ಅಂದರೆ ತನ್ನ ಮನೆಯವರಿಗೆ) ಆದರೂ ಕಷ್ಟಕಾಲದಲ್ಲಿ ಆಗುವುದಿಲ್ಲ ಎಂದು ಅವನು ಹೇಗೆ ಆಲೋಚಿಸಬಲ್ಲನು? ಅದಕ್ಕೆ ಬ್ರಾಹ್ಮಣನು "ಸ್ವಾಮಿ ನನಗೆ ಸ್ವಲ್ಪ ತಲೆನೋವು ಆದರೂ ನನ್ನ ತಾಯಿ ನನಗೆ ಮೇಲಾಗುವುದಕ್ಕೆ ಬೇಕಾದರೆ ತನ್ನ ಪ್ರಾಣವನ್ನೆ ಕೊಡಲು ಸಿದ್ಧಳಾಗಿರುವಳು. ಅಂತಹ ತಾಯಿ ನನ್ನ ಕಷ್ಟಕಾಲಕ್ಕೆ ಆಗುವುದಿಲ್ಲ ಎಂಬುದನ್ನು ನಾನು ನಂಬಲಾರೆ" ಎಂದನು. ಸನ್ಯಾಸಿ "ಹಾಗಾದರೆ ಅವಳು ಒಳ್ಳೆಯವಳೆ.

ಆದರೆ ನಿನಗೆ ನಿಜವಾಗಿ ಹೇಳುತ್ತೇನೆ ಕೇಳು, ನೀನು ತಪ್ಪು ತಿಳಿದು ಕೊಂಡಿರುವೆ. ನಿನ್ನ ತಾಯಿ, ಹೆಂಡತಿ ಮತ್ತು ಮಗ ಯಾರಾದರೂ ನಿನಗೆ ಜೀವ ಕೊಡಬಲ್ಲರೆಂದು ಒಂದು ಕ್ಷಣವೂ ನಂಬಬೇಡ. ಬೇಕಾದರೆ ನೀನು ಇದನ್ನು ಪರೀಕ್ಷಿಸಬಹುದು. ಮನೆಗೆ ಹೋಗಿ ಹೊಟ್ಟೆಯಲ್ಲಿ ಅಸಾಧ್ಯ ನೋವು ಎಂದು ನಟಿಸಿ ನರಳಾಡು. ನಾನು ಬಂದು ನಿನಗೆ ಒಂದು ತಮಾಷೆಯನ್ನು ತೋರಿಸುತ್ತೇನೆ" ಎಂದನು.

ಬ್ರಾಹ್ಮಣನು ಹಾಗೆಯೆ ಮಾಡಿದನು. ವೈದ್ಯರನ್ನು ಕರೆಸಿದರು. ಆದರೆ ಯಾರೂ ಇವನಿಗೆ ಗುಣ ಮಾಡಲು ಆಗಲಿಲ್ಲ. ರೋಗಿಯ ತಾಯಿ ದುಃಖದಿಂದ ಅಳುತ್ತಿದ್ದಳು. ಹೆಂಡತಿ ಮಕ್ಕಳು ಅಳತೊಡಗಿದರು. ಈ ಸಮಯಕ್ಕೆ ಸನ್ಯಾಸಿ ಬಂದನು.

ಸನ್ಯಾಸಿ "ರೋಗ ಬಹಳ ದಾರುಣವಾಗಿದೆ. ಯಾರಾದರೂ ಬಂದು ತಮ್ಮ ಪ್ರಾಣವನ್ನು ಕೊಟ್ಟಲ್ಲದೆ ಇವನನ್ನು ಉಳಿಸುವುದಕ್ಕೆ ಆಗುವುದಿಲ್ಲ" ಎಂದನು. ಇದನ್ನು ಕೇಳಿ ಎಲ್ಲರೂ ಸ್ತಬ್ಧರಾದರು. ಸನ್ಯಾಸಿ ಮುದುಕಿಯಾದ ತಾಯಿಯನ್ನು ನೋಡಿ "ನಿನ್ನ ವೃದ್ಧಾಪ್ಯ ದಲ್ಲಿ ತನಗೆ ಮತ್ತು ಮನೆಗೆ ಸಂಪಾದಿಸುವ ಮಗನನ್ನು ಕಳೆದುಕೊಂಡರೆ ನೀನು ಬದುಕಿದ್ದರೂ ಒಂದೆ ಸತ್ತರೂ ಒಂದೆ. ನೀನು ಅವನ ಬದಲು ಪ್ರಾಣವನ್ನು ಕೊಡಲು ಸಿದ್ಧಳಾದರೆ ಅವನನ್ನು ಬದುಕಿಸಬಲ್ಲೆ. ನೀನು ಅವನ ತಾಯಿ ಆಗಿರುವುದರಿಂದ ಅವನಿಗಾಗಿ ತ್ಯಾಗ ಮಾಡದಿದ್ದರೆ ಪ್ರಪಂಚದಲ್ಲಿ ಮತ್ತಾರು ಇದನ್ನು ಮಾಡಬಲ್ಲರು?" ಎಂದು ಕೇಳಿದನು.

ತಾಯಿ ಕಂಬನಿ ಸುರಿಸುತ್ತ ಹೀಗೆ ಹೇಳಿದಳು: "ಮಹಾ ಸ್ವಾಮಿ, ನನ್ನ ಮಗನಿಗಾಗಿ ನೀವು ಏನು ಅಪ್ಪಣೆ ಕೊಡಿಸಿದರೆ ಅದನ್ನು ಮಾಡಲು ಸಿದ್ಧಳಾಗಿರುವೆನು. ಆದರೆ ನೋಡಿ ನನ್ನ ಪ್ರಾಣವನ್ನು ನನ್ನ ಮಗನ ಜೀವದೊಂದಿಗೆ ಹೋಲಿಸಿ ನೋಡಿದರೆ ಬೆಲೆಯೇನೂ ಇಲ್ಲ. ಆದರೂ ನನ್ನ ಕಾಲಾನಂತರ ನನ್ನ ಉಳಿದ ಮಕ್ಕಳ ಗತಿ ಏನಾಗುವುದು ಎಂಬ ಆಲೋಚನೆ ನನ್ನನ್ನು ಹೇಡಿಯನ್ನಾಗಿ ಮಾಡುವುದು. ಅಯ್ಯೋ ದುರದೃಷ್ಟಳು ನಾನು. ಈ ಮಕ್ಕಳು ಇದಕ್ಕೆ ಅಡ್ಡಿಯಾಗಿರುವರು." ರೋಗಿಯ ಹೆಂಡತಿ, ಸನ್ಯಾಸಿಗೂ ಮತ್ತು ತನ್ನ ಅತ್ತೆಗೂ ನಡೆಯುತ್ತಿದ್ದ ಸಂಭಾಷಣೆಯನ್ನು ಕೇಳಿ, ಅಳುತ್ತ ತನ್ನ ತಾಯಿ ತಂದೆಗಳಕಡೆ ತಿರುಗಿ "ನಿಮಗೋಸ್ಕರ ನಾನು ಈ ತ್ಯಾಗವನ್ನು ಮಾಡಲಾರೆ" ಎಂದಳು. ಸನ್ಯಾಸಿ ಹೆಂಡತಿಯ ಕಡೆ ತಿರುಗಿ, ತಾಯಿ ಪ್ರಾಣ ಕೊಡದ ಕಾರಣ

ಗಂಡನನ್ನು ಉಳಿಸುವುದಕ್ಕೆ ಅವಳು ತನ್ನ ಪ್ರಾಣವನ್ನು ಕೊಡಬಲ್ಲಳೆ ಎಂದು ಕೇಳಿದನು. ಹೆಂಡತಿ "ಅಯ್ಯೋ ಪಾಪಿಷ್ಠೆ ನಾನು. ವಿಧವೆ ಯಾಗುವುದು ನನ್ನ ಹಣೆಯಲ್ಲಿ ಬರೆದಿದ್ದರೆ ಆಗಲಿ ನನ್ನ ತಂದೆ ತಾಯಿ ಗಳಿಗೆ ಅವರ ಮಗಳ ಸಾವಿನಿಂದ ಆಗುವ ದುಃಖವನ್ನು ನಾನು ನೋಡ ಲಾರೆ" ಎಂದಳು. ಹೀಗೆ ಎಲ್ಲರೂ ಕಷ್ಟದಿಂದ ತಪ್ಪಿಸಿಕೊಂಡರು. ಸನ್ಯಾಸಿ ರೋಗಿಗೆ "ಈಗ ನೋಡಿದೆಯ, ನಿನಗಾಗಿ ಯಾರೂ ಪ್ರಾಣ ವನ್ನು ಕೊಡಲು ಸಿದ್ಧರಾಗಲಿಲ್ಲ. ಪ್ರಪಂಚದಲ್ಲಿ ಯಾರನ್ನೂ ನೆಚ್ಚು ವುದಕ್ಕೆ ಆಗುವುದಿಲ್ಲ ಎಂದು ನಾನು ಹಿಂದೆ ಹೇಳಿದ್ದು ಈಗ ಗೊತ್ತಾ ಯಿತೆ?" ಎಂದನು. ಬ್ರಾಹ್ಮಣನು ಇದೆಲ್ಲವನ್ನೂ ನೋಡಿದ ಮೇಲೆ ತನ್ನ ಮನೆಯನ್ನು ಬಿಟ್ಟು ಸನ್ಯಾಸಿಯನ್ನು ಹಿಂಬಾಲಿಸಿದನು.

೧೧೧೭. ಶಿಷ್ಯನೊಬ್ಬನು ತನ್ನ ಗುರುವಿಗೆ ತನ್ನ ಹೆಂಡತಿ ತನ್ನನ್ನು ತುಂಬಾ ಪ್ರೀತಿಸುತ್ತಿರುವುದರಿಂದ ಪ್ರಪಂಚವನ್ನು ತ್ಯಜಿಸ ಲಾರೆ ಎಂದನು. ಶಿಷ್ಯನು ಹಠಯೋಗವನ್ನು ಅಭ್ಯಾಸಮಾಡುತ್ತಿದ್ದನು. ಅವನ ವಾದದಲ್ಲಿ ತಿರುಳು ಏನೂ ಇಲ್ಲ ಎನ್ನುವುದಕ್ಕಾಗಿ ಅವನಿಗೆ ಹಠ ಯೋಗದಲ್ಲಿ ಕೆಲವು ರಹಸ್ಯಗಳನ್ನು ಹೇಳಿಕೊಟ್ಟನು. ಒಂದು ದಿನ ಇದ್ದಕ್ಕೆ ಇದ್ದಂತೆಯೇ ಶಿಷ್ಯನ ಮನೆಯಲ್ಲಿ ದೊಡ್ಡ ಗದ್ದಲವೆದ್ದಿತು. ಸುತ್ತಲೂ ಅಳು ಕೇಳಿಬಂದಿತು ನೆರೆಹೊರೆಯವರು ಬಂದು ಹಠ ಯೋಗಿಯನ್ನು ಒಂದು ಕೋಣೆಯಲ್ಲಿ ನೋಡಿದರು. ಅವನು ನಿಶ್ಚೇಷ್ಟಿತ ನಾಗಿ ಒಂದು ವಿಚಿತ್ರ ರೀತಿಯಲ್ಲಿ ಬಿದ್ದಿದ್ದನು. ಅವರೆಲ್ಲರೂ ಇವನು ಸತ್ತುಹೋದನೆಂದು ತಿಳಿದುಕೊಂಡರು. ಅವನ ಹೆಂಡತಿ "ಅಯ್ಯೋ, ನನ್ನ ಪ್ರಿಯತಮನೆ! ಎಲ್ಲಿ ಹೋದೆ? ನಮ್ಮನ್ನು ಏತಕ್ಕೆ ಕೈಬಿಟ್ಟೆ. ಅಯ್ಯೋ, ಇಂತಹ ಗಂಡಾಂತರ ಬರುವುದೆಂದು ನಾವು ಎಣಿಸಿಯೆ ಇರಲಿಲ್ಲ" ಎಂದು ಗೋಳಾಡುತ್ತಿದ್ದಳು. ಇಷ್ಟುಹೊತ್ತಿಗೆ ನೆಂಟರು ಹೆಣವನ್ನು ಸ್ಮಶಾನಕ್ಕೆ ಹೊತ್ತುಕೊಂಡು ಹೋಗುವುದಕ್ಕಾಗಿ ಒಂದು ಮಂಚವನ್ನು ತಂದರು. ಆಗ ಒಂದು ದೊಡ್ಡ ಕಷ್ಟಕ್ಕೆ ಈಡಾದರು. ಆ ಮನುಷ್ಯನು ವಕ್ರರೀತಿಯಲ್ಲಿ ಬಿದ್ದಿದ್ದುದರಿಂದ ಅವನನ್ನು ಬಾಗಿಲಿನ ಮೂಲಕವಾಗಿ ಹೊರಗೆ ತರಲು ಆಗಲಿಲ್ಲ. ಆಗ ನೆರೆಮನೆಯವ ನೊಬ್ಬನು ಬಾಗಿಲನ್ನು ಒಡೆಯುವುದಕ್ಕೆ ಒಂದು ಕೊಡಲಿಯನ್ನು ತಂದನು. ಅಲ್ಲಿಯವರೆವಿಗೂ ಸಹಿಸಲು ಅಸಾಧ್ಯವಾದ ರೀತಿಯಲ್ಲಿ ಹೆಂಡತಿ ಅಳುತ್ತಿದ್ದಳು. ಕೊಡಲಿ ಶಬ್ದ ಕೇಳಿದೊಡನೆಯೆ ಅವಳು ಆ

ಸ್ಥಳಕ್ಕೆ ಓಡಿಹೋಗಿ ಅವರು ಏನು ಮಾಡುತ್ತಿರುವರು ಎಂದು ಕೇಳಿದಳು. ಗಂಡನು ವಿಚಿತ್ರ ರೀತಿಯಲ್ಲಿ ಬಿದ್ದಿರುವುದರಿಂದ ಅದನ್ನು ಹೊರಗೆ ತರಲು ಅಸಾಧ್ಯವಾಗಿರುವುದರಿಂದ ಬಾಗಿಲನ್ನು ಒಡೆಯುತ್ತಿರುವೆವು ಎಂದರು. ಹೆಂಡತಿ "ಬೇಡ, ಬೇಡ, ಈಗ ಹಾಗೆ ಮಾಡಬೇಡಿ. ನಾನು ಈಗ ವಿಧವೆಯಾದೆ. ನನ್ನನ್ನು ನೋಡಿಕೊಳ್ಳುವವರಾರೂ ಇಲ್ಲ. ತಬ್ಬಲಿ ಮಕ್ಕಳನ್ನು ನಾನು ನೋಡಿಕೊಳ್ಳಬೇಕಾಗಿರುವುದು. ನೀವು ಈಗ ಬಾಗಿಲನ್ನು ಒಡೆದರೆ ಆಮೇಲೆ ಯಾರೂ ಅದನ್ನು ಸರಿಮಾಡುವವರಿಲ್ಲ: ಏನು ಆಗಬೇಕಾಗಿತ್ತೋ ಅದು ನನ್ನ ಗಂಡನಿಗೆ ಆಯಿತು. ಅವನ ಕೈಕಾಲುಗಳನ್ನು ಕತ್ತರಿಸಿ ಹೊರಗೆ ತೆಗೆದುಕೊಂಡು ಹೋಗಿ" ಎಂದಳು. ಇದನ್ನು ಕೇಳಿ ಹಠಯೋಗಿ ತಕ್ಷಣವೆ ಎದ್ದುನಿಂತನು. ಇಷ್ಟು ಹೊತ್ತಿಗೆ ಔಷಧಿಯ ಅಮಲು ಇಳಿದಿತ್ತು. ಅವನು "ಎಲೆ ಹೆಂಗಸೆ, ನನ್ನ ಕೈಕಾಲುಗಳನ್ನು ಕತ್ತರಿಸಬೇಕೆಂದಿರುವೆಯ?" ಎಂದು ಹೇಳುತ್ತ ಸಂಸಾರವನ್ನು ತ್ಯಜಿಸಿ ಗುರುವಿನೊಂದಿಗೆ ಹೊರಟುಹೋದನು.

## ಮಾಯೆಯ ಸ್ವರೂಪ

೧೧೦೮. ಒಬ್ಬನು ಕಾಡಿನಲ್ಲಿ ಹೋಗುತ್ತಿದ್ದನು. ದಾರಿಯಲ್ಲಿ ಅವನನ್ನು ಮೂರುಜನ ಕಳ್ಳರು ಹಿಡಿದರು. ಅವನ ಹತ್ತಿರ ಇದ್ದುದನ್ನೆಲ್ಲ ಕಿತ್ತುಕೊಂಡುಬಿಟ್ಟರು ನಂತರ ಮೊದಲನೆ ಕಳ್ಳ "ಇವನನ್ನು ಸುಮ್ಮನೆ ಬಿಡುವುದರಿಂದ ಪ್ರಯೋಜನವೇನು?" ಎಂದು ಹೇಳಿ ಕತ್ತಿಯನ್ನು ಬೀಸಿ ಸಾಯಿಸುವುದರಲ್ಲಿದ್ದನು. ಆಗ ಎರಡನೆ ಕಳ್ಳ "ಅವನನ್ನು ಕೊಂದು ಪ್ರಯೋಜನವೇನು. ಕೈಕಾಲು ಕಟ್ಟಿ ಒಂದುಕಡೆ ಎಸೆಯಿರಿ" ಎಂದನು. ಅವರು ಅವನ ಕೈಕಾಲು ಕಟ್ಟಿ ಅಲ್ಲೇ ಬಿಟ್ಟುಹೋದರು. ಅವರು ಸ್ವಲ್ಪದೂರ ಹೋದಮೇಲೆ ಮೂರನೆಯ ಕಳ್ಳ ಹಿಂತಿರುಗಿ ಬಂದು "ಅಯ್ಯೋ ಪಾಪ! ನಿನಗೆ ವ್ಯಥೆಯಾಯಿತೆ? ನಿನ್ನ ಕಟ್ಟುಗಳನ್ನು ಬಿಚ್ಚಿ ಬಿಡುವೆನು" ಎಂದು ಹೇಳಿ ಅವನ ಕಟ್ಟನ್ನು ಬಿಚ್ಚಿದಮೇಲೆ "ಈಗ ನನ್ನೊಂದಿಗೆ ಬಾ, ದಾರಿಯನ್ನು ತೋರಿಸುತ್ತೇನೆ" ಎಂದು ಕರೆದುಕೊಂಡು ಹೋದನು. ಬಹಳದೂರ ನಡೆದ ಮೇಲೆ ದಾರಿ ಸಿಕ್ಕಿತು. ಕಳ್ಳನು ಅವನಿಗೆ "ನೋಡು! ಅಲ್ಲಿ ನಿನ್ನ ಮನೆ ಇರುವುದು, ಈ ದಾರಿಯಲ್ಲೇ ನಡೆದು ಹೋದರೆ ಮನೆ ಸಿಕ್ಕುವುದು" ಎಂದನು. ಪ್ರಯಾಣಿಕನು ಅವನನ್ನು ವಂದಿಸುತ್ತ "ಅಯ್ಯ, ನೀನು ನನಗೆ ತುಂಬಾ

ಉಪಕಾರ ಮಾಡಿರುವಿ. ನಾನು ನಿನಗೆ ತುಂಬಾ ಋಣಿಯಾಗಿರುವೆನು. ನನ್ನೊಂದಿಗೆ ನೀನು ಮನೆಗೆ ಬರಲಾರೆಯ?" ಎಂದನು. ಕಳ್ಳನು "ಇಲ್ಲ ನಾನು ಬರಲಾರೆ. ಪೋಲೀಸಿನವರು ನನ್ನನ್ನು ಕಂಡುಹಿಡಿಯುವರು" ಎಂದನು.

ಈ ಪ್ರಪಂಚ ಒಂದು ಕಾಡು. ಮೂರು ಜನ ಕಳ್ಳರೆ ಪ್ರಕೃತಿಯ ಮೂರು ಗುಣಗಳಾದ ಸತ್ತ್ವ ರಜಸ್ಸು ಮತ್ತು ತಮಸ್ಸು. ಜೀವನೆ ಪ್ರಯಾಣಿಕನು. ಆತ್ಮಜ್ಞಾನವೆ ಅವನ ಆಸ್ತಿ. ತಮಸ್ಸು ಅವನನ್ನು ಪ್ರಪಂಚದ ಬಂಧನಗಳಿಂದ ಕಟ್ಟಿ ಹಾಕುವುದು. ಆದರೆ ಸತ್ತ್ವಗುಣ, ರಜಸ್ಸು ಮತ್ತು ತಮಸ್ಸುಗಳ ಹಾವಳಿಯಿಂದ ಅವನನ್ನು ಕಾಪಾಡುವುದು. ಸತ್ತ್ವದಲ್ಲಿ ಶರಣಾಗುವುದರಿಂದ ಜೀವನು ತಮಸ್ಸಿನ ಪರಿಣಾಮವಾದ ಕಾಮ ಕ್ರೋಧ ಮೋಹದಿಂದ ಪಾರಾಗುವನು. ಪ್ರಪಂಚದ ಬಂಧನದಿಂದ ಸತ್ತ್ವವು ಜೀವನನ್ನು ಪಾರುಮಾಡುವುದು. ಆದರೆ ಸತ್ತ್ವಗುಣ ಕೂಡ ಕಳ್ಳನೆ. ಆದರೆ ಅದು ಜೀವಿಯನ್ನು ಪರಂಧಾಮದ ತನಕ ಕರೆದುಕೊಂಡು ಹೋಗಿ "ನೋಡು ಅಲ್ಲಿ ನಿನ್ನ ಮನೆ" ಎನ್ನುವುದು. ನಂತರ ಅದು ಮಾಯವಾಗುವುದು. ಸತ್ತ್ವಗುಣ ಕೂಡ ಪರಬ್ರಹ್ಮನೆಡೆಗೆ ಹೋಗಲಾರದು.

೧೧೧೯. ಒಂದು ದಿನ ಪುರೋಹಿತನೊಬ್ಬನು ತನ್ನ ಶಿಷ್ಯನ ಹಳ್ಳಿಯ ಕಡೆಗೆ ಹೋಗುತ್ತಿದ್ದನು. ಅವನೊಂದಿಗೆ ಯಾರೂ ಆಳುಗಳು ಇರಲಿಲ್ಲ. ದಾರಿಯಲ್ಲಿ ಒಬ್ಬ ಮೋಚಿಯುವನನ್ನು ನೋಡಿ "ಏನಪ್ಪ, ಒಳ್ಳೆಯ ಮನುಷ್ಯ, ನನ್ನೊಂದಿಗೆ ಆಳಿನಂತೆ ಬರುತ್ತೀಯ. ನನ್ನೊಂದಿಗೆ ಬಂದರೆ ನಿನಗೆ ಚೆನ್ನಾಗಿ ಊಟ ಸಿಕ್ಕುವುದು. ಚೆನ್ನಾಗಿ ನಿನ್ನನ್ನು ನೋಡಿಕೊಳ್ಳುವರು" ಎಂದನು. ಮೋಚಿಯು "ಸ್ವಾಮಿ, ನಾನು ಕೆಳಗಿನ ಜಾತಿಯವನು. ನಾನು ನಿಮ್ಮ ಜವಾನನಂತೆ ಹೇಗೆ ಬರಲಿ?" ಎಂದನು. ಪುರೋಹಿತನು "ಪರವಾಯಿಲ್ಲ. ನಿನ್ನ ಜಾತಿಯನ್ನು ಯಾರಿಗೂ ಹೇಳಬೇಡ. ಯಾರೊಂದಿಗೂ ನೀನು ಮಾತನ್ನೂ ಆಡಬೇಡ ಮತ್ತು ಯಾರ ಪರಿಚಯವನ್ನೂ ನೀನು ಮಾಡಿಕೊಳ್ಳಬೇಡ" ಎಂದನು. ಮೋಚಿ ಒಪ್ಪಿಕೊಂಡನು. ಸಂಜೆ ಪುರೋಹಿತನು ತನ್ನ ಶಿಷ್ಯನ ಮನೆಯಲ್ಲಿ ಪ್ರಾರ್ಥನೆ ಮಾಡುತ್ತಿದ್ದಾಗ ಮತ್ತೊಬ್ಬ ಬ್ರಾಹ್ಮಣ ಬಂದು ಪುರೋಹಿತನ ಆಳಿಗೆ "ಹೋಗಿ ನನ್ನ ಎಕ್ಕಡವನ್ನು ತೆಗೆದುಕೊಂಡು ಬಾ" ಎಂದನು. ತನ್ನ ಯಜಮಾನನ ಅಪ್ಪಣೆಯಂತೆ

ಮೋಚಿ ಏನನ್ನೂ ಮಾತನಾಡಲಿಲ್ಲ. ಬ್ರಾಹ್ಮಣನು ಎರಡುವೇಳೆ ಹೇಳಿದನು. ಆಗಲೂ ಅವನು ಸುಮ್ಮನೆ ಇದ್ದನು. ಬ್ರಾಹ್ಮಣನು ಪದೇಪದೇ ಹೇಳಿದನು. ಆದರೂ ಆಳು ಸ್ವಲ್ಪವೂ ಏಳಲೇ ಇಲ್ಲ. ಕೊನೆಗೆ ಸಾಕಾಗಿ ಬ್ರಾಹ್ಮಣನು ರೇಗಿ "ಲೋ ಬ್ರಾಹ್ಮಣನ ಅಪ್ಪಣೆಯನ್ನು ನಿರಾಕರಿಸುವ ನಿನ್ನ ಧೈರ್ಯ ಎಷ್ಟೋ? ನಿನ್ನ ಹೆಸರೇನು? ನೀನೇನು ನಿಜವಾಗಿ ಮೋಚಿಯೊ?" ಎಂದನು. ಮೋಚಿಯು ಇದನ್ನು ಕೇಳಿ ಅಂಜಿಕೆಯಿಂದ ನಡುಗುತ್ತ ಪುರೋಹಿತನ ಕಡೆ ಕನಿಕರದಿಂದ ನೋಡುತ್ತ "ಓ! ಮಹಾಸ್ವಾಮಿ, ನನ್ನನ್ನು ಕಂಡುಹಿಡಿದುಬಿಟ್ಟಿರು, ನಾನು ಇನ್ನು ಹೆಚ್ಚುಕಾಲ ಇರಲಾರೆ, ನಾನು ಹೊರಟು ಹೋಗುವೆನು" ಎಂದು ಅವನು ಓಡಿಹೋದನು. ಇದರಂತೆಯೇ ಮಾಯೆಯನ್ನು ಕಂಡುಹಿಡಿದ ತಕ್ಷಣವೆ ಅದು ಓಡಿಹೋಗುವುದು.

೧೧೧೦. ಮಾಯೆ ಅಜ್ಞಾತವಾದುದು. ಒಂದುಸಲ ನಾರದನು ಪರಮೇಶ್ವರನನ್ನು ಕಂಡು "ಪ್ರಭು, ಅಸಾಧ್ಯವಾದುದನ್ನು ಸಾಧ್ಯ ಮಾಡಬಲ್ಲ ನಿನ್ನ ಮಾಯಾಶಕ್ತಿಯನ್ನು ತೋರು" ಎಂದು ಕೇಳಿಕೊಂಡನು. ಪರಮೇಶ್ವರನು ಒಪ್ಪಿಕೊಂಡನು. ಇದರಂತೆಯೆ ಒಂದು ದಿನ ಪರಮೇಶ್ವರನು ನಾರದನೊಂದಿಗೆ ತಿರುಗಾಡಲು ಹೊರಟನು. ಸ್ವಲ್ಪದೂರ ಹೋದಮೇಲೆ ದೇವರಿಗೆ ಬಾಯಾರಿ ದಣಿವಾಯಿತು. ಆದಕ್ಕೆ ಅವನು ಕುಳಿತುಕೊಂಡು ನಾರದನಿಗೆ, "ನಾರದ, ನನಗೆ ತುಂಬಾ ಬಾಯಾರಿಕೆ. ಎಲ್ಲಿಂದಲಾದರೂ ಸ್ವಲ್ಪ ನೀರನ್ನು ತೆಗೆದುಕೊಂಡು ಬಾ" ಎಂದನು. ನಾರದನು ತಕ್ಷಣವೆ ನೀರನ್ನು ತರಲು ಹೊರಟನು.

ಹತ್ತಿರ ಎಲ್ಲಿಯೂ ನೀರು ಸಿಕ್ಕದೆ ಬಹಳ ದೂರ ಹೋದನು. ದೂರದಲ್ಲಿ ಒಂದು ನದಿ ಕಾಣಿಸಿತು. ನದಿಯ ಹತ್ತಿರ ಹೋದಾಗ ಬಹಳ ಸುಂದರವಾದ ಒಬ್ಬ ಯುವತಿ ಕುಳಿತುಕೊಂಡಿರುವುದನ್ನು ನೋಡಿದನು. ಅವಳ ರೂಪಿಗೆ ತಕ್ಷಣವೆ ಮಾರುಹೋದನು. ನಾರದನು ಅವಳ ಹತ್ತಿರ ಹೋದ ತಕ್ಷಣವೆ ಅವಳು ಇಂಪಾಗಿ ಮಾತನಾಡತೊಡಗಿದಳು. ಸ್ವಲ್ಪ ಹೊತ್ತಿನಲ್ಲಿಯೆ ಒಬ್ಬರು ಇನ್ನೊಬ್ಬರನ್ನು ಪ್ರೀತಿಸತೊಡಗಿದರು. ನಾರದ ಅವಳನ್ನು ಮದುವೆಯಾಗಿ ಗೃಹಸ್ಥನಂತೆ ನೆಲೆಸಿದನು. ಕಾಲಕ್ರಮದಲ್ಲಿ ನಾರದನಿಗೆ ಅವಳಿಂದ ಹಲವು ಮಕ್ಕಳಾದುವು. ನಾರದನು ಹೀಗೆ ತನ್ನ

ಹೆಂಡತಿ ಮಕ್ಕಳೊಂದಿಗೆ ಸುಖವಾಗಿರುತ್ತಿದ್ದಾಗ ಒಂದು ದೊಡ್ಡ ಉಪದ್ರವ ಬಂದಿತು. ಮೃತ್ಯು ಪ್ರತಿಮನೆಯಲ್ಲೂ ತನ್ನ ಸೂರೆಯನ್ನು ಮೊದಲುಮಾಡಿತು. ಆ ಸ್ಥಳವನ್ನು ಬಿಟ್ಟು ಬೇರೆ ಕಡೆಗೆ ಹೊರಟು ಹೋಗಬೇಕೆಂದು ನಾರದನು ಇತ್ಯರ್ಥಮಾಡಿದನು. ಹೆಂಡತಿಯೂ ಇದಕ್ಕೆ ಒಪ್ಪಿದಳು. ಇಬ್ಬರೂ ತಮ್ಮ ಮಕ್ಕಳನ್ನು ಕರೆದುಕೊಂಡು ಹೊರಟರು. ಅವರು ನದಿಯನ್ನು ದಾಟುವುದಕ್ಕೆ ಸೇತುವೆ ಹತ್ತಿರ ಬಂದ ತಕ್ಷಣವೆ ಒಂದು ದೊಡ್ಡ ಪ್ರವಾಹ ಬಂತು. ಮಕ್ಕಳೆಲ್ಲ ಒಂದೊಂದಾಗಿ ಅದರಲ್ಲಿ ಮುಳುಗಿ ಹೋದರು. ಕೊನೆಗೆ ಹೆಂಡತಿಯೂ ಅದರಲ್ಲಿ ಮುಳುಗಿಹೋದಳು. ಎಲ್ಲರನ್ನೂ ಕಳೆದುಕೊಂಡು ನಾರದನು ತುಂಬಾ ದುಃಖಾಕ್ರಾಂತನಾಗಿ ದಡದ ಮೇಲೆ ಕುಳಿತುಕೊಂಡು ಅಳಲಾರಂಭಿಸಿದನು. ಆಗ ತಾನೆ ಪರಮೇಶ್ವರನು ಅವನ ಮುಂದೆ ಕಾಣಿಸಿಕೊಂಡು "ಹೇ ನಾರದ! ನೀರೆಲ್ಲಿ? ನೀನು ಏತಕ್ಕೆ ಅಳುತ್ತಿರುವೆ?" ಎಂದನು. ದೇವರ ದರ್ಶನ ನಾರದನಿಗೆ ಜಾಗ್ರತೆಯನ್ನುಂಟುಮಾಡಿತು. ಅವನಿಗೆ ಆಗ ಎಲ್ಲವೂ ಗೊತ್ತಾಯಿತು. ಆಗ "ಹೇ ದೇವ! ನಿನಗೆ ನಮಸ್ಕಾರ; ಅದ್ಭುತವಾದ ನಿನ್ನ ಮಾಯೆಗೂ ನಮಸ್ಕಾರ" ಎಂದನು.

೧೧೧೧. ಒಂದು ದಿನ ಹೆಣ್ಣು ಹುಲಿಯೊಂದು ಕುರಿಯ ಮಂದೆಯ ಮೇಲೆ ಬಿತ್ತು. ಅದು ಗರ್ಭಿಣಿಯಾಗಿತ್ತು. ಮಂದೆಯ ಮೇಲೆ ಬಿದ್ದಾಗ ಅದು ಮರಿಯನ್ನು ಹೆತ್ತು ಸತ್ತುಹೋಯಿತು. ಆದರೆ ಆ ಹುಲಿಯ ಮರಿ ಬದುಕಿ ಕುರಿಯ ಮಂದೆಯಲ್ಲಿಯೇ ಬೆಳೆಯಿತು. ಕುರಿಗಳೆಲ್ಲ ಹುಲ್ಲುಗಾವಲಿನಲ್ಲಿ ಹುಲ್ಲನ್ನು ಮೇಯುತ್ತಿದ್ದವು. ಹುಲಿಯ ಮರಿ ಕೂಡ ಅವರಂತೆಯೇ ಮಾಡಿತು. ಕುರಿಗಳು ಅರಚುತ್ತಿದ್ದವು. ಹುಲಿಯ ಮರಿಯು ಅದನ್ನೆ ಅನುಕರಿಸಲು ಯತ್ನಿಸಿತು. ಕಾಲಕ್ರಮೇಣ ಅದು ಒಂದು ದೊಡ್ಡ ಹುಲಿಯಾಯಿತು. ಆಕಸ್ಮಾತ್ತಾಗಿ ಮತ್ತೊಂದು ಹುಲಿ ಬಂದು ಈ ಮಂದೆಯನ್ನು ಎದುರಿಸಿತು. ಕುರಿ ಮಂದೆಯಲ್ಲಿ ಕುರಿ-ಹುಲಿಯನ್ನು ನೋಡಿ ಅದಕ್ಕೆ ಆಶ್ಚರ್ಯವಾಯಿತು. ಅದನ್ನು ಅಟ್ಟಿಸಿಕೊಂಡು ಹೋಗಿ ಕುತ್ತಿಗೆಯನ್ನು ಹಿಡಿಯಿತು. ಅಂಜಿಕೆಯಿಂದ ಅದು ಕುರಿಯಂತೆ ಅರಚಲು ಮೊದಲು ಮಾಡಿತು. ಅಂತೂ ಹಳೆಯ ಹುಲಿಯು ಇದನ್ನು ಒಂದು ಕೊಳದ ಹತ್ತಿರ ಕರೆದುಕೊಂಡು ಹೋಗಿ ಇಬ್ಬರ ನೆರಳನ್ನೂ ಅದರಲ್ಲಿ ತೋರಿಸಿ "ನೋಡು; ನೀನು ಕೂಡ ನನ್ನಂತೆ ಇರುವೆ. ನೀನು ಕೂಡ ನನ್ನಂತೆ ಒಂದು ಹುಲಿ. ಈಗ

ಈ ಮಾಂಸವನ್ನು ತಿನ್ನು" ಎಂದು ಒಂದು ಚೂರು ಮಾಂಸವನ್ನು ಅದರ ಬಾಯಿಗೆ ತುರುಕಿತು. ಆದರೆ ಮೊದಲು ಕುರಿಹುಲಿಯು ಏನು ಮಾಡಿದರೂ ತಿನ್ನಲಿಲ್ಲ. ಅರಚುತ್ತ 'ನಾನು ಕುರಿ' ಎಂದಿತು. ಆದರೆ ರಕ್ತದ ರುಚಿ ಸ್ವಲ್ಪ ಗೊತ್ತಾದ ಕೂಡಲೆ ಅದರಲ್ಲಿ ಸುಪ್ತವಾಗಿದ್ದ ವ್ಯಾಘ್ರಗುಣ ಜಾಗ್ರತವಾಗಿ ಅದು ಮಾಂಸವನ್ನು ತಿನ್ನಲು ಮೊದಲು ಮಾಡಿತು. ಆಗ ಹಳೆಯ ಹುಲಿ "ಈಗ ಗೊತ್ತಾಯಿತೆ, ನೀನೂ ಕೂಡ ನನ್ನಂತೆಯೆ ಎಂಬುದು? ಬಾ ನನ್ನೊಂದಿಗೆ ಕಾಡಿಗೆ ಹೋಗೋಣ" ಎಂದಿತು. ಹೀಗೆಯೆ ಒಬ್ಬನಿಗೆ ಗುರು ಅನುಗ್ರಹ ವಿದ್ದರೆ ಅಂಜಿಕೆಯಿಲ್ಲ. ಗುರು ನಿನ್ನ ಕಣ್ಣನ್ನು ತೆರೆದು ನೀನು ಯಾರು? ನಿನ್ನ ನಿಜಸ್ವರೂಪವೇನು ಎಂಬುದನ್ನು ಹೇಳುವನು.

೧೧೧೨. ಆತ್ಮಪರೀಕ್ಷೆ ಮಾಡುತ್ತಿರುವಾಗ ಮನಸ್ಸು ನಿತ್ಯಶಾಂತ ಸ್ಥಿತಿಗೆ ಬಂದಾಗ ಪರಬ್ರಹ್ಮನ ದರ್ಶನವಾಗುವುದು.

ಒಂದು ಸಲ ಒಬ್ಬನು ರಾಜನನ್ನು ನೋಡಬೇಕಾಗಿತ್ತು. ರಾಜನು ಏಳು ಬಾಗಿಲುಗಳಾಚೆ ಅಂತಃಪುರದಲ್ಲಿ ಇದ್ದನು. ಮನುಷ್ಯನು ಅರಮನೆಗೆ ಬಂದು ಮೊದಲನೆ ಬಾಗಿಲಲ್ಲಿ ಒಬ್ಬ ದೊಡ್ಡ ಮನುಷ್ಯನು ಬಹಳ ಆಳುಕಾಳಿನೊಂದಿಗೆ ತುಂಬಾ ಠೀವಿಯಿಂದ ಕುಳಿತಿದ್ದುದನ್ನು ನೋಡಿದನು. ಇವನನ್ನು ನೋಡಿ ಮನುಷ್ಯನು ತನ್ನ ಸ್ನೇಹಿತನನ್ನು "ಇವನೆ ದೊರೆ?" ಎಂದು ಕೇಳಿದನು. ಸ್ನೇಹಿತನು ನಗುತ್ತ "ಅಲ್ಲ" ಎಂದನು. ಹೀಗೆ ಅವನು ಬಾಗಿಲುಗಳನ್ನು ದಾಟಿದನು. ಪ್ರತಿಯೊಂದು ಬಾಗಿಲಿನಲ್ಲಿಯೂ ಒಬ್ಬರಿಗಿಂತ ಒಬ್ಬರು ಅತಿಶಯವಾದ ಆಡಂಬರದಲ್ಲಿದ್ದರು. ಅವನು ಅರಮನೆ ಒಳಕ್ಕೆ ಹೋದಷ್ಟೂ ಅಲ್ಲಿಯ ಜನರು ಹೆಚ್ಚು ಠೀವಿಯಿಂದ ಇರುತ್ತಿದ್ದುದನ್ನು ನೋಡಿದನು. ಪ್ರತಿಯೊಂದು ಬಾಗಿಲಿಗೆ ಬಂದಾಗಲೂ ತಾನು ದೊರೆಯನ್ನು ಕಂಡೆನೆಂದು ತಿಳಿದು ಸ್ನೇಹಿತನನ್ನು ಕೇಳುತ್ತಿದ್ದನು. ಅವನು ಏಳನೆ ಬಾಗಿಲನ್ನು ದಾಟಿ ದೊರೆಯನ್ನು ಸಂದರ್ಶಿಸಿದಾಗ ಅವನು ದೊರೆ ಹೌದೆ ಅಲ್ಲವೆ ಎಂಬುದನ್ನು ತಿಳಿದುಕೊಳ್ಳುವುದಕ್ಕೆ ಅವನ ಸ್ನೇಹಿತನನ್ನು ಕೇಳುವ ಆವಶ್ಯಕತೆಯೆ ಇರಲಿಲ್ಲ. ಆ ದೊರೆಯ ಮಹತ್ ಗಾಂಭೀರ್ಯವನ್ನು ನೋಡಿಯೆ ಅವನು ಮೂಕನಾದನು. ಸಾಕ್ಷಾತ್ ಪ್ರಭುಗಳ ಸನ್ನಿಧಿಯಲ್ಲಿ ತಾನು ಇರುವೆನು ಎಂಬುದು ನಿಶ್ಚಯವಾಯಿತು.

# ಪರಮಾತ್ಮನ ಸಾಕ್ಷಾತ್ಕಾರ

೧೧೧೩. ಪತಿವ್ರತೆಯಾದ ಒಬ್ಬ ಭಕ್ತೆ ತನ್ನ ಗಂಡನನ್ನೂ ಮಕ್ಕಳನ್ನೂ ಪ್ರೀತಿಯಿಂದ ನೋಡಿಕೊಳ್ಳುತ್ತ ಪರಮಾತ್ಮನ ಮೇಲೆ ಮನಸ್ಸನ್ನು ಇಟ್ಟಿದ್ದಳು ಅವಳು ಪತಿಯು ಕಾಲಾನಂತರ ಅವನ ಉತ್ತರಕ್ರಿಯೆಗಳು ಆದ ತಕ್ಷಣ ತನ್ನ ಗಾಜಿನ ಬಳೆಯನ್ನು ಒಡೆದು ಹಾಕಿ ಒಂದು ಜೊತೆ ಚಿನ್ನದ ಬಳೆಯನ್ನು ತೊಟ್ಟುಕೊಂಡಳು. ಅವಳ ವಿಚಿತ್ರವಾದ ರೀತಿಯನ್ನು ನೋಡಿ ಜನರು ಆಶ್ಚರ್ಯಪಟ್ಟರು. ಆದರೆ ಅವಳು ಹೀಗೆ ಹೇಳಿದಳು: "ಇಲ್ಲಿಯವರೆವಿಗೂ ನನ್ನ ಗಂಡನ ದೇಹ ಗಾಜಿನಂತೆ ನಾಜೋಕಾಗಿತ್ತು. ಆ ಕ್ಷಣಿಕ ದೇಹ ಮಾಯವಾಗಿದೆ. ಅವನೀಗ ಎಲ್ಲಾ ವಿಧದಿಂದಲೂ ಅವಿಕಾರಿಯಾಗಿ ಪೂರ್ಣನಾಗಿರುವನು. ಅವನ ದೇಹ ಈಗ ನಾಶವಾಗುವುದಿಲ್ಲ. ಅದಕ್ಕೆ ನಾನು ಬೇಗ ಒಡೆದು ಹೋಗುವ ಗಾಜಿನ ಬಳೆಗಳನ್ನು ಬಿಟ್ಟು ಸ್ಥಿರವಾಗಿರುವಂತಹ ಒಡವೆಯನ್ನು ಧರಿಸುವೆನು."

೧೧೧೪. ಒಂದು ಸಲ ದಕ್ಷಿಣೇಶ್ವರಕ್ಕೆ ತಂದೆ ಮಕ್ಕಳಾದ ಇಬ್ಬರು ಸಾಧುಗಳು ಬಂದರು. ಮಗನು ಜ್ಞಾನವನ್ನು ಪಡೆದಿದ್ದನು. ಆದರೆ ತಂದೆಗೆ ಜ್ಞಾನ ಬಂದಿರಲಿಲ್ಲ. ಇಬ್ಬರೂ ಶ್ರೀರಾಮಕೃಷ್ಣ ಪರಮಹಂಸರು ವಾಸಮಾಡುತ್ತಿದ್ದ ಕೋಣೆಯಲ್ಲಿ ಕುಳಿತುಕೊಂಡು ಅವರೊಂದಿಗೆ ಮಾತನಾಡುತ್ತಿದ್ದರು. ಆ ಸಮಯದಲ್ಲಿ ಹೆಗ್ಗಣದ ಬಿಲದಿಂದ ಒಂದು ನಾಗರಹಾವು ಬಂದು ಮಗನನ್ನು ಕಚ್ಚಿತು. ಇದನ್ನು ನೋಡಿ ತಂದೆ ಬೆದರಿ ಎಲ್ಲರನ್ನೂ ಕರೆದನು. ಆದರೆ ಮಗ ಸುಮ್ಮನೆ ಕುಳಿತುಕೊಂಡಿರಲು ತಂದೆಗೆ ಆಶ್ಚರ್ಯವಾಯಿತು. ಸುಮ್ಮನೆ ಏತಕ್ಕೆ ಕುಳಿತುಕೊಂಡಿರುವೆ ಎಂದು ಮಗನನ್ನು ಕೇಳಿದಾಗ ಮಗ ನಕ್ಕು "ಹಾವು ಯಾವುದು. ಅದು ಕಚ್ಚಿರುವುದು ಯಾರನ್ನು?" ಎಂದನು. ಅವನು ಐಕ್ಯತೆಯನ್ನು ಪಡೆದಿದ್ದನು. ಅದಕ್ಕೇ ಅವನಿಗೆ ಮನುಷ್ಯನಿಗೂ ಹಾವಿಗೂ ಭೇದವನ್ನುಂಟುಮಾಡಲು ಸಾಧ್ಯವಾಗಲಿಲ್ಲ.

೧೧೧೫. ಕಟುಕನ ಮನೆಯಿಂದ ಒಬ್ಬ ಪಂಚಮನು ಮಾಂಸವನ್ನು ಹೊತ್ತುಕೊಂಡು ಹೋಗುತ್ತಿದ್ದನು. ದಾರಿಯಲ್ಲಿ ಪವಿತ್ರ ಗಂಗಾನದಿಯಲ್ಲಿ ಸ್ನಾನಮಾಡಿಕೊಂಡು ಬರುತ್ತಿದ್ದ ಶ್ರೀಶಂಕರಾಚಾರ್ಯರನ್ನು ಕಂಡನು. ಆಕಸ್ಮಾತ್ ಪಂಚಮನು ಶಂಕರಾಚಾರ್ಯ

ರನ್ನು ಮುಟ್ಟಿದನು. ಶಂಕರಾಚಾರ್ಯರಿಗೆ ರೇಗಿ "ಹೇ ಮೂಢ! ನೀನು ನನ್ನನ್ನು ಮುಟ್ಟಿರುವೆ" ಎಂದು ಕೂಗಿಕೊಂಡರು. ಪಂಚಮನು "ನೀವೂ ನನ್ನನ್ನು ಮುಟ್ಟಲಿಲ್ಲ. ನಾನೂ ನಿಮ್ಮನ್ನು ಮುಟ್ಟಲಿಲ್ಲ. ದಯವಿಟ್ಟು ನೀವು ನನ್ನೊಂದಿಗೆ ನಿಮ್ಮ ಆತ್ಮನ ವಿಚಾರದಲ್ಲಿ, ಅದು ಏನು ದೇಹವೆ, ಮನಸ್ಸೆ, ಬುದ್ಧಿಯೆ ಎಂಬುದನ್ನು ವಾದಮಾಡಿ. ನಿಜವಾದ ಆತ್ಮ ಸತ್ತ್ವ, ರಜಸ್ಸು, ತಮುಸ್ಸುಗಳಿಗಾವುದಕ್ಕೂ ಒಳಗಾಗಿಲ್ಲವೆಂಬುದು ನಿಮಗೆ ಗೊತ್ತಿದೆ" ಎಂದನು. ಶಂಕರಾಚಾರ್ಯರಿಗೆ ನಾಚಿಕೆಯಾಗಿ ನಿಜವಾದ ಜ್ಞಾನ ಉದಯಿಸಿತು.

೧೧೧೬. ಒಂದು ಸಲ ಸಾಧು ಒಬ್ಬನು ತನ್ನ ಶಿಷ್ಯನಿಗೆ ಆತ್ಮ ಬೋಧೆಯನ್ನು ಮಾಡುವುದಕ್ಕಾಗಿ ಒಂದು ಸುಂದರವಾದ ತೋಟದಲ್ಲಿ ಅವನನ್ನು ಬಿಟ್ಟು ಹೋದನು. ಸ್ವಲ್ಪದಿನಗಳಾದಮೇಲೆ ಗುರು ಹಿಂತಿರುಗಿ ಶಿಷ್ಯನನ್ನು "ಮಗು, ನಿನಗೆ ಏನಾದರೂ ಆವಶ್ಯಕವಿದೆಯೆ?" ಎಂದು ಕೇಳಿದನು. ಅವನು ಹೌದು ಎಂದಾಗ, ಗುರು ಅವನೊಂದಿಗೆ ಶ್ಯಾಮ ಎಂಬ ಸುಂದರ ಯುವತಿಯನ್ನು ಬಿಟ್ಟು, ಬೇಕಾದಷ್ಟು ಮೀನು ಮತ್ತು ಮಾಂಸವನ್ನು ತಿನ್ನು ಎಂದನು. ಹಲವು ದಿನಗಳಾದಮೇಲೆ ಅವನು ಪುನಃ ಬಂದು ಹಿಂದಿನಂತೆಯೇ ಪ್ರಶ್ನೆ ಕೇಳಿದನು. ಶಿಷ್ಯನು ಈ ಸಲ "ನನಗೇನೂ ಬಯಕೆ ಇಲ್ಲ. ನಮಸ್ಕಾರ" ಎಂದನು. ಸಾಧು ತನ್ನ ಶಿಷ್ಯನನ್ನು ಮತ್ತು ಶ್ಯಾಮಳನ್ನು ಕರೆದು ಶ್ಯಾಮಳ ಕೈಗಳನ್ನು ತೋರಿಸಿ "ಅದು ಏನು ಹೇಳಬಲ್ಲೆಯ?" ಎಂದು ಶಿಷ್ಯನನ್ನು ಪ್ರಶ್ನಿಸಿದನು. ಶಿಷ್ಯನು "ಏತಕ್ಕೆ, ಇವು ಶ್ಯಾಮಳ ಕೈಗಳು" ಎಂದನು. ಇದೇ ಪ್ರಶ್ನೆಯನ್ನು ಹಲವು ವೇಳೆ ಶ್ಯಾಮಳ ಕಣ್ಣು, ಮೂಗು ಮುಂತಾದ ಅವಯವಗಳನ್ನು ತೋರಿಸುತ್ತ ಕೇಳಿದನು. ಶಿಷ್ಯನು ಅದಕ್ಕೆ ಸರಿಯಾದ ಉತ್ತರವನ್ನು ಹೇಳಿದನು. ಆಗ ಶಿಷ್ಯನು "ನಾನು ಶ್ಯಾಮಳ ಇದು, ಶ್ಯಾಮಳ ಅದು ಎಂದು ಮಾತನಾಡುತ್ತಿರುವೆನು. ಆದರೆ ಶ್ಯಾಮಳು ನಿಜವಾಗಿ ಯಾರು?" ಎಂದು ಯೋಚಿಸಿದನು. ಆಶ್ಚರ್ಯದಿಂದ ತನ್ನ ಗುರುವಿಗೆ ಈ ಪ್ರಶ್ನೆಯನ್ನು ಹಾಕಿದನು. "ಯಾರಿಗೆ ಈ ಕಣ್ಣು, ಕಿವಿ, ಮೂಗು ಮುಂತಾದುವು ಸೇರಿವೆಯೊ ಆ ಶ್ಯಾಮಳು ಯಾರು?" ಸಾಧು "ಈ ಶ್ಯಾಮಳು ಯಾರು ಎಂದು ನೀನು ತಿಳಿಯಬೇಕಾದರೆ

ನನ್ನೊಂದಿಗೆ ಬಾ ತಿಳಿಸುವೆ" ಎಂದು ಅವನಿಗೆ ಜ್ಞಾನವನ್ನು ವಿವರಿಸಿದನು.

೧೧೧೭. ಒಬ್ಬ ತಂದೆಗೆ ಇಬ್ಬರು ಮಕ್ಕಳು ಇದ್ದರು. ಅವರಿಗೆ ಸ್ವಲ್ಪ ದೊಡ್ಡವರಾದ ಮೇಲೆ ಉಪನಯನಮಾಡಿ ವೇದಾಭ್ಯಾಸಕ್ಕಾಗಿ ಒಬ್ಬ ಗುರುಗಳಹತ್ತಿರ ಬಿಟ್ಟರು. ಹಲವು ವರ್ಷಗಳಾದಮೇಲೆ ಮಕ್ಕಳು ವಿದ್ಯಾಭ್ಯಾಸವನ್ನು ಮುಗಿಸಿ ಮನೆಗೆ ಬಂದರು. ಅವರ ತಂದೆ ಮಕ್ಕಳನ್ನು "ವೇದಾಂತ ಓದಿದಿರಾ?" ಎಂದು ಕೇಳಿದನು. ಅವರು "ಓದಿರುವೆವು" ಎಂದು ಹೇಳಿದರು. "ಹಾಗಾದರೆ ಬ್ರಹ್ಮ ನೆಂದರೇನು? ಹೇಳಿರಿ" ಎಂದು ತಂದೆ ಕೇಳಿದನು ಹಿರಿಯಮಗ ವೇದಾಂತ ಶ್ಲೋಕಗಳನ್ನು ಹೇಳುತ್ತ "ಅಪ್ಪ, ಅದು ಮಾತು ಮತ್ತು ಆಲೋಚನೆಯನ್ನು ಮೀರಿರುವುದು. ಅದು ಹಾಗೆ, ಹೀಗೆ, ನನಗೆ ಅದೆಲ್ಲ ಗೊತ್ತಿದೆ" ಎಂದನು. ತಾನು ಹೇಳಿದುದನ್ನು ಸಮರ್ಥಿಸು ವುದಕ್ಕೆ ಪುನಃ ವೇದದಿಂದ ಶ್ಲೋಕಗಳನ್ನು ಉದಹರಿಸಿದನು. "ಹಾಗಾ ದರೆ ನಿನಗೆ ಬ್ರಹ್ಮ ಗೊತ್ತಾದಹಾಗೆ! ನಿನ್ನ ಕೆಲಸವನ್ನು ನೋಡಿಕೊ" ಎಂದು ತಂದೆ ಹೇಳಿದನು. ನಂತರ ಕಿರಿಯಮಗನಿಗೆ ಅದೇ ಪ್ರಶ್ನೆ ಯನ್ನು ಕೇಳಿದನು. ಆದರೆ ಹುಡುಗನು ಮೌನವಾಗಿದ್ದನು. ಒಂದು ಮಾತೂ ಅವನ ಬಾಯಿಂದ ಹೊರಡಲಿಲ್ಲ. ಅವನು ಮಾತನಾಡುವುದಕ್ಕೆ ಪ್ರಯತ್ನವನ್ನೂ ಮಾಡಲಿಲ್ಲ. ಇದನ್ನು ನೋಡಿ ತಂದೆಯು ಹೀಗೆಂದನು: "ಹೌದು ನೀನೆ ಸರಿ. ಅವ್ಯಕ್ತವಾಗಿ, ಉಪಾಧಿಗಳಿಂದ ದೂರವಿರು ವುದರ ವಿಷಯವಾಗಿ ಏನನ್ನೂ ಹೇಳಲಾಗುವುದಿಲ್ಲ. ನೀನು ಮಾತ ನಾಡಿದ ತಕ್ಷಣವೆ ಅನಂತವನ್ನು ಸಾಂತದಮೂಲಕ ಹೇಳಬೇಕಾಗು ವುದು. ಏಕವನ್ನು ಹಲವದರ ಮೂಲಕ, ಅವ್ಯಕ್ತವನ್ನು ವ್ಯಕ್ತದ ಮೂಲಕ ಹೇಳಬೇಕಾಗುವುದು. ನಿನ್ನ ಮೌನ ನೂರಾರು ಶ್ಲೋಕ ಗಳನ್ನು ಉದಹರಿಸುವುದಕ್ಕಿಂತ ನೂರಾರು ಪ್ರಮಾಣಗಳನ್ನು ಕೊಡು ವುದಕ್ಕಿಂತ ರಸಭರಿತವಾದ ಮಾತಾಗಿರುವುದು."

೧೧೧೮. ಒಬ್ಬ ದೊಡ್ಡ ಬ್ರಾಹ್ಮಣ ಪಂಡಿತ ಬುದ್ಧಿವಂತ ನಾದ ದೊರೆಯ ಹತ್ತಿರ ಹೋಗಿ "ನನಗೆ ಶಾಸ್ತ್ರಗಳು ಚೆನ್ನಾಗಿ ಗೊತ್ತು. ನಿಮಗೆ ಭಾಗವತವನ್ನು ಕಲಿಸಬೇಕೆಂದಿರುವೆನು" ಎಂದನು. ಇವರಿಬ್ಬರಲ್ಲಿ ಬುದ್ಧಿವಂತನಾದ ದೊರೆಗೆ ಯಾರು ನಿಜವಾಗಿ ಭಾಗವತ ವನ್ನು ಓದಿರುವರೊ ಅವರು ರಾಜನ ಆಸ್ಥಾನಕ್ಕೆ ಐಶ್ವರ್ಯ ಮತ್ತು

ಕೀರ್ತಿ ಆಸೆಗಾಗಿ ಹೋಗುವುದಕ್ಕಿಂತ ತನ್ನಾತ್ಮವನ್ನು ತಾನು ತಿಳಿಯಲು ಇಚ್ಛಿಸುವನು ಎಂಬುದು ಗೊತ್ತಿತ್ತು. ಆದಕಾರಣವೆ ದೊರೆ "ಹೇ ಬ್ರಾಹ್ಮಣರೆ, ನೀವೆ ಆ ಗ್ರಂಥವನ್ನು ಚೆನ್ನಾಗಿ ತಿಳಿದುಕೊಂಡಿಲ್ಲ. ನೀವು ಮೊದಲು ಅದನ್ನು ಚೆನ್ನಾಗಿ ಕಲಿತುಕೊಳ್ಳಿ. ನಂತರ ನಾನು ನಿಮ್ಮನ್ನು ನನ್ನ ಗುರುಗಳಾಗಿ ಸ್ವೀಕರಿಸುವೆನೆಂದು ಮಾತು ಕೊಡುವೆ" ಎಂದನು. ಬ್ರಾಹ್ಮಣನು ಹಿಂತಿರುಗಿ ಹೋಗುತ್ತ "ರಾಜನು ಎಂತಹ ಮೂರ್ಖ ನಾನು ಭಾಗವತವನ್ನು ಚೆನ್ನಾಗಿ ಕಲಿತಿಲ್ಲ ಎನ್ನುತ್ತಾನಲ್ಲ. ಹಲವು ವರುಷಗಳಿಂದ ಅದನ್ನು ನಾನು ಪುನಃ ಪುನಃ ಓದುತ್ತಿರುವುದು ನನಗೇ ಗೊತ್ತಿದೆ" ಎಂದು ಕೊಂಡನು. ಆದರೂ ಗ್ರಂಥವನ್ನು ಮತ್ತೊಮ್ಮೆ ಚೆನ್ನಾಗಿ ಓದಿ ಪುನಃ ರಾಜನ ಹತ್ತಿರ ಹೋದನು. ದೊರೆ ಪುನಃ ಅದನ್ನೇ ಹೇಳಿ ಕಳುಹಿಸಿಬಿಟ್ಟನು. ಬ್ರಾಹ್ಮಣನಿಗೆ ತುಂಬಾ ಅಸಮಾಧಾನವಾಯಿತು. ಆದರೆ ದೊರೆಯ ನಡತೆಯಲ್ಲಿ ಏನೊ ಒಂದು ಅರ್ಥವಿರಬೇಕೆಂದು ಯೋಚಿಸಿದನು. ಮನೆಗೆ ಹೋಗಿ ಒಂದು ಕೋಣೆಯಲ್ಲಿ ಒಬ್ಬನೇ ಕುಳಿತುಕೊಂಡು ಹಿಂದಿಗಿಂತ ಹೆಚ್ಚಾಗಿ ಗ್ರಂಥವನ್ನು ಓದಲು ಮೊದಲು ಮಾಡಿದನು. ಕ್ರಮೇಣ ಕ್ರಮೇಣ ಅದರಲ್ಲಿ ಹುದುಗಿದ್ದ ಭಾವಗಳು ಇವನ ಮನಸ್ಸಿಗೆ ಹೊಳೆದವು. ಐಶ್ವರ್ಯ, ಕೀರ್ತಿ, ರಾಜಾಸ್ಥಾನ ಮುಂತಾದ ಸೀರುಗುಳೆಗಳನ್ನು ಅನುಸರಿಸಿ ಹೋಗುವುದರಿಂದ ಆಗುವ ವ್ಯಸನ ಅವನ ತಿಳಿಮನಸ್ಸಿಗೆ ಗೊತ್ತಾಯಿತು. ಅಂದಿನಿಂದ ಅವನು ದೇವರನ್ನು ಪೂಜಿಸಿ ಮೋಕ್ಷವನ್ನು ಸಂಪಾದಿಸಬೇಕೆಂಬ ಆಲೋಚನೆಯಲ್ಲೆ ನಿರತನಾದನು. ರಾಜಾಸ್ಥಾನವನ್ನು ಮರೆತನು. ಕೆಲವು ವರುಷಗಳಾದ ಮೇಲೆ ದೊರೆ ಆ ಬ್ರಾಹ್ಮಣ ಏನುಮಾಡುತ್ತಿರುವನು ಎಂದು ನೋಡುವುದಕ್ಕಾಗಿ ಅವನ ಮನೆಗೆ ಹೋದನು. ಪರಂಜ್ಯೋತಿ ಮತ್ತು ಪರಮ ಪ್ರೇಮದಿಂದ ಅವನು ಕಂಗೊಳಿಸುತ್ತಿರುವುದನ್ನು ನೋಡಿ ಅವನ ಕಾಲುಗಳಿಗೆ ಬಿದ್ದು "ನೀವು ಈಗ ನಿಜವಾಗಿ ಅದರ ಅರ್ಥವನ್ನು ಗ್ರಹಿಸಿದ್ದೀರಿ. ನೀವು ಅನುಗ್ರಹಿಸಿದರೆ ಈಗ ನಿಮ್ಮ ಶಿಷ್ಯನಾಗಲು ನಾನು ಸಿದ್ಧನಾಗಿರುವೆನು" ಎಂದನು.

೧೧೧೯. ಒಂದು ಹಳ್ಳಿಯಲ್ಲಿ ಒಂದು ಮಠವಿತ್ತು. ಅಲ್ಲಿಂದ ಪ್ರತಿದಿನವೂ ಸಂನ್ಯಾಸಿಗಳು ಭಿಕ್ಷಾಪಾತ್ರೆಯನ್ನು ತೆಗೆದುಕೊಂಡು ಭಿಕ್ಷೆಗೆ ಹೋಗುತ್ತಿದ್ದರು. ಒಂದುದಿನ ಒಬ್ಬ ಸನ್ಯಾಸಿ ದಾರಿಯಲ್ಲಿ ಹೋಗುತ್ತಿದ್ದಾಗ ಜಮೀನ್‌ದಾರನೊಬ್ಬನು ಒಬ್ಬ ಬಡವನನ್ನು

ಬಹಳವಾಗಿ ದಂಡಿಸುತ್ತಿರುವುದನ್ನು ಕಂಡನು. ಸಾಧು ದಯಾಪರನಾದುದರಿಂದ ಇನ್ನು ಹೆಚ್ಚು ದಂಡಿಸದಂತೆ ಜಮೀನ್‌ದಾರನನ್ನು ಬೇಡಿಕೊಂಡನು. ಜಮೀನ್‌ದಾರನು ಕ್ರೋಧಾವೇಶನಾಗಿ ತಕ್ಷಣವೆ ಸನ್ಯಾಸಿಯ ಮೇಲೆ ತಿರುಗಿ ತನ್ನ ಕೋಪವನ್ನೆಲ್ಲ ಅವನ ಮೇಲೆ ತೀರಿಸಿಕೊಂಡನು. ಸನ್ಯಾಸಿಯ ಸ್ಥಿತಿಯನ್ನು ಕಂಡ ಮತ್ತೊಬ್ಬ ಮನುಷ್ಯನು ಈ ವಿಷಯವನ್ನು ಮಠಕ್ಕೆ ತಿಳಿಸಿದನು. ಅವನು ಬಿದ್ದಿದ್ದ ಕಡೆಗೆ ಇವನ ಸಹೋದರರೆಲ್ಲ ಓಡಿಹೋದರು. ಅವನನ್ನು ಹೊತ್ತುಕೊಂಡು ಬಂದು ಮಠದಲ್ಲಿ ಒಂದು ಕೋಣೆಯಲ್ಲಿ ಮಲಗಿಸಿದರು. ಆಗಲೂ ಸಾಧುವಿಗೆ ತುಂಬಾ ಹೊತ್ತು ಪ್ರಜ್ಞೆಯೇ ಇರಲಿಲ್ಲ. ದುಃಖದಿಂದ ಕಾತುರರಾಗಿ ಅವನ ಸಹೋದರರೆಲ್ಲ ಅವನನ್ನು ಬೀಸಣಿಗೆಯಿಂದ ಬೀಸಿದರು. ತಣ್ಣೀರಿನಿಂದ ಅವನ ಮುಖವನ್ನು ತೊಳೆದರು. ಬಾಯಿಗೆ ಹಾಲನ್ನು ಸುರಿದರು. ಮತ್ತು ಏನೇನು ಸಾಧ್ಯವೋ ಅವನ್ನೆಲ್ಲ ಮಾಡಿದರು. ಕ್ರಮೇಣ ಆತನು ಚೇತರಿಸಿಕೊಂಡನು. ಆತನು ಕಣ್ಣು ತೆರೆದು ಸನ್ಯಾಸಿಗಳನ್ನು ನೋಡಿದಾಗ ಅವರಲ್ಲಿ ಒಬ್ಬನು, ಈತನಿಗೆ ಮುಖದ ಗುರುತು ತಿಳಿಯುವುದಿಲ್ಲವೆ, ಎಂಬುದನ್ನು ಪರೀಕ್ಷಿಸುವುದಕ್ಕೋಸ್ಕರ ಜೋರಾಗಿ "ಸ್ವಾಮಿಜಿ, ಯಾರು ನಿಮಗೆ ಹಾಲು ಕೊಡುತ್ತಿರುವುದು ಗೊತ್ತೆ?" ಎಂದು ಕೇಳಿದನು. ಸಾಧು ಮೆಲ್ಲಗೆ "ಅಣ್ಣ, ಯಾರು ನನ್ನನ್ನು ಹೊಡೆದರೊ ಅವರೇ ಈಗ ನನಗೆ ಹಾಲು ಕೊಡುತ್ತಿರುವರು" ಎಂದನು. ಒಬ್ಬನಿಗೆ ಪರಮಾತ್ಮಾನುಭವವಾಗದೆ, ಧರ್ಮ, ಅಧರ್ಮ, ಪಾಪ, ಪುಣ್ಯಗಳಾಚೆ ಹೋಗದೆ ಇದ್ದರೆ ಐಕ್ಯತೆ ಲಭಿಸುವುದಿಲ್ಲ.

೧೧೨೦. ಒಂದು ಹಳ್ಳಿಯಲ್ಲಿ ಪದ್ಮಲೋಚನನೆಂಬ ಒಬ್ಬ ಹುಡುಗನಿದ್ದನು. ಹಳ್ಳಿಯವರು ಅವನಿಗೆ ಪೊದೊ ಎಂದು ಅಡ್ಡ ಹೆಸರನ್ನು ಇಟ್ಟಿದ್ದರು. ಆ ಹಳ್ಳಿಯಲ್ಲಿ ಒಂದು ಹಳೆಯ ಪಾಳು ಗುಡಿ ಇತ್ತು! ದೇವಸ್ಥಾನದೊಳಗೆ ಯಾವ ವಿಗ್ರಹವೂ ಇರಲಿಲ್ಲ. ಗುಡಿಯ ಅಂಗಳದಲ್ಲೆಲ್ಲ ಬೇಕಾದಷ್ಟು ಸೊಪ್ಪು ಸದೆ ಬೆಳೆದಿದ್ದುವು. ಅದು ಹಕ್ಕಿ ಮತ್ತು ಬಾವಲಿಗಳಿಗೆ ಅನುಕೂಲವಾದ ಬೀಡಾಗಿತ್ತು. ಒಂದುದಿನ ಇದ್ದಕ್ಕಿದ್ದಂತೆಯೆ ಹಳ್ಳಿಯ ಜನರು ಪಾಳು ಗುಡಿಯಿಂದ ಗಂಟೆ, ಶಂಖಗಳ ಶಬ್ದವನ್ನು ಕೇಳಿದರು. ಯಾರೊ ಭಕ್ತರೊಬ್ಬರು ಹೊಸದಾಗಿ ವಿಗ್ರಹವನ್ನು ಪ್ರತಿಷ್ಠೆಮಾಡಿ ಸಂಜೆ ಮಂಗಳಾರತಿಯನ್ನು ಮಾಡುತ್ತಿರು

ವರು ಎಂದು ತಿಳಿದು ಗಂಡಸರು ಹೆಂಗಸರು ಮಕ್ಕಳು ಎಲ್ಲರೂ ಕುತೂಹಲದಿಂದ ಅಲ್ಲಿಗೆ ಓಡಿಬಂದರು. ಎಲ್ಲರೂ ಮಂತ್ರವನ್ನು ಕೇಳುತ್ತ ಕೈಗಳನ್ನು ಮುಗಿದುಕೊಂಡು ವಿಗ್ರಹವನ್ನು ನೋಡುವುದಕ್ಕೆ ಕಾದು ನಿಂತರು. ಅವರಲ್ಲಿ ಎಲ್ಲರಿಗಿಂತ ಹೆಚ್ಚು ಕುತೂಹಲಿಯಾದವನೊಬ್ಬನು ಧೈರ್ಯದಿಂದ ಬಾಗಿಲ ಕಂಡಿಯಲ್ಲಿ ನೋಡಿದನು. ಅವನಿಗೆ ಆಶ್ಚರ್ಯವಾಯಿತು. ಒಳಗೆ ಜಾಗಟೆಹೊಡೆಯುತ್ತ ಶಂಖವನ್ನು ಬಾರಿಸುತ್ತಿದ್ದವನು ' ಪೊದೊ ' ಆಗಿದ್ದನು. ದೇವರಮನೆ ಹಿಂದಿನಂತೆಯೆ ಕೊಳೆಯಾಗಿತ್ತು. ಪೂಜೆ ಮಾಡುವುದಕ್ಕೆ ವಿಗ್ರಹವೇ ಇರಲಿಲ್ಲ. ಆಗ ಆವನು " ಲೇ ಪೊದೊ ! ಮಾಧವನ ವಿಗ್ರಹವೆ ಇಲ್ಲ ನಿನ್ನ ಗುಡಿಯಲ್ಲಿ! ನೋಡು, ಅದೂ ಅಲ್ಲದೆ ಗುಡಿಯನ್ನು ಗುಡಿಸಿ ತೊಳೆಯುವುದಕ್ಕೆ ಕೂಡ ನೀನು ತೊಂದರೆ ತೆಗೆದುಕೊಂಡಿಲ್ಲ. ಹಗಲು ರಾತ್ರಿ ಹನ್ನೊಂದು ಬಾವುಲಿಗಳು ಕಿರುಚುತ್ತಿವೆ. ಸುಮ್ಮನೆ ಏನೂ ಪ್ರಯೋಜನವಿಲ್ಲದೆ ಜೋರಾಗಿ ಶಂಖವನ್ನು ಊದಿ ದೊಡ್ಡ ಗದ್ದಲವನ್ನು ಎಬ್ಬಿಸಿದೆ ! " ಎಂದನು.

ಇದರಂತೆಯೆ ನೀವು ಹೃದಯವೆಂಬ ದೇವಸ್ಥಾನದಲ್ಲಿ ಭಗವಂತನೆಂಬ ಪವಿತ್ರ ವಿಗ್ರಹವನ್ನು ಸ್ಥಾಪನೆಮಾಡಬೇಕಾದರೆ, ಅಂದರೆ, ನೀನು ಆವನನ್ನು ಸಾಕ್ಷಾತ್ಕಾರಮಾಡಿಕೊಳ್ಳಬೇಕಾದರೆ, ಸುಮ್ಮನೆ ಶಂಖವನ್ನು ಊದಿ ಪ್ರಯೋಜನವೇನು. ಮನಸ್ಸು ಶುದ್ಧವಾದರೆ ದೇವರು ತಾನೆ ಬಂದು ಅಲ್ಲಿ ನೆಲಸುವನು. ಆ ಪವಿತ್ರವಾದ ಸ್ಥಳದಲ್ಲಿ ಯಾವ ವಿಗ್ರಹವನ್ನೂ ಪ್ರತಿಷ್ಠೆ ಮಾಡುವುದಕ್ಕೆ ಆಗುವುದಿಲ್ಲ. ಹಿಂದೆ ಹೇಳಿದ ಹನ್ನೊಂದು ಬಾವುಲಿ ಹನ್ನೊಂದು ಇಂದ್ರಿಯಗಳು (ಐದು ಕರ್ಮೇಂದ್ರಿಯಗಳು ಐದು ಜ್ಞಾನೇಂದ್ರಿಯಗಳು ಮತ್ತು ಮನಸ್ಸು). ಮೊದಲು ನಿನ್ನ ಆತ್ಮದ ಅಂತರಾಳದಲ್ಲಿ ನೀನು ಮುಳುಗಿ ಅಲ್ಲಿ ಹುದುಗಿರುವ ರತ್ನಗಳನ್ನು ಪಡೆ. ಇದಾದ ಮೇಲೆ ನೀನು ಏನನ್ನು ಬೇಕಾದರೂ ಹೊಂದಬಹುದು. ಮೊದಲು ನೀನು ಮಾಧವನನ್ನು ಹೃದಯ ಪೀಠದಲ್ಲಿ ಪ್ರತಿಷ್ಠೆ ಮಾಡಬೇಕು. ನಂತರ ಬೇಕಾದಷ್ಟು ಉಪನ್ಯಾಸ ಮತ್ತು ಬೋಧನೆ ಮಾಡಬಹುದು.

೧೧೨೧. ಒಂದುದಿನ ಒಬ್ಬ ರಾಜನು ತನ್ನ ಮಂತ್ರಿಯೊಂದಿಗೆ ಬೇಟೆಗೆ ಹೋದನು. ಆಕಸ್ಮಾತ್ತಾಗಿ ದೊರೆಯ ಬೆರಳು ಕತ್ತರಿಸಿ ಹೋಯಿತು. " ಇದಕ್ಕೆ ಕಾರಣವೇನು ? " ಎಂದು ತನ್ನ ಮಂತ್ರಿ

ಯನ್ನು ಕೇಳಿದನು. ಅದಕ್ಕೆ ಮಂತ್ರಿ "ಅದರಲ್ಲಿ ಏನೊ ಅತಿ ಗೂಢ ರಹಸ್ಯವಿರಬೇಕು" ಎಂದನು. ದೊರೆಗೆ ಈ ಉತ್ತರ ಸರಿಯಾಗಿ ಕಾಣಲಿಲ್ಲ. ಕೋಪದಿಂದ ಮಂತ್ರಿಯನ್ನು, ಒಂದು ಹಾಳು ಭಾವಿಗೆ ತಳ್ಳಿ "ಈ ಘಟನೆಯ ಹಿಂದೆ ಇರುವ ಗೂಢವಾದ ರಹಸ್ಯವೇನು?" ಎಂದು ಕೇಳಿದನು. ಮಂತ್ರಿ ತಕ್ಷಣವೆ "ಇದರಲ್ಲಿಯೂ ಒಂದು ಗೂಢ ರಹಸ್ಯವಿದೆ" ಎಂದನು.

ಆಗತಾನೆ ಒಂದು ದರೋಡೆಕಾರರ ಗುಂಪು ಆ ಕಾಡಿನ ಮಾರ್ಗ ಹೋಯಿತು. ರಾಜನನ್ನು ಸೆರೆಹಿಡಿದರು. ತಮಗೆ ಸೆರೆಸಿಕ್ಕಿದವನು ರಾಜನೆಂದು ತಿಳಿದು, ದರೋಡೆಕಾರರು ಅವನನ್ನು ಕಾಳಿಗೆ ಬಲಿ ಕೊಡಲು ಕರೆದುಕೊಂಡು ಹೋದರು. ನಿರ್ಜನ ಪ್ರದೇಶದಲ್ಲಿದ್ದ ಕಾಳಿಕಾದೇವಾಲಯಕ್ಕೆ ಹೋಗಿ ಸಂತೋಷದಿಂದ ಪ್ರಾರಂಭದ ಪೂಜೆಯನ್ನೆಲ್ಲಾ ಮುಗಿಸಿದರು. ದೊರೆಯ ಬೆರಳು ಕತ್ತರಿಸಿಹೋಗಿರುವುದು ಅವರಿಗೆ ಆಗ ಕಂಡಿತು. ಆದಕಾರಣ ಬಲಿಕೊಡುವುದಕ್ಕೆ ಅವನು ಅರ್ಹನಾಗಿರಲಿಲ್ಲ. ಏಕೆಂದರೆ ಶಾಸ್ತ್ರಪ್ರಕಾರ ಪೂರ್ಣ ಬಲಿಯಾಗಬೇಕು ಸ್ವಲ್ಪವೂ ಅವನಿಗೆ ಅಂಗಹೀನವಾಗಿರಬಾರದು.

ತಾವು ಪಟ್ಟ ಶ್ರಮಕ್ಕಾಗಿ ದೊರೆಯನ್ನು ಅವರು ನಿಂದಿಸಿ ಅವನನ್ನು ಬಿಟ್ಟುಬಿಟ್ಟರು. ಆಶ್ಚರ್ಯಕರವಾದ ಆಕಸ್ಮಿಕದ ಪರಿಣಾಮದಿಂದ, ಮರಣದಿಂದ ಪಾರಾದುದಕ್ಕಾಗಿ ರಾಜನು ಮಂತ್ರಿಯ ಮಾತನ್ನು ನೆನೆದುಕೊಂಡು, ದೇವರಿಗೆ ಸಾವಿರಾರುವೇಳೆ ಧನ್ಯವಾದಗಳನ್ನು ಅರ್ಪಿಸಿದನು. ತಕ್ಷಣವೆ ಮಂತ್ರಿಯನ್ನು ಹಾಳುಭಾವಿಯಿಂದ ಮೇಲೆತ್ತಿ, ಅವನಿಗೆ ನಡೆದ ಸಂಗತಿಯನ್ನು ವಿವರಿಸಿದನು.

ಏನು ಸಂಭವಿಸಿದರೂ ಅದೆಲ್ಲವೂ ಒಳ್ಳೆಯದಕ್ಕೆ. ಸಂಕುಚಿತ ದೃಷ್ಟಿಯಿಂದ ನೋಡಿದಾಗ ನಡೆದ ಸಣ್ಣ ಘಟನೆಗಳಿಗೆ ಮಾನವನು ತೃಪ್ತನೊ ಅಥವಾ ಅತೃಪ್ತನೊ: ಆಗುವನು. ಅದರ ದೂರದ ಪರಿಣಾಮ ಇವರ ದೃಷ್ಟಿಗೆ ಗೋಚರಿಸುವುದಿಲ್ಲ.



# ಶ್ರೀ ರಾಮಕೃಷ್ಣಾಶ್ರಮದ ಪ್ರಕಟಣೆಗಳು

| | ರೂ. | ಆ. | ಕಾ. |
|---|---|---|---|
| ಶ್ರೀ ರಾಮಕೃಷ್ಣ ವಚನವೇದ ಉತ್ತರಾರ್ಧ | ೧೦ | ೦ | ೦ |
| ಕೊಲಂಬೊ ಇಂದ ಆಲ್ಮೋರಕೆ .... | ೫ | ೦ | ೦ |
| ಸಂವಾದ ತರಂಗಿಣಿ .... | ೫ | ೦ | ೦ |
| ಶ್ರೀ ರಾಮಕೃಷ್ಣ ಉಪದೇಶಾಮೃತ .... | ೩ | ೮ | ೦ |
| ಸ್ವಾಮಿ ವಿವೇಕಾನಂದ (ಕುವೆಂಪು) .... | ೩ | ೮ | ೦ |
| ಪ್ರವಚನಾದಿ .... | ೩ | ೮ | ೮ |
| ಭಗವಾನ್ ಶ್ರೀ ರಾಮಕೃಷ್ಣ .... | ೩ | ೦ | ೦ |
| ಪತ್ರಮಾಲೆ .... | ೩ | ೦ | ೦ |
| ಜ್ಞಾನಯೋಗ .... | ೩ | ೦ | ೦ |
| ಗುರುವಿನೊಡನೆ ದೇವರಡಿಗೆ .... | ೩ | ೦ | ೦ |
| ಜೀವ ಈಶ್ವರ ಧರ್ಮ .... | ೩ | ೦ | ೦ |
| ಸ್ತವಕುಸುಮಾಂಜಲಿ ... | ೩ | ೪ | ೦ |
| ರಾಜಯೋಗ .. | ೨ | ೧೦ | ೦ |
| ಶ್ರೀ ಶಾರದಾದೇವಿ ಸಂಭಾಷಣೆ .... | ೨ | ೮ | ೦ |
| ಗೀತಾಪತ್ರಗಳು | ೨ | ೮ | ೦ |
| ಮಿಂಚುನೋಟಕೆ ಹಿಂದೂಧರ್ಮ .. | ೨ | ೮ | ೦ |
| ಶ್ರೀ ಶಾರದಾದೇವಿ ... | ೨ | ೦ | ೦ |
| ಸಾಧಕನ ಕೈದೀವಿಗೆ .... | ೨ | ೦ | ೦ |
| ಪರಮಾರ್ಥ ಪ್ರಸಂಗ .... | ೨ | ೦ | ೦ |
| ಹೈಮಾಚಲ ಸಾನ್ನಿಧ್ಯದಲ್ಲಿ .... (ಹರಿದ್ವಾರದಿಂದ ಕೇದಾರ ಬದರಿಗೆ) | ೨ | ೦ | ೦ |
| ಕರ್ಮಯೋಗ .... | ೧ | ೮ | ೦ |
| ಸನಾತನ ಭಾರತ .... | ೧ | ೮ | ೦ |
| ಬ್ರಹ್ಮಾನಂದ ವಚನ ಸುಧೆ .... | ೧ | ೪ | ೦ |
| ಶ್ರೀ ರಾಮಕೃಷ್ಣ ಉಪನಿಷತ್ .... | ೧ | ೪ | ೦ |
| ಪರಿವ್ರಾಜಕ .... | ೧ | ೪ | ೦ |
| ಪ್ರಾಚ್ಯ ಮತ್ತು ಪಾಶ್ಚಾತ್ಯ .... | ೧ | ೪ | ೦ |
| ಭಕ್ತಿಯೋಗ .... | ೧ | ೦ | ೦ |

| | | ರೂ. | ಆ | ಕಾ |
|---|---|---|---|---|
| ಭಕ್ತಿ: ಗೌಣೀ ಮತ್ತು ಪರಾ | .... | ೧ | ೦ | ೦ |
| ದಾರಿಯಲ್ಲಿ ದೀಪಧಾರಿ | .... | ೧ | ೦ | ೦ |
| ಶ್ರೀ ಗುರುದೇವರ ವಚನ | .... | ೧ | ೦ | ೦ |
| ಅಮರನಾಥ ಯಾತ್ರೆ | .... | ೧ | ೦ | ೦ |
| ಧನ್ಯತೆಗೆ ದಾರಿ | .... | ೧ | ೦ | ೦ |
| ಅನುಷ್ಠಾನ ವೇದಾಂತ | .... | ೧ | ೦ | ೦ |
| ಧ್ಯಾನ ಚಿಂತನಾಧಾರೆ | .... | ೧ | ೦ | ೦ |
| ವೇದಾಂತ | .... | ೦ | ೧೦ | ೦ |
| ವಿದ್ಯಾಭ್ಯಾಸ | .... | ೦ | ೧೦ | ೦ |
| ಹಿಂದೂ ಧರ್ಮಸಾರ | .... | ೦ | ೧೦ | ೦ |
| ವರ್ತಮಾನ ಭಾರತ | .... | ೦ | ೧೦ | ೦ |
| ವಿವೇಕವಾಣಿ | .... | ೦ | ೧೦ | ೦ |
| ಜ್ಞಾನಮಾರ್ಗ | .... | ೦ | ೮ | ೦ |
| ನನ್ನ ಗುರುದೇವ | .... | ೦ | ೮ | ೦ |
| ಭಕ್ತಿಮಾರ್ಗ | .... | ೦ | ೮ | ೦ |
| ಪುನರ್ಜನ್ಮ | .... | ೦ | ೮ | ೦ |
| ಚಿಕಾಗೋ ಉಪನ್ಯಾಸ | .... | ೦ | ೬ | ೦ |
| ಆರತಿ | .... | ೦ | ೬ | ೦ |
| ಶ್ರೀರಾಮಕೃಷ್ಣ (ಸಂಕ್ಷಿಪ್ತ ಜೀವನ) | .... | ೦ | ೫ | ೦ |
| ಸ್ವಾಮಿ ವಿವೇಕಾನಂದ ,, | .... | ೦ | ೫ | ೦ |
| ಶ್ರೀ ಶಾರದಾದೇವಿ ,, | .... | ೦ | ೫ | ೦ |
| ಮುಮುಕ್ಷು ಲಕ್ಷಣ | .... | ೦ | ೪ | ೦ |
| ನನ್ನ ಜೀವನ ಮತ್ತು ಧ್ಯೇಯ | .... | ೦ | ೪ | ೦ |
| ಈಶ್ವರಾನುರಾಗ | .... | ೦ | ೪ | ೦ |
| ನೊಂದ ಜೀವಕ್ಕೆ ಭರವಸೆ | .... | ೦ | ೪ | ೦ |
| ಭಾರತ ಮಹಿಳೆ | .... | ೦ | ೪ | ೦ |
| ಕರ್ಮರಹಸ್ಯ | .... | ೦ | ೪ | ೦ |
| ಸಾಧನ | .... | ೦ | ೪ | ೦ |
| ಪವಹಾರಿ ಬಾಬಾ | .... | ೦ | ೪ | ೦ |
| ದೇವದೂತ ಏಸುಕ್ರಿಸ್ತ | .... | ೦ | ೪ | ೦ |
| ಧ್ಯಾನ | .... | ೦ | ೪ | ೦ |

**ಶ್ರೀ ರಾಮಕೃಷ್ಣಾಶ್ರಮ, ಮೈಸೂರು.**